ಶ್ರೀ ವಿ. ಸೀತಾರಾಮಯ್ಯ ಅವರಿಗೆ
ಸಾದರ ಸಮರ್ಪಣೆ

R. Ramadeva Shenoy
Editor





# ವಿನಂತಿ

ಪ್ರಿಯರೇ

ಕಾರಣಾಂತರಗಳಿಂದ ಈ ಸ್ಮಾರಕ ಗ್ರಂಥವನ್ನು ಎರಡು ಸಂಪುಟಗಳನ್ನಾಗಿ ವಿಂಗಡಿಸಿದ್ದೇವೆ. ಎರಡನೆಯ ಸಂಪುಟವು ಪೈಯವರ ಜೀವನ ಚರಿತ್ರೆ, ಸಾಹಿತ್ಯ ವ್ಯಾಪ್ತಿ (Bibliography) ಮತ್ತು ಕೃತಿಗಳನ್ನೊಳಗೊಂಡು ಇದೇ ಸಂಪುಟದ ಆಕಾರದಲ್ಲಿ ಸುಮಾರು 200 ಪುಟಗಳಿಂದ ಕೂಡಿಕೊಂಡು ಜನವರಿ ತಿಂಗಳ ಅಂತ್ಯದೊಳಗೆ ಹೊರಬೀಳುವುದು. **ಈ ಸಂಪುಟವನ್ನು ಕೊಂಡವರಿಗೆ ಎರಡನೆಯ ಸಂಪುಟವು ಉಚಿತವಾಗಿ ದೊರೆಯಲಿದ್ದು ಅವರು ಇದರ ಹಿಂಬದಿಯಲ್ಲಿ ತಮ್ಮ ವಿಳಾಸವನ್ನು ಬರೆದು ನಮಗೆ ಕಳುಹಿಸಿ ಕೊಡಬೇಕಾಗಿ ಕೋರುತ್ತೇವೆ.**

ನಾವೀ ಸ್ಮಾರಕ ಗ್ರಂಥವನ್ನು ಇದೇ 64ನೇ ಇಸವಿಯೊಳಗೆ ಹೊರ ತರಬೇಕೆಂಬ ನಿರ್ಧಾರ ಮಾಡಿದುದರಿಂದಲೂ ಮೈಸೂರಿನ ಗವರ್ನರ್ ಆಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಅವರು ಇದೇ ಸಂದರ್ಭದಲ್ಲಿ ವಿದೇಶ ಪ್ರಯಾಣ ಮಾಡಿದುದರಿಂದಲೂ ಅವರ ಮುನ್ನುಡಿಯು ನಮಗೆ ಸಕಾಲಕ್ಕೆ ಬಾರದೆ ಈ ಗ್ರಂಥವು ಅವರ ಮುನ್ನುಡಿಯಿಂದ ಅಲಂಕೃತವಾಗದೆ ತಮ್ಮ ಕೈಸೇರಬೇಕಾಯ್ತು. ಈ ಕುರಿತು ನಮ್ಮನ್ನು ಕ್ಷಮಿಸುವಿರೆಂದು ತಿಳಿಯುತ್ತೇವೆ.

R. Ramadeva Shenoy
**ಸಂಪಾದಕ.**

ಭಂಡಾರ್ಕಾರ್ಸ್ ಗ್ರಂಥಮಾಲೆ-ಪುಷ್ಪ 1.

ರಾಷ್ಟ್ರಕವಿ

# ಗೋವಿಂದ ಪೈ

ಪುಣ್ಯ ಸ್ಮೃತಿಗಾಗಿ



# ದೀವಿಗೆ




ಗೋವಿಂದ ಪೈ ಸ್ಮಾರಕ ನಿಧಿ
ಭಂಡಾರ್ಕಾರ್ಸ್ ಕಾಲೇಜು,
ಕುಂದಾಪುರ.

ಪ್ರಕಾಶಕರು:

ಎಂ. ಗೋವಿಂದ ಪೈ ಸ್ಮಾರಕ ನಿಧಿ
ಭಂಡಾರ್ಕಾರ್ಸ್ ಕಾಲೇಜು,
ಕುಂದಾಪುರ, ದ. ಕ.



ಅಧ್ಯಕ್ಷ:
ಪ್ರೊ. ಕೆ. ಜಿ. ಶೆಣೈ.

ಸಂಪಾದಕ:
ಆರ್. ರಾಮದೇವ ಶೆಣೈ.

ಸಹ ಸಂಪಾದಕರು:
ಎಚ್. ಶಾಂತಾನಂದ ಭಟ್, ಎಸ್. ಮುರಾರಿ ತೋಲ್ಪಾಡಿ.



*Printed at:*
Navabharath Press,
Mangalore-3. S. K.





# ಸಮರ್ಪಣೆ

ತಮ್ಮ ಪೂರ್ಣ ಜೀವನವನ್ನು ಸಾಹಿತ್ಯ ಸೇವೆಯಲ್ಲಿ ಸವೆಯಿಸಿ ಕನ್ನಡಾಂಬೆಯ ಸುಪುತ್ರನೆನಿಸಿಕೊಂಡು ನಮಗೆಲ್ಲರಿಗೂ ಪೂಜ್ಯರಾಗಿ ಹಿರಿಯ ಬಾಳನ್ನು ಬಾಳಿದ ಕಾವ್ಯರ್ಷಿ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರ ಪುಣ್ಯ ಸ್ಮರಣೆಗಾಗಿ 'ನೆನಹಿನ ದೀವಿಗೆ' ಯಿದನ್ನು ಬೆಳಗಿಸಿ ನಮ್ಮ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತಲಿದ್ದೇವೆ.

**ಗೋವಿಂದ ಪೈ ಸ್ಮಾರಕ ಗ್ರಂಥ ಸಮಿತಿ,**
**ಭಂಡಾರ್ಕಾರ್ಸ್ ಕಾಲೇಜು,**
**ಕುಂದಾಪುರ.**

# ನಿವೇದನ

ಕನ್ನಡ ನಾಡಿನ ಹಿರಿಯ ಸಾಹಿತಿಗಳೂ, ಮಹಾ ಕವಿಗಳೂ, ಶ್ರೇಷ್ಠ ಸಂಶೋಧಕರೂ, ವಿಮರ್ಶಕರೂ, ಬಹು ಭಾಷಾ ಕೋವಿದರೂ ಹಾಗೂ ಇತಿಹಾಸಜ್ಞರೂ ಆದ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರಿಗೆ ಅವರ ಜೀವಿತ ಕಾಲದಲ್ಲಿಯೇ ಅಭಿನಂದನ ಗ್ರಂಥವೊಂದನ್ನು ಅರ್ಪಿಸಿ ಋಷಿಯ ಬಾಳನ್ನು ಬಾಳಿದ ಆ ಹಿರಿಯ ಆತ್ಮಕ್ಕೆ ನಮ್ಮ ಗೌರವವನ್ನು ಸಲ್ಲಿಸಬೇಕೆಂಬ ಹಿರಿಯಾಸೆ ನಮಗಿದ್ದರೂ ಅದು ಕಾರ್ಯ ರೂಪಕ್ಕೆ ಇಳಿಯುವ ಮೊದಲೇ ವಿಧಿಯು ಅವರನ್ನು ಕರೆದೊಯ್ದುದರಿಂದ ಶ್ರದ್ಧಾಂಜಲಿಯ ರೂಪದಿಂದ ಈ ಸ್ಮಾರಕ ಗ್ರಂಥವನ್ನು ತರುವಂತಾಯಿತು.

ಈ ಗ್ರಂಥವನ್ನು ಪೂಜ್ಯ ಪೈಯವರ ಎತ್ತರಕ್ಕೆ ಅನುಗುಣವಾಗಿ ರೂಪಿಸಬೇಕೆಂಬ ಹೆಬ್ಬಯಕೆಯಿಂದ ಪ್ರೇರಿತರಾದ ನಾವು ಒಂದು ವರ್ಷದ ಅಥಕ ಪರಿಶ್ರಮದಿಂದ ಇದನ್ನು ಸಿದ್ಧಗೊಳಿಸಿ ಕನ್ನಡ ಜನತೆಯ ಮುಂದೆ ಇರಿಸುತ್ತಲಿದ್ದೇವೆ. ಈ ಮಹಾ ಕಾರ್ಯದಲ್ಲಿ ನಮಗೆ ಬಂದ ಎಡರು ತೊಡರುಗಳದೆಷ್ಟೋ. ಆದರೆ ಅವನ್ನು ಲೆಕ್ಕಿಸದೆ ಕೈಕೊಂಡ ಕೆಲಸವನ್ನು ನಡೆಸುತ್ತ ಹೊರಟೆವು. ಮುಂದುವರಿದಂತೆ ನಿರುತ್ಸಾಹದ ವಾತಾವರಣವು ಬದಲಾಗಿ ಎಲ್ಲಾ ಕಡೆಯಿಂದಲೂ ಪ್ರೋತ್ಸಾಹವು ದೊರೆಯತೊಡಗಿತು. ಪೂಜ್ಯ ಪೈಯವರು ದಿವಂಗತರಾದ ಒಂದು ವರ್ಷದೊಳಗೆ ಈ ಕಾಣಿಕೆಯನ್ನು ಅರ್ಪಿಸಲು ನಮಗೆ ಸಾಧ್ಯವಾಯ್ತು. ಇದರ ಪೂರ್ಣ ಶ್ರೇಯಸ್ಸು ಕನ್ನಡನಾಡಿನ ಜನತೆಗೆ ಸಲ್ಲಬೇಕು.

ಈ ಸಂದರ್ಭದಲ್ಲಿ ಒಂದು ಮಾತನ್ನು ನೆನೆಯಬೇಕಾಗಿದೆ. ನಮ್ಮೀ ಮಹಾ ಕಾರ್ಯದ ಕುರಿತಾದ ಲಘು ಭಾವನೆಯಿಂದಲೊ ಅಥವಾ ತಮ್ಮ ಸ್ವಾಭಾವಿಕ ಜಡತೆಯಿಂದಲೊ ಪೂಜ್ಯ ಪೈಯವರ ಆಪ್ತರೆನ್ನಿಸಿಕೊಳ್ಳುವ ಹಿರಿಯ ಸಾಹಿತಿಗಳು ಕೆಲವರು ಲೇಖನಗಳನ್ನು ಯಾಚಿಸಿ ಬರೆದ ನಮ್ಮ ಹಲವಾರು ಪತ್ರಗಳಿಗೆ ಉತ್ತರಿಸದೆ ಹೋದರು. ಪೂಜ್ಯ ಪೈಯವರ ಪುಣ್ಯ ಸ್ಮೃತಿಗಾಗಿ ಹೊತ್ತಿಸಿದ ಈ ದೀವಿಗೆಯಲ್ಲಿ ಅಂತಹ ವ್ಯಕ್ತಿಗಳ ನೆನಪಿನ ಬತ್ತಿ ಉರಿಯಲಿಲ್ಲ. ಇದುವೆ ನಮಗಿರುವ ಬೇಸರ.

ಈ ಪುಣ್ಯ ಕಾರ್ಯವನ್ನು ಆರಂಭಿಸುವ ಮೊದಲು ನಮ್ಮೀ ಸಂಸ್ಥೆಯ ಸ್ಥಾಪಕರಲ್ಲೋರ್ವರಾದ ಡಾ॥ ಟಿ. ಮಾಧವ ಪೈ ಅವರೊಡನೆ ಆಶೀರ್ವಾದವನ್ನು ಬೇಡಿದ್ದೆವು. ಅವರು ತಮ್ಮ ಪೂರ್ಣ ಬೆಂಬಲವನ್ನಿತ್ತು ನಮ್ಮನ್ನು ಹರಸಿದ ಕಾರಣ ಈ ಗ್ರಂಥ ಕಾರ್ಯದಲ್ಲಿ ನಾವು ಇಷ್ಟು ಮುನ್ನಡೆಯುವಂತಾಯಿತು.

ಪೂಜ್ಯ ಪೈಯವರು ಇಹವನ್ನು ತೊರೆದೊಡನೆ ನಾವೀಕಾರ್ಯವನ್ನು ಆರಂಭಿಸಿದುದರಿಂದ ಅವರ ನೆನಪಿನ ಸೊಡರು ಜನತೆಯ ಹೃದಯದಲ್ಲಿ ಉರಿಯುತ್ತಿರುವ ಸಮಯದಲ್ಲಿಯೇ ಅವರ ಅನುಪಸ್ಥಿತಿಯಿಂದ ಉಂಟಾದ ಶೂನ್ಯತೆ ಎಲ್ಲರನ್ನು ಬಾಧಿಸುತ್ತಿರುವಾಗಲೇ ಲೇಖನಗಳನ್ನು ಯಾಚಿಸಿ ನಮ್ಮ ಪತ್ರಗಳು ತೆರಳಿದ ಕಾರಣ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಇಂತಹ ಅತ್ಯುತ್ತಮ ಸ್ಮೃತಿ ಗ್ರಂಥವು ದೊರೆಯುವಂತಾಯಿತೆಂದು ನಮ್ಮೆಣಿಕೆ.

ಪೂಜ್ಯ ಪೈಯವರ ಜೀವನದ ಕುರಿತು ಇಲ್ಲಿ ನಾವೇನೂ ಹೇಳಬೇಕಾಗಿಲ್ಲ. ಇಡಿಯ ಗ್ರಂಥವೇ ಅವರ ಜೀವನದ ಮೇಲೆ ಬೆಳಕನ್ನು ಬೀರುತ್ತಿರುವಾಗ ನಮ್ಮ ಮಾತು ಇಲ್ಲಿ ಅನಗತ್ಯ. "ಅವರ ಪೂರ್ಣ ಜೀವನವು ಕನ್ನಡಾಂಬೆಯ ಸೇವೆಯಲ್ಲಿಯೇ ಕಳೆಯಿತು. ಯೌವನದಲ್ಲೇ ಪತ್ನಿಯನ್ನು ಕಳಕೊಂಡು ಅವರು ತಮ್ಮ ಸಮಗ್ರ ಆಯುವನ್ನು ಜ್ಞಾನ ಜ್ಯೋತಿಯನ್ನು ಬೆಳಗುವುದರಲ್ಲಿ ಕಳೆದರು" ಎಂದಿಷ್ಟೆ ಹೇಳಿ ಮುಗಿಸುವೆವು.

ಈ ಗ್ರಂಥವನ್ನು ಏಳು ವಿಭಾಗಗಳಾಗಿ ವಿಂಗಡಿಸಿದ್ದೇವೆ. ಮೊದಲನೆಯ ವಿಭಾಗದಲ್ಲಿ ಪೂಜ್ಯ ಪೈಗಳ ಆಪ್ತ ಬಂಧುಗಳು ಶ್ರದ್ಧಾಂಜಲಿಯ ರೂಪವಾಗಿ ಅರ್ಪಿಸಿದ ಕವಿತೆಗಳ ಸಂಕಲನವಿದೆ.

ಎರಡನೆಯ ವಿಭಾಗದಲ್ಲಿ ಅವರ ಆತ್ಮೀಯರು ಹೊತ್ತಿಸಿದ ನೆನಪಿನ ಸೊಡರುಗಳಿವೆ. ಇವುಗಳನ್ನು ಆಯ್ದುಕೊಳ್ಳುವಾಗ ನಾವು ಲೇಖಕನ ಸ್ಥಾನಕ್ಕೆ ಗಮನವನ್ನೀಯದೆ. ಪೈಗಳ ಕುರಿತಾದ ಆತನ ಶ್ರದ್ಧೆ ಮತ್ತು ಪ್ರೇಮ ಭಾವಕ್ಕೆ ಹೆಚ್ಚಿನ ಮಹತ್ವವನ್ನಿತ್ತಿದ್ದೇವೆ.

ಮೂರನೇ ವಿಭಾಗದಲ್ಲಿ ಪೈಯವರ ಬಹುಮುಖಿ ಸಾಹಿತ್ಯಸೇವೆ ಹಾಗೂ ಕೃತಿಗಳ ಕುರಿತಾದ ವಿಮರ್ಶಾತ್ಮಕ ಲೇಖನಗಳ ಸಂಕಲನವಿದೆ. ಲೇಖನಗಳು ಉತ್ತಮವಾಗಿದ್ದರೂ ಸಂಖ್ಯೆಯಲ್ಲಿ ಅಲ್ಪವಿರುವ ಕಾರಣ ಈ ವಿಭಾಗದಲ್ಲಿ ನಮಗೆ ಪೂರ್ಣ ಸಫಲತೆಯು ಸಿಕ್ಕಿರುವುದೆಂದು ಹೇಳಲಾರೆವು. ಎಲ್ಲಾ ಕೃತಿಗಳ ಮೇಲಣ ಯೋಗ್ಯ ವಿಮರ್ಶೆಯ ದೊಡ್ಡ ಹೊತ್ತಗೆಯೊಂದನ್ನು

ತಂದು ಈ ನ್ಯೂನತೆಯನ್ನು ತುಂಬುವೆವೆಂಬ ಭರವಸೆಯನ್ನು ಕನ್ನಡ ಜನತೆಗೆ ನೀಡುವೆವು.

ನಾಲ್ಕನೆಯ ವಿಭಾಗದಲ್ಲಿ ಕಾಣಿಕೆಯ ರೂಪದಲ್ಲಿ ಬಂದ ಕೆಲವಾರು ಉತ್ತಮ ಲೇಖನಗಳಿವೆ. ಈ ವಿಭಾಗವು ಕೂಡಾ ಗಾತ್ರದ ದೃಷ್ಟಿಯಿಂದ ಬಡವಾಗಿದ್ದರೂ ಇನ್ನು ಮುಂದೆ ಹಲವಾರು ಸಂಶೋಧನಾತ್ಮಕ ಗ್ರಂಥಗಳನ್ನು ಪ್ರಕಟಿಸಿ ಈ ಕೊರತೆಯನ್ನು ನೀಗುವೆವು.

ಐದನೆಯ ವಿಭಾಗದಲ್ಲಿ ಶ್ರೀ ಕು. ಶಿ. ಹರಿದಾಸ ಭಟ್ಟರು ಸಂಪಾದಿಸಿದ ಪೈಗಳ ಪತ್ರಗಳ ಸಂಕಲನವಿದೆ. ಪೈಯವರ ಸಾವಿರಾರು ಪತ್ರಗಳು ಕನ್ನಡ ನಾಡಿನಲ್ಲಿ ಅಲ್ಲಲ್ಲಿ ಚದುರಿದ್ದು ಅವುಗಳನ್ನು ಏಕತ್ರಗೊಳಿಸಿ ಒಂದು ದೊಡ್ಡ ಹೊತ್ತಗೆಯನ್ನು ತರುವುದು ಅತ್ಯಂತ ಆವಶ್ಯಕವಿದೆ. ಕನ್ನಡ ನಾಡಿನ ಜನತೆಯ ಪೂರ್ಣ ಸಹಕಾರವು ದೊರಕಿದ್ದಲ್ಲಿ ಈ ಕಾರ್ಯವು ಸುಲಭವಾಗಬಹುದು. ಪೈಯವರ ಜೀವನ ದರ್ಶನವು ನಮಗೆ ಪೂರ್ಣವಾಗಿ ದೊರಕಬೇಕಾದಲ್ಲಿ ಈ ಪತ್ರಗಳ ಸಂಗ್ರಹವೇ ಆಧಾರ.

ಆರನೆಯ ವಿಭಾಗದಲ್ಲಿ ಪೈಯವರ ಜೀವನ ಚರಿತ್ರೆ, ಅವರ ಸರಸ್ವತೀ ಭಂಡಾರದ ಪರಿಚಯ ಹಾಗೂ ಅವರ ಸಾಹಿತ್ಯ ವ್ಯಾಪ್ತಿಯ ವಿವರಣೆ ಬರುವುದು. ಶ್ರೀ ಮ. ವಿ. ನಾಯಕರು ಮತ್ತು ಶ್ರೀ ಶ್ರೀನಿವಾಸ ಹಾವನೂರರು ತುಂಬಾ ಪರಿಶ್ರಮದಿಂದ "ಪೈಗಳ ಸಾಹಿತ್ಯ ವ್ಯಾಪ್ತಿ"ಯನ್ನು ಸಿದ್ಧಗೊಳಿಸಿರುವರು.

ಏಳನೆಯ ವಿಭಾಗದಲ್ಲಿ ಪೈಯವರ ಸಾಹಿತ್ಯ ವಿಸ್ತಾರದ ಸ್ಥೂಲ ಪರಿಚಯವನ್ನು ಜನತೆಗೆ ಈಯಬೇಕೆಂಬ ಉದ್ದೇಶದಿಂದ ಅವರ ವಿಭಿನ್ನ ಸಾಹಿತ್ಯ ಕೃತಿಗಳಲ್ಲಿ ಕೆಲವನ್ನು ಆರಿಸಿಕೊಡಲಾಗಿದೆ. ಈ ವಿಭಾಗದಲ್ಲಿ ಪೈಯವರು ಸಂಶೋಧನೆ, ಕವಿತೆ, ನಾಟಕ, ವಿಮರ್ಶೆ, ಇತಿಹಾಸ, ಧರ್ಮ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ಬರೆದ ಲೇಖನಗಳ ಒಂದೆರಡು ಮಾದರಿಗಳನ್ನು ಕೊಡಲಾಗಿದೆ. ಈ ವಿಭಾಗವು ಪೈಯವರ ಬಹುಮುಖ ವಿದ್ವತ್ತನ್ನು ಹಾಗೂ ಅವರ ಸಾಹಿತ್ಯದ ರುಚಿಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದಲ್ಲದೆ ಅವರ ಪೂರ್ಣ ಕೃತಿಗಳನ್ನು ಓದುವ ಪ್ರೇರಣೆಯನ್ನು ನೀಡುವುದೆಂದು ನಮ್ಮ ವಿಶ್ವಾಸ. ಎಂದೂ ಪ್ರಶಸ್ತಿಯನು ಅಪೇಕ್ಷಿಸದ ಶ್ರೀ ಪೈಯವರ ಕೃತಿಗಳು ಹಲವಾರು ಪ್ರಸಿದ್ದ ಅಪ್ರಸಿದ್ಧ ಪತ್ರಿಕೆಗಳಲ್ಲಿ ಹರಡಿದ್ದು ಕೆಲವೇ ಕೃತಿಗಳು ಪುಸ್ತಕಾಕಾರದಲ್ಲಿ ಹೊರಬಿದ್ದ ಕಾರಣ ಹೆಚ್ಚಿನವರಿಗೆ ಅವರ ಸಾಹಿತ್ಯ ಪ್ರಪಂಚದ ವಿಸ್ತಾರವು ತಿಳಿದಿಲ್ಲ. ಮೈಸೂರಿನ ಕಾವ್ಯಾಲಯದ ಒಡೆಯರಾದ ಶ್ರೀ ಚಿದಂಬರಂ ಅವರು ಪೈಯವರ ಎಲ್ಲಾ ಕೃತಿಗಳನ್ನು ಪ್ರಕಟಿಸುವ ಹಕ್ಕನ್ನು ಪಡೆದಿದ್ದು ಪೈಯವರ ಎಲ್ಲಾ ಕೃತಿಗಳನ್ನು ಪುಸ್ತಕಾಕಾರದಲ್ಲಿ ಕನ್ನಡಿಗರಿಗೆ ಒದಗಿಸಲು ಮುಂದೆ ಬಂದಿರುವುದು ಸಂತಸದ ವಿಷಯ. ನಮ್ಮೀ ವಿಭಾಗದಲ್ಲಿ ಪೈಯವರ ಕೆಲವೊಂದು ಲೇಖನಗಳನ್ನು ಮುದ್ರಿಸಲು ನಮಗೆ ಅವಕಾಶವನ್ನಿತ್ತುದಕ್ಕಾಗಿ ನಾವವರಿಗೆ ತುಂಬಾ ಋಣಿಗಳಾಗಿದ್ದೇವೆ. ಪೈಯವರ ಕೆಲವೊಂದು ಅಪ್ರಕಟಿತ ಲೇಖನಗಳು ಈ ಕೃತಿ ವಿಭಾಗದ ಆಕರ್ಷಣೆಯನ್ನು ಹೆಚ್ಚಿಸಲು ಸಹಕಾರಿಯೂಗಿವೆ.

ಇಲ್ಲಿನ ಚಿತ್ರಸಂಗ್ರಹ– ಪೈಯವರ ಭಾವಚಿತ್ರಗಳು—ಸಂಸಾರದ ಚಿತ್ರಗಳು. ಅವುಗಳಲ್ಲಿ ಹೆಚ್ಚಿನವುಗಳನ್ನು ಪೈಯವರ ಸಹೋದರರಾದ ಶ್ರೀ ಎಂ. ಅನಂತ ಪೈ ಹಾಗೂ ಅವರ ಸಹೋದರರ ಮಕ್ಕಳಾದ ಶ್ರೀ ತುಕಾರಾಮ ಪೈ, ಶ್ರೀ ವೆಂಕಟೇಶ ಪೈ, ಶ್ರೀ ದಾಮೋದರ ಪೈ ಮತ್ತು ಅವರ ಸಂಬಂಧಿಕರಾದ ಶ್ರೀ ರಾಜಾರಾಮ ಮಲ್ಯ ಮತ್ತೂ ಹಲವಾರು ಮಿತ್ರರು ಒದಗಿಸಿಕೊಟ್ಟಿರುತ್ತಾರೆ. ಅವರೆಲ್ಲರ ಉಪಕಾರವನ್ನು ನಾವು ಸ್ಮರಿಸಬೇಕಾಗಿದೆ.

ಇಂತಹ ಮಹಾ ಗ್ರಂಥವನ್ನು ರೂಪಿಸಲು ಹೆಚ್ಚಿನ ಧನಸಹಾಯದ ಆವಶ್ಯಕತೆ ಇದ್ದು ಬೊಂಬಾಯಿಯ ಕನ್ನಡಾಭಿಮಾನಿಗಳಾದ ಶ್ರೀ ಎಸ್. ಎನ್. ಮೂಡಬಿದ್ರಿ, ಸಿಂಡಿಕೆಟ್ ಬೇಂಕಿನ ಮೇನೇಜಿಂಗ್ ಡ್ಯಾರೆಕ್ಟರ್‌ರಾದ ಶ್ರೀ ಟಿ. ಎ. ಪೈ, ಮಂಗಳೂರು ಗಣೇಶ ಬೀಡಿಯ ಮಾಲಿಕರಾದ ಶ್ರೀ ರಘುರಾಮ ಪ್ರಭು ಮತ್ತು ಶ್ರೀ ಎಂ. ಗೋವಿಂದ ರಾವ್, ಕೆನರಾ ಬೇಂಕಿನ ಆಡಳಿತ ಮಂಡಳಿ, ಪೈಯವರ ಸಹೋದರರಾದ ಶ್ರೀ ಎಂ. ನಾರಾಯಣ ಪೈ, ಶ್ರೀ ಎಂ. ಅನಂತ ಪೈ ಮತ್ತು ಸಹೋದರರ ಪುತ್ರರಾದ ಶ್ರೀ ಎಂ. ತುಕಾರಾಮ ಪೈ ಮತ್ತು ಅವರ ಸಹೋದರರು, ಭದ್ರಗಿರಿ ಕೇಶವದಾಸರು, ಚಾರಮಕ್ಕಿ ನಾರಾಯಣ ಶೆಟ್ಟಿ ಮುಂತಾದವರು ಕೊಡುಗೈಯ ಧನ ಸಹಾಯವನ್ನಿತ್ತುದಲ್ಲದೆ ಇನ್ನೂ ಹಲವಾರು ವ್ಯಕ್ತಿಗಳು ನಮಗೆ ಸಹಾಯವನ್ನಿತ್ತಿರುವರು. ಅವರೆಲ್ಲರ ಉಪಕಾರವನ್ನು ಸ್ಮರಿಸಬೇಕಾಗಿದೆ.

ಪೈಯವರ ಆತ್ಮೀಯ ಮಿತ್ರರಾದ ಶ್ರೀ ವಿ. ಎಸ್. ಕುಡ್ವಾ ಮತ್ತು ಸಂಜೀವ ಕುಡ್ವಾ ಅವರು ತಮ್ಮ ನವಭಾರತ ಮುದ್ರಣಾಲಯದಲ್ಲಿ ನಮ್ಮೀ ಗ್ರಂಥದ ಅಂದವಾದ ಮುದ್ರಣಕ್ಕೆ ಅವಕಾಶವನ್ನಿತ್ತು ಈ ಗ್ರಂಥದ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿಸಿದುದಲ್ಲದೆ ನಮಗೆ ಹೆಚ್ಚಿನ ಧನಸಹಾಯವನ್ನಿತ್ತು ನಮ್ಮೀ ಕಾರ್ಯವನ್ನು ಸುಗಮಗೊಳಿಸಿದ್ದಾರೆ. ಅವರಿಗೂ ನಾವು ಋಣಿಗಳಾಗಿದ್ದೇವೆ. ಅಲ್ಲದೆ ಅಚ್ಚು ಕೂಟದ ಶ್ರೀ ಬಾಬುರಾಯ ಕಿಣಿ, ಶ್ರೀ ಉಮಾನಾಥ ಕಿಣಿ ಮತ್ತು ಇತರ ಕೆಲಸಗಾರರು ಹೆಚ್ಚಿನ ಪರಿಶ್ರಮ ಪಟ್ಟು ಈ ಕಾರ್ಯವನ್ನು ಕೊನೆಗಾಣಿಸಿದ್ದಾರೆ. ಅವರನ್ನೂ ನಾವು ನೆನೆಯುತ್ತೇವೆ.

ಕೊನೆಯದಾಗಿ ನಮ್ಮೀ ಗ್ರಂಥಕ್ಕೆ ತಮ್ಮ ಲೇಖನಗಳನ್ನಿತ್ತು ಸಹಕರಿಸಿದ ಎಲ್ಲಾ ಲೇಖಕರ ಉಪಕಾರ ಸ್ಮರಣೆಯನ್ನು

ನಾವು ಮಾಡುತ್ತೇವೆ.

ಈ ಗ್ರಂಥ ಪ್ರಕಾಶನದ ಮುನ್ನ ಎಕಾಡೆಮಿ ಆಫ್. ಜನರಲ್ ಎಜುಕೇಶನಿನ ಸ್ಥಾಪಕರಾದ ಶ್ರೀ ಡಾ. ಟಿ. ಮಾಧವ ಪೈಯವರೊಡನೆ ಗ್ರಂಥಮಾಲೆಯೊಂದನ್ನು ಆರಂಭಿಸುವ ಹಾಗೂ ಅದರ ಪ್ರಥಮ ಪುಷ್ಪವಾಗಿ ಈ ಸ್ಮಾರಕ ಗ್ರಂಥವನ್ನು ತರುವ ವಿಚಾರವನ್ನು ಮುಂದಿಟ್ಟಾಗ ನಮ್ಮ ಈ ಕಾರ್ಯವನ್ನು ಪ್ರಶಂಸಿಸಿ ತಾವು ಎಕಾಡೆಮಿಯ ವತಿಯಿಂದ ಈ ಗ್ರಂಥಮಾಲೆಗೆ ಆವಶ್ಯಕ ಧನಸಹಾಯವನ್ನೀಯುವ ಭರವಸೆಯನ್ನು ನಮಗೆ ಇತ್ತಿರುವರು. ಅವರ ಪ್ರೋತ್ಸಾಹ ಹಾಗೂ ಕನ್ನಡ ಜನತೆಯ ಸಹಕಾರ ಇವುಗಳಿಂದ ಉತ್ಸಾಹಗೊಂಡ ನಾವು ಇಷ್ಟೊಂದು ಮುಂದಕ್ಕೆ ನಮ್ಮ ಹೆಜ್ಜೆಯನ್ನಿಟ್ಟಿರುವೆವು.

ಈ ಸಂದರ್ಭದಲ್ಲಿ ತಮ್ಮ ಅನುಪಮ ದಾನದಿಂದ ನಮ್ಮಿ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿದ ದಿ॥ ಡಾ॥ ಎ. ಎಸ್. ಭಂಡಾರ್ಕಾರರನ್ನು ಸ್ಮರಿಸಬೇಕಾಗಿದೆ. ನಮ್ಮಿ ಗ್ರಂಥಮಾಲೆಯು ಅವರ ಪುಣ್ಯನಾಮದಿಂದ ಪ್ರಾರಂಭವಾಗಿ ರಾಷ್ಟ್ರಕವಿಗಳ ಪುಣ್ಯ ನಿಧಿಯಿಂದ ತ್ರಾಣವನ್ನು ಪಡೆದು ಪ್ರತಿ ವರ್ಷವೂ ಸಾಹಿತ್ಯಿಕ, ಸಂಶೋಧನಾತ್ಮಕ ಉತ್ತಮ ಕೃತಿಗಳಿಂದೊಡಗೂಡಿ, ಕನ್ನಡ ಜನತೆಯನ್ನು ಸಂತೋಷಗೊಳಿಸುವುದು. ಇದನ್ನು ಪಾಲಿಸಿ, ಪೋಷಿಸಿಕೊಂಡು ಬರುವ ದೊಡ್ಡ ಹೊಣೆ ಕನ್ನಡ ಜನತೆಗೆ ಸೇರಿದ್ದು.

**ಕೆ. ಜಿ. ಶೇಣೈ,**
**ಆರ್. ರಾಮದೇವ ಶೇಣೈ,**
**ಎಚ್. ಶಾಂತಾನಂದ ಭಟ್,**
**ಎಸ್. ಮುರಾರಿ ತೋಲ್ಪಾಡಿ.**





ಭಂಡಾರ್‌ಕಾರ್ಸ್ ಕಾಲೇಜಿನ ಸಂಸ್ಥಾಪಕರಾದ
ಡಾ। ಅಚ್ಯುತ ಶ್ರೀನಿವಾಸ ಭಂಡಾರ್‌ಕಾರ್.

[ ಜನನ: 5—10—1900. ಮರಣ: 12—3—1964. ]



ಭಂಡಾರ್‌ಕಾರ್ಸ್ ಗ್ರಂಥಮಾಲೆಯ ಪ್ರೇರಕ ಶಕ್ತಿ
ಡಾ। ತೋನ್ಸೆ ಮಾಧವ ಅನಂತ ಪೈ.

# ಅನುಕ್ರಮಣಿಕೆ

# ಕಂಬನಿ

ರಾಷ್ಟ್ರಕವಿ ಮಂ. ಗೋವಿಂದ ಪೈಯವರ ನಿಧನದ ವಾರ್ತೆ ಸಿಡಿಲಿನಂತೆ ಇಡೀ ಕರ್ನಾಟಕ್ಕೆ ಎರಗಿತು. ಆ ಆಘಾತದಿಂದ ಕನ್ನಡ ಜನತೆ ಚೇತರಿಸಿ ಎದ್ದಾಗ ಕಂಗಳಿಂದ ಅನವರತ ಹರಿಯುತ್ತಿದ್ದುದು ಕಂಬನಿಗಳ ಧಾರೆ. ಮ. ಗೋವಿಂದ ಪೈಯವರ ಕಿರಿಯ ಸಹೋದರ ಮ. ಸುಬ್ರಾಯ ಪೈಯವರ ಪುತ್ರ ಶ್ರೀ ತುಕಾರಾಮ ಪೈಯವರ ಸ್ವಗೃಹದಲ್ಲಿ ರಾಷ್ಟ್ರಕವಿಗಳು ನಿಧನ ಹೊಂದಿದ್ದರು. ಅವರಿಗೆ ಬಂದ ಸಹಸ್ರಾರು ತಂತಿ ಪತ್ರಗಳಲ್ಲಿ ತುಂಬಿದ ಕಂಬನಿಗಳಲ್ಲಿ ಕೆಲವನ್ನು ಆರಿಸಿ ಶ್ರೀ ರಾಜಾರಾಮ ಮಲ್ಯರು ಇಲ್ಲಿ ಕೊಟ್ಟಿರುವರು.

To
Shri Subraya Pai,
C/o. Sri Tukaram Pai, Advocate,
Mangalore.

*Deeply grieved to hear of the sad demise of Sri Manjeswar Govinda Pai. His death removes from our minds the doyen of Kannada literature and an erudite scholar. His loss to the country and Karnataka in particular is great and personally to me a void that cannot be filled. Please accept my heart felt condolences and convey the same to members of the bereaved family.*

Governer of Mysore.

To
Sri Tukaram Pai, Advocate,

*Shocked passing away of your Reverend uncle. Karnataka has lost the greatest living poet. Loss irreparable. Please accept my heart felt condolences and convey the same to members of your family.*

Nijalingappa,
Mysore Chief Minister.

To
Tukaram Pai, Advocate.

*Grieved demise of Govinda Pai. Accept condolences.*

B. V. Baliga,
Speaker.

To
Sri Tukaram Pai.

*Staff and Students of Bhandarkars' College, Coondapur express heart felt condolences to you and all the members of your family. May the departed great soul rest in peace.*

K. G. Shenoy,
Principal.

## ಯುನಿವರ್ಸಿಟಿ ಓಫ್ ಮೈಸೂರು,

ಮೈಸೂರು — 2.

ಶ್ರೀಮಾನ್ ಎಂ. ಅನಂತ ಪೈ ಅವರಲ್ಲಿ ವಿಜ್ಞಾಪನೆಗಳು.

ತಾ. 6–9–63ರಂದು ತಮ್ಮ ಅಣ್ಣಂದಿರು ರಾಷ್ಟ್ರಕವಿ ಶ್ರೀ ಎಂ. ಗೋವಿಂದ ಪೈ ಅವರು ನಿಧನರಾದ ವಾರ್ತೆ ಕೇಳಿ ನನಗೂ ನಮ್ಮ ಇಲಾಖೆಯ ಅಧ್ಯಾಪಕ ಮತ್ತು ವಿದ್ಯಾರ್ಥಿವೃಂದಕ್ಕೂ ಜೊತೆಗೆ ಇಡೀ ಮಾನಸ ಗಂಗೋತ್ರಿಯ ಅಧ್ಯಾಪಕ ವಿದ್ಯಾರ್ಥಿ ವೃಂದಕ್ಕೂ ಅಪಾರ ದು:ಖವುಂಟಾಗಿದೆ. ಪೂಜ್ಯರ ನಿಧನದಿಂದ ಇಡೀ ಕನ್ನಡನಾಡು ನುಡಿಗಳಿಗಾದ ನಷ್ಟ ಅಷ್ಟಿಷ್ಟಲ್ಲ.

ಈ ಸಂದರ್ಭದಲ್ಲಿ ತಾ. 9–9–63ನೆಯ ಸೋಮವಾರ ಮಾನಸ ಗಂಗೋತ್ರಿಯ ಅಧ್ಯಾಪಕರೂ ವಿದ್ಯಾರ್ಥಿಗಳೂ ಸಭೆ ಸೇರಿ ಅಂಗೀಕರಿಸಿದ ನಿರ್ಣಯವನ್ನು ಈ ಪತ್ರದ ಜೊತೆಯಲ್ಲಿ ಕಳಿಸಿದ್ದೇನೆ.

ಸಂತಾಪಸೂಚಕ ನಿರ್ಣಯ

ಪ್ರಗಲ್ಭವಾದ ಪಾಂಡಿತ್ಯ, ಅಸದೃಶವಾದ ಸಂಶೋಧನ ಸಾಮರ್ಥ್ಯ, ಉಜ್ವಲವಾದ ರಾಷ್ಟ್ರಪ್ರೇಮ, ಬಹುಭಾಷಾವಿದ್ವತ್ತು, ಮತ್ತು ವಿಶಿಷ್ಟ ಕವಿತಾ ಪ್ರತಿಭೆಗಳಿಂದ ಸುಮಾರು ಅರವತ್ತು ವರ್ಷಗಳಿಗೆ ಮೇಲ್ಪಟ್ಟು ಕನ್ನಡ ನಾಡುನುಡಿಗಳಿಗೆ ಅವಿಚ್ಛಿನ್ನವಾಗಿ ಅಪಾರವಾದ ಸೇವೆ ಸಲ್ಲಿಸಿ, ಸುದೀರ್ಘವೂ, ಆದರ್ಶಪ್ರಾಯವೂ, ಸುಸಾರ್ಥಕವೂ, ಪರಿಪಕ್ವವೂ ಆದ ಬಾಳನ್ನು ಮುಗಿಸಿದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರ ನಿಧನದಿಂದ ತಮಗಾದ ತೀವ್ರ ನಷ್ಟವನ್ನು ಮಾನಸ ಗಂಗೋತ್ರಿಯ ಅಧ್ಯಾಪಕರೂ, ವಿದ್ಯಾರ್ಥಿಗಳೂ ಕೂಡಿದ ಈ ಸಭೆ ನೆನೆದು, ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು ದಯೆಗೆಯ್ಯಲೆಂದೂ, ಅವರ ಬಂಧು ಬಳಗದವರಿಗೆ ದುರ್ಭರವಾದ ದು:ಖವನ್ನು ಸಹಿಸುವ ಶಕ್ತಿಯನ್ನು ನೀಡಲೆಂದೂ ಪ್ರಾರ್ಥಿಸುತ್ತವೆ.

# ಭಂಡಾರ್‌ಕಾರ್‍ಸ್ ಆರ್ಟ್ಸ್ ಎಂಡ್ ಸಾಯನ್ಸ್ ಕೊಲೇಜ್,

## ಕುಂದಾಪುರ.

7—9—'63.

ಪ್ರಿಯರೇ,

ತಮ್ಮ ದೊಡ್ಡ ತಂದೆಯವರಾದ ಪೂಜ್ಯ ರಾಷ್ಟ್ರಕವಿ ಗೋವಿಂದ ಪೈಯವರ ನಿಧನ ವಾರ್ತೆಯನ್ನು ಕೇಳಿ ಅಪಾರವಾದ ಶೋಕವುಂಟಾಯಿತು. ಅವರು ತಮ್ಮ ವಿದ್ವತ್ತು, ಸುಶೀಲ ಹಾಗೂ ಪ್ರೇಮಲ ಸ್ವಭಾವದಿಂದಾಗಿ ಸರ್ವಪ್ರಿಯರಾಗಿದ್ದರು. ಅವರ ಜೀವನ ಆದರ್ಶ ಮಹರ್ಷಿಯ ಜೀವನವಾಗಿತ್ತು. ಸಾಹಿತ್ಯ ಸೇವೆಯಲ್ಲಿ, ಜ್ಞಾನ ಕ್ಷೇತ್ರದಲ್ಲಿ ತಮ್ಮ ಸಂಪೂರ್ಣ ಜೀವನವನ್ನು ಸವೆದವರು ಅವರು. ಅವರ ನಿಧನದಿಂದ ಇತಿಹಾಸ, ಸಾಹಿತ್ಯ ಕ್ಷೇತ್ರದಲ್ಲಿ ತುಂಬಲಾಗದ ಹಾನಿ ಒದಗಿರುವುದು. ಕನ್ನಡ ನಾಡು ಇಂದು ಹಿರಿಯ ಸಾಹಿತಿಯೋರ್ವನನ್ನು ಕಳೆದುಕೊಂಡಿತು. ಈ ವ್ಯಸನದಲ್ಲಿ ತಮ್ಮೊಂದಿಗೆ, ನಾವು ಸಹಭಾಗಿಗಳಾಗಿದ್ದು ಈ ಪತ್ರದೊಂದಿಗೆ ನಮ್ಮಲ್ಲಿ ಜರುಗಿದ ಶೋಕಸಭೆಯ ಠರಾವನ್ನು ಕಳುಹಿಸುತ್ತಲಿದ್ದೇವೆ.

ತಮ್ಮ ವಿಶ್ವಾಸಿ,<br>
**K. G. Shenoy.**

ಭಂಡಾರ್‌ಕಾರ್‍ಸ್ ಕಾಲೇಜಿನಲ್ಲಿ ರಾಷ್ಟ್ರಕವಿಗಳ ನಿಧನದ ಕುರಿತು ಜರುಗಿದ ಶೋಕಸಭೆಯಲ್ಲಿ ಮಂಜೂರಾದ ಠರಾವು.

ಭಂಡಾರ್‌ಕಾರ್‍ಸ್ ಕಾಲೇಜಿನ ಪ್ರಾಧ್ಯಾಪಕ ವರ್ಗ ಹಾಗೂ ವಿದ್ಯಾರ್ಥಿ ವೃಂದವು ಪೂಜ್ಯ ರಾಷ್ಟ್ರಕವಿ ಗೋವಿಂದ ಪೈಗಳ ನಿಧನದ ವಾರ್ತೆಯನ್ನು ತಿಳಿದು ತುಂಬಾ ಶೋಕವನ್ನು ಅನುಭವಿಸುತ್ತಲಿದೆ. ಪೂಜ್ಯ ರಾಷ್ಟ್ರಕವಿಗಳ ಮರಣದಿಂದ ನಮಗೆ, ಇಡೀ ದೇಶಕ್ಕೆ ಉಂಟಾದ ಹಾನಿಯು ಅಪಾರವಾದುದು. ಅವರ ಮರಣವು ನಮಗುಂಟಾದ ವೈಯಕ್ತಿಕ ಹಾನಿಯೆಂದು ನಾವು ಬಗೆಯುತ್ತಲಿದ್ದೇವೆ. ನಾವೀ ಸಂದರ್ಭದಲ್ಲಿ ನಮ್ಮ ಹಾರ್ದಿಕ ಶೋಕವನ್ನು ವ್ಯಕ್ತ ಪಡಿಸುತ್ತಾ ಪೂಜ್ಯ ಪೈಗಳವರ ಆತ್ಮಕ್ಕೆ ಅಮರ ಶಾಂತಿಯನ್ನು ದಯಪಾಲಿಸಲೆಂದು ಭಗವಂತನೊಡನೆ ಪ್ರಾರ್ಥಿಸುತ್ತೇವೆ. ಹಾಗೂ ನಿಮಗೆ ಒದಗಿದ ಈ ಅಪಾರ ಹಾನಿಯಲ್ಲಿ ನಮ್ಮ ಸಹಾನುಭೂತಿಯನ್ನು ತೋರಿಸುತ್ತಾ ನಿಮ್ಮ ದು:ಖದಲ್ಲಿ ನಾವೂ ಒಂದಾಗಿ ಈ ಅಪಾರವಾದ ಹಾನಿಯನ್ನು ಸಹಿಸುವ ಶಕ್ತಿಯನ್ನು ನಮಗೆಲ್ಲ ಭಗವಂತನೀಯಲೆಂದು ಆತನನ್ನು ಪ್ರಾರ್ಥಿಸಿಕೊಳ್ಳುತ್ತೇವೆ.

ಭಂಡಾರ್‌ಕಾರ್‍ಸ್ ಕಾಲೇಜಿನ ಪ್ರಾಧ್ಯಾಪಕ ಹಾಗೂ ವಿದ್ಯಾರ್ಥಿ ವೃಂದ.

# ಸ್ಯೆಂಟ್ ಎಲೋಸಿಯಸ್ ಕೊಲೇಜ್,

## ಮಂಗಳೂರು.

7—9—'63.

ಉದ್ದಾಮ ಪಂಡಿತರೂ, ಪ್ರತಿಭಾವಂತ ಕವಿಗಳೂ ದೇಶವಿದೇಶ ಕಾವ್ಯಮಾರ್ಗಮಹಾರಥಿಕರೂ ಎಲ್ಲದಕ್ಕೂ ಮಿಗಿಲಾಗಿ ಪರಿಣತ ಸಂಶೋಧಕ ವಿಮರ್ಶಕರೂ ಕನ್ನಡದ ಏಕಮಾತ್ರ ರಾಷ್ಟ್ರಕವಿಗಳೂ ಆದ ಶ್ರೀ ಮಂ. ಗೋವಿಂದ ಪೈಯವರ ನಿಧನದಿಂದ ಇಡಿಯ ಕನ್ನಡದ ಜನತೆಯ ಹೃದಯ ಮಂದಿರವೇ ಶೂನ್ಯವಾಗಿದೆ.

ಈ ಸಂದರ್ಭದಲ್ಲಿ ಅವರ ಬಂಧುಬಾಂಧವರ ಸಂತಾಪದಲ್ಲಿ ನಾವೂ ಸಹಭಾಗಿಗಳಾಗಿರುವುದರೊಂದಿಗೆ ಭಗವಂತನು ಎಲ್ಲರಿಗೂ ಈ ಸಂತಾಪವನ್ನು ಸಹಿಸುವ ಶಕ್ತಿಯನ್ನು ಕರುಣಿಸಲೆಂದೂ ದಿವಂಗತರ ಪವಿತ್ರಾತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಅನುಗ್ರಹಿಸಲೆಂದೂ ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ.

ಪ್ರಿನ್ಸಿಪಾಲ್, ಶಿಕ್ಷಕ ಮತ್ತು ವಿದ್ಯಾರ್ಥಿ ವೃಂದ.

## ಕರ್ನಾಟಕ ಸಂಘ,

## ಕರ್ನಾಟಕ ಯುನಿವರ್ಸಿಟಿ,

ಧಾರವಾಡ.

### ರಾಷ್ಟ್ರಕವಿ ಎಂ. ಗೋವಿಂದ ಪೈ ಅವರಿಗೆ ಶ್ರದ್ಧಾಂಜಲಿ

ಧಾರವಾಡದ ವಿಶ್ವವಿದ್ಯಾಲಯ ಕರ್ನಾಟಕ ಸಂಘದ ಆಶ್ರಯದಲ್ಲಿ ವಿದ್ಯಾರ್ಥಿಗಳು ಹಾಗೂ ಪ್ರಾಧ್ಯಾಪಕರು ಡಾ॥ ಆರ್. ಸಿ. ಹಿರೇಮಠ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ದಿವಂಗತ ಎಂ. ಗೋವಿಂದ ಪೈಗಳವರಿಗೆ ತಮ್ಮ ಶ್ರದ್ಧಾಂಜಲಿಯನ್ನು ಸಲ್ಲಿಸಿದರು, ಹಾಗೂ ಕೆಳಗಿನ ಗೊತ್ತುವಳಿಯನ್ನು ಸ್ವೀಕರಿಸಲಾಯಿತು.

"ರಾಷ್ಟ್ರಕವಿ ಎಂ. ಗೋವಿಂದ ಪೈ ಅವರು ನಿನ್ನೆ ವೈಕುಂಠವಾಸಿಗಳಾದರೆಂದು ತಿಳಿದು ನಮಗೆಲ್ಲ ಅತ್ಯಂತ ದು:ಖವಾಗಿದೆ. ಅವರ ಮರಣದಿಂದ ಈ ನಾಡಿನ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ತುಂಬಿಬಾರದ ಹಾನಿಯಾಗಿದೆ.

ಶ್ರೀಯುತರು ಗಣ್ಯರಾದ ಸಂಶೋಧಕರಾಗಿದ್ದರು. ಅವರ ಸಂಶೋಧಕ ಶಕ್ತಿಯನ್ನು ಕಂಡು ವಿದ್ವಜ್ಜನರು ಬೆರಗಾಗಿದ್ದರು. ಅಂಥಾ ಅಪಾರ ಪಾಂಡಿತ್ಯ ಅವರದು. ಇದಕ್ಕೆ ಅವರ ಸಂಶೋಧನಾತ್ಮಕ ಲೇಖನಗಳೇ ಸಾಕ್ಷಿಯಾಗಿವೆ.

ಇಷ್ಟೇ ಅಲ್ಲ, ಅವರು ಈ ನಾಡಿನ ಪ್ರಖ್ಯಾತ ಕವಿಗಳಾಗಿದ್ದರು. ಕಾಸರಗೋಡಿನ ಆ ನೆಲದಲ್ಲಿ ನಿಂತು ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಜೀವನ ಸವೆಸಿದ್ದರು. ಕಾಸರಗೋಡನ್ನು ಕರ್ನಾಟಕಕ್ಕೆ ಸೇರಿಸದ ಕಾರಣದಿಂದ ಅವರಿಗೆ ಅತ್ಯಂತ ಕಳವಳವಾಗಿತ್ತು. ಅಂತಹ ನಾಡಿನ ಪ್ರೀತಿಯಿಂದ ಇಂದಿನ ವರೆಗೂ ಅವರು ಅದಕ್ಕಾಗಿ ಹೋರಾಡುತ್ತಿದ್ದರು.

ಇಂಥ ಸಂಶೋಧಕರೂ ಕವಿಗಳೂ ಮೇಲಾಗಿ ರಾಷ್ಟ್ರಾಭಿಮಾನಿಗಳೂ ವೈಕುಂಠವಾಸಿಗಳಾದುದರಿಂದ ಅವರ ಕುಟುಂಬದವರಿಗೆ, ಕಾಸರಗೋಡಿನ ಜನತೆಗೆ ಅಲ್ಲದೆ ಇಡೀ ಕರ್ನಾಟಕಕ್ಕೆ ದು:ಖವಾಗಿದೆ.

ಅವರ ಬಂಧುಬಾಂಧವರಿಗೆ ಆದ ದು:ಖದಲ್ಲಿ ನಾವೆಲ್ಲರೂ ಭಾಗಿಗಳಾಗಿದ್ದೇವೆ.

ಮೃತರಾದ ಶ್ರೀ ಗೋವಿಂದ ಪೈಗಳವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನೀಯಲೆಂದು ಆ ದಯಾಘನನಲ್ಲಿ ನಾವೆಲ್ಲರೂ ಪ್ರಾರ್ಥಿಸುತ್ತೇವೆ."

## Kavyalaya Publishers,

Mysore.

6—9—63.

Dear Sri Tukaram Pai,

*I am writing this with the deepest sorrow and regret. I saw the sad news of the passing away of Sri Govinda Pai, in the morning newspaper. I curse myself that I did not move to go to Mangalore by this time to see him. Something or other came in the way and delayed my journey. I fondly hoped that I would be able to carry proofs of "Nandadeepa" to him personally and have the proofs passed in consultation with him. But alas! Fates are unkind to us. It is a pity that the 'Sanmana Samithi' did not honour him before this time. It is no loss to him. He always shunned publicity and fame. We the public are loosers for the delay. He lived the life of a yogin, pursuing his studies and not caring for any*

*sort of recognition or report. He worked quietly, lived quietly and passed away quietly. It is left to us to show how vast was his learning and how varied is his writing. Please convey my heart-felt condolences to the members of his family. I shall go to your place as soon as you ask me to do so. The burden is cast on you now to make him and his works better known to the public. If you can write a short sketch of his life and give it to me I shall publish it and bring it to the notice of the public. If you find it difficult to write, I shall take down all the particulars that you give me and put them into shape. The saddest thing has happened and we have now to think of the ways of commemorating him. Please write to me in detail, as soon as you find time, for all particulars.*

Yours sincerely,
Chidambaram.

## Sri Poornaprajna College,

Udipi.

*Proceeding of the meeting held this morning under the Presidentship of the Principal Sri Poornaprajna College, Udipi to condole the death of Rashtra Kavi M. Govinda Pai.*

*This meeting of the students and staff of Sri Poornaprajna College places on record its deep sense of sorrow at the passing away of the great Kannada Scholar, Poet, Dramatist and Research–Worker, Rashtra Kavi M. Govinda Pai at the age of 81. His was a life dedicated to literature and research. In many respects in advance of his time, Govinda Pai was a genius whose adventurous spirit cut through literary convention and passed the way for change. Though by age he belonged to the earlier and elder generation of Kannada writers, he was in spirit always with the young. The Sincerity of his creative inspection was matched by his deep scholarship which made him, besides, the prince among critics and researchers. Solid in build, vigorous in mind and spirit, lively in conversation, and supremely happy. In literary company, Govinda Pai was well known his transparent sincerity and childlike innocence. His presence at Manjeshwar had made it a place of literary pilgrimage for young and old who were interested in Kannada language and literature. His death was impoverished the Kannada World. May his bright example ever shine and inspire succeeding generations of the lovers of Kannada language and literature.*

Principal.

To

The family of the late Govinda Pai, Manjeshwar.

# ಕನ್ನಡ ಸಾಹಿತ್ಯ ಕುಟೀರ,

ಬೆಂಗಳೂರು.

11—9—'63.

ಶ್ರೀ ತುಕಾರಾಮ ಪೈಯವರಿಗೆ ನಮಸ್ಕಾರಗಳು. ನಮ್ಮ ಸಂಘದ ಆಶ್ರಯದಲ್ಲಿ ನಿನ್ನೆಯ ದಿನ ಸಂಜೆ ಶ್ರೀ ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಶ್ರೀ ಗೋವಿಂದ ಪೈಯವರ ನಿಧನದ ಬಗ್ಗೆ ಸಂತಾಪಸೂಚಕ ಸಭೆಯನ್ನು ಏರ್ಪಡಿಸಲಾಗಿತ್ತು. ಸಭೆಯ ಮುಂದೆ ಮಂಡಿಸಿದ ನಿರ್ಣಯವನ್ನು ಇದರೊಂದಿಗೆ ತಮಗೆ ಕಳುಹಿಸಿಕೊಡಲಾಗುತ್ತಿದೆ. ನಿಮ್ಮ ದು:ಖದೊಂದಿಗೆ ಕನ್ನಡ ಭಕ್ತರಾದ ಕಿರಿಯರಾದ ನಾವೂ ಸಹಭಾಗಿಗಳಾಗಿದ್ದೇವೆ. ಈ ನಮ್ಮ ಅಂತ:ಕರಣಪೂರ್ವಕವಾದ ನಿರ್ಣಯವನ್ನು ದಯವಿಟ್ಟು ಸ್ವೀಕರಿಸಿ.

ಇಂತಿ ನಮಸ್ಕಾರಗಳು.
ಅ. ಸತ್ಯಪಾಲ,
ಕಾರ್ಯದರ್ಶಿ.

ಸಂತಾಪಸೂಚಕ ನಿರ್ಣಯ.

ಇತಿಹಾಸಜ್ಞ, ಸಂಶೋಧನಕಾರ, ನಾಟಕಕಾರ, ವಿಮರ್ಶಕ, ಪ್ರಬಂಧಕಾರ, ಅಷ್ಟೇಕೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸಿದ್ಧ ಹಸ್ತರಾಗಿದ್ದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರು ತಾ. 6-6-63ರ ಶುಕ್ರವಾರ ಬೆಳಿಗ್ಗೆ ತಮ್ಮ 81ನೆಯ ವಯಸ್ಸಿನಲ್ಲಿ ನಮ್ಮನ್ನಗಲಿದರು. ಇದರಿಂದ ಕನ್ನಡ ನಾಡುನುಡಿಗೆ ತುಂಬಲಾರದ ನಷ್ಟವಾಗಿದೆ. ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿ ಸಾಮರ್ಥ್ಯಗಳನ್ನು ಕನ್ನಡ ರಾಜರಾಜೇಶ್ವರಿ ಅವರ ಬಂಧುವರ್ಗದವರಿಗೆ, ಮಿತ್ರವೃಂದಕ್ಕೆ, ಕನ್ನಡ ಅಭಿಮಾನಿ ಕೋಟಿಗೆ ಅನುಗ್ರಹಿಸಲಿ ಎಂದು ಅನನ್ಯಭಕ್ತಿಯಿಂದ ಈ ಸಭೆ ಪ್ರಾರ್ಥಿಸುತ್ತದೆ.

# ಕರ್ಣಾಟಕ ಸಂಘ,

ಬೆಂಗಳೂರು.

9—9—'63.

ಶ್ರೀ ತುಕಾರಾಂ ಪೈ ಅವರಲ್ಲಿ ವಿಶ್ವಾಸಪೂರ್ವಕವಾದ ವಿಜ್ಞಾಪನೆಗಳು.

ಪೂಜ್ಯರಾದ ಶ್ರೀ ಗೋವಿಂದ ಪೈ ಅವರನ್ನು ನಾವು ಕಳಕೊಂಡ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿ ಏನು ಹೇಳುವುದಕ್ಕೂ ತೋಚದಾಗಿದೆ.

ಶ್ರೀ ಗೋವಿಂದ ಪೈ ಅವರು ನಂಬಿದ್ದ "ಶ್ರೀ ದೇವರು" ನಿಮಗೂ ನಮಗೂ ಈ ವಿಯೋಗವನ್ನು ಸಹಿಸುವ ಶಕ್ತಿಯನ್ನು ಕೊಡಲಿ.

ನಮ್ಮ ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘದ ಪರವಾಗಿ, ಅದರ ಸದಸ್ಯರು ತಾವೂ ಈ ಮಹಾದು:ಖದಲ್ಲಿ ಭಾಗಿಗಳಾಗಿದ್ದಾರೆಂದು ತಿಳಿಸಲು ನಾನು ಆಜ್ಞಪ್ತನಾಗಿದ್ದೇನೆ.

ಶುಭಸ್ವೀಕಾರವಾಗಿ, ದು:ಖದ ಭಾರ ಕೊಂಚ ಕಡಿಮೆಯಾದ ಮೇಲೆ, ಮತ್ತೊಮ್ಮೆ ಬರೆಯುತ್ತೇನೆ.

ನಿಮ್ಮ ತೀರ್ಥರೂಪರಾದ ಶ್ರೀ ಸುಬ್ರಾಯ ಪೈ ಅವರಿಗೆ ನನ್ನ ಪ್ರೀತಿಪೂರ್ವಕವಾದ ನಮಸ್ಕಾರಗಳನ್ನು ತಿಳಿಸಿರಿ.

ಇತಿ,
ಜಿ. ಪಿ. ರಾಜರತ್ನಂ.

## ಕರ್ಣಾಟಕ ಸಾಹಿತ್ಯ ಮಂದಿರ,

### ಹೈದರಾಬಾದು.

ಕನ್ನಡ ನಾಡು ಕಳೆದ ಎರಡು ಮೂರು ವಾರಗಳಲ್ಲಿ ಮೂವರು ಶ್ರೇಷ್ಠ ಸಾಹಿತಿಗಳನ್ನು ಕಳೆದುಕೊಂಡಿದೆ. ಇದು ತುಂಬಿ ಬರಲಾರದ ಹಾನಿಯಾಗಿದೆ.

ಪೂಜ್ಯರೂ, ಹಿರಿಯರೂ ಆದ ರಾಷ್ಟ್ರಕವಿ ಶ್ರೀ ಗೋವಿಂದ ಪೈ, ಮಂಜೇಶ್ವರ ಅವರು ತಮ್ಮ ತುಂಬು ಜೀವನದಿಂದ ನಾಡಿಗೆ ಅನೇಕ ಮುಖವಾದ ಸೇವೆಸಲ್ಲಿಸಿ ಅಮರರಾಗಿದ್ದಾರೆ. ಅವರ ನಿಧನದಿಂದ ಅವರ ಕುಟುಂಬ ವರ್ಗಕ್ಕೂ, ಶಿಷ್ಯ ವರ್ಗಕ್ಕೂ ತೀರಲಾರದ ದು:ಖವಾಗಿದೆ. ಕರ್ನಾಟಕ ಸಾಹಿತ್ಯ ಮಂದಿರವು ಈ ದು:ಖದಲ್ಲಿ ತಾನು ಸಮಭಾಗಿಯಾಗಿದೆಯೆಂದು ತಿಳಿಸಬಯಸುತ್ತದೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ.

ತಿ. ನ. ಶೇಷಾದ್ರಿ,
ಕಾರ್ಯದರ್ಶಿ.

## ಕನ್ನಡ ಸಾಹಿತ್ಯ ಪರಿಷತ್ತು,

### ಬೆಂಗಳೂರು — 18.

14—9—'63.

ಮಾನ್ಯರೇ,

ತಾ. 13-9-63ನೆಯ ಶುಕ್ರವಾರ ಸಂಜೆ ಕನ್ನಡ ಸಾಹಿತ್ಯ ಪರಿಷತ್ಮಂದಿರದಲ್ಲಿ ಮೈಸೂರು ರಾಜ್ಯದ ಆರೋಗ್ಯ ಸಚಿವರಾದ ಮಾನ್ಯ ಡಾ॥ ಕೆ. ನಾಗಪ್ಪ ಆಳ್ವ ಅವರ ಅಧ್ಯಕ್ಷತೆಯಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ ಪೂಜ್ಯ ಎಂ. ಗೋವಿಂದ ಪೈ ಅವರು ನಿಧನ ಹೊಂದಿದ ಬಗ್ಗೆ ಅಂತಿಮ ಗೌರವವನ್ನು ಸೂಚಿಸಿ ಸರ್ವಾನುಮತದಿಂದ ಕೆಳಕಂಡ ನಿರ್ಣಯವನ್ನು ಅಂಗೀಕರಿಸಲಾಯಿತೆಂದು ತಮ್ಮ ಅವಗಾಹನೆಗೆ ತರಬಯಸುತ್ತೇನೆ.

"ಕರ್ನಾಟಕದ ಸುಪ್ರಸಿದ್ಧ ಇತಿಹಾಸ ಸಂಶೋಧಕರೂ, ಕವಿಶ್ರೇಷ್ಠರೂ, ಬಹುಭಾಷಾವಿಶಾರದರೂ, ನಾಡುನುಡಿಗಳ ಉಜ್ವಲಾಭಿಮಾನಿಗಳೂ, 34ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರೂ ಆದ ಪೂಜ್ಯ ಎಂ. ಗೋವಿಂದ ಪೈ ಅವರು ದಿನಾಂಕ 6-9-63ನೇ ಶುಕ್ರವಾರ ಮಂಗಳೂರಿನಲ್ಲಿ ನಮ್ಮನ್ನಗಲಿಹೋದರೆಂದು ನಮಗೆಲ್ಲ ತುಂಬ ದು:ಖವುಂಟಾಗಿದೆ. ಶ್ರೀಯುತರ ಕಾವ್ಯರಾಶಿಯೂ, ಸಂಶೋಧನ ಸಾಮಾಗ್ರಿಯೂ ನಮ್ಮ ಬಳಿಯಿರುವುದು ನಮಗೊಂದು ಸಮಾಧಾನವಾಗಿದೆ. ಅವರ ಜೀವನವು ಮಾರ್ಗದರ್ಶಕವಾಗಲೆಂದೂ, ಅವರ ಬಂಧು ವರ್ಗಕ್ಕೆ ಈ ದು:ಖವನ್ನು ಸಹಿಸುವ ಚಿತ್ತಸ್ಥೈರ್ಯಗಳನ್ನು ದಯಪಾಲಿಸಲೆಂದೂ. ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ.

ಇಂತು ತಮ್ಮವ
ಗೌ. ಕಾರ್ಯದರ್ಶಿ.

## ಕೆ. ಎಸ್. ಕಾರಂತ,

### ಪುತ್ತೂರು.

12—9—'64.

ಪ್ರಿಯರೇ,

ಮೊನ್ನೆ ದಿವಸ ಬೆಂಗಳೂರಿಗೆ ಹೋಗುವಾಗ, ಹುಣಸೂರಿನಲ್ಲಿ ಪತ್ರಿಕೆ ನೋಡಿ ತಮ್ಮ ಅಣ್ಣಂದಿರು ನಿಧನರಾದ ವಾರ್ತೆ ತಿಳಿಯಿತು. ಈ ತಿಂಗಳಲ್ಲಿ ಎರಡು ಕಾಗದ ಬರೆದಿದ್ದೆ. ಉತ್ತರ ಬರಲಿಲ್ಲ. ಎರಡನೆಯ ಕಾಗದದಲ್ಲಿ ಆರೋಗ್ಯವಿಲ್ಲವಾದರೆ, ಕಾಗದ ಬರೆಯಿಸಿ ಎಂದೂ ಬರೆದಿದ್ದೆ.

ಅವರನ್ನು ಬೇಗನೆ ಕಾಣುವ ಯೋಗವಿಲ್ಲವಾಯಿತು. ಅವರು ನಿಮಗೆ ಹಿರಿಯರಾದಂತೆ ನಮ್ಮೆಲ್ಲರಿಗೂ ಹಿರಿಯರು. ಅಣ್ಣಂದಿರ ಸ್ಥಾನದಲ್ಲಿರುವವರು. ಆದರೆ ಒಡನಾಡಿಯಾಗಿ ಬೆಳೆದ ನಿಮ್ಮ ಭಾವಜೀವನ ಈ ಅಪಘಾತದಿಂದ ಎಷ್ಟು ನೊಂದಿರಬಹು ದೆಂಬುದನ್ನು ಊಹಿಸಬಲ್ಲೆ.

ಆದರೆ ಯಾರಿಗೂ ತಪ್ಪದ ಈ ವಿಧಿ ಶ್ರೀ ಗೋವಿಂದ ಪೈಗಳವರನ್ನು ನಮ್ಮ ಎಡೆಯಿಂದ ಅಪಹರಿಸಿತೆಂಬ ನೋವನ್ನು ಸಹಿಸುವುದು ಕಷ್ಟ. ಸಹಿಸಬೇಕಾದುದು ಅನಿವಾರ್ಯ. ಅವರ ಒಳ್ಳೆಯ ಜೀವನ, ಸ್ವಭಾವ, ಮನಸ್ಸು-ನಾವಿರುವ ತನಕ ನಮ್ಮ ನೆನಪಿನಲ್ಲಿ ಅವರನ್ನು ಉಳಿಸಿಕೊಳ್ಳುವ ಶಕ್ತಿಯಾಗಿದೆ.

ನಿಮಗೆ ನಿಮ್ಮ ಮಕ್ಕಳಿಗೆ ಮನೆಯಲ್ಲಿರುವ ಮುದುಕ ಮುದುಕಿಯರಿಗೆ, ಈಗ ಬಂದ ಆಪತ್ತನ್ನು ಸಹಿಸುವ ಶಕ್ತಿ ಬರ ಲೆಂದು ಹಾರೈಸುತ್ತೇನೆ.

ಇತಿ,

ಕೆ. ಎಸ್. ಕಾರಂತ.

## ವಿ. ಸೀತಾರಾಮಯ್ಯ,

### ಬೆಂಗಳೂರು.

7—9—'63.

ಶ್ರೀ ತುಕಾರಾಂ ಪೈಗಳವರಲ್ಲಿ ವಂದನೆಗಳು.

ನಿಮ್ಮ ದೊಡ್ಡಪ್ಪರಾದ ಹಿರಿಯರ ನಿಧನದ ಸುದ್ದಿ ಕೇಳಿ ಮನಸ್ಸಿಗೆ ತುಂಬಾ ವ್ಯಥೆಯಾಗಿದೆ ನಮಗೆಲ್ಲ. ನನಗಂತೂ ವಿಶೇಷವಾಗಿ ಅವರು ಶ್ರೀಯುತರೂ ಪೂಜ್ಯರೂ ಆಗಿದ್ದರು. ಈ ತಿಂಗಳ ಕೊನೆಯಲ್ಲಿ ಅವರ ಗೌರವಾರ್ಥವಾಗಿ ಸಭೆ ಸೇರಿಸಿ ಅವರಿಗೆ ಗೌರವ ಕೊಡಬೇಕೆಂದು ಮಾಡಿದ್ದೆವು. ಭಗವಂತನ ಇಚ್ಛೆ ಹಾಗಿರಲಿಲ್ಲ. ಇನ್ನಷ್ಟು ಮುಂಚೆ ಮಾಡಬಹುದಾಗಿತ್ತು. ಆ ಉತ್ಸಾಹ ತಡೆಯಿತು. ನಮ್ಮ ದೌರ್ಭಾಗ್ಯ.

ನಿಮಗೂ, ನಿಮ್ಮ ತಂದೆ, ಚಿಕ್ಕಪ್ಪಂದಿರಿಗೂ ನನ್ನ ಈ ವಿಷಾದವನ್ನು ತಿಳಿಸಬೇಕು. ನಿಮ್ಮ ದು:ಖದಲ್ಲಿ ನಾವು ದು:ಖಿ ಯಾಗಿದೆ. ತುಂಬಿದ ವಯಸ್ಸು ಹಿರಿಯರು ಗೋವಿಂದ ಪೈ. ಸಾಧುಗಳ ನಿಧನ ಸಾವಲ್ಲ, ಸಾಮಾನ್ಯರ ಬದುಕು ಬಾಳಲ್ಲ. ಇದ್ದಷ್ಟು ಕಾಲ ಸಾರ್ಥಕವಾದ ಬದುಕನ್ನು ಬದುಕಿದ್ದಾರೆ. ಅಪರಾಧೀನವಾದ ಬಾಳು ನಿರಾಯಾಸ ಮರಣ ಇವಕ್ಕಿಂತ ದೊಡ್ಡ ಪುಣ್ಯಗಳು ಬೇರೆ ಇಲ್ಲವೆನ್ನುತ್ತಾರೆ. ಅವು ಎಲ್ಲರ ಪಾಲಿಗೂ ಬರುವಂತಾಗಲಿ, ಅವರ ಕ್ರಿಯಾಶಕ್ತಿಯ ಒಂದಂಶವಾದರೂ ನಮಗೆ ಬರುವಂತಾಗಲಿ.

ಇತಿ ತಮ್ಮವ,

ವಿ. ಸೀತಾರಾಮಯ್ಯ.

ಸನ್ಮಾನ್ಯ ಸುಬ್ರಾಯಪೈಗಳವರಲ್ಲಿ ಸವಿನಯ ವಿಜ್ಞಾಪನೆಗಳು.

ಕಳೆದ ತಿಂಗಳಲ್ಲಿ ತಮ್ಮ ಅಣ್ಣಂದಿರೂ ನಾಡಿನ ಹಿರಿಯರೂ ಆಗಿದ್ದ ಗೋವಿಂದ ಪೈಗಳವರನ್ನು ನಾವು ಕಳುಹಿಸಿಕೊಟ್ಟೆವು. ಇದು ಇಡಿಯ ನಾಡಿಗೆ ತುಂಬಲಾಗದಂತಹ ನಷ್ಟ. ಗೋವಿಂದ ಪೈಗಳವರು ನನ್ನನ್ನು ಈ ಹದಿಮೂರು ವರುಷಗಳಿಂದ-ಕೈ ಹಿಡಿದು ನಡೆಸಿದ್ದರು. ಅವರ ಪ್ರೇಮ ಅಪಾರ. ಅವರನ್ನು ಕಳೆದುಕೊಂಡ ಕನ್ನಡ ಸಾಹಿತ್ಯಲೋಕ ತಬ್ಬಲಿಯಾಯಿತು. ತಳರ್ನಡೆಯ ನನ್ನಂತಹ ವರಿಗೆಲ್ಲ ಅವರು ತಮ್ಮ ಕೃಪಾಹಸ್ತದ ಅವಲಂಬನೆಯನ್ನಿತ್ತು ನಡೆಸಿದ್ದರು. ಅಂತಹ ದೊಡ್ಡ ಮನಸ್ಸಿನ ಹಿರಿಯ ಜೀವ ನೆಲದ ಮೇಲೆ ಅಪರೂಪ. ಅವರು ನಮ್ಮನ್ನಗಲಿದರಾದರೂ, ತಮ್ಮ ಅಪಾರ ಪ್ರೇಮವನ್ನು ಇಲ್ಲಿರಿಸಿ ಹೋಗಿದ್ದಾರೆ. ಅದ್ದರಿಂದ ನಾವು ಅವರನ್ನು ಎಂದಿಗೂ ಮರೆಯುವಂತಿಲ್ಲ. ಈ ದೊಡ್ಡ ದು:ಖವನ್ನು ಸಹಿಸುವ ಶಕ್ತಿಯನ್ನು ತಮಗೆಲ್ಲ ಭಗವಂತನು ಅನುಗ್ರಹಿಸಲಿ ಎಂದು ಬೇಡುತ್ತೇನೆ.

ಇಂತು ಸವಿನಯ ವಿಜ್ಞಾಪನೆಗಳು.

**ಸನೋತನಹಳ್ಳಿ ರಾಮರಾಯ,**

ಪಾಂಡವಪುರ.

1 May 1963.

To the Mysore University

I most gratefully render thanks to the University of Mysore for the unique honour it has done to me to offer the D. Litt. degree so graciously. But recently it has struck me,

II ~~It has~~ struck me ~~recently~~ now that I am well-advanced in life, it is high time that I should accept no honour, whether it is a degree or a title. This idea has (now) taken a firm hold of my mind.

III It goes without saying that in my present 81st year I should by no means go back upon it, if I would remain true to myself.

IV Under these circumstances, I am extremely sorry (to say) that I find it is quite impossible for me to

persuade myself to obey the benevolent mandate of the benevolent Mysore University and accept the great honour, which it has so graciously offered to me, and which by the way I gratefully declare is far beyond my deserts.

V In fine I pray God to most heartily bless the Mysore University with a very long, very prosperous and very glorious life! Amen.

ಮೈಸೂರು ವಿಶ್ವವಿದ್ಯಾನಿಲಯವು ನೀಡಬೇಕೆಂದಿದ್ದ ಡಾಕ್ಟರೇಟ್ ಪದವಿಯನ್ನು ನಿರಾಕರಿಸಿ ಬರೆದ ಪತ್ರದ ಕರಡು ಪ್ರತಿಯ ಪಡಿಯಚ್ಚು

# ತಮ್ಮ ನೆನೆವ-!

ಕಲ್ಲು-ಕಾಗದ-ಕಡತಗಳಲಿ ಕಾಲನ ಕಾಲು
ಸಿಕ್ಕು ತೊಳಲಾಡುವಲಿ ಕುಣಿಕೆ ಬಿಡಿಸಿದಿರಣ್ಣ !
ಕರುವನಾಡಿಸಿದಂತೆ—ಅದನು ಕುಣಿಸಾಡಿದಿರಿ
ತಣಿದಿರಿ, ನೀವು ತಣಿಸಿದಿರಿ ಹನಿಸಿದಕಣ್ಣ.

ವೀರಚಿಂತಕ, ನಿಮ್ಮ ಧ್ಯಾನ ಬುದ್ಧಿಗೆ ಗಮ್ಯ
ನಿಮಗೆ ನೀವೇ ಪೂರ್ವಪಕ್ಷ, ಅಕ್ಷರ-ರಮ್ಯ.
ನಡುಹಾದಿಯಲ್ಲೆ ಬಿಡಬಹುದೆ ಜೋಗಿಯಕಂತೆ-?
ಕನ್ನಡಕೆ ಬರಬಹುದು-ಮತ್ತೆ, ನೀವೂ ಅಂತೆ-

ಪೈಗೆ ಪೈ ಲೆಕ್ಕ ಒಪ್ಪಿಸಿದಿರಾ? ಗೋವಿಂದ
ಒಪ್ಪಿದನೆ—ನಾ ನೆನೆವೆ ಕಸ್ತೂರಿ, ಜವ್ವಾದಿ
ಹೊರಗೆ-ಹೊಗೆ ಬೂದಿ, ಒಳಗೊಳಗೆ ಅಗ್ನಿಯ ಹಾದಿ
ನಿಮ್ಮ ಜಿಜ್ಞಾಸೆಗೆಲ್ಲಿದೆ ಮುಗಿವು? ಪದಕಾದಿ?

ಹರಿಸಿದಿರಿ ತರುಣರನು, ಆ ಅಸೂಯೆಯೆದಗ್ಧ—
ನೀವು ಕಾಲ ಜ್ಞಾನಿ ಮುಗ್ಧ, ಅಕ್ಕರಿಗ, ವಿದಗ್ಧ !

ಅಂಬಿಕಾತನಯದತ್ತ.

# ದಿವಂಗತ ಕವಿಗೆ ಜಯಶ್ರೀ ಸ್ಮಾರಕ

"ಅವರೇನು ಬರೆದಿಹರು ಅಂತಹ ಮಹತ್ ಕಾವ್ಯ?"
"ಅವರು ಬರೆದುದು ಮಹತ್‌ಕವಿತೆ ಇರದಿರಬಹುದು;
ಅವರು ಬದುಕಿದುದೆಲ್ಲ ಮಹತ್ ಕವನಗಳೆ ಅಹುದು;
ಅವರೆ ತಾವೊಂದು ಗೊಮ್ಮಟಸಮ ಮಹಾಕಾವ್ಯ!"
'ಸಂತನಾಗಲು ಬಲ್ಲ ಆವನೂ ಸುಧೀರಮತಿ
ಕವಿಯಾಗಲೊಲ್ಲ!'–ಪಡುವಣದ ಈ ಕವಿಉಕ್ತಿ
ಪಡೆದಿಹುದು ಉಪನಿಷತ್ತಿನ ಮಂತ್ರ ಋತುಶಕ್ತಿ:
ಬದುಕಿಗಿಲ್ಲದ ಬೆಲೆಯ ಬೀಡೆ ಸಾಹಿತ್ಯಕೃತಿ?
ಬದುಕಿನಿಂದಲೆ, ಬದುಕಿಗಾಗಿಯೆ ಕಣಾ ಕಲೆಯ ಬೆಲೆ:
ಕವಿಯ ಬಾಳ್ವೆಯೆ ದಿಟದ ಕಾವ್ಯಬೆಲೆ, ರಸದ ನೆಲೆ!
ಕವಿಯ ಬದುಕಿಂದ್ಯೆಸೆ ಅವನ ಕೃತಿಯಕ್ಕು–'ಕಲೆ'?
    ಕಲೆಯ ಬಾಳ್ವೆಗೆ ಮಿಗಿಲ್ ಬಾಳ್ವೆಯ ಕಲೋಲ್ಲಾಸ:
    ಕಲೆ, ಸಂಸ್ಕೃತಿವಿಲಾಸ; ಬಾಳ್, ಸೃಷ್ಟಿಗೆ ವಿಕಾಸ!
ನೂರು ಕಾವ್ಯಕೆ ಸಾರವೊಂದು ಸಾಕ್ಷಾತ್ಕಾರ:
ಕವಿಯ ದರ್ಶನ ಅಗ್ನಿದರ್ಪಣ ತಪ:ಸಂಸಾರ!
ನಿನ್ನ ಮಂಜೇಶ್ವರದ ಬೀಡು ಕಾಸರಗೋಡು,
ಮುನ್ನಿನಂತೆಯೆ ಮತ್ತೆ ತಾನಾಗೆ ಕನ್ನಡ ನಾಡು,
ತನ್ನ ಸತ್ವಕ್ಕೆ ಸಾಕ್ಷಿ ತಾನದುವೆ ಕನ್ನಡ ಜನತೆ
ಕವಿಗೆ ಕಡೆಯುವ ಜಯಶ್ರೀಸ್ಮಾರಕಂ ತಾನಲ್ತೆ!

—ಕುವೆಂಪು

# ವಂದನೆ

ಸಂಶೋಧನ?

ಎತ್ತಿದ ಕೈ.

ಕಾವ್ಯ ಸಿದ್ಧಿ?

ಪಡೆದಿಹ ಮೈ.

ಬಾಳ ಸರಣಿ?

ಸಕಲರ ಸೈ.

—ಗೋವಿಂದ ಪೈ.

ಕನ್ನಡದ ನವಪ್ರಭಾತದಿ

ಭೀಷ್ಮ ಇಲ್ಲ ದ್ರೋಣ.

ಕನ್ನಡಮೆನಿಪ್ಪಾ ನಾಡು

ತಳೆದ ಪಂಚ ಪ್ರಾಣ.

ಭಾರತೀಯ ಕನ್ನಡದಿ

ಪಡೆದ ಕಂಠ ತ್ರಾಣ.

ಜ್ಞಾನ ಯಜ್ಞಗಳ ಋತ್ವಿಜ,

ರಸಾಸ್ವಾದದಾರಾಧಕ

ಮೂಡಣ-ಪಡುವಣದ ತಪನ,

ಗುರು ಕಾವ್ಯದ ಪ್ರಾಣ ಪದಕ.

ನಿಷ್ಠುರವಿದ್ದೂ ಹಿತಮಿತ,

ಜ್ಯೇಷ್ಠನಾದರೂನು ವಿನಯ.

ಕಲ್ಪಕತೆಯು ಮೆರೆದರೂನು

ಅನುಕಂಪದಿ ತನ್ಮಯ.

ವಂದನೆಯಿದೋ ಪುಣ್ಯಪುರುಷ.

ಗೋವಿಂದಪೈ.

ಹಿರಿದು ನಿಮ್ಮಗೆಮ್ಮ, ನಲುಮೆ,

ಬಾಳ್ಕೆಗಿರುವ ಕೈ.

ಕೃತಿ ಕುಣಿವವು ಕಾಲನ ಹೆಗ-

ಲೇರುತ ಥೈ, ಥಕಥೈ.

—ವಿನಾಯಕ.

# ಗೋವಿಂದ ಪೈಗಳು

ಪದವಿ ಪ್ರತಿಷ್ಠೆಗಳನೊಲ್ಲದೆದೆಗಾರಿಕೆ
ಒದವಿದಾಪತ್ತುಗಳ ತಳೆವ ಸಹನೆ
ಮುದದ ಕಳೆಯಿಂಗದಿಹ ಗಂಡುಮೊಗ, ಫುಲ್ಲಾಕ್ಷ
ಹದದ ಹಸನೆದೆಯಿಂದಲೊಸರುವೊಲವು.

ನನ್ನಿಗೆಯೆ ತುಡಿವರಿವು ಜ್ಞಾನ ಜಡವಲ್ಲದುವು
ಪನ್ನತಿಕೆಗಲ್ಲ ಸುವಿಚಾರತೆಗೆ ಚಿತ್ತತೆರವು
ಹೊನ್ನ ನುಡಿಯೊಳು ಹೊಚ್ಚ ಹೊಸ ಭಾವಗಳು ಹೊಮ್ಮೆ
ಉನ್ನತಾತ್ಮಸ್ತರದಿ ಬೇಹರಿಪ ಜಾಣ್ಮೆ–

ಮಾನನಿಧಿ ಅಭಿಮಾನನಿಧಿ ವಿನಯನಿಧಿಯೀತ
ಜ್ಞಾನ ಭಕ್ತಿ ಪ್ರೇಮ ವೈರಾಗ್ಯವಿರವಿನೊಳು ವೈರವುಳಿದಿರುವಂತೆ ನಿಲಿಸಿದಾತ
ನಾಡಿವನ ಜೀವದಿಂದೆತ್ತಿತ್ತೈ ಕರ್ಪೂರದಾರತಿಯ ತನ್ನ ದೇವರಿಗೆ
ಜೋಡಿಸುವೆ ಕರಗಳನು ಬಂದಂತೆ ತಿಳಿಮನದಿ ಹಿಂದಿರುಗಿದೀ ಧೀರರಿಗೆ.

—ಮ.ತಿ.ನ.

## ನಮಿಸು, ಗೋವಿಂದ ಪೈ

ಕಣ್ಮುಟ್ಟ ಕಂಡಿಲ್ಲ; ಆದರು ಮನದೊಳೆಂದೊ
ಮೂರ್ತಿಗೊಂಡಿದೆ ಚಿತ್ರ. ಎಲೆ-ಹೂವ-ಕಂಡರೂ
ಮೂಲ ಆಧಾರವನು ಕಾಂಬ ಕಣ್ಣಿನ ಹೊಳಪು.
ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ. ಅಗೊ
ನೆನಹು ಬೀಗದ ಕೈ: ನಮಿಸು, ಗೋವಿಂದ ಪೈ !
ಮಾನವೀಯತೆಗೆ ಹಂದರ ಹಾಕಿ ನಿಂತವೆಸೆ
ಹುಬ್ಬು, ಅಂತ:ಕರಣದುಬ್ಬು. ತಾಯಸೇವೆಗೆ
ಭಾಷೆಕೊಟ್ಟು ಹೊತ್ತರು ಮೀಸೆ. ಮುಡಿಪಿದರು ಮೈ.
ಗಿಳಿವಿಂಡಿಗೇಕೆ ಆದಿಪ್ರಾಸ? ಹಾರಬಿಡು.
ತೆಂಕನಾಡಿನ ಕಡಲ ತಡಿ ತೆರೆಯ ತೇರಿನಲಿ
ಕ್ರಿಸ್ತಬುದ್ಧರು ಬಂದರೋಲಾಡುತಿಂಪಿನಲಿ
ಸುನೀತಗಳ ಮುತ್ತು; ಶಂಖದಲಿ ನಾಡ ಹಾಡು.
ದಿಗ್ಗಜದ ಭಾರವನು ಹೊರಲಿಕೆಲ್ಲಿದೆ ಹೆಗಲು?
ಎಲ್ಲಿದೆ, ಅಗ್ಗದರದಂಗಡಿಯೊಳಿಂಥ ಮಾಲು?

—ಚೆನ್ನವೀರ ಕಣವಿ:

## ಶ್ರೀ ಗೋವಿಂದ ಪೈ

ಹಲವು ಹರುಷದ ಸರಕು ಹೊತ್ತು ತಂದಿರುವಂಥ
ಹಡಗು ಮುಳುಗಿತು. ಶೂನ್ಯ ಮಂಜೇಶ್ವರದ ರೇವು.
ನುಡಿಯ ನಿಧಿಯನು ನುಂಗಿ ನಡೆದುಬಿಟ್ಟಿತು ಹಾವು
ದೂರ ದೂರದ ನಾಡನಲೆದು ಬಂದಿರುವಂಥ
ನಾವಿಕನ ಕೊನೆಯ ಪಯಣಕೆ ಕಡಲು ಕರೆದಿತ್ತು.
ಸಿಂದಬಾದನ ಚೀಲದೊಳಗಿರುವ ಕೈದೀಪ
ಹಿಡಿದಲ್ಲಿ ಹೊಳೆದಿತ್ತು ಮುತ್ತು ಹವಳದ ದ್ವೀಪ
ಭವದ ವೈಭವಲಿಪಿಯನನುಭವವು ಬರೆದಿತ್ತು.
ಹಣ್ಣು-ಜೀವದ ಕಣ್ಣು ಕಂಡದ್ದು ಇತಿಹಾಸ
ಕಿವಿಗೊಟ್ಟು ಕೇಳಿದ್ದು ಯಾತನೆಯ ದೊಡ್ಡ ಕಥೆ
ಶಿಲುಬೆಗೇರಿಸಿದಂಥ ಕ್ರಿಸ್ತಪಟ್ಟಿರುವ ವ್ಯಥೆ.
ಸಿದ್ಧಾರ್ಥ ಬುದ್ಧನಾಗಲು ಕಳೆದ ವನವಾಸ.
ಆಮ್ರವನದಲಿ ಕುಳಿತು ತಾಮ್ರಪಟವೋದಿ
ಇನ್ನಾರು ಹೇಳುವರು ಕಥೆ ಹಿಡಿದ ಹಾದಿ?

—ಸುಬ್ಬಣ್ಣ ಎಕ್ಕುಂಡಿ.

# ಮಂಜೇಶ್ವರದ ಮಹಾವ್ಯಕ್ತಿಗೆ ಶ್ರದ್ಧಾಂಜಲಿ

ಅಚ್ಚು ಕಟ್ಟುಗಳೆಂಬ ಕಡಿದ ಶಿಲೆಗಳನಿಟ್ಟು
ಕಟ್ಟಿರುವ ಪಂಚಾಂಗ ಅವರ ಮನೆಗೆ;
ಸಂಯಮದ ಸೌಂದರ್ಯವಿರುವ ಶಬ್ದಾವಾರ
ವೈದಗ್ಧ್ಯ ಶಿಲ್ಪಿ ನಿಲ್ಲಿಸಿದನದಕೆ—
ಶೋಧಕತ್ವಾಚಾರ್ಯ ಕಂಬ ಬೋದಿಗೆ ಕಿಟಿಕಿ
ಬಾಗಿಲುಗಳನು ಸಮೆದು ಜೋಡಿಸಿಟ್ಟ;
ಜ್ಯಾಮಿತಿಯ ತೊಡಿಸಿದನು ಮೇಲ್ಛಾವಣಿಯನದಕೆ
ಹರಳಿಂಗೆ ಕುಂದಣವನಿಟ್ಟ ಹಾಗೆ
ಆತ್ಮ ಸೌರಭ ರೂಪ ಹಾಸ ಫಲಕಗಳಿಂದ
ಮಾಡಿ; ನಡುಮನೆಯಲ್ಲಿ ರಸದ ಮೂರ್ತಿ
ಪೈಶಬ್ದ ಸಂಕೇತವೆತ್ತು ರಾರಾಜಿಸಿತು—
ಕೂಗೆ ಜನ ಭಜಕ ಗೋವಿಂದಮೆಂದು!

—2—

ಮಂಜೇಶ್ವರದ ಮಂಜುಗನ್ನಡದ ಮಾದರಿಯ
ಪಾಂಡಿತ್ಯ ದುರ್ಗ ಪೈ. ಕವಿಗಳೊವಜ,
ವೈವೆತ್ತ ಔಚಿತ್ಯ, ರಸಸಾರ ವಾಗ್ಧಾರ,
ಅಮೃತ ಗರ್ಭಿತ ವಜ್ರ ಕಲಶ ರೂಪ;
ತೂಕ ತಪ್ಪದ ತುಲಾಧಾರ–ಭಾವನೆ, ಬುದ್ಧಿ
ಎಂಬ ವಸ್ತುಗಳನ್ನು ತೂಗುವಾಗ:
ಶಿಷ್ಟೇಷ್ಟ ಕನ್ನಡಿಗನಾರ್ಯ ಗೃಹ್ಯಾಚಾರ,
ಅಷ್ಟಮದಗಳ ಮೆಟ್ಟಿ ಮುರಿದ ವೀರ;
ವಾತ್ಸಲ್ಯ ಮಧು ತುಂಬಿ ತುಳುಕುವೆದೆದಾವರೆಯ
ಮೇಲೆ ರಾರಾಜಿಸುವ ಆತ್ಮ ಹಂಸ
ನನ್ನಿವಾಲನ್ನೀಂಟಿ ಸಟೆ ನೀರ ಬೇರ್ಪಡಿಸಿ
ಬಾಳಿದುದು ಕನ್ನಡದ ಭಾವ್ಯ ಸೂಚಿ!

—3—

ವಜ್ರ ತುಂಬಿಯ ವೀಣೆ ಬಂಗಾರ ತಂತಿಗಳ
ಮೀಂಟೆ ನುಡಿಯುವ ನಾದ ಅವರ ವಾದ;
ವಿಜ್ಞಾನ ವಿಶಿಖಗಳ ತೂರುವೆದೆಗಾರಿಕೆಯ
ಇತಿಹಾಸ ಯೋಧತ್ವ ಅವರ ಬೋಧ!
ಮುಕ್ಕುಡಿಗಳನ್ನು ಲೆಕ್ಕಿಸದ ದಿಗ್ಗಜಗಮನ,
ಕಾಪು ದೀಪಸ್ತಂಭ ಸಂಶೋಧದ:
ಧುಃಖ ಸುಖಗಳ ಮಿತವ್ಯಯದ ಶಾಸ್ತ್ರಜ್ಞ–
ರುಕ್ತಿ ಮುಕ್ತಾಹಾರ ರೂಪ ಕವನ:
ದಿಕ್ಪಾಲಕರು ಕನ್ನಡದ ತೆಂಕಣದ ನೆಲೆಗೆ,

ವಕ್ಕಾರರವಧೂತ ದುರ್ವಿಲಸಿತ
ಸಖ್ಯದಾ ಮೇರು ತುಲ್ಯಾತ್ಮರುತ್ಪತನದೃಕ್
ವಿಷ್ಣುಸದನದಲ್ಲೆ ನೆಟ್ಟಿತ್ತು ನಿರತ !

—4—

ಉದ್ಗ್ರೀವರಾಗಿ ನೋಡುವದೇನ ನಾವೀಗ
ದುರ್ಗ್ರೀವರಿಂದ ಕವಿದಿರುವ ಜಗದಿ?
ಉದ್ವಿಗ್ನವಾದ ಕನ್ನಡ ಕುಲದ ಕಾಪಿಗಾ
ದುರ್ಜಯಾತ್ಮರ ಚಿತ್ರಿವಿತ್ರವೊಂದೇ !
ಹೃದ್ಗಗನದಲ್ಲಿ ನಿಲ್ಲಿಸಿ ರವಿತ್ವದಿನವರ
 ದೃಗ್ರಾಜ್ಯವಾಸಕ್ಕೆ ಸಿದ್ಧರಾಗಿ—
ಮುಗ್ಧೋದ್ಯಮದ ಮುಗ್ಗರಿಸುವ ಮುಖರತೆಯುಳಿದು
ಅಧ್ಯಯನ ತಪವ ಕೈಕೊಳ್ಳಬೇಕು !
ಬುದ್ಧಿಯೋಗವ ಹಿಡಿದು ಬರಡುತನವನು ಸುಡೆ, ವಿ–
ದಗ್ಧ ವಾಙ್ಮಯ ಹುಟ್ಟಿ ಕನ್ನಡದಲಿ—
ಬುದ್ಧವ್ಯಕ್ತಿಗಳುದಿಸಿ ಕನ್ನಡದ ಬಾವುಟವ
ಪೈಗಳೆತ್ತರಕೆತ್ತಿ ಮೆರೆಸಬಹುದು !

—ಬಿ. ಎಚ್. ಶ್ರೀಧರ

# ಮೂರು ಚತುರ್ದಶಪದಿಗಳು

## 1. ಗೋವಿಂದ ಪೈಗಳಾ ರಾಷ್ಟ್ರಕವಿಯೆಂದೆಂದು

ಪಡುಗಡಲ ದಂಡೆಯಲಿ ಮಂಗಳೂರಲಿ ಜನಿಸಿ,
 ಮಂಜೇಶ್ವರದಿ ತಾಯ ತವರಲ್ಲಿ ತಾಬೆಳೆದು,
 ಕಲಿತಿರಾ ಮಂಗಳೂರು ಮದ್ರಾಸಿನಲುದು
ಕನ್ನಡಾಂಗ್ಲ ಪಲಭಾಷೆಯಲಿ ಪ್ರೌಢಿಮೆ ಗಳಿಸಿ !

ತುಳುನಾಡಿನಲಿ ಹುಟ್ಟಿ, ಕನ್ನಡದಿ ಕವಿಯಾಗಿ
 ಕರುನಾಡೊಳೆಲ್ಲೆಲ್ಲು ಸಲೆ ಬಳೆದಿರಾಚಾರ್ಯ !
 ಇತಿಹಾಸದಿರುಳಿಂಗೆ ಸಂಶೋಧನಾ ಸೂರ್ಯ,
ಮೆರೆದಿರೈ-ಲೋಕಸಾರಸ್ವತವ ಬೆಳಬೆಳಗಿ !

ಸಿರಿಸಂಪದದ ಯೌವನಾಮೋದವಾ ಶಕ್ತಿ
 ಸತಿಯಿಂದು ದಿವಕೈದೆ ನಿಮಗಾಯ್ತು ವೈರಾಗ್ಯ
ದನುಪಮದ ಧೀಶಕ್ತಿ ! ಸತಿಕೃಷ್ಣೆಯನುರಕ್ತಿ
 ಕೃಷ್ಣನಾ ಭಕ್ತಿಯೆನೆ ಸಂಸಾರಕಿದು ಭಾಗ್ಯ !

ತುಂಬಿತುಳುಕುವ ದೇಶಭಕ್ತಿಯಿಂದಹುದಹುದು
ಗೋವಿಂದ ಪೈಗಳಾ ರಾಷ್ಟ್ರಕವಿಯೆಂದೆಂದು !

## 2. ರಾಷ್ಟ್ರಕವಿ ಗೋವಿಂದ ಪೈಗಳಾ ನವುಗೋಜ

ಕನ್ನಡಾಂಬೆಯು ಬಂಧಿಸಿದ ಪ್ರಾಸದಿಂ ಬಿಡಿಸಿ,
ಕವಿಗಳ್ಗೆ ನವಪಥವ ತೋರಿದಿರಿ ಧೈರ್ಯದಲಿ!
ಮೂವತ್ತು ವರುಷಗಳ ಸಾಹಿತ್ಯ ಕೇಳಿಯಲಿ
ನಮಗಿತ್ತಿರಾ ನುಡಿಯ **ಗಿಳಿವಿಂಡ**ನಳವಡಿಸಿ!

ಕರುಣೆಯಾ ವರಮೂರ್ತಿ ಯೇಸುವಿನ ಉಪದೇಶ
ಸಾರಿದಿರಿ ರಸವಾಣಿಯಲಿ-ನವ್ಯ **ಗೊಲ್ಗೊಥಾ**!
ಬುದ್ಧನೊರೆದಷ್ಟಾಂಗ ಮಾರ್ಗದಾ ಉಪದೇಶ
ಗಳನೆಲ್ಲ **ವೈಶಾಖಿ**ಯೊಳೊರೆದುದೆಮಗೆ ಸುಪಥ!

ದ್ರೋಣರಾಚಾರ್ಯತನ, ಏಕಲವ್ಯನ ಕಲಿಕೆ
ಆರ್ಯರಾಹಮ್ಮುಗಳ ದರ್ಪಣಾ **ಹೆಬ್ಬೆರಳು**!
ಬಿಡುಗಡೆಯ ಬವರದಲಿ ಮುಡುಪಿದ ಸಮುರೈಕ
ವೀರನಾ ಹೋರಟೆಯು **ಚಿತ್ರಭಾನುಂ** ಅರಳು!

ಐಯ್ದು ಕೃತಿಗಳ ನೇಯ್ದು ಜಗಕ್ಕಿತ್ತುದೇ ತೇಜ!
ರಾಷ್ಟ್ರಕವಿ ಗೋವಿಂದ ಪೈಗಳಾ ನವುಗೋಜ!

## 3. ರಾಷ್ಟ್ರಕವಿ ಗೋವಿಂದ ಪೈ ಬಾಳ್ಗೆ ಚಿರವೆಂದು

ಕಾವ್ಯರ್ಷಿ ನೀವೆಮ್ಮನಗಲಿದಾ ಬಳಿಕಿಂದು
ನೊಂದು ನೆನೆವುದು ಕನ್ನಡದ ಲೋಕ ವಿಸ್ಮಯದಿ!
ವಾಣಿಯೊಳ್ಗುವರ ನೀವಿಲ್ಲದಾಯ್ತೆಂದಿಂದು
ಕಣ್ಣು ಹನಿಯುದುರುತಿದೆ ತವಭಕ್ತಿ ತನ್ಮಯದಿ!

ವಾಣಿಯಾ ಕರೆಗೇಳ್ದು ಬಾಳಿದಿರಿ ಆಚಾರ್ಯ!
ಆಕೆಯನ್ನೋಲಯ್ಸಲಿಲ್ಲೆಂಬ ನಯು ನಿಮಗೆ.
ನಿಮಗಾಗಿ ನೀವೊರೆದ ಗೀತಂಗಳಿದೊ ನಮಗೆ
ಚಿರಕಾಲ ಬಟ್ಟೆದೋರಿಪುದೆಸಗೆ ಕವಿ ಕಾರ್ಯ!

ಸಂಶೋಧನೆಯ ಸತ್ಯದೆರಕವನು, ಕಾವ್ಯದಾ
ರಸಗಂಗೆಯಮೃತವನು, ನಮಗಾಗಿ ನೀಡಿದಿರಿ!
ತಾಯಿಳೆಯ ಋಣವ ತೀರಿಸಿ ಮಣಿದು ಬಾಳಿದಿರಿ.
ಎಸಗಲಂತದನರಿದು ಬಾಳಹುದು ದಿವ್ಯದಾ!

ಬಾಷ್ಪಾಂಜಲಿಯ ನೀಡುತಿದೆ ನಾಡಜನವಿಂದು.
ರಾಷ್ಟ್ರಕವಿ ಗೋವಿಂದ ಪೈಬಾಳ್ಗೆ ಚಿರವೆಂದು!

—ಪಿ.ಕೆ.ನಾರಾಯಣ.

# ಅಮೃತನೆ ವಲಂ ನೀನು ಜಗದೊಳಾಚಂದ್ರಾರ್ಕಂ

ಕಂದ॥ ಪವಿಯೆರಗಿತೊವುರಿಗೆಂಡಂ
ಕಿವಿವೊಕ್ಕುರೆ ಸೀಳಿತೆಂಬಿನಂ ಕರ್ಣಪಟಂ
ಕಿವಿಗಿರಿಯಿತು ಹಾ! ರಾಷ್ಟ್ರದ
ಕವಿಯುಪರತನಾದನೆಂಬ ವಾರ್ತಾಶೂಲಂ

ಘೋರಾಂಧಕಾರ ಕವಿದುದೊ
ವಾರಿಧಿಮೇರೆಯನಳುರ್ತು ಮೀರಿತೊ ಉರಿಯುಂ
ಕಾರಿತೊ ನಭವೆನೆ ಕನ್ನಡ
ಸೂರಿಗಳಾ ವಾರ್ತೆಗೇಳುತಾಕುಲರಾದರ್

ಎಲೆಕವಿಪುಂಗವ ನಿನ್ನಾ
ವಿಲಸತ್ಕಾವ್ಯಾಬ್ಧಿಮಥನದಿಂದೊಗೆತಂದು
ಜ್ವಲಿಪ ಕೃತಿಚಂದ್ರಕಿರಣಂ
ವಿಲಸನಗೊಳಿಸಿರ್ದುದೆಮ್ಮಾಹೃತ್ ಕೈರವಮುಂ

ಹಾ! ಕವಿವರ ನೀನೆಮ್ಮಂ
ಶೋಕಾಂಬೋಧಿಯೊಳಗಳ್ದಿ ಪೋದೈಸತ್ಕಾ
ವ್ಯಾಕಾಶದೊಗೆದುತೊಳಗಿದ
ರಾಕೇಂದುವು ಕೋಕನದವನೆಂತಂತೀಗಳ್

ಕನ್ನಡದ ಕಳೆದ ವೈಭವ
ದುನ್ನತಿಯುಂ ತೋರೆಸಾರೆ ಕಾವ್ಯದಸೊಗಸು
ಇನ್ನೆಲ್ಲ ಜನಕೆ ಲೋಕದೆ
ನಿನ್ನಂ ಕರ್ನಾಟಕಾಂಬೆ ಪಡೆದಳ್ನಿಸದಂ

ಜನಕೋಟಿಯ ನುಡಿಗಳೊಳೊಂ
ದನೆ ಕಲಿತೊಡೆ ಕಲಿತೆವೆಂಬರಲೆ! ನೀಂಪಲವಾ
ರನೆ ಕಲಿತ ಬಲಿತ ಧೀರಂ
ನಿನಗಾರ್ದೊರೆ? ಪೇಳ ನುರಿತ ಭಾಷಾಭಿಜ್ಞಾ

ಸಾರಂಕನ್ನಡಪದರೊಳ್
ಸಾರಂಸಾರಸ್ವತಂ ಮಹಾಕವಿರಚಿತಂ
ಸಾರಂ ನೂತನ ಸುವಚನ
ಕಾರರ ಕೃತಿಯಲ್ಲಿ ನಿನ್ನ ವಿರಚನೆಸಾರಂ

ನಿನ್ನಾ ಕಾವ್ಯವಿದಗ್ಧತೆ
ನಿನ್ನಾಪ್ರಾಕ್ತನವಿಮರ್ಶೆ, ನಿನ್ನಯ ನುಡಿಜಾಣ್
ನಿನ್ನಯ ಪೊಸ ನುಡಿಗಟ್ಟಿನ
ಬಿನ್ನಣಮಿವು ಕಾವ್ಯಕನ್ನಿಕೆಗೆ ಪೊಸದೊಡರ್ಗಳ್

ಮತ್ತೇಭವಿಕ್ರೀಡಿತ॥ ವರವಾಕ್ಸುಂದರಿ ಸೇವೆಯಲ್ಲಿ ತನುವಂ
ಸತ್ಕಾರ್ಯದೊಳ್ ವಿತ್ತಮಂ
ಹರಪಾದಾಂಬುಜದಲ್ಲಿ ತನ್ನ ಮನಮಂ
ಅಭ್ಯಾಗತ ಪ್ರೀತಿಯೊಳ್
ಬೆರೆಯಲ್ ತನ್ನ ನಿಜಾಯುಮಂ ಸವೆಯುತುಂ
ಸತ್ಕೀರ್ತಿಯಂ ಬೆತ್ತುತಾಂ
ಸುರಲೋಕಾತಿಥಿಯಾದ ನೀನೆ ಕವಿಯಯ್
ಗೋವಿಂದ ಪೈ ಧನ್ಯನಯ್

ನೆಗಳ್ದಾಪಂಪ ವಿನೂತ್ನಪಂಪ ಹರಿಗಂ
ನಾರ್ಣಪ್ಪ ಲಕ್ಷ್ಮೀಶರಾ
ವಿಗಡರ್ ನಾಕಿಗ ರುದ್ರಭಟ್ಟವಿಲಸದ್
ರತ್ನತ್ರಯಂ ಲೋಕಮಂ
ಅಗಲ್ದುಂ ನಮ್ಮೊಡನಿಂದು ಜೀವಿಸುವವೊಲ್
ಸತ್ಕಾವ್ಯರೂಪಂಗಳಿಂ
ಜಗದೊಳ್ ಜೀವಿಸುತಿರ್ಪೆಯೆಂದಿಗುದಿಟಂ
ನೀಂಗೈದ ಕಾವ್ಯಂಗಳಿಂ

ಮೃತನೆವಲನೆಂದು ನಿನ್ನಂ
ಮತಿವಿಕಲತೆಯಿಂದೆ ಗೆತ್ತುವಲ್ಲದೆ ನಿನ್ನಾ
ಹಿತಮಿತ ಸುಲಲಿತ ಕೃತಿಯಿನ
ಮೃತನೆವಲಂ ನೀನುಜಗದೊಳಾಚಂದ್ರಾರ್ಕಂ

—ಗೋಪಾಲಕೃಷ್ಣ ಪಾಲೆಪ್ಪಾಡಿ

# ರಾಷ್ಟ್ರಕವಿ ಗೋವಿಂದ ಪೈ

ಆಧುನಿಕ ಕರ್ಣಾಟ ಕವಿಕುಲಪಿತಾಮಹನೆ !
ರಾಷ್ಟ್ರಕವಿ, ನಾವಿದೋ ಕನ್ನಡರು ಭಕ್ತಿಭಾ
ವದೊಳಿಂದು ಬಾಗುವೆವು ನಿಮ್ಮಡಿಗೆ, ಮಾನ್ಯಕವಿ;
ಪ್ರಾಚೀನ ಕರ್ಣಾಟ ಕಾವ್ಯ ಸಾಹಿತ್ಯದಲಿ
ಆದಿಕವಿಪಂಪನೊಲು ಆಧುನಿಕ ಕರ್ಣಾಟ
ಕಾವ್ಯ ಸಾಹಿತ್ಯಕ್ಕೆ ನೀವಲ್ತೆ ಆದಿಕವಿ !
ನೀವಲ್ತೆ ರಾಷ್ಟ್ರಕವಿ ! ಪ್ರಾಚೀನ ಕರ್ಣಾಟ
ಸಾಹಿತ್ಯ ಸಾಮ್ರಾಜ್ಯ ಪಂಪರನ್ನರು ಪೊನ್ನ
ನಾಗಚಂದ್ರರು ನಾರಣಪ್ಪ ಲಕ್ಷ್ಮೀಶರೇ
ಮೊದಲಾದ ಕಾವ್ಯ ಸಾಮ್ರಾಟರಿಂ ಅವರಮರ
ಕೃತಿಗಳಿಂ ಮೆರೆದಂತೆ, ಆಧುನಿಕ ಕರ್ಣಾಟ
ಸಾಹಿತ್ಯ ಸಾಮ್ರಾಜ್ಯ ನಿಮ್ಮೊಂದು ಹಿರಿಮೆಯಿಂ
ನಿಮ್ಮ ವಿದ್ವತ್ತಿನಿಂ ನಿಮ್ಮ ಘನಕೃತಿಗಳಿಂ
ಮೆರೆಯುವುದು ಸೊಗಯಿಪುದು ಆಧುನಿಕ ಕರ್ಣಾಟ.

ಕವಿಕುಲಕೆ ಗುರುವರ್ಮ ! ಇಂದಿನಾ ಕನ್ನಡದ
ಕಾವ್ಯೋಪವನದಲ್ಲಿ ನಿಮ್ಮ ಗಿಳಿವಿಂಡದೋ
ಸುಸ್ಪಷ್ಟಸುಸ್ವರದೆ ಎಡೆವಿಡದೆ ನುಡಿಯುತಿದೆ.
ಕ್ರಿಸ್ತ ಗುರುವಿನ ತತ್ವ ದೇವಪುತ್ರನ ಸತ್ಯ
ಸಾಮ್ರಾಜ್ಯವನು "ಗೊಲ್ಗೊಥದ" ಮೇಲಿಂದ
ಕನ್ನಡದ ಜನಕುಲಕೆ ತೋರಿದಿರೆಲ್ಲೆ ಕವಿಯೆ !
ಬಾಳಿನೊಲುಮೆಯ ಬೆಳಕು, ಧರ್ಮಪತ್ನಿಯ ನೆನಹು
ಭವ್ಯಜೀವನದೀಪ ನಿಮ್ಮ "ನಂದಾದೀಪ"
ಕನ್ನಡದ ಸರಸತಿಯ ಗುಡಿಯ ನಂದಾದೀಪ
ಕನ್ನಡದ ನೆಲದಲ್ಲಿ ಕನ್ನಡರು ಇರುವನಕ
ಜನಮನವನುಜ್ವಲಿಸಿ ಪ್ರಜ್ವಲಿಸಿ ಬೆಳಗುವುದು.
ಪ್ರಾಚೀನ ಭಾರತದ ಬಿಲ್ಲಾಣನಾದೇಕ
ಲವ್ಯನಂದಾ ಕಾರ್ಮುಕಾಚಾರ್ಯ ದ್ರೋಣರಿಗೆ
ತನ್ನ ಹೆಬ್ಬೆರಳನ್ನು ಕಾಣ್ಕೆಯಿತ್ತಾ ಕತೆಯ
ನೆವದಿಂದಲಂದಿನಾ ಭಾರತದ ಆರ್ಯರ ಅ
ನಾರ್ಯರಾ ಜೀವನದ ವರ್ಣವ್ಯವಸ್ಥೆಗಳ
ಬ್ರಾಹ್ಮಣರ ಕ್ಷತ್ರಿಯರ ಉಚ್ಚವರ್ಣದ ಗರ್ವ
ನೀಚವರ್ಣಾದ್ವೇಷವೆಲ್ಲವನು ಚಿತ್ರಿಸಿಯೆ
ಕನ್ನಡರ ಕಣ್ಣಮುಂದಿರಿಸಿದಿರಿ ಆ ನಿಮ್ಮ
"ಹೆಬ್ಬೆರಳು" ಇಂದಿನಾ ಕನ್ನಡದ ಬೆರಳೆಣಿಕೆ
ಕಬ್ಬಗಳ ಮೊದಲಲ್ಲಿ ಬೆರಳುಗಳೊಳೈದರೊಳು
ಹೆಬ್ಬೆರಳು ಹಿರಿದೆನಿಸಿ ಮೆರೆವವೊಲು ಮೆರೆಯುವುದು.
ಬಹುಜನದ ಸುಖಕಾಗಿ ಬಹುಜನದ ಹಿತಕಾಗಿ

ತನ್ನ ಅಹಿಂಸಾಧರ್ಮ ಸತ್ಯಶಾಂತಿಯ ಮರ್ಮ
ಸಾರಿದ ತಥಾಗತನ ಪುಣ್ಯ ನಿರ್ವಾಣವನು
ವರ್ಣಿಸಿದ "ವೈಶಾಖಿ" ಬೌದ್ಧ ಸಾಹಿತ್ಯ ಸಾ
ಗರವ ಮಥಿಸಿಯೇ ನೀವು ಕನ್ನಡರ ಸುಖಕಾಗಿ
ಕನ್ನಡರ ಹಿತಕಾಗಿ ಪಡೆದಮೃತ ಫಲವಲ್ತೆ?
ರಾಷ್ಟ್ರೀಯ ಕವಿವರ್ಯ ! ತಾಯ್ನಾಡ ಬಂಧನವ
ಬಿಡಿಸೆ ಸೆಣಸಾಡಿದಾ ಸ್ವಾತಂತ್ರ್ಯ ಸಮರದಾ
ವೀರಯೋಧರ ಮೇಲೆ ಪರಕೀಯ ಶಾಸಕರು
ನಡೆಯಿಸಿದ ಹಿಂಸೆಗಳ ಕ್ರೂರ ದಬ್ಬಾಳಿಕೆಯ
ಕಂಡು ಹೊಗೆಯಾಡಿದಾ ನಿಮ್ಮ ಹೃದಯದಲಂದು
ದೇಶಭಕ್ತಿಯ "ಚಿತ್ರಭಾನು" ಧಗಧಗಿಸಿತ್ತೆ
ಕವಿತಾವತಾರನೇ ! ಒಡಲಿಗೊಂದಗುಳನ್ನ
ವಿಲ್ಲದೆಲೆ ಬಸವಳಿದು ಬರದ ಮಾರಿಗೆ ತಮ್ಮ
ಹರಣವನೆ ಬಲಿಯಿತ್ತು ಬೀದಿ ಬೀದಿಗಳಲ್ಲಿ
ನರಿನಾಯ ತುತ್ತಾದ ವಂಗಬಾಂಧವರನ್ನು
ಕಂಡು ನಿಮ್ಮೆದೆಯಿಂದು ಕರಕರಗಿ ಸುರಿಯಿತ್ತೆ:
ಹೊನಲಾಗಿ ಪರಿಯಿತ್ತೆ ಕಾವ್ಯರಸ, ರಸಋಷಿಯೆ !
ಧರ್ಮ ಸಂಸ್ಥಾಪಕನ ಗೀತಾವತಾರನಾ
ಶ್ರೀ ಕೃಷ್ಣ ಪರಮಾತ್ಮನಂತಿಮ ದಿನಂಗಳನು
ಸತ್ಯಸಂಸ್ಥಾಪಕನ ಸತ್ಯಾವತಾರನಾ
ಗಾಂಧೀ ಮಹಾತ್ಮನಾ ಕೊನೆಯ ಗಳಿಗೆಗಳನ್ನು
ಸು"ಪ್ರಭಾತ"ವೊ "ಕವನದೇಹಲಿ"ಯೊ ಹೆಸರಿಂದ
ಚಿತ್ರಿಸಿದರ್‍ಯೆಕವಿಯೆ ! ಸಾಹಿತ್ಯ ಸಾಮ್ರಾಟ !

ಕರ್ಣಾಟ ಸಾರಸ್ವತ ಕ್ಷೇತ್ರದಲ್ಲೆಲ್ಲ
ನಿಮ್ಮೊಂದು ಕೈವಾಡ ನಿಮ್ಮ ಸುವ್ಯವಸಾಯ
ನಿಮ್ಮ ಪ್ರತಿಭಾಶಕ್ತಿ ಎದ್ದೆದ್ದು ತೋರುತಿವೆ
ಭಾರತಿಯ ಬೆಳಗುತಿವೆ. ಗದ್ಯವೊ ! ಪದ್ಯವೊ?
ನಾಟಕಕಥಾನಕವೊ? ನಿಮ್ಮ ಕೈವಾಡದಿಂ
ದೊಪ್ಪವಡೆಯದ ವಾಣಿಯಂಗವಿನ್ನಾವುದಿದೆ
ಕರ್ಣಾಟ ಸಂಶೋಧನಾ ಕ್ಷೇತ್ರದಲ್ಲಂತು
ನಿಮ್ಮ ಸುವ್ಯವಸಾಯ ನಲಿನಲಿಸಿ ಬೆಳೆಬೆಳೆದು
ಸತ್ಫಲವನೀಯುತಿದೆ. ಸಂಶೋಧನಾಚಾರ್ಯ !
ಇತಿಹಾಸ ಸಾಗರದ ಆಳದೊಳಗಡಗಿರುವ
ಯುಗಯುಗದ ಸತ್ಯಮುಕ್ತಾಫಲವ ಮೊಗೆಮೊಗೆದು
ಕನ್ನಡದ ಸರಸತಿಗೆ ಕಾಣಿಕೆಯನಿತ್ತಿರಲ?
ನಿಮ್ಮ ಲೇಖನ ಶೈಲಿ ನಿಮ್ಮ ಕವಿತಾಮಾರ್ಗ
ನಿಮ್ಮ ಘನಪಾಂಡಿತ್ಯಕ್ಕಿನ್ನೆಲ್ಲಿಯೊರೆಯುಂಟು?
ಒರೆದು ನೋಡುವ ಶಕ್ತಿಯಿನ್ನಾವವಿಬುಧಗಿದೆ?
ಭಾರತಿಯ ಭಕ್ತನೆ, ಭುವನ ಮೋಹಕ ಕವಿಯೇ
ಕರ್ಣಾಟಕ ವಾಗ್ದೇವಿಯಾರಾಧನೆಯದೊಂದೆ
ನಿಮ್ಮ ದೈನಿಕವಲ್ತೆ. ಅದುವೆ ನಿಮ್ಮಾಭವ್ಯ
ಜೀವನ್ಮುಕ್ತಿ, ಬಡವಬಲ್ಲಿದ ಭೇದ
ಉಚ್ಚನೀಚವಿಚಾರ, ಜಾತೀಯತಾಭಾವ
ನಿಮ್ಮ ಘನ ಜೀವನದ ಬಳಿಸಾರಲಂಜುವುವು.

ಸರ್ವಸಮತಾಭಾವ ವಿಶ್ವಬಂಧುತ್ವಗಳಿ ,
ಪರಮಾತ್ಮ ಭಕ್ತಿ, ದೇಶಪ್ರೇಮ, ತಪಗಳೇ
ನಿಮ್ಮ ಘನಜೀವನದ ಸಾರಸರ್ವಸ್ವವಲ !
ಎಲ್ಲ ಕನ್ನಡರೆಮ್ಮ ಹೆಬ್ಬಯಕೆಯಿದುವೊಂದೆ-
ನಿಮ್ಮ ಪರಿಶುದ್ಧಾತ್ಮ ನಿಮ್ಮ ರಾಷ್ಟ್ರಪ್ರೇಮ
ನಿಮ್ಮ ಸಮತಾಭಾವ ನಿಮ್ಮ ಸತತಾಭ್ಯಾಸ
ನಿಮ್ಮ ಘನಪಾಂಡಿತ್ಯ ನಿಮ್ಮ ಕರುಣಾಹೃದಯ
ನಿಮ್ಮ ಕವಿತಾಮಾರ್ಗ ಕನ್ನಡದ ಎಳೆಯರಿಗೆ
ಕನ್ನುಡಿಯ ಭಕ್ತರಿಗೆ ಕನ್ನಡದ ಜನಕುಲಕೆ
ಆದರ್ಶವಾಗಿರಲನಂತಕಾಲದವರೆಗೆ
ಗುರುದೇವ ! ನಿಮ್ಮ ಕವಿಹೃದಯದಲಿ ಇನ್ನೆನಿತೊ
ಕಾವ್ಯನದಿಯುದಿಸಿ ಹೊರಹೊಮ್ಮುತಲಿ ಹೊನಲಾಗಿ
ಹರಿಯುತಲಿ ಕರ್ಣಾಟ ಸಾಹಿತ್ಯಸಾಗರವ
ಪೆರ್ಚಿಸುತ ಉಕ್ಕಿಸಲಿ ! ಭವ್ಯಜೀವಿಯೇ ! ನಿಮ್ಮ
ದಿವ್ಯ ಜೀವನವನ್ನು ಕರ್ಣಾಟವಾಗ್ದೇವಿ
ಸುಖಶಾಂತಿ ತೋಷದಿಂ ಸರ್ವದಾರಕ್ಷಿಸಲಿ !
ಬಂಧನವ ಹರಿದೊಗೆದು ಭಾಸ್ವಂತ ಬೆಳಗುತಿಹ
ನಮ್ಮ ಭಾರತಮಾತೆ ನಿಮ್ಮ ಹಿರಿಬಾಳುವೆಯ
ಶತಮಾನ ಬೆಳಗಿಸಲಿ ! ಶತಮಾನ ಬಾಳಿಸಲಿ !

ಇದೊ ! ಕಾವ್ಯಋಷಿ ಭೌತಶರೀರಂಭೌಮವಾಯ್ತು !
ಯಶಶ್ಶರೀರಂ ದಿಗಂತದಲಿ ಧ್ರುವತಾರೆಯಾಯ್ತು !

(ಬಿ.ಶಂಕರಭಟ್ಟ ಮತ್ತು ಬಿ.ಎಂ.ಶರ್ಮ)

## ಭೂ-ವೈಕುಂಠ

ಜೀವ-ಜೀವಕ್ಕೆಲ್ಲ ಪ್ರತ್ಯೇಕವಾಗಿಹುದು
ಅಮರ ವಿಶ್ವಾಸದೊಂದಾದೇಶವು !
ಜನ್ಮದವಕಾಶ ಅವನತಿಯಲ್ಲ, ಅವತಾರ;
ಎಂಬ ನಂಬಿಕೆ ನಿತ್ಯ ಸಂದೇಶವು ! !

ನಾಟ್ಯ-ರಂಗವಿದೆಂದು ಜೀವನವು ತೋರಿದರು
ಇದು ತುಣುಕು-ತೇಪೆಗಳ ಚಾಪೆಯಲ್ಲ !
ನಿತ್ಯತೆಯನಂತತೆಯ ನಿರ್ವ್ಯಾಜ ಲೀಲೆಗಳ
ಮಾಲೆಯಿದು; ಇದಕೆಂದು ಲೋಪವಿಲ್ಲ ! !

ಶಾಶ್ವತದ ಸಂತಾನ; ಸಂತೃಪ್ತಿಯಾಧಾನ;
ಸಂತಸ-ಸಮಾಧಾನಗಳ ವಿಧಾನ,
ಈ ಬಾಳಿನಲಿ ಮೇಳಗೊಂಡಾಗ ಕಂಡೀತು
ಬಾಳೆ ಭೂವೈಕುಂಠವೆಂದು ಜಾಣ !

—ಕೃಷ್ಣಕುಮಾರ,

# ಧನ್ಯ ನೀನಮರ ಕವಿಯಾದೆ

ಕನ್ನಡದ ಕೋಗಿಲೆಯೆ, ಇನ್ನೆಲ್ಲಿ ನಮಗಿನ್ನು
ನಿನ್ನ ನವಕಾವ್ಯಗಳ ಸುಶ್ರಾವ್ಯಗಾನ
ವೈಶಾಖಿ ಹೆಬ್ಬೆರಳು ಗೊಲ್ಗೊಥಾ ಗಿಳಿವಿಂಡಿ
ಗೆಣೆಯಪ್ಪ ಭಾವರಸ ಪರಿಪೂರ್ಣಗಾನ
ತಾಯೆ ಬಾ ಮೊಗದೋರು ವರಪಂಪ ರನ್ನರಾ
ರನ್ನಗಬ್ಬದ ತಾಯೆ ಬಾರೆಂದು ಕರೆದು
ಕನ್ನಡದ ನೆಲವೊಂದು ಸೇರಲಾ ನಿನ್ನ ನೆಲ
ಹೊರಗಾಗೆ ಸತ್ಯದಪಚಾರವನು ನೆನೆದು
ಕೇರಳವು ಇಲ್ಲಿಲ್ಲ ನನ್ನ ನೆಲ ಕನ್ನಡಂ
ಈ ಕಾಸರಗೋಡು ಕನ್ನಡಂ ಎಂದು
ಶತಸತ್ಯವಂ ಸಾರಿ ಹಾಡಿದ್ಯೆ ವರಕವಿಯೆ
ನಿನ್ನಯೀ ಇಂಚರಂ ಪಡಿದನಿಸಲೆಂದು
ತನ್ನ ಮರೆಯಲ್ಲಿರುವ ಕಂಪನ್ನು ತಿಳಿಯದೆಯೆ
ಹುಡುಕುತಿಹ ಮಿಗದಂತೆ ನಮ್ಮದಿದೆ ಪಾಡು
ಎಂದೊರೆದು ನಾಡನೆಚ್ಚರಿಸಿರುವ ಕಾವ್ಯಋಷಿ
ಇನ್ನಿಲ್ಲ ಹಾ! ಹಂತ, ಎಲ್ಲಿ ಹೊಸ ಹಾಡು
ಕಗ್ಗಲ್ಲ ನುಡಿನುಡಿಸಿ ನಾಡನುಡಿಕಳೆಗೊಳಿಸಿ
ಹಿರಿಯರಾ ಜಾತಕವ ನಮಗಿತ್ತೆ ನೀನು.
ಸಾಹಿತ್ಯ ಸಾಮ್ರಾಜ್ಯವನದಲ್ಲಿ ನವಛಂದ
ತರುವೇರಿ ಹಾಡಿದ್ಯೆ ಹೊಸಹಾಡು ನೀನು
ಹೆಬ್ಬೆರಳ ತೊರೆದಲ್ಲಿ ಮುಷ್ಟಿತಾನಸ್ಥಿರವು
ಪಂಚಮರ ಬಲಬೆರಳು ಅನಿವಾರ್ಯವೆಂದು
ಪಂಚಮರ ಉನ್ನತಿಯೆ ಮನುಕುಲದ ಉನ್ನತಿಯು
ಅದನರಿತು ರಾಷ್ಟ್ರವನು ಬೆಳಗಿರ್ಪೆ ಎಂದೆ
ಇಡು ಹೆಜ್ಜೆ ನಡೆಮುಂದೆ ಸ್ಯೆ ಎಂದು ಹಾಡುತ್ತ
ಮುನ್ನಡೆಯ ಬಿಡುಗಡೆಯ ಗೀತವನು ಹಾಡಿ
ಸ್ವಾತಂತ್ರ್ಯ ಸದ್ಬೋಧೆಯಿತ್ತೆಮ್ಮ ಮುನ್ನಡೆಸಿ
ಅಗಲಿದೆಯ ಇಂದೆಮಗೆ ಹರಕೆಯನು ನೀಡಿ
ಅವ್ಯಾಜ ವಾತ್ಸಲ್ಯ ಪರಿಪೂರ್ಣ ಪರಿಶುದ್ಧ
ಹೃದಯದಿಂ ನಾಡಜನ ಸೇವೆಯನು ಗೈದೆ
ನವಕಾವ್ಯಛಂದದಾ ಒಸಗೆಯನು ಒಲಿದಿತ್ತು
ಮರೆಯಾದೆ ಧನ್ಯ ನೀನಮರ ಕವಿಯಾದೆ

—ರಾ.ಮೊ.ವಿಶ್ವಾಮಿತ್ರ.

ಗಿಳಿವಿಂಡು ಕಂಡುಬಂದೊಡೆ
ತೊಳತೊಳಗುತೆ ಬೆಳಗಿತೊಂದು ನಂದಾದೀಪಂ॥
ಅಳಿಯದ ರೈವತ ಕಾವ್ಯಂ
ಕಳಕಳಿಪೇಕಾಂಕ ನಾಟಕಂಗಳುಮಿನ್ನುಂ

ಗತಕಾಲದ ಸಂಶೋಧನೆ
ಗತಿಗೊಂಡತ್ತಾವನೊಂದು ಲೇಖನಿಯಿಂದಂ॥
ಗತಿಸಿದೊಡಾ ಗೋವಿಂದಂ
ಗತವೈಭವನಪ್ಪುದೆಂತು ಕವಿಕುಲತಿಲಕಂ

ವರಲಕ್ಷ್ಮೀ ಸಂಸಿದ್ಧಿಯ
ದಿರೆಯುಂ ಸಾರಸ್ವತ ಪ್ರಸಾದದೆ ಮೆರೆದಾ॥
ವರಕವಿ ಭೌತಿಕ ದೇಹವ
ತೊರೆದೊಡಮೇಂ ಖ್ಯಾತನಲ್ತೆ ಜನಮನಕೆಂದುಂ

ಶ್ರುತಿಸಮ್ಮತದಿಂ ಶಾಂತಾ
ಕೃತಿಯಿಂದೆಲ್ಲರ ಮನಂಬುಗಲ್ಪಲ್ಲೋಜಂ॥
ಕೃತಿಯೆನಿಸಿ ಬೆಳಗಿದಂ ಸ-
ತ್ಕೃತಿಗಳನೆಸಗುತ್ತೆ ನಿರ್ಮಲಾಂತ:ಕರಣಂ

ಶ್ರೀಯುತನೊಳುದಾರತೆ ವಾ
ಕ್ಶ್ರೀಯುತನೊಳಮತ್ಸರತ್ವಮಾಗದು ನೋಡ
ಲ್ಕೀಯುಕ್ತಿಯೆ ಪೊಳ್ಳಾಗಿಕು
ಮೀಯುನ್ನತ ಕವಿಯ ದಿವ್ಯಜೀವನ ಚರಿತಂ

ಮೊಳೆಯಾರು ಶಂಕರನಾರಾಯಣ ಭಟ್ಟ

# ನವಕಾವ್ಯ ತಾತ ಗೋವಿಂದ ಪೈ

—೧—

ಇತಿಹಾಸ ಸಂಶೋಧನಂಗಳಲಿ, ಕನ್ನಡದ
ಪ್ರಾಚೀನ ಸಾಹಿತ್ಯ-ಶಾಸನಂಗಳಲಿ,
ವಿವಿಧ ಲೇಖನ ನಿಚಯದಿಂದ ಪಾಂಡಿತ್ಯದಲಿ
ತುಂಬಿರುವ "ರಾಷ್ಟ್ರಕವಿ"ಯಾಗಿ ಮೆರೆವವರು.

—೨—

ಹಲವು ಭಾಷೆಗಳಲ್ಲಿ ತಿಳಿವು ಬೆಳಕಿಡಿದವರು,
ಗ್ರೀಕಿನಲಿ ಕನ್ನಡವ ಹುಡುಕಿ ಹಿಡಿದವರು.
ಕಾವ್ಯ ಪಂಥಾನದಲಿ ಹೊಸ ರೀತಿಯಳವಡಿಸಿ,
ನಂದದಿಹ ದೀಪವನು ಬೆಳಗಿಸಿರುವವರು.

—೩—

ಯೇಸು-ಬುದ್ಧರ ಕಡೆಯ ದಿನವನ್ನು ಕಾವ್ಯದಲಿ
ಕಂಡರಿಸಿ ಮೂಡಿಸಿದ ರೂವಾರಿಯಿವರು.
"ಗಿಳಿವಿಂಡ" ನುಡಿಸಿದರು; "ಹೆಬ್ಬೆರಳ" ತೋರಿದರು;
"ನವಕಾವ್ಯತಾತ" ಗೋವಿಂದ ಪೈಯವರು.

—ಅಮ್ಮೆಂಬಳ ಶಂಕರನಾರಾಯಣ ನಾವಡ

# ಶ್ರೀ ಗೋವಿಂದ ಪೈ

(೧)

ನೀನು ಕುಳಿತಲ್ಲಿಂದ
ಕದಲಿಲ್ಲ; ಬದಲಿಲ್ಲ.—
ನಿನ್ನ ನಿತ್ಯದ ಬಾಳು ನಿತ್ಯದಂತೆ;
ಓದುತಿಹೆ, ಕುರಿಯುತಿಹೆ
ಮೈಗರೆಯುವನ್ಯತಗಳ
ನಡುವೆ ಸ್ಥಿರವಾಗಿರುವ ಸತ್ಯದಂತೆ.

ಓಂಕಾರಮುತ್ಪತ್ತಿ,
"ಕನ್ನಾಡಿ"ನಿತಿಹಾಸ
ಹೊಯ್ಸಳರ, ನಾಡವರ ಕುಲಗಳುಗಮ,
ಅಲ್ಲಮನ ಜನನದಿನ,
ಬಿಲ್ಹಣನ ಪುಣ್ಯತಿಥಿ:—
ಇವರರಿವೆ ನಿನ್ನ ಗುರಿ, ನಿನ್ನ ನಿಗಮ.

ಎಲ್ಲ ಭಾಷೆಗಳೆಲ್ಲ
ಕೋಶಗಳು ತುಂಬಿಹವು
ನಿನ್ನ ಕೋಣೆಯ ಜಂತಿ-ಭಿಂತಿಗಳನು.
ನುಡಿಗಳುಗಮವ ತೋರ್ವ
ಮಂತ್ರ ಮೂಡಿರೆ ನಿನ್ನ
ಚಿತ್ರಭಿತ್ತಿಯಲೊರೆದು ಪಂಙ್ಕ್ತಿಗಳನು.

ಸತ್ಯದಣುರೇಣುಗಳ
ಕಾಣಬೇಕೆನ್ನುತಿಹೆ
ಉಸುಬಿನಲಿ ಹೊಂಗಣವ ಹುಡುಕಿದಂತೆ;
ಬರಿ ಮಹತಿಯನು ಬೆನ್ನು
ಹತ್ತಿ ಶೋಧಿಸುತಿರಲು
ಮುಗಿಲೋಳಿಯಲಿ ಮನವು ತೊಡಕಿದಂತೆ

ಪರಮಾಣುವಿನ ಶೋಧ
ಬಾಳಿಗಿಹ ಪರಮಾರ್ಥ;
ನುಡಿಯೊಂದ ನಡೆಯೊಂದವನೆತ್ತಿ ಹಿಡಿದು
ಇಂತಿದರ ಮೂಲ ಮತ್—
ತಿಂತಿದರ ಋತಪೆನಲು
ಸರಸತಿಯು ನಲಿಯುವಳು ವೀಣೆ ಮಿಡಿದು.

ಯಾವ ಕುಲಕೂ ಸತ್ಯ;
ಯಾವ ಕಾಲಕು ಸತ್ಯ—
ವೆಂದೊಂದು ಸಂಗತಿಯನೊಂದು ಪದವ
ಸಿಲ್ಲಿಸುವ ಮಾನವಗೆ
ಚಿರಜೀವಿ ಪಟ್ಟವಿದೆ,
ಶೂನ್ಯದಾಲಯು ತೆರೆಯೆ ತನ್ನ ಕದವ.

ಸತ್ಯದ ವಿರಾಟತೆಯ
ಕಂಡು ತಣಿದವರೆಲ್ಲಿ?
ಎಲ್ಲ ಕಣ್ಣನು ಕುಕ್ಕಿತದರ ದ್ಯುತಿಯು.
ಕಂಡಿರುವನಂತವನು
ಕಾಣದೊಂದು ಅನಂತ
ಹೆಗಲೇರಿ ಕುಣಿಯುತಿದೆ, ಕಂಗೆಡಲು ಮತಿಯು.

ವಿಶ್ವಕ್ಕೆ ಸರ್ಪಗಾ—
ವಲವಿಡುವ ಹವ್ಯಾಸ
ವ್ಯಾಸನಿಗು ದು:ಸಾಧ್ಯವೆಂದು ಬಗೆದು
ಬರಿಯೊಂದು ಕಣವ ತಿಳಿ
ಜ್ಞಾನ ಕಂಕಣನಾಗಿ
ಪರಿಯ ಮೇಲಿರುವ ಪರಿಯನ್ನು ತೆಗೆದು

ಕುರಿತಿರಲು ಕಣವಾಗ—
ಬಹುದು ಜ್ಯೋತಿರ್ಲಿಂಗ;
ಮಿಡಿಯು ತಳಿರೆದೆಯಲ್ಲಿ ಇಡಿಯು ಹೊಳೆದು;
ಸತ್ಯದ ಸ್ವಯಂಜ್ಯೋತಿ
ಬೆಳಗುತೆದೆಯನು ಬರಲು
ನಿರ್ನಾಮವಿರಬಹುದು ತಮವು ಕಳೆದು

ಒಂದು ವರುಷಕೆ ತಿಳಿವು
ಮೂಡದಿರಲಿನ್ನೊಂದು;
ಒಂದು ಜನ್ಮವು ಕಳೆಯಲಿನ್ನೊಂದು ಜನ್ಮ.
ಜ್ಞಾನಯೋಗಕೆ ಕಳಸ
ವಿಡದಿಡದಿರಲಿ ಸಿದ್ಧಿ;
ಜ್ಞಾನಸಾಧನವಹುದು ನಮ್ಮ ಧರ್ಮ.

(೨)

ಮುಂದೊಮ್ಮೆ ನಿನ್ನನ್ನು
ಕನ್ನಾಡು ಮನ್ನಿಸುತ
ಲಕ್ಷ್ಮಿಯೊಲಿಯುತ ಕೀರ್ತಿ ಕೊನರುತಿರಲು
ನೀ ಬಾಳ್ವೆ ಕಡಲತಡಿ
ಗೊಂದು ಕಿರುಮನೆ ಕಟ್ಟಿ
ಕಿವಿಯಲದರರಸುದನಿ ಸತತವಿರಲು

ಮಲೆನಾಡಿನೈಸಿರಿಗೆ
ನಿನ್ನ ಕಣ್ಮನವಿತ್ತು,
ಸತಿಸುತರಿಗೆಂದೆದೆಯ ನಲುಮೆಯಿತ್ತು
ನೀನು ಬಾಳಿದೆ ಜ್ಞಾನ-
ಕೆಂದು ಎಲ್ಲವನಿತ್ತು,
ಆತ್ಮವನು ಮುನ್ನೀರ ಮೊಳಗಿಗಿತ್ತು.

ಅಲ್ಲಮನ ಜನ್ಮದಿನ-
ವನ್ನು ಸಂಶೋಧಿಸಿರ–
ಲಲ್ಲಮನ ತಿಳಿದೆನೆಂದೆನುವದೆಂತು?
ನಾಡವರ ಮೂಲವನು
ಕಂಡು ಹಿಡಿದಿಹುದು ನಿಜ.
ಬಾಳ ಮೂಲವಿದೆಂದು ಕೊನೆವುದೆಂತು?

ಇಂತು ಸತ್ಯದ ಕಣಜ-
ವನ್ನು ಕಟ್ಟಿದ ನೀನು
ನಿನ್ನ ಹೊಲವನೆ ಬಿತ್ತಿ ಬೆಳೆವುದೆಂದೆ
ಬಾಳ ಮೈದಾನದಲಿ
ಕಣವನಾರಿಸಿ ತಿಳಿಯು-
ತಾತ್ಮಕೃಷಿವಲನಾಗಿ ಹೊಳೆವುದೆಂದೆ.

ಕಲೆಹಾಕಿರುವ ಸತ್ಯ
ಮನವ ಬೆಳಗುವದು ದಿಟ
ನೆಲೆಯಿಲ್ಲದಾ ಸತ್ಯದೆಡೆಯ ಸಾರಿ;
ಅಣುರೇಣುಗಳು ನಮ್ಮ-
ನಣಿಗೊಳಿಸುವವು ನಿತ್ಯ
ಮಹತೋರ್ಮಹೀಯದಾ ದಾರಿ ತೋರಿ.

ವೇದೋಪನಿಷದುಗಳು
ಧರ್ಮಗ್ರಂಥಗಳೆಲ್ಲ
ತಮ್ಮ ಮುಡಿಪನು ನಿನಗೆ ಸಲ್ಲಿಸಿದವು.
ಎಲ್ಲ ತಾವರೆಗೊಳಗ-
ಳೆಲ್ಲ ಅರವಿಂದಗಳ
ದೊಂದೆ ಸೂರ್ಯನನೆದುರು ನಿಲ್ಲಿಸಿದವು.

(ವಿನಾಯಕರ "ಬಾಳ ದೇಗುಲದಲ್ಲಿ" ಎಂಬ ಕವನ ಸಂಗ್ರಹದಿಂದ)

# ರಾಷ್ಟ್ರಕವಿ ಸ್ಮರಣೆ

(ವಾರ್ಧಕ ಷಟ್ಪದಿ)

ಕರ್ಣಾಟ ವಾಙ್ಮಯ ವ್ಯಾಸಂಗದೊಳು ಮನಂ
ಪೂರ್ಣ ನೆಲೆಗೊಳಲು ನಿಸ್ವಾರ್ಥರಿಂದನುದಿನಂ
ತನ್ನ ಜೀವನವ ಸಂಶೋಧನೆಗೆ ಮುಡಿಪಾಗಿರಿಸಿದ ಬಲ್ಲಹರ ಹಿರಿಯು॥
ಮನ್ನಿಸಿತು ಮದರಾಸು ರಾಷ್ಟ್ರಕವಿ ಬಿರುದಿನಿಂ
ನಿರ್ಣಯಂ ಸಂದಿಗ್ಧ ಕವಿ ಕಾಲಕಿತ್ತ ನಿ
ನ್ನುನ್ನತ ಗ್ರಂಥ ರಾಶಿಗೆ ಋಣಿಗಳಲ್ತೆ ! ಕನ್ನಡಿಗರಲೆ ಕಾವ್ಯಸಿದ್ಧ.

ಕಾಲಕ್ಕೆ ತಕ್ಕ ಮಾರ್ಪಾಟಾಗಿ ಭಾಷೆಜನ
ಜಾಲದ ಮನೋರಂಜನೆಯು ಕೂಡೆ ಸಂಸ್ಕೃತಿಯು
ಕಾಲೂರಿಸುವ ಪರಂಪರೆಯಂತೆ ಪರಭಾಷೆಗಳೊಳಿರ್ಪ ಸಂಸ್ಕೃತಿಗಳ॥
ಆಲೋಕಿಸುತೆ ಗ್ರಾಹ್ಯ ವಿಷಯಗಳ ಸ್ವೀಕರಿಸಿ
ಪೇಳಿದೆ ಲಲಿತವಪ್ಪ ಕನ್ನಡದೊಳಿಂದಿನ ವಿ
ಶಾಲ ಕರ್ಣಾಟವೀ ಸತ್ಕಾರ್ಯಕಾಗಿ ನಿನಗಾಭಾರಿಯಾಗಿರ್ಪುದು.

ಫಲಸಂಗ ಕರ್ತೃತ್ವರಹಿತಮಾದುದ್ಯೋಗ
ಫಲಿಸಿತ್ತು ಗೋವಿಂದಪೈ ಕರ್ಮಯೋಗಿ ನೀ
ನೆಲೆಸಿರ್ದ ಕಾಸ್ರಗೋಡಂ ಕೇರಳಂ ನುಂಗಿ ತುಳುವ ಕನ್ನಡ ಜನತೆಯ
ಹೊಲಬುದಪ್ಪಿಸಿತು ದುರ್ದೈವಿ ಕರ್ಣಾಟಕಂ
ಕಳೆದುದ ಮರಳಿ ಪಡೆದು ಕರ್ತವ್ಯದಿಂ ಶಾಂತಿ
ಸಲಿಸಲಿ ವಿಮುಕ್ತಿಯಂ ನಿನಗೆ ಕೇರಳ ಮುಕ್ತಿಯೊಡನೀಯಲಾದೇವನು.

—ಪೆರಡಾಲ ಕೃಷ್ಣಯ್ಯ.

# ಬೆಳ್ಳಿ ಮೀಸೆಯ ಮಗು

ಕಡಲ ತೀರದ ಸೊಬಗು ನಾಡಿನ
ಹರವುದಾರಿಯ ಅಂಚಿನಲ್ಲಿ
        ಕೈಬೀಸಿ ಕರೆದಿತ್ತು ಹಳೆಯ ಆಲದ ಮರ
        ಶತಮಾನ ಕಂಡಿರುವ ಅಜರ-ಅಮರ
ನೂರನೆಯ ವರ್ಧಂತಿ ಯಾರು ಮಾಡಿದ್ದಿಲ್ಲ
ಯಾವ ಸಮಿತಿಯು ಕೂಡ ನಿಧಿಯರ್ಪಿಸಿದ್ದಿಲ್ಲ
ಪುರವಣಿಯು ಹೊರಟಿಲ್ಲ; ಯಾವ ಸದ್ದಿಲ್ಲ
ಹಳೆಯ ಕಾಲದ ಮಟ್ಟು-ಅದಕೆ ಮದ್ದಿಲ್ಲ !
        ಸದ್ದಿಲ್ಲ ಎಂದರೂ ಸದ್ದು ಇದ್ದೇ ಇತ್ತು
        ಹಕ್ಕಿಗೂಡಿನ ಎಡೆಯ ಸಂಗೀತ
        ಚಿಲಿಪಿಲಿಯ ಚೀತ್ಕಾರ
        ಮರ್ಮರದ ಸತ್ಕಾರ
        ಹಗಲು ನಡೆದೇ ಇತ್ತು; ಇರುಳು ಕೂಡ

× × × ×

ಹಣ್ಣುಹಣ್ಣಾದ ಹಳೆಯ ಮರ
ಕೈಬೀಸಿ ಕರೆದಿತ್ತು "ಇತ್ತ ಬನ್ನಿ" ಎಂದು
ಮರದಲ್ಲಿ ಹಣ್ಣಿಲ್ಲ
ಮರವೆ ಹಣ್ಣಾಗಿತ್ತು
ಮುಪ್ಪಿನಂಗಳದಲ್ಲಿ
ಮರವೆ ಮಣ್ಣಾಗಿತ್ತು !
        ತೋಟಕ್ಕೆ ಹಾಸಿರುವ ತರಗೆಲೆಯ ಹಾಸೆ
        ತನ್ನ ಒಳಗೇ ತಾನು ಮರ್ಮರಿಸಿತು:
        ಬನ್ನಿ, ಬೇಕೇ ನಿಮಗೆ ಕಾವ್ಯಮೀಮಾಂಸೆ?"
ಹೊನ್ನು ಕೊರಳಿನ ಹಕ್ಕಿ
ನುಡಿದಿತ್ತು ಬಗೆಯಲ್ಲಿ ಭಾವ ಉಕ್ಕಿ:
"ವೈಶಾಖಿ ವೈಶಾಖಿ
ಹೂಹಣ್ಣು ತಂದಿರುವ ಚಿರವಸಂತದ ನಿತ್ಯವೈಶಾಖಿ !"

× × × ×

ಅದು ಯಾವ ಭಾಷೆ?
ಕನ್ನಡವೆ ತಾನೆ?
ಮತ್ತೆ ಯಾರು ಹೇಳಿದರಿದನು ಕನ್ನಡದ ನೆಲವೆಂದು?
        ಈ ಮರದ ಹಕ್ಕಿ
        ಈ ನೆಲದ ಮಳಲು
        ಅಳುತ್ತಿತ್ತು ಬಿಕ್ಕಿ
        ಅಳಲು? ಏನೆಂಥ

ಈ ಕಡಲ ಗಾಳಿ
ಈ ಮುಗಿಲ ಗೂಳಿ
ವಾಚಾಳಿ, ವಾಚಾಳಿ
"ಕನ್ನಡ " "ಕನ್ನಡ " ಎನ್ನುತ್ತಿದೆ ಕೇಳಿ
ಈ ಮೂಕಭಾಷೆ ಯಾರಿಗೂ ಕೇಳಿಲ್ಲ
ಇದರ ಬಗೆಯುಳಲಂತು ಯಾರಿಗೂ ತಿಳಿದಿಲ್ಲ
ಇಲ್ಲಿದ್ದ ಈ ಮುದುಕ
ಈ ನೆಲಕೆ ಈ ಬಾನ್ಗೆ
ಕನ್ನಡದ ದೀಕ್ಷೆಯನು ಕೊಟ್ಟಿರುವನೇನು?

× × × ×

ಒಳಗೆ ಬಂದರೆ ಕಾಣುವುದು ಹಳೆಯ ತೋಟ
ಹಳೆಯದೇ ಮಾಟ
ಹಳೆಯ ಕಾಲದ ಮನೆ
ಹಳೆಯ ಕಾಲದ ಜನ
ಹಳೆಯ ಮಂಚ–
ಹಳೆಯ ಕಾವ್ಯ ಪ್ರಪಂಚ
ಎಲ್ಲ ಹಳತು
ಅಲ್ಲಿ ಕಾಲಿಟ್ಟವರ ಬಗೆ ತುಂಬ ಹೊಸತನದ ಬೆಳಕು
ಮೀಸೆ ಮೂಡುವ ಮುನ್ನ
ಹಾಳು ಹುಡುಗಿಯರಿಗೆ ತಾಳಿ ಕಟ್ಟುವ ಕಾಲ
ಮೀಸೆ ಹಣ್ಣಾದರೂ
ಉಪನಯನ ದಂಡವನು ತೊಟ್ಟು ತಿರುಗುವ ಬಾಲ-
ಬ್ರಹ್ಮಚಾರಿಯ ಕಂಡು ಕಣ್ಣು ಕರಗಿತ್ತು !
ಇದು ಮುಗಿದ ಕಥೆ
ಎಂದೆಂದಿಗೂ ಕೂಡ
ಮುಗಿಯದ ವ್ಯಥೆ
ಬೆಳ್ಳಿ ಮೀಸೆಯ ಮಗು
ಮಗುವಿನಂಥದೆ ನಗು
ಇನ್ನಿಲ್ಲ
ಇಲ್ಲ, ಮಂಜೇಶ್ವರದಲ್ಲಿ ಕನ್ನಡಿಗರಿಗಿನ್ನು ಕೆಲಸವಿಲ್ಲ !

× × × ×

–ಬನ್ನಂಜೆ ಗೋವಿಂದಾಚಾರ್ಯ.

# ಹಿರಿಯ ಕವಿಗಳಿಗೆ ಕಿರಿಯನ ಕಾಣಿಕೆ

(ರಾಷ್ಟ್ರಕವಿ ಗೋವಿಂದ ಪೈರವರಿಗೆ ಬಾಷ್ಪಾಂಜಲಿ)

ಶೋಕವಾಯಿತೆನಗೋದಿ ಪತ್ರಿಕೆಯೊಳಿಂದು
ಇನ್ನುಂದೆ ಎಮ್ಮೊಡನೆ ಗೋವಿಂದ ಪೈ ಇಲ್ಲವೆಂದು ॥ ೧ ॥

ಕನ್ನಡದ ಖ್ಯಾತ ಕವಿ ಮಂಜೇಶ್ವರ ಗೋವಿಂದ ಪೈ
ಬಿಟ್ಟು ನಡೆದಿಹರು ಎಮ್ಮ-ಕನ್ನಡ-ಜನತೆಯ ಕೈ ॥ ೨ ॥

ಕವಿಬಾಂಧವರವರು; ಬಹು ಭಾಷಾ ವಿಶಾರದರು;
ಭುವಿಬಿಟ್ಟು ತೊರೆದಿಹರು ॥ ೩ ॥

ತುಂಬು ಜೀವನ ಬಾಳಿ ನಡೆದಿಹರು ಮುಂದೆ
ಸಾಹಿತ್ಯ ಸಂಸಾರವನು ತೊರೆದು ಹಿಂದೆ ॥ ೪ ॥

ಭಗವಂತನೀಯಲವರಾತ್ಮಕೆ ಚಿರಶಾಂತಿ
ಬೆಳಗಲೆಮ್ಮಾತ್ಮವನು ಅವರ ಜೀವಕಾಂತಿ ॥ ೫ ॥

ಸಿ. ಕೆ. ಸತ್ಯನಾರಾಯಣ, 43 ಜಯನಗರ, ಮೈಸೂರು-15

# ನಿನ್ನ ಸ್ಮಾರಕಕೆನ್ನದೀ ಮುಡಿಪು

ಎಲ್ಲಿ ಬಾನಂಚಿನಲಿ ಮರೆಯಾದೆ ರವಿಯೇ
ಎಲ್ಲರಸಲಿನ್ನು ಮಂಜುಳಪುರದ ಕವಿಯೇ
ಎಲ್ಲಭಾಷೆಗಳೊಪ್ಪ ಸಾಹಿತ್ಯ ನಿಧಿಯೇ
ಎಲ್ಲರೊಕ್ಕೊರಳ ೧ಸೊರವವಧರಿಸು ಗುಣಿಯೇ ॥ ೧ ॥

ನಿನ್ನುಸುರಿನಾಸರೆಯೇ ಪ್ರಗತಿ ಭಾರತಕೆ
ನಿನ್ನ ಕೃತಿಜಾಗೃತಿಯು ಸುಪ್ತ ಚೇತನಕೆ
ನಿನ್ನ ಲೆಕ್ಕಣಿಯಿಂದುಕ್ಕುವೊಕ್ಕಣೆ ಜನಕೆ
ಕನ್ನಡದ ನವ್ಯ ಪದಗಳ ಮೋಹರಕ್ಕೆ ॥ ೨ ॥

ತರುಲತೆಗೆ ಪತ್ರ ಫಲ, ಪುಷ್ಪ ಪಲ್ಲವಿಪಂತೆ
ಮೊರೆದರಳಿ ಮೂಡುವಾ ನಿನ್ನ ಕವನಗಳಿಂತೆ
ತಿರುಳಿತ್ತು ಬರೆದಿತ್ತ ನೀಕಾವ್ಯಋಷಿಯಂತೆ
ಕರುನಾಡ ಕಬ್ಬಿಗರ ಕಲ್ಪತರುವಂತೆ ॥ ೩ ॥

ಬಗೆಬಗೆಯ ಪುಷ್ಪರಸ ಗೂಡಿದಾ ಮಧುವಂತೆ
ಮಿಗೆವಿವಿಧ ಭಾಷೆಗಳ ಪರಿಣತನು ನೀನಲ್ತೆ
ಮೊಗೆದು ಮುಗಿಯದ ವನಧಿಯೋ! ಮೇಣು, ಅಗೆದಗೆದು
ಮುಗಿಯದಾ ಘನಗನಿಯೋ! ಬಣ್ಣಿಸಲು ಬಾರದು ॥ ೪ ॥

ಅರಸರುಡುಗೆರೆ ಬಯಸಿ ನೀ ಬರಹ ಬರೆದಿಲ್ಲ
ಪರರು ಕೀರ್ತಿಸಲಾಗ ಮೈ ಮರೆಯುವವನಲ್ಲ
ನರರ ಸ್ವಾತಂತ್ರ್ಯ-ಸತ್ಯಕೆ-ಧರ್ಮಕೆಲ್ಲ
ಕರೆಯಿತ್ತೆ-ಕಳೆಯಿತ್ತೆ-ನೆರವಿತ್ತೆ; ನೀ ಭಲಾ ॥ ೫ ॥

ಮುಚ್ಚುಮರೆಯಿಲ್ಲದಾ ಬಿಚ್ಚುಹೃದಯವು ನಿನ್ನ
ಸಚ್ಚರಿತೆಯಂ ಸಾರ್ವದೇಗುಲವು ಸಂಪನ್ನ;
ಮೆಚ್ಚಿನಾ ಲೇಖಿನಗಳಿನ್ನು ಕನ್ನಾಡನ್ನ
ಪೆರ್ಚಿಸಲು ಬೇಕಿತ್ತು; ಗೈಯ್ಯಲೇನದಕಿನ್ನ ? ॥ ೬ ॥

೨ಅರಿವೆಪಿರಿದಾದರೂ-೩ಅರಿವೆಭೂಷಣಕಿರಿದು.
೪"ಹಿರಿಯ"ರೆಂಬರು ನಿನ್ನ "ರಾಷ್ಟ್ರಕವಿ" ಬಿರುದು
ಸಿರಿವಂತನಾದರೂ ಐಸಿರಿಯ ಹಮ್ಮಿರದು
ನರೆತ ಕೇಶದ ಪೊಗರು ಒಗೆವುದಹ ! ವೊಗೆದು ! ॥ ೭ ॥

ನಡೆಯು ಗಂಭೀರ-೫ನಿನ್ನುಡಿಯು ಬಂಗಾರ
ಕೊಡುವೆ ನುಡಿಯಡಿಗೆಡೆಗೆ ೧ಸವಿಯಾಧಾರ
ಜಡತೆಯಿಲ್ಲದ ನಿಯತ ಕರ್ಮ ಜೀವನ ಸಾರ
ಕೊಡುಗೈಯ್ಯದಾನಿ ನೀ ದಲಿತರಿಗೂ ಉದಾರ ॥ ೮ ॥

ಇನ್ನು ಕೊರಗಿದರಿಲ್ಲ, ಮರುಗಿದರೂ ಫಲವಿಲ್ಲ
"ನಿನ್ನ ಸ್ಮಾರಕಕೆನ್ನದೀ ಮುಡಿಪು" ಬೇರಿಲ್ಲ
ಎನ್ನ ಗುರುದೇವ ನೀನೆಂದು ನಂಬಿದೆನಲ್ಲ !
ಪಿನ್ನೆಲೆಯ ಶಕ್ತಿ ನೀನಿರು.ಮರೆಯಿಸಲ್ಲ ॥ ೯ ॥

ವಿ.ಸೂ: ೧. ಸ್ವರ, ೨. ತಿಳುವಳಿಕೆ, ೩. ಬಟ್ಟೆ, ೪. ಲೇಖಕರು ಶ್ರೀ ಪೈಗಳನ್ನು ಕರೆವ ಹೆಸರು, ೫. ನಿನ್ನ + ನುಡಿಯು.

**ಎಂ. ಕೆ. ಹರಿದಾಸ್, ಮಂಜೇಶ್ವರ.**

# ಕಂಡೆ ಕಾವ್ಯರ್ಷಿಯಂ

ಜರೆಯ ಜವನಿಕೆಯನಿಳಿವಿಟ್ಟವೊಲ್, ಹರೆಯ ತಾಂ
ಹೆಪ್ಪುಗಟ್ಟಿದ ತೆರದೆ ಮಾಡುಗೋಡೆಗಳಲ್ಲಿ
ಹತ್ತಿರ್ದುದಲ್ಲಲ್ಲಿ ಹಳೆಯ ಜೇಡನ ಜಾಲ
ಮನೆಯೊ! ಪ್ರಾಚೀನತೆಯ ಭೀಮ ಬಲ ಮುದ್ರೆಯಂ
ತಳೆದಿತ್ತು, ಗಾಂಭೀರ್ಯ ಕಳೆಯೆದೆಯ ಸೆಳೆದಿತ್ತು

ತಿಳಿವಿನೊಂದೇರುಗುಡ್ಡವನೇರಿದಂತೆ ಮನೆ-
ಯಟ್ಟವಂ ಸಾರಿದೆಂ — ಸುತ್ತಲುಂ ಹೊತ್ತಗೆಯ
ಬೆಟ್ಟಗಳ ನಡುವೆ ತಪಮಿರ್ದ- ಕಾವ್ಯರ್ಷಿಯಂ
ಕಂಡೆನಾಂ-ಎನಿತೊ ಶತಮಾನಗಳ ಬೆಳಗಿರ್ಪ
ತಿರುಮಾನಿಸರ ತಿಳಿವುಸೊಡರಿನಿದಿರೊಳ್ ಕುಳಿತ
ಸರಸತಿಯಣುಗ ಧ್ಯಾನ್ಯಶೀಲನಂ ಕಂಡೆ ನಾಂ.

ಕಾಲದಾಳಕ್ಕಿಳಿದು ನೇರಿನಾ ಬೇರನ್ನು
ಅಗೆದಗಿದು ಕಾಳಿಮೆಯು ಮೈಗರೆದು ಸತ್ಯಮದೊ
ಹರಸಿರುವ ಬೆಳ್ನೊಗರ ನವಿರ ಮಕುಟಂ, ಕಾವ್ಯ-
ಕಾಂತಾರದೊಳು ನಿರಾಕುಲಮಾಗಿ ಸಂಚರಿಪ
ಸಿಂಹಕಳೆಯಂ ಸೂಸುತಿರುವ ಹೆಮ್ಮೊಸೆ ಒ-
ಳ್ಳಗೆಯ ಬಗೆಗೊಂದು ನಲ್-ಒಪ್ಪಮಿತ್ತಿರ್ದತ್ತು.

ಹಾಸಿರ್ದ ರತುನಗಂಬಳಿಯು ಮೇಲಾಸನಂ
ಮೇಣ್‌ದಣಿಯಲದುವೆ ಶಯನಂ......ಕಾವ್ಯಶ್ರೀಯಿಂದೆ
ಎದೆಯ ಹಿಗ್ಗಲಿಸಿದಾತಂಗೆ ಮಿಕ್ಕೈಸಿರಿಯ
ಮಿರುಗೆ? ಸರಳತೆಯ ಪಥಮಲ್ತೆ ಸತ್ಯದ ಸೆಲೆಗೆ,
ಮೇಣ್ ಶಿವದ ನೆಲೆಗೆ? ತುಳುನಾಡ ಭಾಗ್ಯಕೆ ಮನದೆ
ನಮಿಸಿ ನಿಂದೆಂ ಕಟಾಕ್ಷ ಪ್ರಸಾದವನಾಂತು.

ಅಮೃತ, ಸೋಮೇಶ್ವರ, ಬಿ. ಎ. ಮಂಗಳೂರು.

# ಇನ್ನಿನಿಸು ಕಾವ್ಯರ್ಷಿ ನೀ ಬದುಕಬೇಕಿತ್ತು

ಕನ್ನಡದ ನಂದನದ ಹೂವೊಂದು ಬಾಡಿತೇ
ಕನ್ನಡಾಂಬೆಯ ಮಕುಟ ಮಣಿಯೊಂದು ಬಿದ್ದಿತೇ
ಕನ್ನಡಾಂಬೆಯು ಪುತ್ರವಿರಹದು:ಖದಿನೊಂದು ಕಂಬನಿಯ ಸುರಿಸುತಿಹಳೇ ?
ಕನ್ನಡದಿ ಹುಟ್ಟಿ ಬಳೆದಿಲ್ಲೆ ಜೀವವ ತೆತ್ತ
ಕನ್ನಡಾಂಬೆಯ ಮುದ್ದು ಮಗನ ಮೊಗಕಾಣದೆಯೆ
ಕನ್ನಡಿಗರೆಲ್ಲಿಂದು ಅಳುವದಾಯಿತ್ತಕಟ ಅಯ್ಯೋ ಶಿವ ಶಿವ ಶಂಕರಾ॥

"ಗೋವಿಂದ ಪೈ"ಯೆಂದು ಇನ್ನಾರ ಕರೆವಳೋ
ಪಾವನಾಕಾರಮಂ ಇನ್ನೆಂದು ಕಾಂಬಳೋ
ಪಾವಿತ್ರ್ಯ ಹೃದಯ ಮನದೇಕಪುತ್ರನ ಪಡೆವಳಿನ್ನೆಂದೊ ಕನ್ನಡಮ್ಮಾ !
"ದೇವಸಾನ್ನಿಧ್ಯದಲಿ ಕನ್ನಡವ ಹೊಗಳು ನೀ
ಭಾವಿಭವ್ಯತೆಗೊಂದು ಕಲ್ಯಾಣ ಸಾಧಿಸಿದ
ಜೀವಿಗಳಿಗೆಲ್ಲೊಂದು ಆದರ್ಶಮಾರ್ಗವನು ತೋರಿ ಮರೆಯಾದ ಕವಿಯೇ?॥

ಹೇ ಕನ್ನಡಾಂಬಿಕೆಯ ಮುದ್ದುಮೋಹದ ಕುವರ
ನಾಕದವರಿಂಗೆಲ್ಲ ಪರಿಚಯಿಸು ಕನ್ನಡವ
ಬೇಕಿನ್ನು ಕನ್ನಡಕೆ ನಿನ್ನಂತೆ ಪುತ್ರಕರು ಅಲ್ಲಿಂದ ಹರಸುತಿಹೆಯಾ?
ಸಾಕೇಕೆ ಕನ್ನಡದಿ ಬೆಳಗಿ ನಂದಾದೀಪ
ಸಾಕಾರ ಮಾದ್ದೊಂದ ಚಿರಮಾಗಿ ನಿಲ್ಲಿಸುತ-
ಲೇಕಾಕಿ ತೆರಳಿದೆಯ ಒಂದೊಮ್ಮೆ ನಾವೀಗ ಆಗಿಹೆವನಾಥರೆಲ್ಲಾ॥

ಇನ್ನಿನಿಸು ಕಾವ್ಯರ್ಷಿ ನೀ ಬದುಕಬೇಕಿತ್ತು
ಚೆನ್ನಗಿಹ ತಾಯ್ನಾಡ ನೀ ಬೆಳಗಬೇಕಿತ್ತು.
ನಿನ್ನ ಮಂಜೇಶ್ವರವು ದೇವನಿಲ್ಲದ ಗುಡಿಯು ಎಂದೆಂದು ಕನ್ನಡಕ್ಕೆ !
ಕನ್ನಡದ ನಂದನದ ಕೋಕಿಲೆಯೆ ಬಂದಲ್ಲೆ
ಇನ್ನೀಗ ನಡೆದಿಹೆಯ ಸಾಹಿತ್ಯ ಸಾಮ್ರಾಟ
ಕಣ್ಣನೀರಂ ಮಿಡಿದು ಶೋಕದಂಜಲಿಯಿತ್ತರೀಗಲೀ ಕನ್ನಡಿಗರು ! !

ಕನ್ನಡದ ಬಾನಿನಲಿ ಕಾವ್ಯಭಾನುವೆ ಬೆಳಗಿ
ತನ್ನಂತೆಯಸ್ತಮಿಸಿ ಕನ್ನಡರಾಜ್ಯಕ್ಕೆ
ತನ್ನತನವನ್ನಿತ್ತು ಪ್ರಾಸತೊರೆದೊರೆಯುತಲಿ ಹೊಸತೊಂದು ದಾರಿತೋರ್ದೆ !
ನಿನ್ನ "ಹೆಬ್ಬೆರಳು" "ಗಿಳಿವಿಂಡು" "ಉಮರನ ಒಸಗೆ"
ಚೆನ್ನಗಿಹ "ವೈಶಾಖಿ" "ಗೊಲ್ಗೊಥಾ" "ತುಳುನಾಡು"
ಇನ್ನು "ಭಗವಾನ್ ಬುದ್ಧ" ಮೊದಲಾದ ಕಾವ್ಯಗಳು ಸಾರುತಿವೆ ತವಶಕ್ತಿಯ ! !

ನೀನೆ ಬೆಳಗಿದ ತೈಲವೆರೆದ "ನಂದಾದೀಪ"
ಜೇನಿನೊಲು "ಗುಮ್ಮಟ"ವು "ಪಾರ್ತಿಸುಬ್ಬನ" ಚರಿತೆ
ಕಾಣಲಿಹ ಚೆಲುವಾದ "ನಮ್ಮ ಹಿರಿಯರು" "ಚಿತ್ರಭಾನು" "ಗೊಮ್ಮಟ ಜಿನಸ್ತುತಿ"!
ಜಾಣಗಂಭೀರ ತವಭಾಷೆ ರಸಗಂಗೆಯೊಲು
ಕಾಣಭಾವನೆ ಹರಿವು; ಸತ್ಯಪ್ರಭೆರವಿಯೋಲು
ಗಾನ ನಿನ್ನದು ವರದೆ ತಾನೆ ವೀಣೆಯ ಮಿಡಿದ ರಸಮಧುರಮೃದುಗಾಯನ!

ಇರಲಿ ನಿನಗೆಲ್ಲಕ್ಕು ಭವ್ಯ ಚಿರಮಹ ಲೋಕ
ಬರಲಿ ನಿನ್ನರಕೆಯಿಂ ಭವ್ಯಚಿರಮಹಲೋಕ
ತರಲಿ ಭಾರತಿ ಕನ್ನಡಾಂಬಿಕೆಗೆ ಸಂತೋಷಧೂಪ ಚಿರಮಹದಿನವನು!!
ವರಶುಕ್ರವಾರದಿನ ತದಿಗೆ ಸಿಂಹಾಮಾಸ
ತೆರಳಿದೆಯ ಶಕವರ್ಷ ಹದಿನೆಂಟು ನೂರಿನಾ
ಬರದ ಎಂಬತ್ತೈದು ಕೃಷ್ಣಪಕ್ಷದ ಬೆಳಗು ದೇವ್ಯಂತರಂಗದೊಳಗೆ॥

ಶ್ರೀ ಎಂ. ವಾಸುದೇವ ಜೋಯ್ಸಿ.

# ಅಗಲಿದ ಕಾವ್ಯರ್ಷಿಗೆ—

ಕನ್ನಡದ ಕಾವ್ಯವನ ವನ್ನಗಲಿ ತೆರಳಿದನು
ಬಹುಕಾಲ ತಪಗೈದ ಕಾವ್ಯ ಋಷಿಯು ॥
ಸಾಹಿತ್ಯ ಸಂಶೋದನೆಗಳೆಂಬ ಮಂತ್ರವನೆ
ಕೆಚ್ಚೆದೆಯೊಳುಲಿದಿದ್ದ ಪೂಜ್ಯ ಮುನಿಯು ॥ ೧

ಸಾಹಿತ್ಯ ಜ್ಞಾನ ತೃಷೆಯಿಂ ದಣಿದು ಮರೆಹೊಕ್ಕ
ಪಕ್ಷಿ ಸಂತತಿಗಿತ್ತ ನಾಶ್ರಯವನು ॥
ಸಾದರಾತಿಥ್ಯದಲಿ ಸರಳತೆಯ ಸೊಬಗಿನಲಿ
ಸಹೃದಯ ತಾನಾಗಿ ಮೆರೆದಿರ್ದನು ॥ ೨

"ಗಿಳಿವಿಂಡ" ನುಡಿಸಿದನು "ಹೆಬ್ಬೆರಳ" ಕೊಯಿಸಿದನು
"ವೈಶಾಖಿ" "ಗೊಲ್ಗೊಥ"ದಿ ನಮ್ಮನಳಲಿಸಿದ ॥
ಕಠಿಣ ಶಿಲೆಗಳಲೆನಿತೊ ಕೊರಗಿ ಕೊಂಡಿರುತಿರ್ಪ
ಅವ್ಯಕ್ತ ಶಾಸನವ ನುಡಿಸಿ ಬೆಳಗಿಸಿದ ॥ ೩

ಗ್ರಂಥ ವಟು ನಿವಹದಿಂ ಲೇಖನಿಯ ದರ್ಭೆಯಲಿ
ಗದ್ಯ, ಪದ್ಯ, ವಿಮರ್ಶೆಯೆನಿತೊಯಾಗವನು ॥
ಕೈ ನಡುಗುತಿದ್ದರೂ ಕಡೆತನಕ ಕೈಗೊಂಡ
ಕರ್ಮಯತಿ, ಕಾವ್ಯಋಷಿ ಆದರ್ಶನವನು ! ೪

ಶ್ರೀ ಭಾಸ್ಕರ ಭಂಡಾರಿ, ಮಂಜೇಶ್ವರ.

# ಓ ಹಿರಿಯ ರಾಷ್ಟ್ರಕವಿ

ಕನ್ನಡದ ಸಂಸ್ಕೃತಿಯ ಇನ್ನೊಮ್ಮೆ ಮುನ್ನಡೆಸೆ—
ಬದ್ಧ ಕಂಕಣನಾದೆಯಾ?
ಭರತೇಶ ವೈಭವವ, ರಾಮಾಶ್ವಮೇಧವನೆ ಗೆಯ್ದು—
ಕವಿಗಳ ನಾಡಾ ಮತ್ತೊಮ್ಮೆ ಬೆಳಗಿಸಿದೆಯಾ?
ಕಾವ್ಯದಲಿ ಹೊಸರೀತಿ, ನೀತಿಗಳು ಬೇಕೆಂದು—
ಜನಕೆಲ್ಲಾ ಹೊಸದಾರಿ ತೋರಿದೆಯಾ?
ಆದರ್ಶ ಭಾರತದ ಆದರ್ಶ ಪುತ್ರರಲಿ ಇರತಕ್ಕ—
ಗುಣಗಳನು ನೀ ಮರೆದೆಯಾ?
ಗುಣವರ್ಯ ನಿನ್ನ ನುಡಿ ಮರೆತ ದಿನ ಭಾರತದ ಹಿರಿಮೆ
ಸಡಿಲುಪುದೆಂದರೆ ನೀನೊಪ್ಪೆಯಾ?
"ರಾಷ್ಟ್ರದುನ್ನತಿಯ ಸಾಧಿಸೆ ಶ್ರಮಿಸದವ ಹೊಲೆಯ
ರಾಷ್ಟ್ರಭಕ್ತಿಯ ಲೇಶವಿಲ್ಲದವ ಹೊಲೆಯ"
ಎಂದು ಬೋಧಿಸಿ ಇಂದೆಮಗೆ ರಾಷ್ಟ್ರಕವಿಯಾದೆಯಾ?
"ಹಿಂದು ಮುಸ್ಲೀಮ ಕ್ರೈಸ್ತರಾವೊಂದೇ ಭಾಂಧವರೆಮ್ಮ
ತಂದೆ ದೇವರೊಬ್ಬನೆ ನೀನೊಬ್ಬಳೆ (ತೌಳವ ಮಾತೆ) ನಮ್ಮೆಲ್ಲರ ತಾಯಮ್ಮಾ"
ಇಂತೆಂದು ತಿರೆಗೆಲ್ಲಾ ಸಾರಿ ಹೇಳುತ ದೂರ ಮಾಡಿದೆಯಾ ಜಾತಿ ಭೇದ?
"ಗೊಲ್ಗೊಥ"ವ ಬರೆದು ನೀ ಕ್ರೈಸ್ತನಾದರೆ ಮತ್ತೆ—
"ವೈಶಾಖಿ"ಯನು ಬರೆದು ಬೌದ್ಧನಾದೆ
'ಗಿಳಿವಿಂಡ' ಗಿಳಿಯಾಗಿ, ಕಾವ್ಯರಾಶಿಯ ಹೊನ್ನ
ತೆನೆಗಳನು ನೀನಾಯ್ದು ಕನ್ನಡಮ್ಮನ ಪಾದಕರ್ಪಿಸಿರುವೆ
"ಕತ್ತಿ ಕಿರಿದಾದೊಡಂ ಕಡಿವ ಸಾಹಸ ಹಿರಿದು—
ಕಣ್ಣು ಕಿರಿದಾದೊಡಂ ಕಾಣಿಕೆಯು ಹೊಲ ಹಿರಿದು"
ಎಂದು 'ಹೆಬ್ಬೆರಳಿಂದ' ಹೇಳಿಸಿರುವೆ
"ಮನಸೆ ಮುಖ್ಯ ಗುರು ನಿಮಿತ್ತ ಮಾತ್ರಂ—
ಕಲಿಪ ಮನಸುಂಟೆ ಸಾಕು—ಕಲಿಪುದು
ಮಣ್ಣಿನ ಗೊಂಬೆ"
ಎಂದೆಮ್ಮ ಸ್ಮಾರ್ತರ ಎಚ್ಚರಿಸಿರುವೆ
ಕವಿವರ್ಯ, ನಮ್ಮವನು ಪ್ರೋತ್ಸಾಹಿಸಲ್ಕೆ ನೀ—
ನಾಗಾಗ ನೆರವಿತ್ತು ಪೊರೆಯ ಬೇಕು
ಯೋಗ್ಯ ಸಂದೇಶಗಳ ನೀಡ ಬೇಕು
ನೀಡಿ ನಿನ್ನೊಲವ "ಸರಸತಿ"ಗೆ ಮುಡಿಸ ಬೇಕು
ರಾಷ್ಟ್ರಕವಿ—ಹಲಕಾಲ ಬಾಳಲೆಂದು
ಆಯುರಾರೋಗ್ಯಗಳ ನೀಡಲೆಂದು
ಭಗವಂತನಲಿ ದಿನವು ಪ್ರಾರ್ಥಿಸುವೆವು—
ಇನಿತು ಈ ಮಾನಪತ್ರವ ನಿನಗರ್ಪಿಸುವೆವು

ಶ್ರೀ ಸರಸ್ವತಿ ಸೇವಾ ಸಂಘ, ಮೂಡಬಿದ್ರೆ.
೧—೧೦—೧೯೪೯.

# ಮಹಾಕವಿ ಬಿರುದಾಂಕಿತ ಶ್ರೀ ಗೋವಿಂದ ಪೈ ಅವರಿಗೆ

ಶ್ರೀ ಮಹಾಮಹಿವೋನ್ನತಾಗರ ಕನ್ನಡಾಂಬೆಯ ಗರ್ಭದಿ
ಪ್ರೇಮ ಕಾರುಣ್ಯವಾಹಿನಿ ಸೂಸುವುದು ಸಾಹಿತ್ಯದಿ ॥
ಸೋಮರವಿ ಸಂತತಿಗೆ ಆಶ್ರಯವಿತ್ತ ಕನ್ನಡ ನಾಡಲಿ
ಆ ಮಹಾಕವಿ ಗೋವಿಂದ ಪೈ ಉದ್ಭವಿಸಿದನು ಮಂಜೇಶ್ವರದಲಿ

ಕಾಶೀ ಹಿಂದೂ ವಿಶ್ವವಿದ್ಯಾಲಯದ ಕನ್ನಡ ಕುವರರು
ಈ ಸುದಿನದೊಳು ಕಡಲ ತೀರದ ಕನ್ನಡಣುಗನ ಮೇಲ್ಮೆಗೆ
ತೋಷಿಪರು ಮತ್ತಾಶಿಪರು ನಾಡಿನ ಹೆಮ್ಮೆಯಾಗಿಹ ಬಿರುದನು
ಆ 'ಮಹಾಕವಿ' ಎಂಬ ಗೌರವ ಪಡೆದ ನಿಜ ರಸ ಋಷಿಯನು

ದಾಸ್ಯ ಸಂಕಟದಿಂದ ಮುಕ್ತಿಯ ಹೊಂದಿ ನಿಂತಿಹ ಜನತೆಗೆ
ಐಹಿಕಾಮುಷ್ಮಿಕದಲುನ್ನತಿಗೈದ ಕವನವ ನೀ ಬಗೆ
ಪಂದಂ ವಿಜ್ಞಾನವನು ಬಿತ್ತು ತಣಿಪುದೈ ಪರಂಜ್ಯೋತಿಗೆ
ಸಿದ್ಧಪುರುಷನು ನಿತ್ಯವೀರನು ಆ ಮಹಾಕವಿಗೊಸಗೆಯಂ

ಕರ್ನಾಟಕ ಸಂಘ, ಹಿಂದೂ ವಿಶ್ವವಿದ್ಯಾಲಯ, ಕಾಶಿ.
೨೯—೧—೧೯೫೦.



# ರಾಷ್ಟ್ರಕವಿ ಶ್ರೀ ಗೋವಿಂದ ಪೈ

**ಶ್ರೀ ರಂಗನಾಥ ದಿವಾಕರ**

ಅದು ಇಸವಿ ಸನ್ 1923 ಇರಲಿಕ್ಕೆ ಸಾಕು. ನಾನು ಮಂಗಳೂರಿಗೆ ರಾಜಕೀಯ ಚಳವಳಿಗಾಗಿ ಹೋಗಿದ್ದೆ. ಆಗಲೆ ಶ್ರೀ ಪೈ ಅವರು ನನಗೆ ಪ್ರಥಮ ಭೆಟ್ಟಿಯಾದದ್ದು. ಒಳ್ಳೆ ತುಂಬು ತಾರುಣ್ಯ. ಆದರೆ ತಾರುಣ್ಯಕ್ಕಿಂತ ಉಕ್ಕಿ ಹೊರಚೆಲ್ಲುತ್ತಿರುವ ಉತ್ಸಾಹ. ಅದರೊಡನೆ ಹೊರಗೆ ತೋರಿಬರದ ಆಳವಾದ ಆಶೋತ್ತರಗಳು. ಅವರೂ ಒಬ್ಬರು ಗಾಂಧೀ ಹುಚ್ಚು ಹಿಡಿದವರೇ. ಸಮಯಾವಕಾಶ ಇಲ್ಲದಿದ್ದರೂ ಅವರು ನನ್ನನ್ನು ಹಠಾತ್ತಾಗಿ ಮಂಜೇಶ್ವರಕ್ಕೆ ಎಳೆದೊಯ್ದರು. ಹೃದಯದ ಪರಸ್ಪರ ಆಕರ್ಷಣ ನಾನು ಹೋಗಲು ಕಾರಣ. ರಾಜಕಾರಣವನ್ನು ನನ್ನ ಕ್ಷೇತ್ರವನ್ನಾಗಿಸಿಕೊಂಡು ನಾನು ಆಗ ಕರ್ನಾಟಕದಲ್ಲೆಲ್ಲ ಸುತ್ತಾಡುತ್ತಿದ್ದರೂ ಅದು ನನ್ನ ಏಕಮೇವ ಪ್ರೀತಿಯ ವಿಷಯವಾಗಿರಲಿಲ್ಲ. ಆದುದರಿಂದ ಗೋವಿಂದ ಪೈ ಅವರು ನನ್ನನ್ನು ತಮ್ಮ ತಪೋಭೂಮಿಗೆ ಕರೆದೊಯ್ದುದು ನನಗೆ ಇಷ್ಟಾಪತ್ತಿಯಾಗಿಯೇ ಪರಿಣಮಿಸಿತು.

ಅವರ ಮನೆಗೆಯೇ ನಾನು ತಪೋಭೂಮಿ ಎಂದಿದ್ದೇನೆ. ಯಾಕೆಂದರೆ ಅದರಲ್ಲಿ ಮನೆಯ ಲಕ್ಷಣಗಳಿಗಿಂತ ಅವರ ಪ್ರೀತಿಯ ವ್ಯವಸಾಯವಾದ ಸಂಶೋಧನೆಯ ಸಾಧನಗಳೇ ಹೇರಳವಾಗಿ ಹರಡಿದ್ದುವು. ಅವರ ಮಾತಿನಲ್ಲಿಯೂ ನವಸಂಶೋಧನೆಗಳ ಹುಮ್ಮಸವೇ ಹೆಚ್ಚಾಗಿತ್ತು. ಗೃಹಸ್ಥಿಕೆಯ ಆತಿಥ್ಯದ ಕುರುಹು ಆದ ಬಾಯಾರಿಕೆಯೊಡನೆ ಅವರು ನನಗೆ ವಿವಿಧ ವಿಷಯಗಳ ಬಗ್ಗೆ ಇದ್ದ ತಮ್ಮ ಅಗಾಧ ಜ್ಞಾನವನ್ನು ನೀಡಿದರು. ನಾನು ಎರಡೂ ಕಡೆಗೆ ಸಮನಾದ ಲಕ್ಷ್ಯವನ್ನೂ ಕೊಡುವದು ಸಾಧ್ಯವಿರಲಿಲ್ಲ; ಆದುದರಿಂದ ತಿನ್ನುಣ್ಣುವುದಕ್ಕಿಂತ ಅವರ ಮಾತಿನ ಕಡೆಗೆಯೇ ಹೆಚ್ಚು ಗಮನಕೊಟ್ಟದ್ದು ಸ್ವಾಭಾವಿಕ.

ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು, ಎಂಬುದೊಂದು ನಾಣ್ನುಡಿ. ಅದು ಅವರಿಗೆ ಪೂರ್ಣ ಅನ್ವಯಿಸುತಿತ್ತು. ಆ ಚಿಕ್ಕ ಮೂರ್ತಿಯಲ್ಲಿ ಹಲವಾರು ಶಕ್ತಿಗಳು ಹುದುಗಿಕೊಂಡಿದ್ದುವು. ಅವು, ನಾಮುಂದೆ, ನೀಮುಂದೆ, ಎನ್ನುತ್ತ ಆಗಾಗ ಹೊರಹೊಮ್ಮುತ್ತಿದ್ದುವು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸಂಶೋಧಕ ಬುದ್ಧಿ, ಆಳವಾದ ವಿಚಾರ ಶಕ್ತಿ, ಸಾಹಿತ್ಯ ಶಕ್ತಿ, ಕವನ ಕಟ್ಟುವ ಪ್ರತಿಭೆ, ಅಪಾರವಾದ ಗಾಂಧೀ-ಭಕ್ತಿ ಇವೆಲ್ಲ ಅವರಲ್ಲಿ ತುಂಬಿಕೊಂಡಿದ್ದುವು. ಅನುಕೂಲತೆ, ಅವಕಾಶ, ಉಪಕರಣ ಇವು ದೊರೆತಂತೆ ಆಯಾ ಶಕ್ತಿಗಳು ಪರಿಪಕ್ವವಾಗಿ ರೂಪತಾಳಿ ಆವಿರ್ಭವಿಸುತ್ತಿದ್ದುವು. ಆಯಾ ಕಾಲಕ್ಕೆ ಆಯಾ ವಿಷಯಗಳಲ್ಲಿ ಅವರು ಅತ್ಯಂತ ತನ್ಮಯರಾಗಿರುತ್ತಿದ್ದರು. ಇದು ಅವರ ವೈಶಿಷ್ಟ್ಯವೆಂದರೂ ಸಲ್ಲುವದು.

ಅವರ ಸಾಹಿತ್ಯ ಪ್ರಪಂಚವು ವಿವಿಧವಾದುದು. ಆದರೆ ಅವರ ಸಾಹಿತ್ಯದ ಪ್ರತಿರೂಪದಲ್ಲಿಯೂ ವಿಚಾರ, ಆಳ, ನಾವಿನ್ಯ, ಅದಮ್ಯವಾದ ಓಘ ಇವು ಮುಖ್ಯವಾದ ಲಕ್ಷಣಗಳಾಗಿವೆ. ರಚನೆಯ ಬಿಗುವು, ಅರ್ಥಗೌರವ ಇವು ಅವರಲ್ಲಿ ಸ್ವಾಭಾವಿಕವಾಗಿದ್ದುವು. ಶಬ್ದಗಳು ಅವರ ವಿಚಾರ ಗಾಂಭೀರ್ಯವನ್ನು ಪೂರ್ಣವಾಗಿ ವ್ಯಕ್ತಮಾಡಲಾರವೋ ಏನೋ ಎಂಬಂತೆ ಅನೇಕ ಸಾರಿ ಭಾಸವಾಗುವದು. ಅವರ ಯಾವದೇ ಲೇಖನಗಳನ್ನು ನೋಡಿದರೂ ಅರ್ಥಕ್ಕೆ ಮಹತ್ವ ಹೊರತು ಶಬ್ದಕ್ಕಿಲ್ಲ. ವ್ಯಕ್ತಮಾಡಲಾದ ಭಾವಕ್ಕಿಂತ ಅವ್ಯಕ್ತವಾದ ಭಾವ, ಅರ್ಥ, ಆಳ ಇನ್ನೂ ಎಷ್ಟಿದೆಯೋ ಏನೋ ಎಂಬ ಸಂಶಯ ವಾಚಕನ ಮನಸ್ಸಿನಲ್ಲಿ ಉಂಟಾಗುವಂತೆ ಅವರ ಸಾಹಿತ್ಯ ನಿರ್ಮಿತಿ ಇರುವದು.

ಐತಿಹಾಸಿಕ ಸಂಶೋಧನೆ ಇದು ಅವರ ಬಹಳ ಪ್ರೀತಿಯ ವಿಷಯ ಎಂಬುದೇನೋ ನಿಜ. ಆದರೆ ತತ್ವಾನ್ವೇಷಣೆ ಕೂಡ ಅವರಿಗೆ ಅಷ್ಟೇ ಪ್ರಿಯವಾದುದು. ಗಾಂಧೀ, ಬುದ್ಧ, ಕ್ರೈಸ್ತ ಇವರ ಮಹತ್ತರವಾದ ವ್ಯಕ್ತಿತ್ವ, ಅದೇ ರೀತಿ. ಅವರ ಮಹಾಕಾರ್ಯ ಹಾಗೂ ಮಹೋಪದೇಶ, ಇವು ಯಾವಾಗಲೂ ಅವರ ವಿಚಾರ ವೇದಿಕೆಯ ಮೇಲೆ ಸ್ಥಾನಾಪನ್ನವಾಗಿರುತ್ತಿದ್ದುವು. ವೈಶಾಖಿ ಗೊಲ್ಗೊಥಾ ಮುಂತಾದ ಅವರ ರಚನೆಗಳು ಈ ಮಾತಿಗೆ ಸಾಕ್ಷಿ.

ಅವರ ವ್ಯಕ್ತಿತ್ವ ಮಹಾಸಾಗರದಲ್ಲಿ ತೇಲುತ್ತ ಹೋಗುವ ಮಂಜುಪರ್ವತದಂತೆ (ಆಯಿಸ್‌ಬರ್ಗ್) ಮೇಲೆ ಕಾಣುವದು ಒಂದು ಪಾಲು, ಕೆಳಗೆ ಇದ್ದುದು ಅದರ ಏಳುಪಾಲು ! ಅವರಿಗೆ ಸಾಕಷ್ಟು ಅವಕಾಶ, ಅನುಕೂಲತೆ ಇದ್ದರೆ ಅವರು ಯಾವ ಅವ್ಯಕ್ತ ಅಂಶಗಳನ್ನು ಬೆಳಕಿಗೆ ತರುತ್ತಿದ್ದರೋ, ಯಾವ ಅಮೋಘ ಕಾವ್ಯಗಳನ್ನು ಬರೆಯುತ್ತಿದ್ದರೋ ಎಂಬುದು ಈಗ ಕೇವಲ ಕಲ್ಪನೆಯ ವಿಷಯ. ಅಂಥವರಿಗೆ ಬ್ರಿಟಿಷ್ ಮ್ಯುಜಿಯಂ ಅಥವಾ ಕಾಂಗ್ರೆಸ್ ಲಾಯಬ್ರರಿಯಲ್ಲಿ ಸಾಕಷ್ಟು ಕಾಲ ಕಳೆಯಲು ಅವಕಾಶವಿರಬೇಕು. ಪ್ರತಿ ನಿತ್ಯದ ಜೀವನ ಕಲಹದಿಂದ ಅವರು ಮುಕ್ತರಿರಬೇಕು. ಅಂದರೆ ಮಾತ್ರ ಅವರ ಶಕ್ತಿವಿಕಾಸವು ಅನಿರ್ಬಂಧವಾಗಿ ಸಾಗಿ ಸಮಾಜಕ್ಕೆ ಉಪಕಾರಕವಾಗಬಲ್ಲುದು; ಅವರ ವಾಕ್‌ಗಂಗೆ ನಿರರ್ಗಳವಾಗಿ ಹರಿದು ಜ್ಞಾನ ಪ್ರಸಾರಕ್ಕೆ ಸಾಧಕವಾಗಬಲ್ಲುದು. ಇಲ್ಲದೆ ಹೋದರೆ ಅಂಥ ಮಹನೀಯರ ಹೃದಯದಲ್ಲಿರುವ ಸುಪ್ತ ಸರಸ್ವತಿ ಎಚ್ಚರಾಗದೆ ಇರಬಹುದು. ಒಂದೊಪ್ಪತ್ತು ಎಚ್ಚರಾದರೂ ಕೊರಳಲ್ಲಿ ಗುದ್ದೀಕಟ್ಟಿದ ಹಸುವಿನಂತೆ, ತಡವರಿಸುತ್ತ ಹೋಗುವ ಪರ್ವತ ಪ್ರವಾಹದಂತೆ, ಮೋಡದಿಂದ ಮುಸುಕಿದ ಚಂದ್ರಮನಂತೆ ಕುಗ್ಗುತ್ತ ಮುಗ್ಗುತ್ತ, ತನ್ನ ತೇಜಾಂಶವನ್ನು ಅಲ್ಪಮಟ್ಟಿಗೆ ಮಾತ್ರ ಇಣುಕಿ ತೋರಿಸುವಳು, ಅಷ್ಟೇ.

ಇನ್ನೊಂದು ಮಾತು. ಪ್ರತಿಭಾಶಾಲಿ ಪೈ ಅವರ ಲೇಖ ಸಂಗ್ರಹವನ್ನೆಲ್ಲ ಒತ್ತಟ್ಟಿಗೆ ಕಲೆಹಾಕಿ ಅವುಗಳನ್ನು ಚೆನ್ನಾಗಿ ಸಂಪಾದಿಸಿ ವಿವೇಚಕ ಟಿಪ್ಪಣಿಗಳೊಡನೆ ಪ್ರಕಟಿಸುವದು ಅತ್ಯಂತ ಆವಶ್ಯಕವಿರುವದು. ಈ ಹೊತ್ತಲ್ಲ ನಾಳೆ ಕನ್ನಡವು ನಮ್ಮ ವಿಶ್ವವಿದ್ಯಾಲಯಗಳ

ಬೋಧ ಭಾಷೆ (ಸಾಂಸ್ಕೃತಿಕ ವಿಷಯಗಳ ಬಗ್ಗೆ) ಆಗೇ ತೀರಬೇಕಾಗುವದು. ಆಗ ಪೈಯವರಂಥ ಉದ್ದಾಮ ಲೇಖಕರ ಗ್ರಂಥಗಳು ಅಭ್ಯಾಸಾರ್ಹ ಆಗದೆ ಇರಲಾರವು. ಆದುದರಿಂದ ಇದೊಂದು ದೊಡ್ಡ ಹೊಣೆಯು ಕರ್ನಾಟಕದ ಮೇಲಿದೆ ಎಂಬುದನ್ನು ನೆನಪಿನಲ್ಲಿಟ್ಟು ಆ ಬಗ್ಗೆ ಕೂಡಲೇ ಕ್ರಮಗಳನ್ನು ಕೈಕೊಳ್ಳುವದು ಅತ್ಯವಶ್ಯವು.



# ಹಿರಿಯ ವ್ಯಕ್ತಿ

ಡಾ। ಶಿವರಾಮ ಕಾರಂತ

ಸುಮಾರು ಹದಿನೈದು ವರ್ಷಗಳಿಗೆ ಅವರು ನನಗಿಂತಲೂ ದೊಡ್ಡವರು. ನನಗಿಂತ ಹಿರಿಯರಾದ ಕೆಲವು ಸಾಹಿತಿಗಳ ನಿಕಟ ಪರಿಚಯ ನನಗಿದೆಯಾದರೂ, ಎಲ್ಲರನ್ನೂ ನಾನು ಅಷ್ಟೊಂದು ಆತ್ಮೀಯ ಭಾವದಿಂದ ಕಂಡವನಲ್ಲ; ಕಾಣುವುದು ಸಾಧ್ಯವೂ ಅಲ್ಲ. ಒಬ್ಬೊಬ್ಬರಿಗೆ ಒಬ್ಬೊಬ್ಬರು ಮೆಚ್ಚು; ಎಲ್ಲರೂ ಅಷ್ಟೇ ಮೆಚ್ಚಿಗೆ ಪಾತ್ರರಾಗಲಾರರು. ನನ್ನ ಮೆಚ್ಚಿನ ಹಿರಿಯರು ಅನೇಕರಿದ್ದಾರೆ. ಅವರೆಲ್ಲರೂ ಸಾಹಿತಿಗಳೆಂದು ತಿಳಿಯಲೂ ಬೇಕಿಲ್ಲ. ನಾನು "ಸಾಹಿತಿ"ಗಳ ಜಾತಿಯೇ ಪ್ರತ್ಯೇಕ ಎಂದು ತಿಳಿದವನೂ ಅಲ್ಲ. ಅಷ್ಟೇ ಅಲ್ಲ, ಒಬ್ಬಾತ ವಿದ್ವಾಂಸನಾದ ಮಾತ್ರದಿಂದಲೇ ನನ್ನ ಅಭಿಮಾನಕ್ಕೆ ಕಾರಣನೆನಿಸುವಂತೆಯೂ ಇಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುವ ವ್ಯಕ್ತಿಗಳ ಪರಿಚಯ ನನಗೆ ತುಸು ಹೆಚ್ಚಿಗಿರಬಹುದಾದರೂ ನನ್ನ ಸ್ನೇಹದ ಬಳಗ ಅದಕ್ಕೆ ಸೀಮಿತವಾಗಿಯೂ ಇಲ್ಲ. ಮೊದಲು ನನ್ನ ಮನ್ನಣೆ ನನಗೆ ಮನುಷ್ಯರೆನಿಸಿ ಕಂಡವರ ಮೇಲೆ. ಒಳ್ಳೆಯ ವ್ಯಕ್ತಿಯೆಂದು ಒಬ್ಬಾತ ಅನಿಸಿ, ಅದಕ್ಕೆ ಉಳಿದ ವಿದ್ವತ್ತೋ, ಸಂಪತ್ತೋ ಕೂಡಿದಾಗ ಮಾತ್ರ ಇನ್ನಷ್ಟು ಹೆಚ್ಚಿನ ಬೆಲೆ ಬರುತ್ತದೆ. ಅಂಥವರ ಬಳಿಯಲ್ಲಿದ್ದರೆ ಮನಸ್ಸಿಗೆ ಆನಂದವಾಗುತ್ತದೆ; ಹಿತವೆನಿಸುತ್ತದೆ. ಆ ರೀತಿಯಲ್ಲಿ, ನನಗಿಂತಲೂ ಹಿರಿಯರೆನಿಸಿ, ನನ್ನ ಬದುಕಿಗೆ ತಮ್ಮ ಹಿರಿತನದಿಂದ ಸಂತೋಷ ಕೊಟ್ಟ ವ್ಯಕ್ತಿಗಳು ಶ್ರೀ ಗೋವಿಂದ ಪೈಗಳವರು. ನಮ್ಮ ಗೆಳೆತನ ದೀರ್ಘ ಕಾಲದಿಂದ ಬೆಳೆದು ಬಂದದ್ದು; ಉಳಿದು ಬಂದದ್ದು.

ಆ ದೀರ್ಘ ಕಾಲದ ನೆನಪಿನ ಚೀಲದಿಂದ, ಉದ್ದೇಶಪಟ್ಟೇ ಕೆಲವು ಸಂಗತಿಗಳನ್ನು ಸ್ಮರಿಸಲು ಪ್ರಯತ್ನಿಸುತ್ತಿದ್ದೇನೆ; ಆ ನೆನಪುಗಳೆಲ್ಲವೂ ಅಷ್ಟೊಂದು "ಅಮೂಲ್ಯ" ಎಂದು ಸಾರಲು ನಾನು ಹೊರಟಿಲ್ಲ. ಅವರ ಬಳಿಗೆ ಹೋದಾಗ, ನನ್ನೊಡನೆ ಮಾತನಾಡದೆ ಇತರ ಗೆಳೆಯರೊಡನೆ ಉತ್ಸಾಹವಾಗಿ ಚರ್ಚಿಸುತ್ತ ಕುಳಿತುದನ್ನು ನಾನು ಮೌನದಿಂದ ನೋಡಿದ ಗಳಿಗೆಗಳೂ ಎಷ್ಟೋ ಇವೆ. ಅಂಥ ಸಂದರ್ಭಗಳು ಅವರನ್ನು ಕಾಣಲು ಅವಕಾಶವೊದಗಿಸಿದ ಗಳಿಗೆಗಳೇ. ಅಂಥ ಅನೇಕ ಗಳಿಗೆಗಳ ದೆಸೆಯಿಂದಾಗಿಯೇ ಅವರು ನನಗೆ ಪ್ರಿಯರಾಗಿ ಬಂದಿದ್ದಾರೆ. ಅವರ ಆ ಬೆಳೆದ ಶರೀರದಲ್ಲಿ, ಎಳೆ ಮಗುವಿನ ಮನಸ್ಸು ತುಂಬಿದೆಯಲ್ಲ–ಎಂಬ ಆಶ್ಚರ್ಯಮಯ ಆನಂದ ನನಗೆ ಅವರನ್ನು ಕಂಡಾಗಲೆಲ್ಲ ಮೂಡುತ್ತಿತ್ತು. ಅವರ ವಿದ್ವತ್ತಿನ ಕ್ಷೇತ್ರ ದೊಡ್ಡದು; ವ್ಯವಸಾಯ ದೊಡ್ಡದು. ಅವೂ ನನ್ನನ್ನು ವಿಸ್ಮಯಕ್ಕೆ ಗುರಿಮಾಡಿವೆ. ನನ್ನ ಊರಿಗೆ ಯಾರಾದರೂ ಬಂದರೆ, ಅವರಲ್ಲಿಯ ಅಪೂರ್ವಗುಣಗಳನ್ನು ನಾನು ಮೆಚ್ಚಿದ್ದೆನಾದರೆ, ಆಗ ಅಂಥ ಅತಿಥಿಗಳನ್ನು ಹೇಗಾದರೂ ಮಾಡಿ ಶ್ರೀ ಪೈಗಳವರ ಮನೆಯ ತನಕವೂ ಕರೆದೊಯ್ದು, ಈ ವ್ಯಕ್ತಿ ನಮ್ಮ ನಾಡಿನ ಹೆಮ್ಮೆಗೆ ಪಾತ್ರರಾಗಲು ಅರ್ಹರು-ಎಂದು ತೋರಿಸಿ ಬಂದುದೂ ಉಂಟು.

ಒಮ್ಮೆ ಅವರನ್ನು ತೋರಿಸುವ ನೆಪದಿಂದ ಮಂಜೇಶ್ವರಕ್ಕೆ ದಿವಂಗತ ಡಾ॥ ಆರ್ನಾಲ್ಡ ಬಾಕೆಯವರನ್ನು ಕರೆದೊಯ್ದಿದ್ದೆ. ಅವರ ಸಮ್ಮುಖದಲ್ಲಿ "ಜೋಗಿಯವು ಜೋಗಿ ಬೈರವು ಜೋಗಿ" ಎಂಬ ಒಂದು ಹಾಡನ್ನು ಒಬ್ಬಳು ಮುದುಕಿ ಹಾಡಿದ್ದಳು ! ಆ ನೆನಪು ಅಲ್ಲಿಂದ ಹಿಂದಕ್ಕೆ ಹೋಗಬೇಕಾಯಿತು. "ಇದು ಯಾವ ಜೋಗಿ? ಬೈರವು ಜೋಗಿ ಎಂದರೆ?" ಎಂದು ತಿಳಿಯಲು "ನಾಥ ಸಂಪ್ರದಾಯವನ್ನು ನಮ್ಮ ಜಿಲ್ಲೆಯಲ್ಲಿ ಬೆಳೆಯಿಸಿದ, ಜೋಗಿಮಠಕ್ಕೆ ಸೇರಿದ ಯಾವನೋ ಒಬ್ಬ ಜೋಗಿಯನ್ನು ಕುರಿತು ಆ ಹಾಡು ಹೇಳುತ್ತಿದೆ" ಎಂಬ ನೆನಪನ್ನು ಶ್ರೀ ಪೈಗಳವರು ಒದಗಿಸಿದರು.

ಇನ್ನೊಂದು ಪ್ರಸಂಗದಲ್ಲಿ, ನನ್ನ ಆಮಂತ್ರಣವನ್ನು ಮನ್ನಿಸಿ ಮಾನವಕುಲ ಶಾಸ್ತ್ರಜ್ಞರಾದ ಡಾ॥ ಹೈಮನ್ ಡಾರ್ಫ್ ಎಂಬವರು ನಮ್ಮೂರಿಗೆ ಬಂದಿದ್ದರು. ಅವರು "ಭಾರತಕ್ಕೆ ದ್ರಾವಿಡರು ಸಹ ಹೊರಗಿಂದಲೇ ಬಂದವರು; ಆರ್ಯರಿಗಿಂತಲೂ ಮುಂಚೆ. ಅವರು ಕೊಂಕಣ ತೀರಕ್ಕೆ ಗುಜರಾತಿನ ಕಡೆಯಿಂದ ಬಂದು, ಅನಂತರ ದಕ್ಷಿಣ ಭಾರತದೊಳಕ್ಕೆ ಕಾಲಿರಿಸಿರಬೇಕು" ಎಂದು ತಿಳಿಸಿದರು. ಆಗ ತಾನೆ ರತ್ನಾಗಿರಿ, ಕಾರವಾರ ಜಿಲ್ಲೆಗಳ ಮೂಲಕ ಹಾದು ಬಂದಿದ್ದ ಅವರ ಕಣ್ಣು, ಅಲ್ಲಿನ ಜನರ ಮೈಚಹರೆಗಳನ್ನು ಪರಿಶೀಲಿಸಿ, ಈ ತರ್ಕಕ್ಕೆ ಬೆಂಬಲ ಕೊಟ್ಟಿತ್ತು. ಆ ಪ್ರಶ್ನೆ ಬರುತ್ತಲೇ "ದ್ರಾವಿಡರು ಬಂದುದೆಂದು? ದ್ರಾವಿಡ ಭಾಷೆ ತೊಡಗಿದ್ದೆಂದು?" ಎಂಬ ಸಂಶಯಗಳು ನನಗೆ ಬಂದುವು. ಅದರ ನಿವೃತ್ತಿಗೇನೆ ನಾನು ಡಾ॥ ಹೈಮನಡಾರ್ಫರನ್ನು ಪ್ರೇರಿಸಿ, ಮಂಜೇಶ್ವರಕ್ಕೆ ಕರೆದೊಯ್ದು ಶ್ರೀ ಪೈಗಳವರ ಭೇಟಿಮಾಡಿಸಿದೆ. ಈ ವಿಷಯವಾದ ಚರ್ಚೆಯನ್ನು ಕೇಳುತ್ತ ಕುಳಿತೆ. ಶ್ರೀ ಪೈಗಳವರು ಅನೇಕ ಪ್ರಾಕ್ತನ ವಿಷಯಗಳಲ್ಲಿ ಆಸಕ್ತಿ, ಅನುಭವಗಳಿಂದ ತುಂಬಿದವರೆಂಬುದರಿಂದಲೇ, ನಾನು ಡಾ॥ ಹೈಮನ್‌ಡಾರ್ಫ್‌ರವರನ್ನು ಶ್ರೀ ಪೈಗಳವರಲ್ಲಿಗೆ ಒಯ್ದುದು.

ನಮ್ಮ ಉಭಯರಲ್ಲಿ ಗೆಳೆತನ ಬೆಳೆದ ರೀತಿ ತುಸು ವಿಚಿತ್ರವಾದದ್ದೇ. ನನಗೆ ತೀರ ಮೊದಲಿಗೆ ಅವರ ಗುರುತು. ನಾನೊಬ್ಬ ಪತ್ರಿಕಾ ಸಂಪಾದಕನಾಗಲು ಹಂಬಲಿಸಿದಾಗ ಉಂಟಾಯಿತು. "ವಸಂತ" ಎಂಬ ಪತ್ರಿಕೆಯನ್ನು ಹೊರಡಿಸಿ (1925ರಲ್ಲಿ) ಅದರ ನೆಪದಿಂದ ನಾನೇ ಅವರ ಮನೆಗೆ ಹೋಗಿದ್ದೆ. ಅವರಿಗೆ ನನ್ನ ಪರಿಚಯ ಮಾಡಿಕೊಟ್ಟು, ನಾನು ಬಂದ ಉದ್ದೇಶವನ್ನು ಕುರಿತು ಹೇಳಿದೆ. "ನನಗೆ ನಿಮ್ಮ ಕವನ ಬೇಕು; ನನಗೆ ಸಾಹಿತ್ಯ, ಕವನಗಳ ವಿಚಾರ ಏನೂ ತಿಳಿಯದು. ಪತ್ರಿಕೆಯಲ್ಲಿ ಗದ್ಯಲೇಖನಗಳ ಕೊನೆಗೆ ಖಾಲಿ ಬೀಳುವ ಪುಟಗಳನ್ನು ಕವನಗಳಿಂದ ತುಂಬಿಸಿದರೆ ಚೆನ್ನಾಗಿ ಕಾಣಿಸೀತು" ಎಂದಿದ್ದೆ. ಅಂಥ ಒಬ್ಬ ಯಾಚಕನ ಮನಸ್ಸನ್ನು ಕೂಡ ಅವರು ಸಂತೋಷದಿಂದ ತಣಿಸಿದರೆನ್ನುವಾಗ ಅವರ ಔದಾರ್ಯದ ನೆನಪನ್ನು ಮರೆಯುವಂತಿಲ್ಲ.

ಮುಂದೆ ನಾನು ಕೆಲವು ವರ್ಷಗಳ ಕಾಲ ಮಂಗಳೂರು ನಗರದಲ್ಲಿ ನೆಲೆಸಿದ್ದೆ; ಅನಂತರ ಪುತ್ತೂರಿಗೆ ಹೋಗಿ ಅಲ್ಲಿ ನೆಲೆಸಿದೆ. ಇವು ನನ್ನನ್ನು ಅವರ ಊರಿಗೆ ಸಮೀಪತಂದುವು. ಆಗ ವರ್ಷಕ್ಕೊಂದೆರಡು ಬಾರಿಯಾದರೂ ಅವರಿರುವ ಮಂಜೇಶ್ವರಕ್ಕೆ ಹೋಗಿಬರ ತೊಡಗಿದೆ. ಆ ಕಾಲಕ್ಕೆ ಅವರ ಕವನಗಳು ಹಲವಾರು ಪತ್ರಿಕೆಗಳಲ್ಲಿ ಬಂದೇ ಬರುತ್ತಿದ್ದುವು. ನನಗವು ಉಕ್ಕಿನ ಕಡಲೆಗಳು-ಎಂದೂ ಅನಿಸಿದ್ದುಂಟು. ಈ ನನ್ನ ದೃಷ್ಟಿ, ನಮ್ಮಲ್ಲಿ ಸ್ನೇಹಬೆಳೆಯಲು ಏನೇನೂ ಅಡಚಣೆಯನ್ನು ತರಲಿಲ್ಲ.

ಈ ಕಾಲದಲ್ಲಿ ನಾನು, ಈಗ ನೆಲೆಸಿರುವ ಪುತ್ತೂರಿನಲ್ಲಿ. ನನ್ನನ್ನು ಅಲ್ಲಿಗೆ ವಾಸ್ತವಿಕವಾಗಿ ಬರಮಾಡಿಕೊಂಡ ಮೊಳಹಳ್ಳಿ ಶಿವರಾಯರೆಂಬವರು ವಾಸವಾಗಿದ್ದುದರಿಂದ, ನನ್ನ ಅನೇಕ ಹುಚ್ಚಾಟಗಳಿಗೆ ವಿಶೇಷ ಅವಕಾಶ ದೊರೆಯುತ್ತಿತ್ತು. ಈ ಅವಧಿಯೊಳಗೆ ನನಗೆ ಇನ್ನೊಂದು ಸೌಕರ್ಯವೂ ಉಂಟಾಗಿತ್ತು. ಅಲ್ಪಕಾಲ ಜೀವಿಸಿದ ನನ್ನ "ವಸಂತ" ಮಾಸಪತ್ರಿಕೆಯ ಕೆಲಸ, ನನ್ನನ್ನು ಅಖಿಲ ಕರ್ನಾಟಕದಲ್ಲೆಲ್ಲ ತೊಳಲಾಡಿಸಿತ್ತು. ಅದರಿಂದ ಕನ್ನಡ ಭಾಷೆಯನ್ನು ಕುರಿತು ಅಭಿಮಾನವುಳ್ಳ ಹಲವು ಜನರ ಸಂಪರ್ಕ ನನಗೆ ಆಗಾಗ ಆಗುತ್ತಲೇ ಬಂದಿತ್ತು. ಆ ಪರಿಚಯವನ್ನು ನಾನು ಪುತ್ತೂರಿನಲ್ಲಿ ಪ್ರತಿವರ್ಷ ನಡೆಯಿಸುತ್ತಿದ್ದ ದಸರೆಯ ಉತ್ಸವಕ್ಕಾಗಿ ಬಳಸತೊಡಗಿದೆ. ಆ ಉತ್ಸವ ಒಂದು ಸಾಂಸ್ಕೃತಿಕ ಉತ್ಸವದ ರೂಪ ತಾಳತೊಡಗಿತು. ಕನ್ನಡ ನಾಡಿನ ವಿವಿಧ ಭಾಗಗಳಿಂದ ವಿದ್ವಾಂಸರನ್ನು ಕರೆಯಿಸಿ, ಅವರ ಉಪನ್ಯಾಸಗಳನ್ನು ಏರ್ಪಡಿಸುವ ಅವಕಾಶವುಂಟಾಯಿತು.

ಅಂಥ ಉಪನ್ಯಾಸಗಳಿಗೆ ಒಮ್ಮೆ ಶ್ರೀ ಪೈಗಳವರನ್ನು "ಬನ್ನಿ" ಎಂದು ಆಮಂತ್ರಿಸಿದೆ. ಮೊದಲ ವರ್ಷವೇ ಅದು. ಅದಕ್ಕೆ ಅವರು ಬರೆದೊಂದು ಮಾತು ನನ್ನ ನೆನಪಿಗೆ ಬರುತ್ತದೆ- "ನಾನು ಉಪನ್ಯಾಸ ಮಾಡುವವನಲ್ಲ; ಏನಾದರೂ ಬರೆದು ತರುತ್ತೇನೆ; ಓದುತ್ತೇನೆ. ಆದರೆ ನನ್ನ ವಿಷಯಗಳು ಯಾರಿಗೂ ಬೇಡವಾದಾವು. ಯಾಕೆ ನನ್ನನ್ನು ಕರೆಯಿಸುತ್ತೀರಿ?" ಎಂದು ಕೇಳಿದ್ದರು. ನಾನು ಅವರಿಗೆ ನೇರಾಗಿ "ನೀವು ನಮಗೆ ಬೇಕಾಗಿದ್ದೀರಿ; ಬನ್ನಿ" ಎಂದಿದ್ದೆ. ಅವರಂತು ಬಂದರು; ಬರುವುದರಲ್ಲೂ ಅವರಿಗೆ ಸಂತೋಷವಿದ್ದಿತ್ತು. ಆ ಕಾಲಕ್ಕೆ ಅವರಿಗೆ ಪ್ರೀತಿಯವರಾದ ಶ್ರೀ ಮಂಜೇಶ್ವರ ಅನಂತರಾಯರೆಂಬವರು ಪುತ್ತೂರಲ್ಲಿ ವಾಸವಾಗಿದ್ದರು. ಇನ್ನೊಬ್ಬರು ಮಿತ್ರರಾದ ಶ್ರೀ ಉಗ್ರಾಣ ಮಂಗೇಶರಾಯರೆಂಬವರು ಇಲ್ಲೇ ಇರುವವರು.

ನಮ್ಮ ದಸರೆಯ ಉತ್ಸವದಲ್ಲಿ ಶ್ರೀ ಗೋವಿಂದ ಪೈಗಳವರು "ಅಲೂಪರ ಕಾಲ"ದ ವಿಚಾರದಲ್ಲಿ ಏನೇನೋ ಉಪನ್ಯಾಸ ಮಾಡಿದರು. ಅದನ್ನು ಯಾರೆಷ್ಟು ಕೇಳಿದರೋ, ನಾನಂತು ಹೇಳಲಾರೆ; ನಾನಂತು ಕೇಳಿಲ್ಲ. ಅನಂತರ, ಆ ವಿಷಯವಾದ ಅವರ ಲೇಖನವೊಂದು ಅಚ್ಚಾಯಿತು. ಅದನ್ನು ಓದಿದ ಬಳಿಕವೂ ನಾನು ಆ ವಿಷಯದಲ್ಲಿ ಆಸಕ್ತಿವಹಿಸಲಿಲ್ಲ. ಅವರ ಲೇಖನಗಳ ವಿಷಯವಲ್ಲಿ, ನಾನು ಆ ಕಾಲಕ್ಕೆ ಬೆಳೆಯಿಸಿಕೊಂಡ ಆಸಕ್ತಿ ತೀರಕಡಿಮೆಯಾಗಿತ್ತು. ಆದರೆ ಅವರನ್ನು ಕುರಿತು ಆಸಕ್ತಿ ಮಾತ್ರ ನನಗೆ ತೀರ ಅಧಿಕವಾಗಿತ್ತು.

ಅಲ್ಲಿಂದ ಮುಂದಕ್ಕೆ-ದಸರೆ ಬಂತೆಂದರೆ, ಪುತ್ತೂರಿನ ದಸರೆಗೆ. ಬಂದ ಕೆಲವರಾದರೂ ವಿದ್ವಾಂಸ ಮಿತ್ರರು "ಮಂಜೇಶ್ವರಕ್ಕೆ ಹೋಗೋಣ" ಎನ್ನುತ್ತಿದ್ದರು. ಅಂಥವರನ್ನು ಕರೆದುಕೊಂಡು ಅಲ್ಲಿಗೆ ಹೋಗುತ್ತಿದ್ದೆ. ಅಲ್ಲಿ ಅವರ ಮನೆಯ ನಿರರ್ಗಳ ಆತಿಥ್ಯ ಸ್ವೀಕರಿಸುವುದು; ಕಡಲು ದಂಡೆಯ ಮೇಲೆ ಹೋಗಿ ಕುಳಿತು. ಅವರ ಗಂಟಲು ಕಡಲಿನ ಮೊರೆತದೊಡನೆ ಸ್ಪರ್ಧಿಸುವುದನ್ನು ನೋಡುವುದು-ಇವೆಲ್ಲ ನನ್ನ ಸ್ಮೃತಿಪಥದಲ್ಲಿರುವ ಸುಂದರ ಚಿತ್ರಗಳಾಗಿವೆ.

"ನೀವು ಮೈಸೂರವರು......ದೊಡ್ಡ ನಮಸ್ಕಾರ ನಿಮಗೆ!" ಅನ್ನುತ್ತಾರೆ ಒಮ್ಮೆ.

"ನಿಮಗೆ ಹೊಗಳಿಸಿಕೊಂಡೇ ಗೊತ್ತು......ಟೀಕೆ ಬೇಡವೇ ಬೇಡ ಎನ್ನುತ್ತಾರೆ" ಇನ್ನೊಮ್ಮೆ.

"ಅದು ಖಂಡಿತವಲ್ಲ; "ಕಂಡಿತ"; ಕಂಡಣೆಯಿಂದ ಬಂದದ್ದು." ಅನ್ನುತ್ತಾರೆ ಮತ್ತೊಮ್ಮೆ......ಒಳ್ಳೆಯ ಕಾವಿನಿಂದ, ಉತ್ಸಾಹದಿಂದ ಪ್ರಾಮಾಣಿಕ ನಂಬಿಕೆಯಿಂದ ಅವರು ವಾದಮಾಡುವಾಗ ಗದ್ದಲವೇ ಗದ್ದಲ! ಹೀಗೆ ಶ್ರೀ ಪೈಗಳೊಡನೆ ಸಂಭಾಷಿಸಲು ಮಹಾ ವಿದ್ವಾಂಸರೇ ಬೇಕಿಲ್ಲ. ಒಬ್ಬ ವಿದ್ಯಾರ್ಥಿ ಬಂದರೂ, ಅವರ ಉತ್ಸಾಹ ತಗ್ಗುವುದಿಲ್ಲ. ಪಂಡಿತರೊಡನೆ ಮಾತಾಡುವ ಉತ್ಸಾಹ ಭರದಿಂದಲೇ ಅವನಿಗೆ ತಿಳಿಯಹೇಳುತ್ತಾರೆ; ಅವೇ ಪ್ರೀತಿ ಆದರಗಳನ್ನು ತೋರಿಸುತ್ತಾರೆ. ತಾನೊಬ್ಬ ಹಿರಿಯ; ಬಲ್ಲಿದ-ಎಂಬ ನಾಟಕವನ್ನು ಎಂದೂ ಆಡಿದವರಲ್ಲ.

ಶ್ರೀಯವರು, ಮಾಸ್ತಿಯವರು, ವೀಸಿಯವರು, ಜೋಶಿ (ಶಂಬಾ)ಯವರು, ರಾಜರತ್ನಮ್-ಹೀಗೆ ಹಿರಿಯರು, ಕಿರಿಯರು, ನಾವು ಅವರ ಮನೆಯಲ್ಲಿ ಕೂಡಿ, ಕಲೆತು, ಕಳೆದ ಸಮಯ ಅದೆಷ್ಟೋ. ಅನೇಕ ವೇಳೆ ಶ್ರೀ ಪೈಗಳವರು ಬಲು ಖಂಡತುಂಡವಾಗಿ ಚರ್ಚಿಸುವಾಗ ಏನೂ ಗೊತ್ತಿಲ್ಲದ ನಾನು, ಪರಿಹಾಸ್ಯಕ್ಕಾಗಿ ನಡುವೆ ಬಾಯಿ ಹಾಕಿ, ಏನಾದರೂ ಒಂದು ಅಸಂಬದ್ಧವನ್ನು ಕಡು ಸತ್ಯವೆಂಬಷ್ಟು ಬಿಗುವಿನಿಂದ ತಿಳಿಸಿದರೆ ಅವರು ಅದನ್ನು ವಾಸ್ತವವೆಂದು ನಂಬಿ "ಹಾಗುಂಟೇ!" ಎಂದುದೂ ಉಂಟು.......ಆಗ ನಾನೇ "ಚೇಷ್ಟೆಗೆ ಹೇಳಿದ್ದು ಸ್ವಾಮಿ" ಎಂದು ತಿಳಿಸಬೇಕಾಗುತ್ತಿತ್ತು...ಅವರಿಗೆ ತಾವೂ ಪ್ರಾಮಾಣಿಕರು, ಇತರರೂ ಅಷ್ಟೇ ಪ್ರಾಮಾಣಿಕತನದಿಂದ ವರ್ತಿಸಬೇಕೆಂಬ ಹಟ!

ನಮ್ಮ ಯಾರಲ್ಲೇ ಆಗಲಿ-ಒಂದಿಷ್ಟು ವಂಚನೆ. ಠಕ್ಕುಗಳನ್ನು ನೋಡಿದರೆ ತುಂಬ ಉರಿದುಬೀಳುತ್ತಿದ್ದರು. ತುಂಬ ಭಾವಜೀವಿಗಳು ಅವರು. ಈ ಗುಣ ಅವರನ್ನು ಕವಿತೆ, ನಾಟಕ ಮೊದಲಾದ ಸಾಹಿತ್ಯ ರೂಪಗಳಿಗೆ ಪ್ರೇರಣೆ ಕೊಟ್ಟರೆ ಆಶ್ಚರ್ಯವಿಲ್ಲ. ಅವರ ಮನೆಯಲ್ಲಿ ಕುಳಿತು, ಅವರ ಬಾಯಿಂದ ಕೀಚಕನನ್ನು ಕುರಿತಾದ ಒಂದು ನಾಟಕವನ್ನು ಕೇಳಿ ಸಂತೋಷಪಟ್ಟ ನೆನಪು ಬರುತ್ತದೆ. ಹಲವು ವರ್ಷಗಳ ಹಿಂದಿನ ಮಾತದು.

ನಮ್ಮ ಉಭಯತರ ಪ್ರೀತಿ ಗೌರವಗಳಿಗೆ ಪಾತ್ರರಾದ ಶ್ರೀ ಪಂಜೆ ಮಂಗೇಶರಾಯರು ಬಹಳ ಹಿಂದೆಯೇ ತೀರಿಕೊಂಡರಷ್ಟೆ. ಅನಂತರ ಕೆಲವು ದಸರೆಗಳಲ್ಲಿ, ನಾನು ಅವರ ಮನೆಗೆ ಅನೇಕ ಸಾಹಿತಿ ಮಿತ್ರರನ್ನು ಕರೆದೊಯ್ದಿದ್ದೆ. ಅಂಥವರಲ್ಲಿ ಕನ್ನಡದ ದಿಗ್ಗಜಗಳೆನಿಸಿದ

ಹಿರಿಯರೂ ಕೆಲವರಿದ್ದರು. ಆ ಹಿರಿಯರು ಶ್ರೀ ಪಂಜೆಯವರನ್ನು ನೆನೆದು "ಅವರನ್ನು ಕುರಿತು ಒಂದು ಸ್ಮಾರಕ ಗ್ರಂಥ ಮಾಡಲೇಬೇಕು; ಅದಕ್ಕೆ ನಿಮ್ಮ ಬೆಂಬಲ ಬೇಕು" ಎಂದು ಶ್ರೀ ಪೈಗಳವರನ್ನು ಕೇಳಿದ್ದುಂಟು. ಇದೇ ವಿಷಯ ಮುಂದೆ ಹತ್ತಾರು ವರ್ಷಗಳ ತನಕವೂ ಬಂದಿತ್ತು. ನಾನು ಪೈಗಳವರ ಮನೆಯಲ್ಲಿ ಕುಳಿತಾಗಲೇ, ದೊಡ್ಡವರೆಂಬವರು ಆ ಕುರಿತು ಆಡಿಹೋದರು; ಸುಖವಾಗಿ ಆಡಿದ್ದನ್ನು ಮರೆತರು. ಈ ಘಟನೆಯಿಂದ ಶ್ರೀ ಪೈಗಳವರು ತುಂಬ ನೊಂದರು. "ಶ್ರೀ ಪಂಜೆಯವರು ದಕ್ಷಿಣ ಕನ್ನಡದವರಾದುದರಿಂದ ಈ ತಾತ್ಸಾರ" ಎಂಬ ಭಾವನೆ ಅವರಲ್ಲಿ ಉಂಟಾಗಿದ್ದರೂ ಆಶ್ಚರ್ಯವೇನಿಲ್ಲ. ಅವರ ನೋವನ್ನು ತಿಳಿದ ನಾನು ಒಂದು ದಿವಸ ಅವರೊಡನೆ "ಪೈಗಳೇ-ಇದಕ್ಕೆ ಯಾಕೆ ನಾವು ಯಾರ ಕೈಯನ್ನು ಕಾಯಬೇಕು? ನೀವಿದ್ದೀರಿ, ನಾನಿದ್ದೇನೆ......ಬೇಕಾದರೆ ಇನ್ನೊಬ್ಬರನ್ನು ಸೇರಿಸಿಕೊಂಡು ನಮಗೆ ತಿಳಿದಷ್ಟನ್ನು ಮಾಡಿಯೇ ಬಿಡುವ ! 'ನಮಗೆ ಅವರ ಮೇಲೆ ಅಭಿಮಾನವಿದೆ'-ಎನ್ನುವವರಿಗೆಲ್ಲ ಒಂದೊಂದು ಕಾಗದ ಬರೆಯುವ. ಅವರಿಂದ ಲೇಖನ ಬಂದರೆ ಸರಿಯೆ; ಬಾರದಿದ್ದರೆ ಅದಕ್ಕಾಗಿ ಕಾಯಬೇಕಾಗಿಲ್ಲ. ಆರು ತಿಂಗಳಷ್ಟು ವಾಯಿದೆ ಕೊಡುವ; ಏಳನೇ ತಿಂಗಳಿಗೆ ಮುದ್ರಣ ತೊಡಗುವ. ಇನ್ನೊಂದು ವರ್ಷದೊಳಗೆ ಗ್ರಂಥ ಹೊರಡಿಸಿಯೇ ಬಿಡುವ. ಏನಿಲ್ಲವಾದರೆ ಪಂಜೆಯವರೇ ಬರೆದ ಲೇಖನ, ಪದ್ಯಗಳನ್ನಾದರೂ ಒಂದೇ ಕಡೆ ಸೇರಿಸಿಅಚ್ಚು ಹಾಕಿಸಿದಂತಾಯಿತು. ಅವರ ಮಕ್ಕಳೂ ಸಹಾಯ ಮಾಡಬಹುದು........." ಎಂದು ಆಲೋಚನೆ ಹೇಳಿದೆ. "ಭೇಷ್" ಎಂದರು ಅವರು.

ಅದರ ಫಲವೇ "ಪಂಜೆಯವರ ಸವಿನೆನಪು" ಎಂಬ ಸ್ಮಾರಕ ಗ್ರಂಥ. ನಾವು ಅದರ ಕೇವಲ 500 ಪ್ರತಿಗಳನ್ನು ಅಚ್ಚು ಹಾಕಿಸಿದ್ದೆವು. ಅಷ್ಟು ಮಾರಾಟವಾಗಲು 12 ವರ್ಷಗಳ ಕಾಲವೇ ಹಿಡಿಯಿತು !

ತಮಗೆ ಹಿರಿಯರಾದ ಪಂಜೆಯವರ ಬಗ್ಗೆ ಒಂದು ಸ್ಮಾರಕ ಗ್ರಂಥ ಮಾಡಲೇಬೇಕೆಂದ ಶ್ರೀ ಪೈಗಳವರೇ, ತಮ್ಮ ಹೆಸರನ್ನೇ ತೆಗೆದರೆ- "ಕೂಡದೇ ಕೂಡದು" ಎನ್ನುತ್ತಿದ್ದರು. ಅವರಿಗೆ 70ವರ್ಷ ಪ್ರಾಯ ತುಂಬಿದಾಗ ಮಂಗಳೂರಲ್ಲಿ ನಾನು "ಆರೂವರೆ" ಮಿತ್ರರನ್ನು ಕೂಡಿಸಿ ಅವರ ಆಕ್ಷೇಪದ ಭಯಕ್ಕೆ ಹೆದರಿ, ಒಂದು ಚಿಕ್ಕ ಸಭೆ ನಡೆಸಿದ್ದೂ ಉಂಟು.

ಶ್ರೀ ಪೈಗಳವರ ನೊಂದ ಮನಸ್ಸಿನ ಒಂದೆರಡು ನೆನಪುಗಳನ್ನಾದರೂ ನಾನಿಲ್ಲಿ ಕೊಡದೆ ಇರಲಾರೆ. ಭಾರತ ದೇಶದ ವಿಭಜನೆಯಿಂದ ಅವರ ಮನಸ್ಸು ಎಷ್ಟೊಂದು ನೊಂದಿತ್ತು ಎನ್ನಲಾರೆ ನಾನು ! ಪಾಕಿಸ್ತಾನದ ಸೃಷ್ಟಿಯೆಂಬುದು-ಗಾಂಧೀಜಿಯವರು ಭಾರತಕ್ಕೆ ಬಗೆದ ದ್ರೋಹವೆಂದೇ ತಿಳಿದವರು ಅವರು ! ಇದನ್ನು ಕೇಳಿ ಆಶ್ಚರ್ಯವಾದೀತು ಕೆಲವರಿಗೆ.........ಆದರೆ ಅದು ಮಾತ್ರ ತೀರ ಸತ್ಯ.

1948ನೇ ಇಸವಿ ಜನವರಿ ತಿಂಗಳ ಕೊನೆಗೆ ನನ್ನನ್ನು ಒಂದು ಶಾಲಾ ವರ್ಧಂತಿಗೆಂದು, ಪೆರ್ಲ ಶಾಲೆಯವರು ಆಮಂತ್ರಿಸಿದ್ದರು. ನಾನು ಅದರ ಮುಂಚಿನ ದಿವಸವೇ ಹೊರಟು, ಆ ಸಂಜೆ, ಮಂಜೇಶ್ವರದಲ್ಲಿ ಪೈಗಳವರ ಮನೆಯಲ್ಲಿ ಕಳೆದೆ. ಆ ವೇಳೆಯಲ್ಲಿ ಅನೇಕ ಸಂಗತಿಗಳು ನಮ್ಮ ಮಾತುಕತೆಗೆ ಗುರಿಯಾದುವು. ನಡುವೆ ಭಾರತದ ವಿಭಜನೆಯ ಪ್ರಶ್ನೆಯೂ ಬಂದಿತು. ಅದು ಬರುತ್ತಲೇ ಶ್ರೀ ಪೈಗಳವರು-ತಾವು ತಾವಾಗಿರಲಿಲ್ಲ ! ದೇಶವನ್ನು ಒಡೆದು ಇಬ್ಭಾಗಮಾಡಿದ ದ್ರೋಹಕ್ಕಾಗಿ ಗಾಂಧೀಜಿಯವರನ್ನು ತೀರ ನಿಷ್ಠುರವಾಗಿ ಹಳಿದರು. ಅವರ ಮನೋವೇದನೆ, ಮಾತು ಮಾತಿಗೂ ಕಾಣುತ್ತಿತ್ತು ! ಮರುದಿನ ಸಂಜೆ ನಾನು ಪೆರ್ಲದಲ್ಲಿದ್ದಾಗ, ಗಾಂಧೀಜಿಯವರನ್ನು ಕೊಲೆಮಾಡಿದರೆಂಬ ಸುದ್ದಿಯನ್ನು ಕೇಳಿದೆ ! ಮೊದಲ ದಿನ ನಾನು ಮಂಜೇಶ್ವರದಲ್ಲಿ ಕೇಳಿದ ಮಾತುಗಳು, ಮರುದಿನ ನಡೆದ ಘಟನೆ ಕೂಡಿಯೇ ನನ್ನ ಮನಸ್ಸನ್ನು ಕೊರೆಯತೊಡಗಿದ್ದುವು.

ಅನಂತರ ಒಂದು ದಿವಸ, ನಾನು ಶ್ರೀ ಪೈಗಳವರು ಗಾಂಧೀಜಿಯವರ ನಿಧನವನ್ನು ಕುರಿತು ಬರೆದ ಪದ್ಯವನ್ನು ಓದಿದೆ. ಅಲ್ಲಿನ ಮಾತುಗಳೂ ಅಷ್ಟೇ ಆಂತರಿಕ ವೇದನೆಯಿಂದ ಬರೆದುವುಗಳೆಂಬುದನ್ನು ಬಲ್ಲೆ.

ಅನಂತರದ ನೋವು-ಮಂಜೇಶ್ವರ ಮತ್ತು ಕಾಸರಗೋಡುಗಳನ್ನು ಕೇರಳಕ್ಕೆ ಕೊಟ್ಟ ನೋವು; ರಾಷ್ಟ್ರದಲ್ಲಿ ಕಾಂಗ್ರೆಸ್ಸಿನ ದೈತ್ಯ ಪ್ರವೃತ್ತಿ ಬೆಳೆಯುತ್ತಿರುವ ನೋವು. ಈ ನೋವುಗಳು ಅವರ ಪಾಲಿಗೆ ತೋರಿಕೆಯ ನೋವುಗಳಾಗಿರದೆಯೆ, ಆಂತರಿಕ ವ್ಯಥೆಗಳೇ ಆಗಿದ್ದುವು. ನಮ್ಮ ಮುಖಂಡರ ವಿಚಾರದಲ್ಲಿ ಅವರಲ್ಲಿ ಬೆಳೆಯುತ್ತ ಬಂದಿದ್ದ ತಾತ್ಸಾರವನ್ನು ಅವರು ಮುಚ್ಚುಮರೆಯಿಲ್ಲದೆ ಹೇಳುತ್ತ ಬಂದರು. ಸತ್ಯವೆಂದು ತಮಗೆ ಕಂಡ ಸಂಗತಿಗಳಲ್ಲಿ ಶ್ರೀ ಪೈಗಳವರು ಯಾರೊಬ್ಬನ ವಿಷಯದಲ್ಲಿಯೂ ಅಳುಕಿ, ಅಂಜಿ ನುಡಿದವರಲ್ಲ. ಯಾರ ಮೂರ್ತಿಪೂಜೆಯಿಂದಲೂ ಅವರು ಬದುಕಿ ಬೆಳೆದಿರಲಿಲ್ಲ. ಅವರು ಮಗುವಿನ ಮನಸ್ಸಿನವರಾದುದರಿಂದಲೇ ಹೆನ್ಸ್ ಎಂಡರ್ಸನನ ಕತೆಯಲ್ಲಿ ಬರುವ ಮಗುವಿನಂತೆ "ಅರಸ ಬರಿ ಬತ್ತಲೆಯಾಗಿ ತಿರುಗುತ್ತಿದ್ದಾನಲ್ಲ" ಎಂದೇ ನಮ್ಮ ಮುಖಂಡರನ್ನು ಕುರಿತು ಹೇಳಿದ ಸ್ವಭಾವ ಅವರದ್ದಾಗಿತ್ತು.

ನಮ್ಮುಭಯತರಲ್ಲಿ ವಿಶೇಷವಾದ ಅಭಿಮಾನ, ಪ್ರೀತಿಗಳು ದೀರ್ಘಕಾಲದಿಂದಲೂ ಬೆಳೆದುಬಂದಿದ್ದುವು. ನಾನೊಬ್ಬ ಸಂಚಾರಿ ಜೀವಿಯಾದುದರಿಂದ ಅವರ ಮನೆಗೆ ಹೋದಾಗಲೆಲ್ಲ ದೂರದ ಅವರ ಆಪ್ತರನ್ನು ಕುರಿತು ಕ್ಷೇಮ ಸಮಾಚಾರಗಳನ್ನು ಕುರಿತು ತಿಳಿಸುವ ಪ್ರಸಂಗ ಬರುತ್ತಿತ್ತು. "ಸಾಚಾ" ಮನುಷ್ಯರ ವಿಚಾರದಲ್ಲಿ ಅವರಿಗಿರುತ್ತಿದ್ದ ಅಭಿಮಾನ, ಬರಿಯ ಮೇಧಾವಿಗಳ ಮೇಲೆ ಎಂದೂ ಇರಲಿಲ್ಲ. ಅನೇಕ ಬಾರಿ, ಅವರನ್ನು ಕಾಣದೆ ಬಹಳ ಸಮಯವಾದರೆ ಒಂದೊಂದು ಕಾಗದ ಬರೆಯುತ್ತಿದ್ದೆ. ಯಾರು, ಏನು ವಿಷಯಕ್ಕಾಗಿ ಹಾಗೆ ಕಾಗದ ಬರೆದರೂ ತಪ್ಪದೆ ಪ್ರತ್ಯುತ್ತರ ಬರೆಯುತ್ತಿದ್ದವರು ಅವರು.

ನಾನು 1952ರಲ್ಲಿ ಯುರೋಪಿಗೆ ಪ್ರವಾಸ ಹೊರಡುವ ಮುನ್ನ ಅವರನ್ನು ಭೇಟಿಯಾಗಲು ಹೋಗಿದ್ದೆ. ಆ ವೇಳೆ ನನ್ನನ್ನವರು ತಬ್ಬಿಕೊಂಡು ಮನದುಂಬಿ ಹರಸಿದರು. ಅನಂತರ "ಪ್ರವಾಸದಲ್ಲಿ ಕಾಗದ ಬರೆಯಲು ಮರೆಯಬೇಡಿ" ಎಂದರು. ನನ್ನ ಪ್ರವಾಸ ಚುಟುಕಿನದ್ದು. ಸಮವಾದ ವಿಳಾಸ ತಿಳಿಸಲು ಕಷ್ಟವಾಗುತಿತ್ತಾದರೂ-ಅವರಿಂದ ಮರುಕಾಗದ ಬಂದಿತೋ-ಎಂದು ನಾನು ಸಂಶಯ ಪಡ

ಬೇಕಾಗಿರಲಿಲ್ಲ. ಪೇರಿಸ್ ನಗರದಲ್ಲಿ ಇಂಗ್ಲಿಷ್ ಪರಿಚಯವುಳ್ಳ ಮಿತ್ರರಿಲ್ಲದೆ ದಿನಕಳೆಯಬೇಕಾಗಿದ್ದ ಆ ಸ್ವಲ್ಪ ಸಮಯದಲ್ಲಿ ಅವರಿಂದ ನನಗೆ ಬಂದೊಂದು ಪತ್ರ ಅವರನ್ನೇ ಬಳಿಗೆ ತಂದಷ್ಟು ಆನಂದಕೊಟ್ಟಿತ್ತು.

ನನಗೆ 60 ವರ್ಷ ತುಂಬಿತೆಂದು ನನ್ನ ಹಲವು ಮಿತ್ರರು ನನ್ನನ್ನು ಕರೆದು ಉಪಚರಿಸತೊಡಗುತ್ತಲೇ, ಅವರನ್ನು ಮೊದಲು ಕಂಡು ಅವರ ಆಶೀರ್ವಾದ ಪಡೆಯುವುದಕ್ಕಾಗಿಯೇ ಧಾವಿಸಿದ್ದೆ. ಆಗಲಾದರೂ ಅವರು ನನ್ನನ್ನು ಆಶೀರ್ವದಿಸಿದ ರೀತಿ-ಅವರು ಇರಿಸಿದ ಆತ್ಮೀಯತೆಯ ಪ್ರತೀಕವಾಗಿತ್ತು. ಅದೇ ಅವರ ಮತ್ತು ನನ್ನ ಕೊನೆಯ ದರ್ಶನವಾಗುತ್ತಿತ್ತೆಂದು ನಾನು ಎಣಿಸಿರಲಿಲ್ಲ.

ಅವರ ಆರೋಗ್ಯ ಕೊನೆಯ ನಾಲ್ಕಾರು ವರ್ಷಗಳಿಂದಲೂ ಕೆಟ್ಟಿತ್ತು. ರಕ್ತದ ಒತ್ತಡದಿಂದ ಮೊದಲಿನಂತೆ ಓಡಾಡಲಾರದಾಗಿದ್ದರು. ಮೊದಲಿನಂತೆ ಹರಿತವಾಗಿ ಸುರಿಸುವ ನೆನಪೂ ಉಳಿದಿರಲಿಲ್ಲ. ಮಕ್ಕಳು, ಮರಿಗಳಿಂದ ತುಂಬಿದ ಅವರ ಮನೆ-ವಾನಪ್ರಸ್ಥಾಶ್ರಮಿಗಳ ಮನೆಯಾಗಿ ಬೆಳೆದುದರಿಂದ-ಸಮಯದ ಹೊರೆ ಅವರ ಜೀವವನ್ನು ಬಾಧಿಸುತ್ತಿತ್ತೆಂದೇ ಅನಿಸುತ್ತಿತ್ತು. ಅದರಿಂದಲೇ ಅವರು ತಮ್ಮ ಸಾವನ್ನು ಕುರಿತು ಕೆಲವು ಮಾತುಗಳನ್ನಾಡುತ್ತಿದ್ದುದುಂಟು. ನಿಜ, ಬದುಕಿ ಉಳಿಯುವ ಬಾಯಾರಿಕೆಗೂ ಒಂದು ಮಿತಿಯಿಲ್ಲವೆ?

ಈ ನಮ್ಮ ದೀರ್ಘ ಗೆಳೆತನದ ಸಂಬಂಧದಲ್ಲಿ. ಒಂದು ಮತಭೇದ ತೋರಿದ್ದನ್ನು ಕಂಡು, ಸ್ವಲಾಭಕ್ಕಾಗಿ ಅದನ್ನು ತಿರುಗಿಸಲು ಹೊರಟ ಜನರೂ ಇದ್ದರು. ವಿಷಯ ತೀರ ಪುಟ್ಟ ಸಂಗತಿ. ಪಾರ್ತಿಸುಬ್ಬನ ಕಾಲವನ್ನು ಕುರಿತು ಅವರ ಅಭಿಪ್ರಾಯವನ್ನು ನಾನು ಖಂಡಿಸಿದ್ದೆ; ಖಂಡಿಸಿದ್ದಕ್ಕೆ ಅವರು ತಾವು ಹೇಳಿದ್ದನ್ನೇ ತಿರುತಿರುಗಿ ಹೇಳಿದ್ದರು. ಈ ವಿಷಯವನ್ನು ತಮ್ಮ ವ್ಯಕ್ತಿಗತ ನಂಜಿಗಾಗಿ ಬಳಸಲು ಹೊರಟ ಮಿತ್ರರೂ ಇದ್ದರು. ಅದನ್ನು ತಿಳಿದ ನಾನು ಅವರಿಗೆ ಸಮರ್ಪಿಸಿದ "ಯಕ್ಷಗಾನ ಬಯಲಾಟ" ಗ್ರಂಥದ ರಕ್ಷಾ ಪತ್ರದಲ್ಲಿ "ಮತಭೇದಗಳಿಗಾಗಿ ಕ್ಷಮಿಸಿ, ಸ್ವೀಕರಿಸುವುದು" ಎಂದು ಬರೆದು ಕಳುಹಿಸಿದ್ದೆ. ಮುಂದೆ ಮೂರು ನಾಲ್ಕು ತಿಂಗಳು ಕಳೆದು ಅವರನ್ನು ಕಾಣಲು ಹೋದಾಗ ಏನೇನೋ ವಿಷಯ ಮಾತನಾಡಿ ಸಮಯ ಕಳೆದೆವು. ನಾನು ಊರಿಗೆ ಮರಳಲು, ಅವರ ಮನೆಯಿಂದ ರಸ್ತೆಯ ಬಳಿ ನಿಲ್ಲಿಸಿದ ಮೋಟರಿನ ಬಳಿಗೆ ಬಂದಾಗ-ನನ್ನನ್ನು ತರುಬಿ "ನೀವು ಆ ಪುಸ್ತಕದಲ್ಲಿ ಹಾಗೇಕೆ ಬರೆದಿರಿ? ಅಭಿಪ್ರಾಯ ಭೇದವಿದ್ದರೇನಂತೆ !" ಎಂದರು ! ನನ್ನ ಮನಸ್ಸಿನ ಭಾರ ತೀರ ಕಳೆದಂತಾಯಿತು.

ಅವರು ಪರರ ದಾಕ್ಷಿಣ್ಯಕ್ಕಾಗಿ ತಮಗೆ ತೋಚಿದ್ದನ್ನು ಎಂದೂ ಮರೆಯಿಸಿದವರಲ್ಲ. ನಾನು ಅವರ ಪಾರ್ತಿಸುಬ್ಬನ ಕಾಲ ನಿರ್ಣಯ ಖಂಡಿಸಿದ್ದನ್ನು ನಿಜಕ್ಕೂ ಅವರು ಮೆಚ್ಚಿರಲಾರರು; ಒಪ್ಪಿರಲಾರರು. ಆದರೆ ಅದಕ್ಕಾಗಿ ನನ್ನ ಮೇಲೆ ಕೋಪಿಸುವಂತಿದ್ದರೆ-ನಮ್ಮ ದೀರ್ಘ ಗೆಳೆತನಕ್ಕೆ ಯಾವ ಬೆಲೆಯನ್ನೂ ಕೊಟ್ಟಂತಾಗಲಾರದು.

ಶ್ರೀಯುತರು ಗತಿಸಿದ ಬಳಿಕ ಅವರ ಪರಿಚಯಾತ್ಮಕ ಲೇಖನಗಳು ಅಲ್ಲಲ್ಲಿ ಬಂದಿರುವುದನ್ನು ನೋಡಿದ್ದೇನೆ. ಒಂದೆರಡು ಸಂಗತಿಗಳು ಕೇವಲ "ಸುದ್ದಿ"ಯ ನೆಲೆಯಲ್ಲಿ ನಿಂತ ಸಮಾಚಾರಗಳೆನ್ನಬೇಕಾಗುತ್ತದೆ. ಉದಾಹರಣೆಗೆ-ಶ್ರೀಯುತ ಪೈಗಳವರನ್ನು ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಗೆ ಒಪ್ಪಿಸಲು ಮುಂಬಯಿಯವರಿಗೆ ಸಾಕುಬೇಕಾಯಿತು-ಎಂಬ ವಿಚಾರ. ಶ್ರೀಯುತರು ಅನೇಕ ಬಾರಿಯ ಪ್ರಾರ್ಥನೆಗಳನ್ನು ನಿರಾಕರಿಸಿದ್ದು ನಿಜ. ಕೊನೆಯಬಾರಿ ಒಪ್ಪಿಸಿದವರು ದಿವಂಗತ ಶ್ರೀ ಎಂ. ಶ್ರೀನಿವಾಸಮೂರ್ತಿಗಳವರು. ಅವರು. ಮಿತ್ರ ಡಿ.ವಿ.ಜಿ.ಯವರೊಡನೆ ಪುತ್ತೂರಿಗೆ ಬಂದು, ನನ್ನಲ್ಲಿದ್ದು, ಅಲ್ಲಿಂದಲೇ ಮಂಜೇಶ್ವರಕ್ಕೆ ಹೋಗಿದ್ದರು. ಹೋಗುತ್ತ ಶ್ರೀನಿವಾಸಮೂರ್ತಿಗಳವರು ನನ್ನೊಡನೆ "ನಾವು ಈ ಕೆಲಸಕ್ಕಾಗಿ ಮಂಜೇಶ್ವರಕ್ಕೆ ಹೋಗುತ್ತೇವೆ. ಶ್ರೀ ಪೈಗಳವರು ಒಡಂಬಡದಿದ್ದರೆ ನೀವು ಆಗಬೇಕು" ಎಂದಿದ್ದರು. "ಆಗ ನಾನು "ಪೈಯವರು ಒಪ್ಪುವುದಿಲ್ಲ ಎಂಬ ಮಾತು ಬೇಡ; ಹೋಗಿ ಬನ್ನಿ ಮೊದಲು" ಎಂದಿದ್ದೆ. ಬರುವಾಗ ಅವರು ಸಮ್ಮತಿಸಿದರೆಂಬ ಶುಭವಾರ್ತೆಯನ್ನು ತಂದರು. ಅವರು ಒಪ್ಪಿದ ಕಾರಣ, ನಾನು ಊಹಿಸುವಲ್ಲಿ-ಹೋದ ಇಬ್ಬರು ಮಿತ್ರರು. ಡಿ.ವಿ.ಜಿ.ಯವರು ಅದಕ್ಕೆಂದೇ ಹೋದವರಲ್ಲ; ಆದರೆ ಅವರು ಆ ಸಮಯದಲ್ಲಿದ್ದುದು ಹೆಚ್ಚಿನ ವಿಷಯ. ಶ್ರೀನಿವಾಸ ಮೂರ್ತಿಯವರಂಥ ಪ್ರಾಮಾಣಿಕ ವ್ಯಕ್ತಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು. ಮಾಡಿದ ಪ್ರಾರ್ಥನೆ ವ್ಯರ್ಥವಾಗದಿರಲು ಶ್ರೀನಿವಾಸ ಮೂರ್ತಿಯವರ ವ್ಯಕ್ತಿತ್ವವೇ ಕಾರಣ.

ಇದರಂತೆ ಮದ್ರಾಸಿನ ರಾಷ್ಟ್ರಕವಿಯೆಂಬ ಗೌರವ ದೊರಕಿದ ಕಾಲದಲ್ಲಿ-ಅವರನ್ನು ಒಪ್ಪಿಸಿದ ಕೀರ್ತಿ ದಿವಂಗತ ಕಿಲ್ಲೆಯವರಿಗೆ ಸಲ್ಲುತ್ತದೆ-ಎಂದು ಬರೆದವರುಂಟು. ಆ ಕೀರ್ತಿ ಏನಿದ್ದರೂ ಮದ್ರಾಸಿನ ಕೆಲವು ಕನ್ನಡದ ಅಭಿಮಾನಿ ಮಿತ್ರರಿಗೆ ಸಲುವ ವಿಷಯ. ನಮ್ಮ ಜಿಲ್ಲೆಯ ಒಬ್ಬಿಬ್ಬರು ಅದಕ್ಕೆ ಪ್ರತಿಸ್ಪರ್ಧಿಗಳಾಗಿ ಪ್ರಯತ್ನಿಸುತ್ತಿದ್ದರೆಂದೂ ನಾನು ಕೇಳಿದ್ದೆ.

ಹೀಗೆ ಶ್ರೀ ಪೈಗಳವರ ವಿಚಾರದಲ್ಲಿ ಪ್ರತ್ಯಕ್ಷ ತಿಳಿಯದ ವಿಷಯುಗಳನ್ನು ಕುರಿತು ಕತೆಗಳು ಹುಟ್ಟಿಕೊಂಡರೆ ಆಶ್ಚರ್ಯವೇನಿಲ್ಲ. ಚಾರಿತ್ರಿಕ ದೃಷ್ಟಿಯಿಂದ ಅಂಥವು ಸತ್ಯವಲ್ಲ-ಎನ್ನಬೇಕಾಗುತ್ತದೆ.

ಶ್ರೀ ಪೈಗಳವರಂತಹ ಸರಳರು, ಭಾವಜೀವಿಗಳು. ಉದಾರ ಮಿತ್ರರು ಬೆರಳೆಂದೆಣಿಸುವಷ್ಟು ಸಿಗುತ್ತಾರೋ ತಿಳಿಯೆ. ಅವರನ್ನು ನೆನೆಯುವಾಗ ನನಗೆ ಅವರ ಮನೆಯ ಮುಂದಿನ ಕಡಲಿನ ನೆನಪಾಗುತ್ತದೆ. ಆ ಕಡಲಿನ ಮರಳ ದಂಡೆಯ ಮೇಲೆ ಕುಳಿತು, ಅವರು ಕೈಕುಲುಕಿ ಉದ್ವೇಗದಿಂದ ಮಾತನಾಡುತ್ತಿದ್ದ ಚಿತ್ರ ಸದಾ ನೆನವರಿಕೆಯಾಗುತ್ತದೆ. ಬಲು ಘನವಂತ ಜೀವನ ಅವರದ್ದು.

# ಅಣ್ಣ ಗೋವಿಂದ ಪೈ

**ಶ್ರೀ ದ. ರಾ. ಬೇಂದ್ರೆ**

ಅಣ್ಣ ಶ್ರೀ ಮಾಸ್ತಿಯವರು ನನ್ನನ್ನು ತಮ್ಮನೆಂದು ಸ್ವೀಕರಿಸಿದ್ದು, ಅರ್ಧ ಅಂತರಂಗ ಅರ್ಧ ಬಹಿರಂಗದ ಮಾತು. ಅವರಂತಹ ಸಂಬಂಧ ಪೈಯವರೊಂದಿಗೆ ನನಗೆ ಬರಲಿಲ್ಲ. ಆದರೆ ಬಂದ ಸಂಬಂಧವಲ್ಲಿ ಆರ್ದ್ರತೆಯು ಆಳ ಘನವಾಗಿತ್ತು. ನನ್ನ ಐವತ್ತರ ಒಸಗೆಗೆ ಅವರು ಆಶೀರ್ವಾದವನ್ನು ಕಳಿಸಿದ್ದರು. ಅವರಷ್ಟು ಆಶೀರ್ವಾದ ತತ್ಪರರನ್ನು ನಾನು ಕಂಡಿಲ್ಲ. ನನ್ನ ಐವತ್ತರ ಹೊತ್ತಿಗೆ ಅವರ, ನನ್ನ ಐದು ಭೇಟಿಗಳಾಗಿದ್ದವೆಂದು ಅವರೇ ನೆನಸಿಕೊಂಡಿದ್ದಾರೆ. ಅವರ ತಮ್ಮಂದಿರ ಆದರಾತಿಥ್ಯ ಉಂಡ ನಾನು, ಆ ತಮ್ಮನಿಗೆ ತಮ್ಮ ಅಣ್ಣನ ಬಗ್ಗೆ ಇದ್ದ ಗೌರವವನ್ನು ಕಂಡ ನಾನು, ಅಣ್ಣ-ತಮ್ಮ ಎಂಬ ಸಂಬಂಧ ಬಹಳ ಜವಾಬುದಾರಿಯದು, ಅದರ ಹೊಣೆ ನೀಗಿಸಲು ಸತ್ತ್ವಬೇಕು ಎಂದರಿತೆ. ಅಷ್ಟು ಸತ್ತ್ವ ನನ್ನಲ್ಲಿಲ್ಲ. ಅಣ್ಣನಂತೆಯೂ ಇಲ್ಲ. ತಮ್ಮನಂತೆಯೂ ಇಲ್ಲ; ಅದು ಸ್ವಾಭಾವಿಕವಾಗಿ ಸಮ ಸಖ್ಯದ ಸ್ವಾತಂತ್ರ್ಯಕ್ಕೆ ಹರಿಯುತ್ತದೆ. ಆದರೂ ಆ ನಿಲವು ನಾನು ಬಲ್ಲೆ. ಹಲವರು ನನ್ನೊಡನೆ ನಡೆಯುವಾಗ ಆ ಎಚ್ಚರವನ್ನು ನನಗೆ ಕೊಟ್ಟಿದ್ದಾರೆ. ಶ್ರೀ ಮಾಸ್ತಿಯವರ ತೂಕ ಆ ಧ್ವನಿಯನ್ನು ಮೂಡಿಸುತ್ತದೆ. ಆದರೂ-ಗೋವಿಂದ ಪೈಗಳು ನನ್ನ ಕಣ್ಣಿಗೆ ಅಣ್ಣ. ಅವರು ನನ್ನ ಗೆಳೆಯರಲ್ಲ.

1924ರ ಬೆಳಗಾಂವಿ ಕಾಂಗ್ರೆಸ್ಸಿಗೆ ಬಂದ ಒಬ್ಬಿಬ್ಬ ಮಂಗಳೂರಿನ ಕಾರ್ಯಕರ್ತರು ಪೈಗಳ ಬಗ್ಗೆ ಗೌರವ ಪೂರ್ವಕವಾಗಿ ಮಾತನಾಡಿದರು. ಅದರೊಳಗಾಗಿಯೇ ನಾನು ಅವರ "ನಂದಾದೀಪ"ದ ಹಲವು ಪದ್ಯಗಳನ್ನು ನೋಡಿದ್ದೆ. ಆದರೂ ಅದರ ಸತ್ತ್ವ ಅಷ್ಟು ನನ್ನ ಮನವನ್ನು ಹೊಕ್ಕಿರಲಿಲ್ಲ. ಮುಂದೆ ಅವರು ಬೆಳಗಾಂವಿಗೆ ಬಂದಾಗ ಸ್ವಲ್ಪ ಪರಿಚಯವಾಯಿತು. ಆ ಪರಿಚಯ ಬೆಳೆದು ಶ್ರೀ ಮಾಸ್ತಿಯವರೊಡನೆ ನಾನು ಮಂಜೇಶ್ವರದಲ್ಲಿ ಕಳೆದ ಎರಡು ದಿನ ಸಾಕ್ಷಾತ್ ಸಂಬಂಧವ ದಿನಗಳು. ಸಮುದ್ರದ ಪುಲಿನದಲ್ಲಿ ಶ್ರೀ ಮಾಸ್ತಿ ಮತ್ತು ಪೈಗಳವರು ಆಡಿದ ಸೊಗಸಿನ ಮಾತು ನನ್ನ ಜೀವದ ಆಳದಲ್ಲಿ ಇಂಗಿಹೋಗಿದೆ. ಆ ಸಂಜೆ ಮುಗಿಲು, ಗಾಳಿ, ತೆರೆಗಳ ಘೋಷ ಇವುಗಳಂತೆಯೇ ಆ ಇಬ್ಬರ ಮಾತು ನನಗೆ ಸಾಕ್ಷಿತ್ವದ ಸುಖ ಕೊಟ್ಟಿತು. ನಾನೂ ಆ ಸಂಭಾಷಣೆಯಲ್ಲಿ ಒಳಹೊಕ್ಕು ನಾಲ್ಕು ಮಾತು ಬೆರೆಸಿರಬಹುದು. ಅವರ ಕೋಣೆಯೊಳಗಿನ ಗ್ರಂಥ ಸಂಪತ್ತಿ, ಅವರ ಮನೆಯ ಊಟದ ಸಂಭ್ರಮ, ನನ್ನ ನಾಜೂಕು ಪ್ರಕೃತಿಗೆ ಆದ ಸಂಕೋಚ, ಅವರು ನನಗೆ ಸ್ವಸ್ಥನಾಗಿಡಬೇಕೆಂಬ ಪ್ರಯತ್ನ, ಶ್ರೀ ಮಾಸ್ತಿಯವರ ವಿನೋದ– ಇವೆಲ್ಲ ಊಟ ಉಪಚಾರಗಳಂತೆಯೇ ಸಾತ್ವಿಕ ಸಂಸ್ಕಾರ ಉಳಿಸಿ ಹೋಗಿವೆ. ಅವರು ಮುಂಬೈ ಸಮ್ಮೇಲನಕ್ಕೆ ಅಧ್ಯಕ್ಷರಾದಾಗ ನಾನು ಅಲ್ಲಿ ಹೋಗಲು ಆಗಲಿಲ್ಲ. ಆದರೆ ಮತ್ತೊಮ್ಮೆ (ಅದಕ್ಕೂ ಮುಂಚೆ ಎಂದು ತೋರುತ್ತದೆ) ಮುಂಬೈಯಲ್ಲಿಯೇ ಅಕಸ್ಮಾತ್ತಾಗಿ ಅವರ ಭೇಟಿಯಾಯಿತು. ಅವರು ನನ್ನನ್ನು ತಮ್ಮವರ ಮನೆಗೆ ಒಯ್ದು ಉಪಚಾರ ಮಾಡಿದ್ದೇ ಮಾಡಿದ್ದು. ಅವರ ಸತ್ತ್ವ ದೊಡ್ಡದು. ನನಗೆ ಅದು ಹೇಗೆ ಬರಬೇಕು?

ಮಿತ್ರರಾದ ಶ್ರೀ ಪಡುಕೋಣೆ ರಮಾನಂದರಾಯರ ಜೊತೆ ಮಾಡಿಕೊಂಡು ಮಂಜೇಶ್ವರಕ್ಕೆ ಹೊರಟೆ. ಕೊಂಡ ತಿಕೇಟನ್ನು ಮಾರಬೇಕಾಯ್ತು, ಪೈಗಳವರ ಅಸ್ವಾಸ್ಥ್ಯದ ಸಂಧಿಕಾಲದ ಮೂಲಕ. ನಾನು ಪ್ರವಾಸದಿಂದ ಮನೆಗೆ ಮರಳುವುದರೊಳಗಾಗಿ ಪೈಗಳವರ ಕಾಗದ ಅವರ ಸೌಜನ್ಯ ಸಾಹಿತ್ಯ ಬಂದೇಬಿಟ್ಟಿತು. ಆ ಮೇಲೆ ದಿವಂಗತ ದ.ಬಾ.ಕುಲಕರ್ಣಿಯವರೊಂದಿಗೆ ಬಂದೇನು ಎಂದು ಹೇಳಿ ಕಳಿಸಿ ಹೋಗಲಾಗಲಿಲ್ಲ. ಮತ್ತೊಮ್ಮೆ ದ.ಬಾ.ಒಬ್ಬರೇ ಹೋಗಿ ಬಂದರು. "ಬೇಂದ್ರೆಯವರು ಗೋವಿಂದ ಪೈಗಳನ್ನು ಕಾಣಲು ಬರುತ್ತಾರೆ" ಎಂಬುದು ಗಾದೆ ಮಾತಾಗಿ ಉಳಿದುಬಿಟ್ಟಿತು. ದ.ಬಾ.ಮತ್ತು ಪೈ ಇಬ್ಬರೂ ಈಗ ದಿವಂಗತರು.

ಲಕ್ಷ್ಮೀಶನ ವಿಷಯವಾಗಿ ಮತ್ತು ಅವನ ಜೈಮಿನಿ ಭಾರತದ ವಿಷಯವಾಗಿ ನನ್ನ ಅವರ ಮಾತಾಗಿದ್ದಿತು. ಕೊಂಚ ಪತ್ರವ್ಯವಹಾರವೂ ಆಯಿತು. ಗೋವಿಂದ ಕವಿಯ "ಚಿತ್ರಭಾರತ" ನಿಮಿತ್ತದಿಂದ "ಜೀವನ" ಮಾಸಪತ್ರಿಕೆಯಲ್ಲಿ ನಾನೊಂದು ಲೇಖ ಬರೆದೆ. ಅದನ್ನು ಗಂಭೀರವಾಗಿ ಆಲೋಚನೆಗೆ ಒಳಪಡಿಸಿದವರು ಪೈಗಳೊಬ್ಬರೇ. ಮತ್ತೊಮ್ಮೆ "ತಿಂಗಳ" ಎಂಬ ಬರೆಹ ಮಂಗಳೂರಿನ ಒಂದು ವಿಶೇಷ ಸಂಚಿಕೆಗೆ ಬರೆದೆ, ಅದನ್ನೂ ವಿಮರ್ಶೆಗೆ ಒಳಪಡಿಸಿದವರು ಪೈಗಳು ಮಾತ್ರ. ಪೈಗಳವರ ಸಂಶೋಧಕ ಲೇಖನಗಳೊಡನೆ ಇರುತ್ತಿದ್ದ (All rights reserved)ನ ಮುದ್ರೆ ಮತ್ತು ತಮ್ಮ ಪದ್ಯಗಳಿಗೆ ಶಬ್ದಾರ್ಥ ಬರೆಯುವ ಪದ್ಧತಿ, ಬಹಳಷ್ಟು ಲೇಖನಗಳಿಗೆ ಕೊಡುವ ಟೀಪು-ಟಿಪ್ಪಣಿ, ಇವು ನಮ್ಮ ಸಾಹಿತ್ಯಕ ಸರಸದಲ್ಲಿ ಅವರನ್ನು "ಟೀಪೂಸುಲ್ತಾನ" ಪದವಿಗೇರಿಸಿದ್ದವು. ತಮ್ಮ ಸ್ವಂತ ಲೇಖನಗಳ ಬಗ್ಗೆ ಅವರು ತಾಳಿರುತ್ತಿದ್ದ ಗಾಂಭೀರ್ಯವು ಪ್ರಾಮಾಣಿಕತೆಯು ಬೇರೆ ಒಬ್ಬಿಬ್ಬರಲ್ಲಿಯೇ ಕಾಣಬಹುದು. ಅವರ ನಾಟಕ, ಕಾವ್ಯಗಳ ತಳಹದಿಗೆ, ಅಂತ: ಸಾರಕ್ಕೆ ಅಪಾರ ಚಿಂತನ ದ್ರವ್ಯ ಇತ್ತು. "ಗೊಲ್ಗೊಥಾ" "ಹೆಬ್ಬೆರಳು" ಇವು ಅಸಾಮಾನ್ಯ ಕೃತಿಗಳು. ಅರ್ವಾಚೀನ ಕನ್ನಡ ವಾಙ್ಮಯದಲ್ಲಿ ಏಕಲವ್ಯ ಅನೇಕ ಪಾಕಾಚಾರ್ಯರ ಕೌಶಲ್ಯಕ್ಕೆ ಪಕ್ಕಾಗಿದ್ದಾನೆ. ಒಬ್ಬೊಬ್ಬರಿಗೂ ಏಕಲವ್ಯ ಸಂಕೇತ ಬೇರೆ ಬೇರೆ ದಿಕ್ಕಿಗೆ ಎಳೆದಿದೆ. ಪೈಗಳವರ ಏಕಲವ್ಯ ಗ್ರೀಕ ಪಾಕ ಪಡೆದಿದ್ದಾನೆ. ಅದರ ವಿಮರ್ಶೆ ಸಾಕಷ್ಟು ಆಗಬೇಕು. ಪೈಗಳವರ ಕ್ರೈಸ್ತ ಚಿಂತನೆ ಅಸಾಮಾನ್ಯವಾದದ್ದು. ಅವರ ಯಾವ ಚಿಂತನೆ ಅಸಾಮಾನ್ಯವಲ್ಲ? ಬಸವಣ್ಣನವರ ಕಾಲ, ಜೈನರ ತತ್ತ್ವ, ಮಧ್ವಾಚಾರ್ಯರ ನಿಲವು, ತುಳುನಾಡಿನ ಪ್ರಾಚೀನತೆ, ಕೊಂಕಣಿಗರ ಮೂಲ-ಒಂದೊಂದೂ ಮಹಾಶಿಲ್ಪ. ಅವರ ಗದ್ಯದ ಗಡಸು, ಹೆಡಸು ಮತ್ತೆಲ್ಲಿಯೂ ಕಾಣಬರುವುದಿಲ್ಲ. ಅವರ ಕಾವ್ಯ ಪಾಕಕ್ಕೆ ಒಮ್ಮೊಮ್ಮೆ ಈ ಸಂಸ್ಕಾರ ಹೆಚ್ಚಾಗಿ ಅವರ ವಿಶೇಷತೆಯೇ ಅಪೂರ್ವವಾಗುತ್ತಿತ್ತು. ಪೈಗಳವರನ್ನು ಆತ್ಮ ಸತ್ತ್ವಕ್ಕೆ ಸೇರಿಸಿಕೊಂಡ ತರುಣ ಕವಿ ರೈಗಳು, ಗೆಳೆಯ ರಾಜರತ್ನಂ ಅವರು ನನಗೆ ದೃಷ್ಟಿ ಕೊಟ್ಟಿದ್ದಾರೆ.

ಪೈಗಳವರ ಸಮಗ್ರ ಗ್ರಂಥಗಳ ಸಂಪುಟಗಳು, ಅವರ ಚಾರಿತ್ರಿಕ ಹಿನ್ನೆಲೆ, ಅವರ ದಿನಚರಿ, ಪತ್ರವ್ಯವಹಾರ, ಗ್ರಂಥ ಸಂಗ್ರಹದ ವಿಶೇಷ ಇವುಗಳನ್ನು ಬೇಗ ಪ್ರಕಟಿಸುವ ಕಾಲ ಬಂದಿದೆ. ಹದ ಮೀರಿದೆ ಎಂದರೂ ಸಲ್ಲುವದು. ಅದನ್ನು ಅವರ ಆಪ್ತರು ಮಿತ್ರರು ಮಾಡಬೇಕು. ಕನ್ನಡಿಗರಿಗೆ ಓದಲು ಅನುಕೂಲವಾಗಬೇಕು. ಪೈಗಳು ನಮ್ಮ ಈ ಸಾಹಿತ್ಯ ಯುಗದ ಮಹಾ ವ್ಯಕ್ತಿಗಳು. ಶ್ರೀ ಪಾಂಡೇಶ್ವರ ಗಣಪತಿ ರಾಯರಂಥ ಅಸಾಮಾನ್ಯ ಸಾಹಿತಗಳಿಗೆ ಸ್ಫೂರ್ತಿಕೊಟ್ಟವರು. ಸಂಶೋಧಕರಿಗೆ ಉತ್ತರ ದಿಕ್‌ಸೂಚಿಯಾದವರು. ಅವರ ಬಾಳು ಸಾರ್ಥಕವಾದ ಬಾಳು. ಅವರ ಗ್ರಂಥಾವಲೋಕನ ವಿಮರ್ಶೆಗಳಿಂದ ಬರುವ ಪೀಳಿಗೆ ಸಂಸ್ಕಾರ ಪಡೆಯುವುದು ಅವಶ್ಯ ಎಂದು ತೋರುತ್ತದೆ.  ಈ ದಶಕ ಆ ಕಾಲ ತರಲಿ.



# ಕೆಲವು ನೆನಪುಗಳು

**ಸ್ವಾಮಿ ಆದಿ ದೇವಾನಂದ**

ಸಾಮಾನ್ಯವಾಗಿ ಜಗತ್ತಿನಲ್ಲಿ ಭಾವುಕ ಪ್ರವೃತ್ತಿಯುಳ್ಳವರಿಗೆ ಅಥವಾ ಕವಿಗಳಿಗೆ ವಸ್ತುಗತ ಜ್ಞಾನದಲ್ಲಿ (Objective Knowledge) ಪ್ರವೃತ್ತಿಯಿರುವುದಿಲ್ಲ, ವಸ್ತುಜ್ಞಾನ–ಕುಶಲರಿಗೆ ದಿವ್ಯ ಪ್ರತಿಭೆಯಿರುವುದಿಲ್ಲ. ಆದರೆ ಶ್ರೀ ಪೈಗಳಲ್ಲಿ ವಸ್ತುಗತ ಜ್ಞಾನ ಮತ್ತು ಅಲೌಕಿಕ ಪ್ರತಿಭೆ ಇವುಗಳ ಸಮನ್ವಯವನ್ನು ನೋಡಿ ಮೆಚ್ಚಿದೆನು. ರವಿಯು ಕಾಣದಿದ್ದುದನ್ನು ಕವಿ ಪೈಗಳು ಕಂಡಿದ್ದರೂ ರವಿಯು ಕಾಣುವುದನ್ನು ಕವಿಯು ಮರೆಯಲಿಲ್ಲ. ಇದು ಶ್ರೀ ಪೈಗಳ ಒಂದು ಅಸದೃಶವಾದ ವ್ಯಕ್ತಿತ್ವವೆಂದು ಭಾವಿಸುತ್ತೇನೆ.

ಹತ್ತು ಹನ್ನೆರಡು ವರುಷಗಳ ಹಿಂದೆ ಮಂಜೇಶ್ವರದಲ್ಲಿ ಶ್ರೀ ಗೋವಿಂದ ಪೈ ಅವರನ್ನು ಮೊದಲನೆಯ ಸಲ ನೋಡಿದೆನು. ನನ್ನ ಜೊತೆಯಲ್ಲಿ ಒಬ್ಬ ಹಿರಿಯ ಸಂನ್ಯಾಸಿಗಳಿದ್ದರು. ಶ್ರೀ ಗೋವಿಂದ ಪೈಗಳು ಅವರನ್ನು ಕುರಿತು ನಿಮ್ಮನ್ನು ಸುಮಾರು ನಲವತ್ತು ವರ್ಷ ಗಳ ಹಿಂದೆ ಮದ್ರಾಸಿನಲ್ಲಿ ನಿಮ್ಮ ಸೋದರ ಮಾವನ ಮನೆಯಲ್ಲಿ ನೋಡಿದ್ದೆನಲ್ಲವೆ? ಎಂದು ಕೇಳಿದರು. "ಹೌದು" ಎಂದು ಸ್ವಾಮಿಗಳು ಉತ್ತರಿಸಿದರು. ಈ ಸಣ್ಣ ಘಟನೆಯಿಂದ ಶ್ರೀ ಪೈಗಳ ಸ್ಮೃತಿ ಶಕ್ತಿಯ ಪರಿಚಯವು ನನಗೆ ಮೊದಲನೆಯ ಸಲವಾಯಿತು. ಇನ್ನೊಂದು ಸಲ ನಮ್ಮ ಆಶ್ರಮದಲ್ಲಿದ್ದ ಬಿ.ಎ.ತರಗತಿಯ ಒಬ್ಬ ವಿದ್ಯಾರ್ಥಿಗೂ ಶ್ರೀ ಪೈಗಳಿಗೂ ಪತ್ರದ ದ್ವಾರಾ ಯಾವುದೋ ಒಂದು ಶಿಲಾ ಶಾಸನದಲ್ಲಿ ರುವ ಕಾಲದ ವಿಷಯದಲ್ಲಿ ಚರ್ಚೆ ನಡೆಯಿತು. ನಮ್ಮ ವಿದ್ಯಾರ್ಥಿಯು ಜ್ಯೋತಿ: ಶಾಸ್ತ್ರದಲ್ಲಿ ಪರಿಚಯವುಳ್ಳವನಾಗಿದ್ದನು. ನಾನು ಪೈಗಳ ವಿಷಯದಲ್ಲಿ ಸ್ವಲ್ಪ ಎಚ್ಚರವಾಗಿರಬೇಕೆಂದು ಹೇಳಿದ್ದರೂ ತನ್ನ ಅಭಿಪ್ರಾಯದಲ್ಲಿ ನಿಶ್ಚಿತನಾಗಿದ್ದನು. ಕೊನೆಗೆ ಪೈಗಳ ಅಭಿಪ್ರಾಯವೇ ಸರಿ ಯೆಂದು ತಿಳಿಯಿತು. ಈ ಮೇಲೆ ಹೇಳಿದ ಘಟನೆಗಳಲ್ಲದೆ ಅವರು ನಮ್ಮ ಆಶ್ರಮಕ್ಕೆ ಅನೇಕ ಸಲ ಬಂದಾಗ ಪ್ರಾಚೀನ ಗ್ರಂಥಗಳ ವಿಷಯ ದಲ್ಲಿ ಸ್ವಾರಸ್ಯಪೂರ್ಣವಾದ ಚರ್ಚೆಯು ನಡೆದಿತ್ತು. ಆದರೆ ವಸ್ತುಗತವಾದ ಅಭಿಪ್ರಾಯದಲ್ಲಿ ಅವರು ಯಾವಾಗಲೂ ಅಪ್ರಮತ್ತರಾಗಿ ದ್ದರು.

ಪಂಡಿತರಾದವರು ಏನನ್ನಾದರೂ ಬಿಟ್ಟಾರು, ತಮ್ಮ ಅಹಂಕಾರವನ್ನು ಮಾತ್ರ ಬಿಡಲಾರರು; ಒಬ್ಬ ಪಾಶ್ಚಾತ್ಯ ಕವಿಯು ಹೇಳಿದಂತೆ ಅದು "ಉದಾತ್ತ ಮನಸ್ಸಿನ ಕೊನೆಯ ದೌರ್ಬಲ್ಯ" ಸರಳತೆಯಲ್ಲಿ, ನಿರಹಂಕಾರದಲ್ಲಿ, ವಿನಯದಲ್ಲಿ, ಸೌಜನ್ಯದಲ್ಲಿ, ಆತಿಥ್ಯದಲ್ಲಿ ಶ್ರೀ ಪೈಗಳಂಥ ವ್ಯಕ್ತಿ ನಮ್ಮ ಸಮಾಜದಲ್ಲಿ ಅತಿ ವಿರಳರೆಂದು ಖಂಡಿತವಾಗಿ ಹೇಳಬಹುದು. ತಾವೇ ಅಮಾನಿಗಳಾಗಿ ಇತರರಿಗೆ ಗೌರವವ ನ್ನು ಕೊಡುತ್ತಿದ್ದರು. ಅವರ ಅಭಿಪ್ರಾಯ ಅಲ್ಲಲ್ಲಿ ಸ್ವಲ್ಪ ಕಟುವಾಗಿ ಕಂಡು ಬಂದರೂ, ಅದು ದೀರ್ಘಾಭ್ಯಾಸದ ನಿಜವಾದ ವಿಮರ್ಶೆಯ ಫಲವೆಂದು ಯಾರು ಬೇಕಾದರೂ ತಿಳಿಯಬಹುದಾಗಿದ್ದಿತು. ಒಂದೇ ಮಾತಿನಲ್ಲಿ ಹೇಳುವುದಾದರೆ ಶ್ರೀ ಪೈಗಳು ಪ್ರಸನ್ನ ಗಾಂಭೀರ್ಯದ ಮೂರ್ತಿಯಾಗಿದ್ದರು.

ಅವರ ಮೇಲೆ ಧರ್ಮದ ಪ್ರಭಾವ ಎಷ್ಟಿತ್ತು?-ಎಂದು ಹೇಳುವುದು ಸ್ವಲ್ಪ ಕಷ್ಟದ ಮಾತು. ಏಕೆಂದರೆ ಅವರು ಧರ್ಮಧ್ವಜ ರಾಗಿರಲಿಲ್ಲ. ಹೊರಗಡೆ ಧರ್ಮದ ಯಾವ ಕುರುಹೂ ಕಂಡುಬರುತ್ತಿರಲಿಲ್ಲ. ಅವರದು ಧರ್ಮದ ಆಡಂಬರವನ್ನು ಸಹಿಸದ ಮನೋ ಭಾವ. ಅವರು ನನ್ನೊಂದಿಗೆ ಧರ್ಮದ ವಿಷಯದಲ್ಲಿ ಮಾತನಾಡಿದ್ದೇ ಅತಿ ಕಡಿಮೆ. ಆದರೆ ಆಳವಾದ ಮನಸ್ಸು, ಉಚ್ಚಮಟ್ಟದ ಸಾಹಿತ್ಯ ದಿಂದ ಸಂಸ್ಕೃತವಾದ ಅಂತ:ಕರಣ, ಆಂತರಿಕ ಸ್ವಭಾವ, ಪ್ರೇಮಪೂರ್ಣವಾದ ಆಚರಣೆ– ಇವು ಎಂದಿಗೂ ನಿರೀಶ್ವರವಾದಿಯ ಧರ್ಮ ವಾಗಲಾರದು. ಅವರು ಉಚ್ಚ ಮಟ್ಟದ ವೇದಾಂತಿಗಳಾಗಿದ್ದರೆಂದು ಸ್ವಲ್ಪ ಮಟ್ಟಿಗಾದರೂ ಶಾಸ್ತ್ರಾಚಾರ್ಯರ ಅನುಗ್ರಹವನ್ನು ಪಡೆದ ನಾನು ಹೇಳಬಲ್ಲೆನು.

ನಾವು ಅವರನ್ನು ಸುಮ್ಮನೆ ಹೊಗಳಿದರೆ ಅವರ ಹೃದಯಕ್ಕೆ ಪ್ರೀತಿಯುಂಟಾಗಲಾರದು: ಅವರ ಜೀವನದ ಗುರಿ ಕನ್ನಡ ಸಾಹಿ ತ್ಯದ ಸೇವೆಯಾಗಿತ್ತು. ಅವರ ಉದಾತ್ತ ಆದರ್ಶವನ್ನು ಅನುಸರಿಸಿ ನಮ್ಮಲ್ಲಿಯೂ ಕೆಲವರು ಕನ್ನಡ ಮಾತೆಯ ಸೇವೆಗೆ ಕಂಕಣಬದ್ಧರಾದರೆ ಶ್ರೀ ಗೋವಿಂದ ಪೈಗಳ ಪುಣ್ಯ ಸ್ಮೃತಿಯನ್ನು ನಿಜವಾಗಿ ಗೌರವಿಸಿದಂತೆ ಆಗುತ್ತದೆ.

# ದಿವಂಗತ ರಾಷ್ಟ್ರಕವಿ ಗೋವಿಂದ ಪೈ

**ಶ್ರೀ ನಿಜಲಿಂಗಪ್ಪನವರು**

"ತನು ಕನ್ನಡ ಮನ ಕನ್ನಡ ನುಡಿ ಕನ್ನಡವೆಮ್ಮವು" ಎಂಬ ಸ್ಫೂರ್ತಿದಾಯಕ ಕವನದ ಕರ್ತೃಗಳು ನಮ್ಮೊಡನೆ ಇಂದು ಇಲ್ಲದಿದ್ದರೂ ಅವರ ದಿವ್ಯಸ್ಮರಣೆ, ಅಮರ ವಾಕ್ಯಗಳು ಕನ್ನಡದ ಜನಮನದಲ್ಲಿ ಚಿರನೂತನವಾಗಿ ಉಳಿಯುವುವು. ಅವರ ಕವನಗಳಂತೆಯೇ ಸರಳ, ಆದರೆ ಗಂಭೀರವಾದ ವ್ಯಕ್ತಿತ್ವ ಗೋವಿಂದ ಪೈ ಅವರದು. ಅವರ ನಿರಾಡಂಬರ, ಅಕೃತ್ರಿಮ ನಡವಳಿಕೆ ಅವರನ್ನು ಸಂದರ್ಶಿಸಿದವರ ಮನೋಭಿತ್ತಿಯ ಮೇಲೆ ಮಾಸಲಾಗದ ಪ್ರಭಾವವನ್ನುಂಟುಮಾಡುವಂತಹುದು.

ತಮ್ಮ ಇಡಿ ಜೀವನವನ್ನೇ ಒಂದು ಮಹಾ ಕಾವ್ಯವನ್ನಾಗಿ ರೂಪಿಸಿಕೊಂಡ ಕೆಲವೇ ಮಹಾನುಭಾವರಲ್ಲಿ ಒಬ್ಬರಾಗಿದ್ದರು, ಎಂಭತ್ತು ವರ್ಷಗಳ ತುಂಬು ಜೀವನ ನಡೆಸಿದ ಕಾವ್ಯರ್ಷಿ ಗೋವಿಂದ ಪೈ ಅವರು.

ಮಂಗಳೂರಿನ ಹೆಸರಾಂತ ಬಾಪ್ಪೈ ಮನೆತನದಲ್ಲಿ ಇವರ ಜನನವಾಯಿತು. ತಮ್ಮ ಹುಟ್ಟು ನೆಲದ ಮೇಲೆ ಅಪಾರ ಪ್ರೇಮ ಇವರದು. ಬಾಲ್ಯವೆಲ್ಲವು ಮಂಗಳೂರಿನಲ್ಲೇ ಕಳೆಯಿತು. ಪ್ರಾರಂಭದ ವಿದ್ಯಾಭ್ಯಾಸವೂ ಅಲ್ಲಿಯೇ ನಡೆಯಿತು. ಶಿಕ್ಷಣ ತಜ್ಞರೂ ಕನ್ನಡ ನವೋದಯದ ಪುರೋಗಾಮಿಗಳೂ, ಉಜ್ವಲ ಭಾಷಾಭಿಮಾನಿಗಳೂ ಆದ ಪಂಜೆ ಮಂಗೇಶರಾಯರಂತಹ ಮೇಧಾವಿ ಗುರುಗಳ ಮಾರ್ಗದರ್ಶನದಲ್ಲಿ, ಪ್ರಕೃತಿ ಸೌಂದರ್ಯದ ಮಡಿಲಲ್ಲಿ, ಮಹಾಸಾಗರದ ಅನಂತತೆಯ ಪ್ರಭಾವಲಯದಲ್ಲಿ, ಪಾಶ್ಚಾತ್ಯ ಪೌರಾತ್ಯ ಸಂಸ್ಕೃತಿಗಳ ಸಂಗಮಸ್ಥಾನವೆನಿಸಿದ್ದ ಮಂಗಳೂರಲ್ಲಿ ಇವರ ಬುದ್ಧಿ, ಭಾವಗಳು ಪರಿಪಾಕಗೊಂಡು ಅವರ ಜೀವನ ಸರ್ವಾಂಗ ಸುಂದರವಾಗಿ ವಿಕಾಸಗೊಳ್ಳಲು ಅನುಕೂಲವಾಯಿತು.

ಮದ್ರಾಸಿನಲ್ಲಿ ಪ್ರೌಢವಿದ್ಯಾಭ್ಯಾಸ ಸಮಯದಲ್ಲಿ ಇವರ ಗಾಢಶ್ರದ್ಧೆ, ಸತತ ಅಭ್ಯಾಸ, ಸ್ವಭಾವಜನ್ಯವಾದ ಜ್ಞಾನತೃಷೆ, ಇವುಗಳ ಪರಿಣಾಮವಾಗಿ ಅವರ ಬುದ್ಧಿ ಹರಿತವಾದುದೇ ಅಲ್ಲದೆ ಗಹನವೂ ಆಯಿತು. ಅಲ್ಲಿ ನಮ್ಮ ರಾಷ್ಟ್ರಪತಿಗಳಾಗಿರುವ ರಾಧಾಕೃಷ್ಣನ್ ಅವರು ಇವರ ಜೊತೆಗಾರರಾಗಿದ್ದರೆಂದು ತಿಳಿದುಬಂದಿದೆ.

ಮೊದಲು ಕವನಗಳನ್ನು ಬರೆಯುವಂಥ ಸ್ಫೂರ್ತಿ ದೊರೆತುದು ಇವರ ಮನೆಯಲ್ಲಿ ನಡೆದ ಮದುವೆಯೊಂದರಲ್ಲಿ ಹೆಣ್ಣುಮಕ್ಕಳು ಹಾಡಿದ ಹಾಡಿನಿಂದ ಎಂದು ಹೇಳಲಾಗುತ್ತದೆ. ಮತ್ತೆ ಕೆಲವರು ಹರೆಯದಲ್ಲಿಯೇ ಕೈಹಿಡಿದ ಪತ್ನಿ ತೀರಿಹೋದ ದು:ಖ ವಿರಹವೇ ಇವರ ಕಾವ್ಯಧಾರೆಗೆ ಉಗಮಸ್ಥಾನವೆಂದೂ ಹೇಳುತ್ತಾರೆ. ಆದರೆ ಸ್ಫೂರ್ತಿಯ ಮೂಲ ಯಾವುದೇ ಇರಲಿ, ಕನ್ನಡ ಸಾಹಿತ್ಯ ಸಾಗರದಲ್ಲಿ ಇವರ ಕೊಡುಗೆಗಳು ಅನರ್ಘ್ಯ ಮುತ್ತು ರತ್ನಗಳಂತಿವೆ ಎಂಬುದು ಮಾತ್ರ ನಿರ್ವಿವಾದ ಸಂಗತಿ.

ಗೋವಿಂದ ಪೈಗಳು ಸಾಹಿತ್ಯ ವ್ಯವಸಾಯಕ್ಕೆ ಅದರಲ್ಲೂ ಕಾವ್ಯ ರಚನೆಗೆ ತೊಡಗಿದಾಗ ಆ ಕಾಲವನ್ನು ಕನ್ನಡ ಸಾರಸ್ವತ ಲೋಕದ ಒಂದು ಪರ್ವಕಾಲವೆನ್ನಬಹುದು. ಆಗ ಪದ್ಯರಚನೆಗೆ ಕವಿಗಿದ್ದ ಕಟ್ಟು ನಿಟ್ಟುಗಳು ಬಹಳ ಸಂಕುಚಿತವಾಗಿದ್ದುವು. ಪ್ರಾಸಗಳಿಲ್ಲದೆ ಪದ್ಯಗಳ ರಚನೆಯೇ ಸಾಗದು ಎನ್ನುತ್ತಿದ್ದ ಕಾಲವದಾಗಿದ್ದಿತು. ಇಂಥ ಕಾಲದಲ್ಲಿ ಕನ್ನಡ ಛಂದಸ್ಸಿನ ಬಗೆಗೆ ತೀವ್ರ ವಿಚಾರವನ್ನು ನಡೆಸಿ, ಬಗೆ ಬಗೆಯ ಪ್ರಯೋಗಗಳನ್ನು ನಡೆಸಿ ಕೊನೆಗೆ "ಲಕ್ಷಣಕ್ಕಿಂತಲೂ ಲಕ್ಷ್ಯವೇ ಮುಖ್ಯ"ವೆಂಬ ನಿಶ್ಚಯದ ನಿಲುಮೆಗೆ ಬಂದು, ಪರಂಪರಾನುಗತವಾಗಿ ಬಂದ ಪ್ರಾಸವನ್ನೂ ತ್ಯಜಿಸಿ, ಪದ್ಯಗಳನ್ನೂ ರಚಿಸಿ ಕ್ರಾಂತಿಕಾರಿ, ಧೀಮಂತ ಕವಿಗಳೆನಿಸಿಕೊಂಡರು. ಹರಿಹರ ದೇವನಂತೆ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಕಾರರೆಂದು ಹೇಳಿದರೆ ತಪ್ಪಾಗದು. ಸುಮಾರು ಮೂವತ್ತು ವರ್ಷಗಳಲ್ಲಿ ಅವರು ನಡೆಸಿದ ಪ್ರಯೋಗಗಳು "ಗಿಳಿವಿಂಡು" ಕವನ ಸಂಕಲನದಲ್ಲಿ ಮೂಡಿನಿಂತಿವೆ.

ಅನಂತರ ಗೊಲ್ಗೊಥಾ, ವೈಶಾಖಿ, ಎಂಬ ಖಂಡ ಕಾವ್ಯಗಳು ಪ್ರಭಾಸ ಗೊಮ್ಮಟ ಜಿನಸ್ತುತಿ, ವಿದ್ಯಾರಣ್ಯರ ಅಡಿದಾವರೆಗಳಲ್ಲಿ, ರನ್ನ ಮಹಾ ಕವಿಗೆ, ಹುಲುಕಟಿಗೆ, ಭಿಕ್ಷುವು ಪಕ್ಷಿಯು, ಮಾತಂಗಿ, ಮಿಂಚುಳ್ಳಿಗೆ-ಮುಂತಾದ ಸಾಹಿತ್ಯ ಸಂಕಲನಗಳು ಗೋವಿಂದ ಪೈ ಅವರ ಸಾಹಿತ್ಯ ಪ್ರಜ್ಞೆ, ಸಾಧನೆಗಳಿಗೆ ಸ್ಮಾರಕವಾಗಿ ನಿಂತಿವೆ.

"ಕಾವ್ಯವನ್ನು ಹಾಡಿ ಕಾವ್ಯವನ್ನು ಬಾಳಿದರು"ಅವರು. ಆದರೆ ಕೇವಲ ಕಾವ್ಯಾರಾಧನೆಯೇ ಮಾತ್ರವಲ್ಲದೆ ಸಾಹಿತ್ಯೇತಿಹಾಸ ಸಂಶೋಧನೆಗಳನ್ನು ನಡೆಸಿ ಅದರಲ್ಲೂ ಇವರು ಖ್ಯಾತರಾದರು. ಅವರ ವಿದ್ವತ್ತಿನ ಕ್ಷಕಿರಣಕ್ಕೆ ಕಾಲಗರ್ಭದಲ್ಲಡಗಿದ್ದ ನಿಗೂಢ ಸತ್ಯಾಂಶಗಳೂ ಮೈದೋರಿದವು. ಅಂತರ್ದೃಷ್ಟಿ, ಸತ್ಯನಿಷ್ಠೆ, ಪ್ರಾಮಾಣಿಕತನ, ಇವೆಲ್ಲಕ್ಕೂ ಮಿಗಿಲಾಗಿ ಸಹನೆ, ಸಂಯಮಗಳು ಅವರ ಸಂಶೋಧನೆಗಳ ಯಶಸ್ಸಿನ ಗುಟ್ಟು. ಕನ್ನಡ ಕವಿಗಳ ವಿಚಾರವಾಗಿ ಕನ್ನಡ ನಾಡು ನುಡಿಗಳ ಪ್ರಾಚೀನತೆಯ ಬಗೆಗೆ ಅವರು ವ್ಯಕ್ತಪಡಿಸಿರುವ ವಾದ ವಿವಾದ ಪೂರ್ಣ ಅಭಿಪ್ರಾಯಗಳು ವಿದ್ವಜ್ಜನರ ಮನ್ನಣೆಗೆ ಪಾತ್ರವಾಗಿವೆ.

ವಿದ್ಯಾರ್ಥಿಗಳಿದ್ದಾಗಲೇ ಇವರ ಮನಸ್ಸನ್ನೂ ಬಹಳವಾಗಿ ಆಕರ್ಷಿಸಿದ ಭಾಷೆಯೆಂದರೆ ಇಂಗ್ಲಿಷ್. ಇದರೊಡನೆಯೇ ಗ್ರೀಕ್, ಜರ್ಮನ್, ಮುಂತಾದ ಭಾಷೆಗಳಲ್ಲೂ ಇವರು ವಿಶೇಷ ಪರಿಶ್ರಮವನ್ನು ಪಡೆದರು. ಇವೇ ಅಲ್ಲದೆ ಎಲ್ಲಾ ದೇಶೀಯ ಭಾಷೆಗಳಲ್ಲೂ ಇವರು ಪ್ರವೀಣರಾಗಿದ್ದರು. ಈ ರೀತಿ ಅವರ ಬಹುಭಾಷಾಜ್ಞಾನ ಮತ್ತು ದೈವದತ್ತವಾದ ವಿಸ್ಮಯಕಾರಿ ಜ್ಞಾಪಕಶಕ್ತಿಯಿಂದಾಗಿ ಇವರ ಸಾಹಿತ್ಯ ಕೃಷಿ ಹುಲುಸಾಗಿ ಸಾಗಿತು.

ಬಹುಭಾಷಾ ತಜ್ಞರಾದರೂ ತಮ್ಮ ಒಲವಿನ ಕನ್ನಡ ನಾಡು ನುಡಿಗಳ ಮೇಲಿನ ಅವರ ಪ್ರೇಮ ಅಪಾರವಾದುದು; ಅಸೀಮವಾದುದು. ಈ ಬಗ್ಗೆ ಅವರ ಜಾಗ್ರತ ಅಭಿಮಾನ, ಎಂಥವರಲ್ಲೂ ಕೆಚ್ಚು ಮೂಡಿಸುವಂತಹದಾಗಿದ್ದಿತು.

ಸುಖ-ದು:ಖ ಜೀವನದ ಎರಡು ಮುಖಗಳು; ಈ ಎರಡೂ ಮುಖಗಳ ದರ್ಶನವಿಲ್ಲದ ಯಾವ ಜೀವನವೇ ಆಗಲಿ ಪರಿಪೂರ್ಣ, ಪರಿಪಕ್ವ ಜೀವನವೆಂದೆನಿಸಿಕೊಳ್ಳಲಾರದು; ಇದೇ ಗೋವಿಂದ ಪೈ ಅವರ ಜೀವನ ಸಿದ್ಧಾಂತವಾಗಿದ್ದಿತು. ವಿದ್ಯಾರ್ಥಿ ಜೀವನದಿಂದ ಹೆಜ್ಜೆ ಹೊರಗಿಡುತ್ತಿರುವಾಗಲೇ ಮನೆಯ ಹಿರಿಯ ಮಗನಾದ ಇವರು ಸಂಸಾರದ ಹೊರೆ-ಹೊಣೆಗೆ ಹೆಗಲು ಕೊಡಬೇಕಾಯಿತು. ಈ ಮಧ್ಯೆ ಅವರ ಮನಮೆಚ್ಚಿದ ಮಡದಿ ಮಡಿದಳು; ಹೀಗೆ ಅವರ ಜೀವನಾಕಾಶದಲ್ಲಿ ಮೂಡುತ್ತಿದ್ದ ಕಷ್ಟಗಳ ಕಾರ್ಮೋಡಗಳ ಮಧ್ಯೆಯೂ ಅವರು ಎದೆಗುಂದದೆ ತಮ್ಮ ಗುರಿಯತ್ತ ಮುನ್ನಡೆದರು. ಈ ಸಮಯವೇ ಅವರ ಕಷ್ಟಸಹಿಷ್ಣುತೆಗಳ, ಸಹನೆ ಸಂಯಮಗಳ ಒರೆಗಲ್ಲಾಗಿ ಪರಿಣಮಿಸಿತು. ತಮ್ಮನ್ನು ಬಿಟ್ಟು ಅಗಲಿದ ತಮ್ಮ ಧರ್ಮ ಪತ್ನಿಯನ್ನು ಕುರಿತಾದ ವಿರಹ ವ್ಯಥೆಯನ್ನು ಅನೇಕ ಕವನಗಳಲ್ಲಿ ಅವರು ತೋಡಿಕೊಂಡರು. ಈ ಕವನಗಳ ಇನ್ನೊಂದು ಮುಖದಲ್ಲಿ ನಮಗೆ ಪರಮಾತ್ಮನನ್ನು ಕುರಿತಾದ ಅವರ ಅನನ್ಯ ಭಕ್ತಿಭಾವವೂ ಗೋಚರಿಸುತ್ತದೆ. ಈ ಕವನಗಳೆಲ್ಲವೂ ಸಾಹಿತ್ಯದೇವಿಯ ದೇಗುಲವನ್ನು ಬೆಳಗುವ "ನಂದಾದೀಪ"ವಾಗಿ ಪ್ರಕಟಗೊಂಡುವು.

ಈ ರೀತಿಯಾಗಿ ಕಾವ್ಯಾಂಗನೆಗೆ ಸಾಹಿತ್ಯ ಶ್ರೀಗೆ ಮನವೊಲಿದಿದ್ದ ಗೋವಿಂದ ಪೈ ಅವರಿಗೆ ಅದೇಕೋ ಕೀರ್ತಿಕಾಮಿನಿಯ ಬಗ್ಗೆ ಹೇಳತೀರದ ನಿರಾಸಕ್ತಿ, ಅನಾದರ. 1950ರಲ್ಲಿ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರನ್ನಾಗಿ ಅವರನ್ನು ಆರಿಸಿದ ಮುಂಬೈ ಕನ್ನಡಿಗರಿಗೆ ತಮ್ಮ ಒಪ್ಪಿಗೆಯನ್ನು ನೀಡಲು ಅವರು ಸಾಕು-ಬೇಕು ಮಾಡಿದರು. ಆದರೆ ದಿವಂಗತ ನಾರಾಯಣ ಕಿಲ್ಲೆಯವರಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ಮನಸ್ಸಿಲ್ಲದ ಮನಸ್ಸಿನಿಂದ 1949ರಲ್ಲಿ ಮದ್ರಾಸು ಸರ್ಕಾರದವರು ನೀಡಿದ "ರಾಷ್ಟ್ರಕವಿ" ಪದವಿಯನ್ನು ಅವರು ಸ್ವೀಕರಿಸಿದರು. ಕನ್ನಡದ ಅಭಿಮಾನಿಗಳು ಅವರಿಗೆ ಪ್ರಶಸ್ತಿ ಗ್ರಂಥವನ್ನು ನೀಡಬೇಕೆಂದು ಮಾಡಿದ ಪ್ರಯತ್ನಗಳೆಲ್ಲವನ್ನೂ "ಜೀವಂತವಿರುವ ನನಗೇಕೆ ಈ ಪ್ರಶಸ್ತಿ ಗೌರವಗಳು? ನಾನು ಸತ್ತಮೇಲೆ ನಿಮ್ಮದೇ ರಾಜ್ಯ" ಎಂದು ಅವರು ನುಡಿದಿದ್ದರು. ಎಲೆಯ ಮರೆಯ ಕಾಯಾಗಿಯೇ ಬದುಕಬಯಸುತ್ತಿದ್ದ ಹಿರಿಮೆಯ ಜೀವ ಗೋವಿಂದ ಪೈಗಳದು.

ಈ ಹಿರಿಯ ವ್ಯಕ್ತಿಯಲ್ಲಿ ಕಂಡುಬರುತ್ತಿದ್ದ ಮತ್ತೊಂದು ಹಿರಿಯ ಗುಣ ವಿಶೇಷವೇನೆಂದರೆ, ತಮ್ಮಲ್ಲಿಗೆ ತಿದ್ದಿ ಮುನ್ನುಡಿ ಬರೆಯಲು ಕಳುಹಿಸುತ್ತಿದ್ದ ಎಲ್ಲ ಉದಯೋನ್ಮುಖ, ಕಿರಿಯ ಕವಿ, ಕಾದಂಬರಿಕಾರರ ಕೃತಿಗಳನ್ನೂ ಬೇಸರವಿಲ್ಲದೆ ಓದಿ ದೋಷಗಳನ್ನು ತಿದ್ದಿ, ಬುದ್ಧಿ ಮಾತುಗಳನ್ನು ಬರೆದು ಕಳುಹಿಸಿಕೊಡುತ್ತಿದ್ದರು. ಈ ಕಾರ್ಯ ಅವರು ಕಿರಿಯರಿಗೆ ತಮ್ಮ ಕೊನೆಯ ಕಾಲದ ವರೆಗೂ ತಪ್ಪದೆ ಮಾಡಿದ ಒಂದು ಮಹದುಪಕಾರವೆನ್ನಬಹುದು.

ಗೋವಿಂದ ಪೈಗಳವರ ಎಂಭತ್ತು ವರುಷಗಳ ತುಂಬುಜೀವನದ ಉದ್ದಗಲಕ್ಕೂ, ಅವರನ್ನು ಕಾಣಹೋದ ಹೊರಗಿನ ವ್ಯಕ್ತಿಗಳಿಗೂ, ಅವರ ಆಪ್ತಸ್ನೇಹಿತರಿಗೂ, ಕಾಣಬರುತ್ತಿದ್ದುದು ಅವರ ಅಪ್ರತಿಮ ಮೇಧಾಶಕ್ತಿ, ಶಿಶುಸಹಜ ಸರಳ ಮುಗ್ಧಮನ, ಮಾತ್ಸರ್ಯರಹಿತ ನಡೆ, ಮಹೋನ್ನತ ಪ್ರತಿಭೆ, ಜಾಗ್ರತ ಭಾಷಾಭಿಮಾನ, ಆತ್ಮೀಯತೆ, ನಿರ್ವಾಜ್ಯ ಅಂತ:ಕರಣ ಮತ್ತು ರಸಿಕತೆಯಿಂದ ಕೂಡಿದ ಅವರ ಮಾತಿನ ಮೋಡಿ. ದಿವಂಗತ ದ.ಬಾ.ಕುಲಕರ್ಣಿಯವರು ಹೇಳಿರುವಂತೆ "ಒಣಗಣ್ಣಿಗೆ ಪೈ ಒಂದು ಪ್ರವಾಹವಿದ್ದಂತೆ-ಅದರ ಸುಳಿಗಳ ವೈಭವ ಆದರದು; ದಂಡೆ ಕೊರೆದೀತು; ನೀರು ನೀರೆ;"

ಗೋವಿಂದ ಪೈಗಳನ್ನು ನೋಡಿ ಮಾತನಾಡಿಸಿದ ಕೆಲ ಪುಣ್ಯ ಸಮಯಗಳುಂಟು. ಒಮ್ಮೆ ಕಾಸರಗೋಡು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೇ ಇದ್ದ ಕಾಲದಲ್ಲಿ ನಾನು ನನ್ನ ಸ್ನೇಹಿತರೊಂದಿಗೆ ಅವರ ಮನೆಗೆ ಹೋಗಿ ಅವರ ದರ್ಶನ ಪಡೆದು ಕೆಲವು ಗಂಟೆಗಳ ಕಾಲ ಅವರೊಡನೆ ಇದ್ದೆವು. ನಮಗಾಗಿ ಮಾಡಿಸಿದ ಅಡಿಗೆ ಊಟದ ಸಮಯದಲ್ಲಿ ಅವರ ಆತಿಥಿ ಸತ್ಕಾರದ ವೈಶಿಷ್ಟ್ಯ, ಸಣ್ಣವರಿಂದ ನಮ್ಮಲ್ಲಿ ತೋರಿದ ಗೌರವ, ದಯಾಪೂರಿತ ನಡೆನುಡಿಗಳು, ಅವರ ಕಲಾವಸ್ತುಗಳ ಸಂಗ್ರಹ, ಮುಖ್ಯವಾಗಿ ಅವರ ಪ್ರೀತಿ ವಿಶ್ವಾಸ ನನ್ನ ಮೇಲೆ ವಿಶೇಷ ರೀತಿಯ ಪರಿಣಾಮವನ್ನುಂಟುಮಾಡಿದವು. ಜೀವನದಲ್ಲಿ ಒಂದು ಹೊಸ ಬೆಳಕು ಕಂಡಿತು. ನಮ್ರತೆಯ ಅರಿವಾಯಿತು. ಆ ದಿನ ಅವರೊಡನಿದ್ದ ಚಿತ್ರ ಎಂದೆಂದೂ ಮರೆಯಲಾಗದು. ಎಂದಿಗೂ ಹಚ್ಚ ಹಸಿರು.

ಇಂಥ ಒಂದು ಹಿರಿಯ ಜೀವದ ನಿರ್ಗಮನದಿಂದ ನಮ್ಮ ಕನ್ನಡ ಸಾರಸ್ವತ ಭಂಡಾರದ ಶ್ರೀಮಂತಿಕೆ ಬಹುಮಟ್ಟಿಗೆ ಬಡವಾಯಿತು ಎಂದರೆ ಅತಿಶಯೋಕ್ತಿಯಾಗಲಾರದು. ಆದರೆ ನಾವು-ಕನ್ನಡಿಗರಾದ ನಾವು, ನಮ್ಮ ನಾಡು ನುಡಿಗಳಿಗೆ ಕಳಂಕ ತಟ್ಟದಂತೆ ಎಚ್ಚರದಿಂದ ಪ್ರಾಮಾಣಿಕತೆಯಿಂದ ನಡೆದುಕೊಂಡರೆ ಅದರಿಂದ ಅವರ ಪುಣ್ಯ ಆತ್ಮಕ್ಕೆ ಶಾಂತಿ ದೊರೆತೀತು. ಇದೇ ನಾವು ಅವರ ಹಿರಿಯ ಬದುಕಿಗೆ ನೀಡುವ ಕಿರಿಯ ಕಾಣಿಕೆ.

# ರಾಷ್ಟ್ರಕವಿ ಗೋವಿಂದ ಪೈ

**ಶ್ರೀ ನಿಟ್ಟೂರು ಶ್ರೀನಿವಾಸ ರಾವ್**

ರಾಜಕೀಯವಾಗಿ ಕನ್ನಡಕ್ಕೆ ಹೆಸರು, ಉಳಿವು ಇಲ್ಲದ ಕಾಲದಲ್ಲಿ ಅದನ್ನು ಉಳಿಸಿಕೊಂಡು ಬಂದ ಕೀರ್ತಿ ದಕ್ಷಿಣ ಕನ್ನಡ ಜಿಲ್ಲೆಗೆ ಸೇರುತ್ತದೆ. ನಮಗೆ ದಕ್ಷಿಣ ಕನ್ನಡವೆಂದರೆ ಮುಖ್ಯವಾಗಿ ಮಂಗಳೂರು, ಉಡುಪಿ. ಉಡುಪಿ ಕೃಷ್ಣದೇವಾಲಯಕ್ಕೂ ಪರ್ಯಾಯಕ್ಕೂ ಹೆಸರಾದರೆ, ಸಾಹಿತ್ಯಕ್ಕೂ, ವಿದ್ಯೆಗೂ ಮಂಗಳೂರು ಹೆಸರಾಗಿದೆ. ಉಡುಪಿಯಲ್ಲಿ "ಕೃಷ್ಣಸೂಕ್ತಿ"ಗೆ ರಾಜಗೋಪಾಲಕೃಷ್ಣರಾಯರ ಹೆಸರೂ ದಾಸ ಸಾಹಿತ್ಯ ಪ್ರಕಟಣೆಗೆ ಪಾವಂಜೆ ಗುರುರಾಯರ ಹೆಸರೂ ಪ್ರಖ್ಯಾತವಾಗಿದ್ದರೆ, ಮಂಗಳೂರು ಬಾಸೆಲ್ ಮಿಶನ್ ಅಚ್ಚುಕೂಟಕ್ಕೆ, ಧರ್ಮ ಪ್ರಕಾಶಪ್ರೆಸ್, ಶಾರದಾ ಪ್ರೆಸ್, ಅಚ್ಚುಕೂಟಗಳು, ಆ ಮೂಲಕ ಪ್ರಕಾಶವಾಗುತ್ತಿದ್ದ ಕನ್ನಡ ಪುಸ್ತಕಗಳಿಗೆ ಪ್ರಖ್ಯಾತವಾಯಿತು. ಕಿಟ್ಟೆಲರ ಕೆಲಸ ಬಹುಮಟ್ಟಿಗೆ ಮಿಶನರಿ ಅಚ್ಚುಕೂಟಗಳಿಂದ ನೆರವೇರಿತು. ಆ ಕೆಲಸದಲ್ಲಿ ನೆರವಾದವರು ನಮ್ಮೂರಿನ ವಿದ್ವಾಂಸರು ಹಲವಾರು ಮಂದಿ. ಉಳ್ಳಾಲರೂ, ಪಂಜೆಯವರೂ ತಮ್ಮ ಕಾಲದಲ್ಲಿ ಕನ್ನಡಕ್ಕೆ ಹೃತ್‌ಸ್ಥಾನಗಳಾಗಿ ದುಡಿದರು. ಆ ಮಹನೀಯರಿಬ್ಬರೂ ರಾಜಗೋಪಾಲ ಕೃಷ್ಣರಾಯರು, ಮುಳಿಯ ತಿಮ್ಮಪ್ಪಯ್ಯನವರು, ಸೌಭಾಗ್ಯವಶಾತ್ ನಮ್ಮೊಡನಿರುವ ಹುರುಳಿ ಭೀಮರಾಯರು ಮುಂತಾದವರು ಇಲ್ಲಿ ಮೊದಲು ಕನ್ನಡ ಸಾಹಿತ್ಯಸಮ್ಮೇಳನ 1925ರಲ್ಲಿ ನಡೆದಾಗ ಅದನ್ನು ಯಶಸ್ವಿಯಾಗಿ ನೆರವೇರಿಸಿದ ಹಿರಿಯರು. ಕಿರಿಯರಲ್ಲಿ ಈಗ ನಮ್ಮೆದಿರಿಗಿರುವ ಕಡೆಂಗೋಡ್ಲು ಶಂಕರಭಟ್ಟರೂ ಒಬ್ಬರು. ಗೋವಿಂದ ಪೈಗಳು ಆಗ ಹೆಚ್ಚಾಗಿ ಈ ಉತ್ಸವದಲ್ಲಿ ಕಾಣಿಸಲಿಲ್ಲ. ಆದರೂ ಅವರ ಕೀರ್ತಿ ನಮ್ಮ ಕಡೆಗೆ ಆಗಲೇ ಹಬ್ಬಿತ್ತು. ಅವರು ಬೆಂಗಳೂರಿಗೆ ಆ ಹೊತ್ತಿಗೆ ಒಮ್ಮೆ ಬಂದಿದ್ದರು. ಅವರ ಕವಿತೆಗಳೂ ವಿದ್ವತ್ ಪ್ರಬಂಧಗಳೂ ಅವರ ಧೈರ್ಯ ಸಾಹಸಗಳ ದ್ಯೋತಕಗಳಾಗಿದ್ದುವು. ಅವರಿಂದ ಮಂಜೇಶ್ವರ ನಮಗೆ ಸುಹೃತ್ ಕೇಂದ್ರವಾಯಿತು. ನಾವು ಯಾರು ಈ ಕಡೆ ಬಂದರೂ ಮಂಜೇಶ್ವರಕ್ಕೆ ಹೋಗದೆ, ಅವರನ್ನು ಕಾಣದೆ, ನಮ್ಮ ಊರಿಗೆ ಹಿಂದಿರುಗುತ್ತಿರಲಿಲ . ಅವರ ವಿಶ್ವಾಸ ಸ್ನೇಹದ ವೈಭವ ಅಂಥಹದು.

ಕವಿತೆಯಲ್ಲಿ ಅವರು ಸಾಧಿಸಿದ ಕೀರ್ತಿ ದೊಡ್ಡದು. ಮೊದಲಿಗೇ ಅಂತ್ಯಪ್ರಾಸ ಬಿಟ್ಟ ಸರಳರಗಳೆಯ ಛಂದಸ್ಸನ್ನು ಅವರು ಬಳಸಿದ್ದರು. ಅಷ್ಟೇ ಆದರೆ, ಅದು ಅತಿದೊಡ್ಡ ಸಾಧನೆಯಲ್ಲದಿರಬಹುದು. ಆದರೆ ನಮ್ಮ ದೇಶದಲ್ಲಿ ಅಷ್ಟಕ್ಕೂ ಧೈರ್ಯ ಬೇಕಿತ್ತು. ತಮ್ಮ ಪಾಂಡಿತ್ಯದ ಬಲದಿಂದ ತಮಗೆ ಬೇಕಾದ ಬಂಧವನ್ನೂ, ರಚನೆಯ ವಿಲಾಸಗಳನ್ನೂ ಅವರು ಒದಗಿಸಿಕೊಂಡಿದ್ದರು. ಸಂಸ್ಕೃತ ಪ್ರಾಕೃತ ಮತ್ತು ಇತರ ದೊಡ್ಡ ಭಾರತೀಯ ಭಾಷೆಗಳು ಅವರ ಅಧಿಕಾರಕ್ಕೆ ಬಂದಿದ್ದವಾದ್ದರಿಂದ, ಆ ಎಲ್ಲ ಸಾಹಿತ್ಯಗಳಲ್ಲಿಯೂ ಆ ವರೆಗೆ ಎಂಥ ಕೆಲಸ ನಡೆದಿತ್ತೆಂಬುದನ್ನು ಅವರು ಅರಿತಿದ್ದುದರಿಂದಲೂ ಅವರ ಪ್ರಯೋಗಗಳಲ್ಲಿ ಪ್ರಗತಿ ಚೈತನ್ಯವಿತ್ತು. ಜೊತೆಗೆ ಇಂಗ್ಲಿಷ್, ಫ್ರೆಂಚ್, ಇಟಾಲಿಯನ್, ಪರ್ಶಿಯನ್, ಮುಂತಾದ ಭಾಷಾ ಸಾಹಿತ್ಯಗಳ ಪ್ರವೇಶ ಅವರಿಗಿದ್ದುದರಿಂದ ಅಲ್ಲಿ ಯಾವ ಬಗೆಯ ಸಾಹಿತ್ಯ ಪ್ರಕಾರಗಳು ಬೆಳೆದು ಅಲ್ಲೆಲ್ಲ ಸಾಹಿತ್ಯ ಸೃಷ್ಟಿ ಯಾವ ಸತ್ಯವನ್ನು ಹರಡಿತ್ತೆಂಬುದು ಅವರ ಮನಸ್ಸಿನಲ್ಲಿತ್ತು. ಕನ್ನಡದಲ್ಲಿ ಅಂಥ ಸಾಹಿತ್ಯ ಸಂಪತ್ತಿಯನ್ನು ಬೆಳೆಸುವ ಅವರ ಉತ್ಸಾಹಕ್ಕೆ ಇದೆಲ್ಲಾ ದೊಡ್ಡ ಸಾಧನವಾಯಿತು, ಸಂಪತ್ತಿಯಾಗಲು ಅನುವಾಯಿತು.

ಅವರು ಯಾವುದನ್ನೂ ಅನುಕರಿಸಿದವರಲ್ಲ. ಯಾರ ನಾಯಕತ್ವವೂ ಅವರಿಗೆ ಸೊಗಸದು. ಮಾತನ್ನು ಆರಿಸುವ ರೀತಿ, ಶಬ್ದ ರೂಪವನ್ನು ನಿರ್ಣಯಿಸಿಕೊಳ್ಳುವ ರೀತಿ, ಪದ್ಯಗಳನ್ನು ಕಲ್ಪಿಸುವ ವೈಖರಿ, ಅವರವೇ "ಗಿಳಿವಿಂಡಿ"ನ ಅವರ ಕವನಗಳನ್ನು ನೋಡಿದರಾಗಲಿ "ನಂದಾದೀಪ"ದಂಥಾ ಪದ್ಯಗಳ ಬಂಧವನ್ನು ನೋಡಿದರಾಗಲಿ ಗೊತ್ತಾಗುತ್ತದೆ. ಯಾವುದಾದರೂ ಮೂಲ ಅವರ ಹೃದಯಕ್ಕೆ ಪ್ರಿಯವಾಗಿ ಕಂಡು ಅದನ್ನು ಕನ್ನಡಕ್ಕೆ ತರಬೇಕೆನ್ನಿಸಿದರೆ ಅದನ್ನು ತಮ್ಮ ಒಲವಿಗೆ ತಕ್ಕಂತೆ ಬಳಸಿಕೊಳ್ಳುತ್ತಿದ್ದರು. ಮಾರ್ಪಡಿಸಿಕೊಳ್ಳುತ್ತಿದ್ದರು. ಜರ್ಮನ್ ಕವಿ ಥಿಯೊಡೋರ್ ಕೋರ್ನರ್‌ನ "ಕೊಳುಗುಳದ ಮನವಿ"ಯನ್ನು ನೋಡಿದರೆ ಅದು ಗೊತ್ತಾಗುತ್ತದೆ. ಅವರಿಗೆ ಆ ಮೂಲವು ಒಂದು ನೆಪ, ಆಧಾರ ಮಾತ್ರ. ಇವರು ಅದನ್ನು ಹಬ್ಬಿಸಿಕೊಂಡರು. ಉಮರ ಖಯ್ಯಾಮನ ರುಬಾಯಿಗಳನ್ನು ಕನ್ನಡಕ್ಕೆ ಇತರ ಕೆಲವರಂತೆ ಇವರೂ ತಂದರು. ಆದರೆ ಮೂಲದ ರಚನೆ-ಪ್ರಾಸ-ನಿಯಮಗಳನ್ನು ಉಳಿಸಿಕೊಂಡು ಕನ್ನಡಿಸಿದರು. ಅವರು ಬರೆದ ಇತರ ಕವಿತೆಗಳಲ್ಲಿ "ಗೊಲ್ಗೊಥ" "ವೈಶಾಖಿ" "ಪ್ರಭಾಸ" ತುಂಬಾ ಮಹತ್ತಾದುವು. "ಪ್ರಭಾಸ"ದಲ್ಲಿ ಕೃಷ್ಣ, "ವೈಶಾಖಿ"ಯಲ್ಲಿ ಬುದ್ಧ, "ಗೊಲ್ಗೊಥಾ"ದಲ್ಲಿ ಯೇಸು. ಈ ಮೂವರು ಲೋಕಹಿತಸಾಧಕರಾದ ಮಹಾತ್ಮರ ನಿರ್ಯಾಣದ ಸ್ವರೂಪವನ್ನು ಅವುಗಳಲ್ಲಿ ಚಿತ್ರಿಸಿದೆ. ಇವರ ಲೋಕಯಾತ್ರೆಯ ಕೊನೆಯ ದೃಶ್ಯ ಮನೋಜ್ಞವಾಗುವಂತೆ ಹಾಗೆ ವರ್ಣಿಸಿರುವವರು ಇನ್ನಾರೂ ಇಲ್ಲ. ಅವರು ಜಪಾನಿನ "ನೋಹ್" ನಾಟಕಗಳನ್ನೂ "ಹೆಬ್ಬೆರಳು" ಎಂಬ ಏಕಲವ್ಯ ಕಥೆಯನ್ನೂ "ಚಿತ್ರಭಾನು" (ಅಥವಾ 1942) ಎಂಬುದನ್ನೂ ನಾಟಕದ ವಸ್ತುವನ್ನಾಗಿ ಬಳಸಿಕೊಂಡು ಉತ್ತಮ ಸಾಹಿತ್ಯ ನಿರ್ಮಾಣ ಮಾಡಿದ್ದಾರೆ. ಇತಿಹಾಸ ಸಂಶೋಧಕರಾಗಿ ಅವರ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಇವುಗಳ ಸೇವೆ ಅತ್ಯಪೂರ್ವವಾದುದು. ಹಲವರ ಕಾಲ ನಿರ್ಣಯಕ್ಕೆ ಕೈಹಾಕಿ ಆ ಸುಂದರ್ಭದ ಎಲ್ಲಾ ಪ್ರಾಚೀನ ಲೇಖನ-ಶಾಸನ ಸಂಪತ್ತನ್ನು ಕೂಡಿಸಿ ಕವಿಗಳ, ಆಚಾರ್ಯರ, ಶಕಪುರುಷರ ಕಾಲ ನಿರ್ಣಯವನ್ನು ಮಾಡಿದ್ದಾರೆ. ಆ ಸಂಬಂಧದಲ್ಲಿ ಅವರು ಪ್ರಮಾಣ ಸಂಗ್ರಹ ಮಾಡುವ ರೀತಿ, ಅದನ್ನು ವಾದಕ್ಕೆ ಬಳಸಿಕೊಳ್ಳುವ ರೀತಿ, ನಿರ್ಣಯಕ್ಕೆ ಬರುವ ರೀತಿ, ವಿದ್ಯಾರ್ಥಿಗಳಿಗೆ ಅತೀವ ಮಾರ್ಗದರ್ಶಕವಾಗುತ್ತದೆ. ಅಲ್ಲಿ ಸಂಗ್ರಹವಾಗಿರುವ ಪ್ರಮಾಣಗಳು ಇನ್ನೂ ಎಷ್ಟೋ ಸಂದರ್ಭಗಳ ಮೇಲೆ ಬೆಳಕನ್ನು ಬೀರಬಲ್ಲ ಸಾಧನಗಳಾಗುತ್ತವೆ.

ಯಾರು ಲೇಖನವನ್ನೂ ಕವಿತೆಯನ್ನೂ ಕೇಳಿದರೂ ಅವರಿಗೆ ಇಲ್ಲವೆನ್ನದೆ, ಪತ್ರಿಕೆಗಳಿಗೆ, ಸ್ಮಾರಕ ಗ್ರಂಥಗಳಿಗೆ, ವಿಶೇಷ ಸಂಚಿಕೆಗಳಿಗೆ ದಾತರಾದರು. ಎಲ್ಲದರಲ್ಲೂ ಅವರ ಅಚ್ಚುಕಟ್ಟು, ಖಚಿತತೆ, ನಿತಾಂತವಾದ ನಿಲುವು, ಇಂಥಿಂಥದನ್ನು ಹೀಗೆ ಹೀಗೆ ಅಚ್ಚು ಮಾಡತಕ್ಕದ್ದು ಎಂಬ ನಿರ್ದೇಶನ ಅವರ ಹಸ್ತಪ್ರತಿಗಳಲ್ಲಿರುತ್ತಿತ್ತು. ಯಾರಾದರೂ ಯಾವುದಾದರೂ ಸಮಸ್ಯೆಯನ್ನು ಅಥವಾ ವಿಚಾರವನ್ನು ಕುರಿತು ತಿಳುವಳಿಕೆ ಬೇಕೆಂದು ಬರೆದರೆ ಒಡನೆಯೇ ಅವರಿಂದ ಆ ಸಂಬಂಧದಲ್ಲಿ ತಿಳುವಳಿಕೆ ದೊರೆಯುತ್ತಿತ್ತು. ಈ ಉಪಕಾರ ಅಸಾಧಾರಣವಾದುದು. ಅವರ ಅಮೂಲ್ಯವಾದ ಪುಸ್ತಕ ಭಂಡಾರದಲ್ಲಿ ವರದಿಗಳು, ನಿಘಂಟುಗಳು, ವಿಶ್ವಕೋಶಗಳು ಹಲವು ಭಾಷೆಯವು-ಎಲ್ಲವೂ ಇರುತ್ತಿದ್ದವಾಗಿ ಅವರು ಹೊರಗಿನವರ ನೆರವಿಗೆ ಹೆಚ್ಚಾಗಿ ಕಾಯಬೇಕಾಗಿರಲಿಲ್ಲ. ತುಳು, ಕೊಂಕಣಿ, ಮಲೆಯಾಳ, ಕನ್ನಡಗಳ ತುಮುಲಕ್ಕೆ ಸಿಕ್ಕಿ ಮರೆಯಾದ ಒಂದು ಜಿಲ್ಲೆಯ ಮೂಲೆಯಲ್ಲಿ ಕುಳಿತಿದ್ದರೂ ಅವರ ಪ್ರಪಂಚ ಎಂದಿಗೂ ತುಂಬಿದ್ದೇ, ವಿಸ್ತಾರವಾದದ್ದೇ.

ಯಾವ ಸನ್ಮಾನವನ್ನೂ ಅವರು ಬಯಸಿದವರಲ್ಲ. ಮಾಡಬೇಕೆಂಬ ಗೌರವಗಳಿಗೆ ಅವರು ಒಪ್ಪುತ್ತಿರಲಿಲ್ಲ. ಅವರನ್ನು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಲು ಒಪ್ಪಿಸಲು ಎಷ್ಟೋ ವರ್ಷಗಳು ಹಿಡಿದುವು. ಮದರಾಸಿನ ರಾಷ್ಟ್ರಕವಿ ಸ್ಥಾನಕ್ಕೆ ಒಪ್ಪಿಸಬೇಕಾಗಲು ಯಾವುದೋ ಅನಿವಾರ್ಯ ದಾಕ್ಷಿಣ್ಯಗಳು ಬರಬೇಕಾದುವು. ಈ ನವರಾತ್ರಿ ಸಮಯಕ್ಕೆ ಅವರಿಗೆ ಗಂಧ, ಹೂ, ಕೊಡಬೇಕೆಂದು ಪ್ರಸ್ತಾಪವೆತ್ತಿದಾಗ ಅವರು ಸುಲಭವಾಗಿ ಒಪ್ಪಲಿಲ್ಲ. ಅದೇನೇ ಇರಲಿ, ಆ ಉತ್ಸವ ಆ ಕಾಲಕ್ಕೆ ನಡೆದಿದ್ದರೆ ನಮಗೆಲ್ಲಾ ಅತ್ಯಂತ ಸಂತೋಷವಾಗುತ್ತಿತ್ತು. ದುರ್ದೈವದಿಂದ ಅದು ಸಾಧ್ಯವಾಗದೆ ಅವರು ನಮ್ಮನ್ನಗಲಿ ನಾವು ವಿಷಾದದಲ್ಲಿ ಮುಳುಗಬೇಕಾಯಿತು.

ಆಕೃತಿಯಂತೆ ಪ್ರಜ್ಞೆ ಎನ್ನುತ್ತಾರೆ. ಖಂಡ ತುಂಡವಾದ ಅವರ ಮಾತಿನಂತೆಯೇ, ಮನಸ್ಸಿನಂತೆಯೇ, ಅವರ ಆಕೃತಿ. ಆ ನರೆತ ಬೆಳ್ಳಿ ಮೀಸೆ; ಆ ಸಿಂಹದಂಥ ರೂಪ; ತುಂಡುತೋಳಿನ ಜುಬ್ಬ ಅಥವಾ ಬನಿಯನ್, ಉದ್ದ ದಟ್ಟಿ; ಕೆಲ ವೇಳೆ ಛತ್ರಿ; ಮಂಗಳೂರು ಚಪ್ಪಲಿ ಇಷ್ಟೇ ಅವರ ಪೋಷಾಕು. ಏತಕ್ಕಾದರೂ ಬೆರಳು ಕೊಡವುತ್ತಾ, ಮೀಸೆ ಕಡಿಯುತ್ತಾ, ಬೀಡಿ ಸೇದುತ್ತಾ ಅವರು ಯಾವುದೋ ವಿಚಾರವನ್ನು ಹೊರಗೆಡಹುತ್ತಾ ಇದ್ದಾಗ ಅವರನ್ನು ನೋಡುವುದು ಒಂದು ಹಬ್ಬವಾಗುತ್ತಿತ್ತು. ಮನಸ್ಸು, ಮಾತು, ನಡತೆಗಳಲ್ಲಿ, ಅಂತರವಿಲ್ಲದ ಹಿರಿಮೆ ಅವರದು.

ಎಲ್ಲಕ್ಕಿಂತ ವಿಶಿಷ್ಟವಾದುದು ಅವರ ವ್ಯಕ್ತಿ ಗುಣ. ಆ ಸರಸ ಸಂಭಾಷಣೆ, ಆ ವಿಶ್ವಾಸ, ಆ ಗೆಳೆತನ, ಆ ನಗು, ಆ ಮಗುವಿನಂಥ ಮನಸ್ಸು ನಮಗೆ ಇನ್ನೆಲ್ಲಿ ದೊರೆತಾವು? ಮನೆಗೆ ಹೋದರೆ ಮೊದಲು ಕೈಕಾಲು ತೊಳೆಯಲು ಒಂದು ತಾಮ್ರದ ಬಿಂದಿಗೆ ತುಂಬಾ ನೀರು, ಕಾಲೊರಸಲು ಟವೆಲು, "ನಿಮಗೆ ಕಾಫಿಯೋ ಟೀಯೋ? ಎರಡೂ ಉಂಟು" ಎಂದು ಹೇಳಿ ತಿನ್ನಲು ತಿಂಡಿ ತರಿಸಿ, ಉಪಾಹಾರವಾದ ಮೇಲೆ ಸುಖ ಸಂಕಥಾ ವಿನೋದ. ಯಾವುದಕ್ಕೂ ಸೈ, ಎಲ್ಲದರಲ್ಲಿಯೂ ಸೌಹಾರ್ದವೇ. ಬಂದ ಮಿತ್ರರಿಗೆ ಆ ಮೇಲೆ ಮೃಷ್ಟಾನ್ನ ಭೋಜನ, ಆ ಕಿಚುಡಿ, ಪತ್ರೊಡೆ, ಸಿಹಿ ದೋಸೆಗಳ ಔತಣಗಳನ್ನು ನಾವು ಯಾರೂ ಮರೆಯುವಂತಿಲ್ಲ. ಬಂದವರನ್ನು ರೈಲ್ವೇ ಸ್ಟೇಶನ್ನಿನಲ್ಲಿ ಎದುರುಗೊಂಡು, ಅವರು ಹಿಂತಿರುಗುವಾಗ ಸ್ಟೇಶನ್ನಿಗೆ ಬಿಟ್ಟು ಬರುವವರೆಗೂ ಜೊತೆಯಲ್ಲಿದ್ದು ಎಲ್ಲ ಸೌಕರ್ಯಗಳನ್ನೂ ನೋಡಿಕೊಳ್ಳುವ ಅವರ ಗೆಳೆತನ ನಮಗೆ ಅವರನ್ನು ಆತ್ಮೀಯರನ್ನಾಗಿ ಮಾಡಿತ್ತು.

ನಿರಾಳವಾದ, ಕಪಟವರಿಯದ, ಅವರ ಮನಸ್ಸು, ಅವರ ಅಗಾಧವಾದ ಸ್ಮೃತಿಶಕ್ತಿ, ಲೋಕ ಪರಿಜ್ಞಾನ, ಯಾರಿಗೂ ಸಂತೋಷ ತರುವಂಥವು; ಅವರಲ್ಲಿ ಭಕ್ತಿ-ಗೌರವಗಳನ್ನು ತರುವಂಥವು. ಸಾವಿರ, ಎರಡು ಸಾವಿರ, ವರ್ಷಗಳ ತಿಥಿ, ವಾರ, ನಿಮ್ಮ, ಇತರರ, ಜೊತೆಯ ಸಂದರ್ಭ, ಇವೆಲ್ಲವೂ ಅವರ ನೆನಪಿನಲ್ಲಿರುತ್ತಿದ್ದುದರಿಂದ ಯಾವುದರಲ್ಲಿಯೂ ಅವರ ಅವಧಾನ ತಪ್ಪುತ್ತಿರಲಿಲ್ಲ. ಅಷ್ಟೇ ಖಂಡಿತ, ನಿಶ್ಚಿತ, ಅವರ ಮಾತು, ಅಭಿಪ್ರಾಯ. ಆದರೆ ಏಂದೇ ಆಗಲಿ, ಎಷ್ಟೇ ಭಿನ್ನವಾಗಲಿ ಅವರ ಮತಭೇದ ಅವರ ಕೆಳೆತನದ ಔದಾರ್ಯಕ್ಕೆ ಎಂದಿಗೂ ಚ್ಯುತಿ ತರುತ್ತಿರಲಿಲ್ಲ.

ಅವರ ಪ್ರೀತಿ ವಾತ್ಸಲ್ಯಗಳಿಗೆ ಪಾತ್ರನಾಗುವ ಭಾಗ್ಯ ನನಗೆ ಒದಗಿತೆಂದು ಹೇಳಲು ಅನುಚಿತವಾಗಲಾರದು. ಈಗ ಸುಮಾರು ಮೂವತ್ತು ವರ್ಷಗಳ ಹಿಂದೆ ನಾನು ಒಂದೆರಡು ತಿಂಗಳನ್ನು ಇಲ್ಲಿಗೆ ಸಮೀಪದಲ್ಲಿರುವ ಉಳ್ಳಾಲದಲ್ಲಿ ಕಳೆದಿದ್ದೆ. ಹೆಚ್ಚು ಕಡಿಮೆ ಪ್ರತಿದಿನವೂ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದೆ. ಅನೇಕ ಬಾರಿ ಗೋವಿಂದ ಪೈ ಅವರು ರೈಲಿನಲ್ಲಿರುತ್ತಿದ್ದರು. ಆ ರೀತಿ ನನಗೆ ಅವರ ಸನ್ನಿಧಿಯಲ್ಲಿ ಕಾಲ ಕಳೆಯುವ ಅವಕಾಶ ಅನಾಯಾಸವಾಗಿ ಲಭ್ಯವಾಯಿತು. ಅವರ ಸಹವಾಸವೇ ಉಚ್ಚ ಶಿಕ್ಷಣವಾಗಿತ್ತು. ಆಗ ನಾನು ಮಂಜೇಶ್ವರಕ್ಕೆ ಹೋದದ್ದೂ ಉಂಟು. ನನ್ನಂಥವರು ಅನೇಕ ಮಂದಿ ಅವರ ದರ್ಶನಕ್ಕೆ ಹೋಗುತ್ತಿದ್ದರೆಂದು ಆಗಲೇ ಹೇಳಿದ್ದೇನೆ. ಆದರೂ ಅವರ ಸ್ಮರಣಶಕ್ತಿ ಮತ್ತು ಸಹಜ ಪ್ರೇಮ ಯಾವ ರೀತಿಯವಾಗಿದ್ದವೆಂದರೆ ಅವರು ಪ್ರತಿಯೊಬ್ಬರನ್ನೂ ನೋಡಿದ ಸನ್ನಿವೇಶವನ್ನೂ ಅದರ ವಿವರಗಳನ್ನೂ ನೆನಪಿನಲ್ಲಿಟ್ಟಿರುತ್ತಿದ್ದರು. ನಾನು ಹೇಳಿದ ಕಾಲ ಮುಗಿದ ಅನೇಕ ವರ್ಷಗಳ ಮೇಲೂ ಅವರು ನನ್ನೊಡನೆ ನಡೆದ ಸಂಭಾಷಣೆಗಳ ವಿಷಯವನ್ನೂ ಜ್ಞಾಪಕಕ್ಕೆ ತರುತ್ತಿದ್ದರು. ಉದಾಹರಣೆಗೆ ನಾವು ಒಂದು ರಾತ್ರಿ ಮಂಜೇಶ್ವರದ ಸಮುದ್ರ ತೀರದಲ್ಲಿ ಕಾಲಯಾಪನೆ ಮಾಡುತ್ತಿದ್ದಾಗ ನಾನು ಅವರಿಗೆ ಕೆಲವು ನಕ್ಷತ್ರಗಳನ್ನೂ ಗ್ರಹಗಳನ್ನೂ ತೋರಿಸಿದ್ದೆನಂತೆ. ಇದನ್ನು ಅವರು ಎಷ್ಟೋ ವರ್ಷಗಳಾದ ಮೇಲೂ ನೆನಪಿಗೆ ತಂದುಕೊಳ್ಳುತ್ತಿದ್ದರು.

ಈಗ ಸುಮಾರು ಎರಡು ವರ್ಷಗಳ ಹಿಂದೆ ನಾನು ನನ್ನ ಉದ್ಯೋಗಕ್ಕೆ ಸಂಬಂಧಪಟ್ಟ ಕೆಲಸದ ನಿಮಿತ್ತ ಮಂಗಳೂರಿಗೆ ಬಂದಾಗ ಮಂಜೇಶ್ವರಕ್ಕೂ ಹೋಗಿ ಅವರ ದರ್ಶನ ಪಡೆಯುವಂತೆ ಕಾರ್ಯಕ್ರಮದಲ್ಲಿ ಅವಕಾಶ ಮಾಡಿಕೊಂಡಿದ್ದೆ. ಆದರೆ ನಾನು ಅಲ್ಲಿಗೆ ತಲಪಿದೊಡನೆಯೇ ಅವರನ್ನೇ ಆ ಊರಿಗೆ ನನ್ನನ್ನು ನೋಡಲೋಸುಗ ಕರೆತಂದಿರುವುದಾಗಿ ತಿಳಿದುಬಂತು. ಇದರಿಂದ ನನಗೆ ದು:ಖವೂ ಮನಸ್ಸಂಕೋಚವೂ ಉಂಟಾಯಿತು. ಹಾಗೆ ಅವರನ್ನು ಕರೆತರಬಾರದಾಗಿತ್ತೆಂದೂ ನನಗೆ ಅವರಿರುವ ಜಾಗವು ಯಾತ್ರಾಕ್ಷೇತ್ರವಾದ್ದರಿಂದ ನಾನೇ ಮಂಜೇಶ್ವರಕ್ಕೆ ಅವರ ಮನೆಗೆ ಹೋಗಲು ಬಯಸಿದ್ದೇನೆಂದೂ ಹೇಳಿದೆನು. ಅವರನ್ನು ಕರೆತಂದವರು, ಗೋವಿಂದ ಪೈಗಳ ಆರೋಗ್ಯ ಕೆಲಕಾಲದಿಂದ

ನೆಟ್ಟಗಿರಲಿಲ್ಲವೆಂದೂ ಅದಕ್ಕಾಗಿ ಮಂಗಳೂರಿಗೆ ಬಂದು ವೈದ್ಯರಿಂದ ಪರೀಕ್ಷೆ ಮಾಡಿಸಿಕೊಳ್ಳಬೇಕಾಗಿ ಎಷ್ಟು ಬಾರಿ ಹೇಳಿದರೂ ಅವರು ಮೊಂಡು ಹಿಡಿದು "ನನ್ನ ಕಾಲ ಮುಗಿಯುತ್ತಾ ಬಂತು. ಪರೀಕ್ಷೆಯ ಆವಶ್ಯಕತೆಯಿಲ್ಲ" ಎನ್ನುತ್ತಿದ್ದರೆಂದೂ ಅವರಿಗೆ ನನ್ನಲ್ಲಿದ್ದ ಮಮತೆಯಯನ್ನು ಉಪಯೋಗಿಸಿಕೊಂಡು ಅವರನ್ನು ಇಲ್ಲಿಗೆ ಬರಮಾಡಿಕೊಳ್ಳಲು ಸಾಧ್ಯವಾಯಿತೆಂದೂ ನನಗೆ ತಿಳಿಸಿದ ಮೇಲೆ ನನ್ನ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ನಾನು ಅವರೊಡನೆ ಇರಲು ನನಗೆ ಒದಗಿದ ಕಾಲವನ್ನೆಲ್ಲಾ ಉಪಯೋಗಿಸಿದೆನೆಂದು ಹೇಳಬೇಕಾಗಿಲ್ಲ. ನನಗೆ ಗೋವಿಂದ ಪೈಗಳನ್ನು ಕಾಣುವ ಸುಯೋಗ ದೊರೆತದ್ದು ಅದೇ ಕಡೆಯ ಸಾರಿ.

ಇಂಥ ಸ್ನೇಹ ಸೌಭಾಗ್ಯವನ್ನು ಅನೇಕ ಮಂದಿಗೆ ದಾನಮಾಡಿದ್ದ ಗೋವಿಂದ ಪೈಗಳು ನಮ್ಮ ದುರದೃಷ್ಟದಿಂದ ಈಗ ಕಾಣದಾಗಿದ್ದಾರೆ, ತುಂಬಿದ ಬಾಳು ಬದುಕಿ ಕೃತಾರ್ಥರಾದರು ಅವರು. ಅವರ ಹೆಸರಿನಲ್ಲಿ ಅವರಿಗೆ ಪ್ರಿಯವಾಗಿದ್ದ ಕವಿತೆ, ಸಾಹಿತ್ಯಾಭ್ಯಾಸ, ಇತಿಹಾಸ, ಸಂಶೋಧನಗಳಲ್ಲಿ ತೊಡಗುವ ನಿಜವಾದ ವಿದ್ಯಾರ್ಥಿಗಳಿಗೆ ಯಾವುದಾದರೂ ಮಾಸಾಶನವನ್ನೋ ಪ್ರಾಧ್ಯಾಪಕತನವನ್ನೋ ಏರ್ಪಡಿಸಿ ಅವರ ಪ್ರಭಾವಕ್ಕೆ ನಾವು ಕಾಣಿಕೆ ಕೊಡಬಹುದು. ಯಾವ ರೀತಿಯಲ್ಲಾದರೂ ಅವರ ಹೆಸರಿನ ದತ್ತಿಯು ಪ್ರೋತ್ಸಾಹ, ನಾಡಿಗೆ ದೊರಕುವಂತೆ ಮಾಡಿ ಉಳಿಯುವಂತೆ ನಮ್ಮ ಅಲ್ಪ ಕೃತಜ್ಞತೆಯನ್ನು ಅವರಿಗೆ ಸಲ್ಲಿಸುವೆವಾದರೆ ನಾವು ಧನ್ಯರಾಗುತ್ತೇವೆ.

ಈ ಸಂದರ್ಭದಲ್ಲಿ ಗೋವಿಂದ ಪೈಯವರ ಬಂಧುಗಳು ಪೈಗಳ ಮನೆಯನ್ನೂ ಅವರ ಪುಸ್ತಕ ಸಂಗ್ರಹವನ್ನೂ ಅವರ ಹೆಸರಿನಲ್ಲಿ ಸಂಶೋಧನ ಕಾರ್ಯಕ್ಕಾಗಿ ಮುಡಿಪಾಗಿಡುವುದಾಗಿ ತಿಳಿಸಿರುವರೆಂದು ಕೇಳಿದೆನು. ಇದು ನಮಗೆಲ್ಲರಿಗೂ ಅತ್ಯಂತ ಸಂತೋಷದ ವಿಷಯ. ಇದಕ್ಕಾಗಿ ನಾನು ಆ ಬಂಧು ಸಜ್ಜನರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.



# ನಿತ್ಯ ಜೀವನದ ಧವಳಿಮೆ



" ವರುಷವೆಂಬತ್ತಂತೆ . . .ತೊಗಲನಿತು ಸಡಲಿಲ್ಲ, ದನಿಯುಣಂ ಕುಗ್ಗಿಲ್ಲ,
ಹುರಿಯುಣಂ ಬಗ್ಗಿಲ್ಲ, ಕಣ್ಣಾಲಿ ಬೆಳತಿಲ್ಲ, ಹಲ್ಲೊಂದು ಜಗುಳಿಲ್ಲ"

# ಮಂಜೇಶ್ವರದ ಕಡಲ ಕರೆಯಲ್ಲಿ



ಶ್ರೀ ಎಮ್. ಮಲ್ಲಿಕಾರ್ಜುನ, ಮಂ. ಗೋವಿಂದ ಪೈ,
ಶ್ರೀ ಶಂ. ಭಾ. ಜೋಶಿ, ಶ್ರೀ ಕೆ. ವಿ. ರಾಘವಾಚಾರ್.

೧-೫-೧೯೫೦.



ಸ್ವಹಸ್ತಾಕ್ಷರ ದಾನ

# ರಾಷ್ಟ್ರಕವಿಗೆ ಅರ್ಪಣೆ

**ಶ್ರೀ ಹುರುಳಿ ಭೀಮರಾಯರು**

ಹಲವು ಹದಿನೆಂಟು ಮಂದಿ ಒಮ್ಮೊಮ್ಮೆ ಒಬ್ಬಾತನ ಹೆಸರೆತ್ತುತ್ತಿದ್ದರೆ ಅವನೊಬ್ಬ ಮನುಷ್ಯ; ಅದೇ ನೂರಾರು ಮಂದಿ ಯಾಕೋ ಒಬ್ಬಾತನನ್ನು ಆಗಾಗ ಸ್ಮರಿಸಿಕೊಳ್ಳುತ್ತಿದ್ದರೆ ಅವನೊಬ್ಬ "ಮನುಷ್ಯೋತ್ತಮ" ಮತ್ತೆ ಸಾವಿರಾರು ಮಂದಿಗೆ ಯಾವನು ನಿತ್ಯ ಸ್ಮರಣೀಯನೋ ಅವನು "ಮನುಷ್ಯ ಶ್ರೇಷ್ಠ" ಅಥವಾ "ಮಹಾ ಪುರುಷ" ಎನ್ನಬಹುದು.

ಇಂಥ ಮಹಾಪುರುಷರು ಲಕ್ಷಕ್ಕೋ ದಶಲಕ್ಷಕ್ಕೋ ಕೋಟಿಗೋ ಒಬ್ಬಿಬ್ಬರು. ಅವರು "ಮನುಷ್ಯ" ಹಾಗೂ "ಮನುಷ್ಯೋತ್ತಮರಿಗೆ" ಮಿಗಿಲಾದ ಯಾವುದೋ ಒಂದು ಮಹೋಪಕಾರವನ್ನು ದೇಶಕ್ಕೆ ಮಾಡಿಯೋ ಯಾವುದೋ ದೊಡ್ಡದೊಂದು ಲೋಕ ಸೇವೆ ಸಲ್ಲಿಸಿಯೋ ಇರುವವರು; ಭಾಷಾ ಸೇವಕರಾದರೂ ಇದರಿಂದ ಹೊರಗಲ್ಲ.

ಈ ದೃಷ್ಟಿಯಿಂದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರೂ ಒಬ್ಬ ಮಹಾ ಪುರುಷರೇ.

ಕನ್ನಡ ವಾಙ್ಮಯದ ತೇಜೋಮಯ ತಪೋನಿಧಿಯಾಗಿ ತಮ್ಮ ತಪೋಬಲದಿಂದ ಕನ್ನಡ ವಾಗ್ದೇವಿಯ ಅಲಂಕಾರಕ್ಕಾಗಿ ಅನ್ಯಾದೃಶವೂ ಅಭೂತಪೂರ್ವವೂ ಆದ ನವನವೀನ ರತ್ನಾಭರಣಗಳನ್ನು ಮಾಡಿಟ್ಟರು. ಆಕೆಯ ಸರ್ವಾಂಗಗಳೂ ಸುಂದರವಾಗಿ ನಾಡಿನ ಒಳಗೂ ಹೊರಗೂ ಮಹೋಜ್ವಲ ಪ್ರಭೆಯಿಂದ ಬೆಳಗುವಂತೆ ಅವನ್ನೆಲ್ಲ ಆಕೆಗೆ ತೊಡಿಸಿದರು. ಇಂಥ ಉನ್ನತ ಕೀರ್ತಿವಂತರವರು.

ಶ್ರೀ ಪೈ ಅವರ ತಾಯ್ನುಡಿ ಕನ್ನಡವಲ್ಲ. ಆದರೂ ಕನ್ನಡ ನುಡಿಯ ಎಲ್ಲ ಹಕ್ಕೂ ಹಂಗೂ ಅದನ್ನು ಬೆಳೆಸುವ ಹೊಣೆಗಾರಿಕೆಯೂ ಕನ್ನಡ ನೆಲದ ತಮ್ಮ ಬದುಕಿನಲ್ಲಿ ತಮಗೂ ಇದ್ದೇ ಇದೆ ಎಂದೇ ನುಡಿಯ ಉನ್ನತಿಗಾಗಿರುವ ವೀರ ಪ್ರತಿಜ್ಞೆ ಅವರದಾಯಿತು. ಅವರು ತಮ್ಮ ಇಡಿಯ ಜೀವಮಾನವನ್ನೇ ಕನ್ನಡಕ್ಕಾಗಿ ಧಾರೆಯೆರೆದ ಮಹಾ ತ್ಯಾಗಮೂರ್ತಿಗಳಾದರು. ಕನ್ನಡದ ದಾಸಾನುದಾಸರಾದರು. ತಮ್ಮ ಹಿಂದಿನ ಎಷ್ಟೋ ಮುಂದಿನ ಎಷ್ಟೋ ಜನ್ಮಗಳ ಋಣ ಕನ್ನಡ ದೇವಿಗೆ ತಮ್ಮಿಂದ ಸಲಬೇಕೆಂದು ಅನುಭವಕ್ಕೆ ತಂದುಕೊಂಡರು. ಅಂತೆ ಕೊನೆತನಕ ಅವರು ಅವಿಶ್ರಾಂತವಾಗಿ ವಾಗ್ದೇವಿಯ ಕಂಕೈರ್ಯ ವಹಿಸಿ ಪರಮ ಧನ್ಯರಾದರು.

ಎಳೆ ವಯಸ್ಸಿನಿಂದಲೇ ಶ್ರೀ ಪೈ ಕನ್ನಡದ ಲೇಖನಿ ಹಿಡಿದಿದ್ದರು. 1897–98ರ ಕಾಲದ ಮಂಗಳೂರಿನ "ಸುವಾಸಿನಿ" ಮಾಸಪತ್ರಿಕೆಯಲ್ಲಿ ಅವರ "ಸುಭದ್ರಾವಿಲಾಪ" ಮತ್ತು "ಕಾಳೀಯ ಮರ್ದನ" ಎಂಬ ಎರಡು ಉತ್ತಮ ಕವನಗಳು ಪ್ರಾಸಬದ್ಧವಾಗಿ ಪ್ರಕಟವಾಗಿದ್ದುವು. ಅನಂತರ 1911–12ರ ಸುಮಾರಿಗೆ ಮಂಗಳೂರಿನ "ಸ್ವದೇಶಾಭಿಮಾನಿ" ವಾರಪತ್ರಿಕೆಯಲ್ಲಿ "ಹೊಲೆಯನು ಯಾರು?" ಎಂಬ ಪ್ರಾಸ ರಹಿತ ಕವನಗಳವರದು ಪ್ರಕಟವಾಯಿತು. ಬಂಗಾಳಿ ಶ್ರೇಷ್ಠ ಕವಿಯೊಬ್ಬರ ಮೇಲ್ಪಂಕ್ತಿಯನ್ನು ಅನುಸರಿಸಿ ಪೈಯವರ ಈ ಕವನ ರಚನೆ, ಪ್ರಾಸರಹಿತ ಕವನ ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧಿಗೊಂಡದ್ದು ಇದೀಗ ಪ್ರಥಮಬಾರಿ. ಹಳೆಯ ರೂಢಿ ಕೈಬಿಟ್ಟು ಕನ್ನಡ ಕವನದಲ್ಲಿ ಹೊಸ ಹಾದಿಯ ಆದ್ಯ ಪ್ರವರ್ತಕರೇ ಶ್ರೀ ಪೈ.

ಪತ್ರಿಕೆಗಳವರು ಪ್ರತ್ಯೇಕವಾಗಿ ತಮ್ಮ ವಿಶೇಷಾಂಕಗಳಿಗೆ ಶ್ರೀ ಪೈ ಅವರಿಂದ ಲೇಖನಗಳನ್ನು ಕೇಳಿಕೊಳ್ಳುವುದು ಸಾಮಾನ್ಯ. "ಇಲ್ಲ" ಎನ್ನುವ ಮಾತೇ ಅವರಿಂದ ಯಾವ ಕಾಲದಲ್ಲಿಯೂ ಬಂದದ್ದು ನಾನು ಕೇಳಿಲ್ಲ. ತಮ್ಮ ಲೇಖನಗಳು ಜನಸಾಮಾನ್ಯರಿಗೆ ಹೇಳಿಸಿದ್ದಲ್ಲ ಎಂದು ಪೈ ಮುಂದಾಗಿ ಎಚ್ಚರಿಸುವರು. ಆದರೆ ಪೈ ಅವರ ಲೇಖನವಿಲ್ಲದ ವಿಶೇಷಾಂಕ ಪೂರ್ಣವಲ್ಲ. ಗೌರವ ತರತಕ್ಕುದಲ್ಲ ಎಂದೇ ಪತ್ರಿಕೆಗಳವರು ಅವರಿಂದ ಅವನ್ನು ಪಡೆದು ಪ್ರಕಟಿಸುವರು. ಇಷ್ಟಕ್ಕೆಲ್ಲ, ಅವರ ಪರಿಶ್ರಮಕ್ಕೆಲ್ಲ, ಶ್ರೀ ಪೈ ಅವರಿಗೆ ಸಲ್ಲುವುದು ಅವರ ಲೇಖ ಪ್ರಸಿದ್ಧಿಗೊಂಡ ಒಂದು ಆ ವಿಶೇಷಾಂಕದ ಪ್ರತಿ. ಮತ್ತೇನೂ ಅವರಿಗೆ ಬೇಕಿರಲಿಲ್ಲ. ಕೊಡುವವರೂ ಇರಲಿಲ್ಲ !

ಶ್ರೀ ಪೈ ಅವರ ಜೀವಮಾನದಲ್ಲಿ ಪತ್ರಿಕೆಗಳಿಗೆ ಬರೆದುಕೊಟ್ಟು ಮುದ್ರಣವಾದ ನೂರಾರು ಲೇಖನಗಳನ್ನೆಲ್ಲ ಈಗ ಸಂಗ್ರಹಿಸಲು ಸಾಧ್ಯವಾದರೆ ಅವುಗಳ ಬೃಹತ್ ಸಂಪುಟಗಳೆಷ್ಟಾದಾವೋ ಅವುಗಳ ಒಟ್ಟು ಪುಟ ಸಂಖ್ಯೆ ಎಷ್ಟು ಸಹಸ್ರವಾದೀತೋ ಹೇಳಲು ಬಾರದು.

ಶ್ರೀ ಪೈ ಅವರು ಬಹು ಭಾಷಾ ವಿಶಾರದರು. ಭಾರತದ ಹಾಗೂ ವಿದೇಶದ ಹಲವು ಭಾಷೆಗಳಲ್ಲಿ ಪಾರಂಗತರು. ಬಂಗಾಳಿ. ಪಾಳಿ, ಇಂಗ್ಲಿಷ್, ರೋಮನ್, ಗ್ರೀಕ್ ಮೊದಲಾದ ಭಾಷೆಗಳು ಅವರಿಗೆ ಕರತಲಾಮಲಕವಾಗಿದ್ದುವು. ಅವರ "ಗ್ರೀಕ್ ನಾಟಕಗಳಲ್ಲಿ ಕನ್ನಡ ಶಬ್ದ"ಗಳೆಂಬ ಲೇಖನ ಇದಕ್ಕೊಂದು ನಿದರ್ಶನ.

ಕವಿಯಾಗಿ, ನಾಟಕಕಾರನಾಗಿ, ಗ್ರಂಥಕರ್ತ್ರರಾಗಿ, ಪತ್ರಲೇಖಕರಾಗಿ, ಹೀಗೆ ಎಲ್ಲವೂ ಆಗಿ, ಮುಖ್ಯವಾಗಿ ಪ್ರಾಚೀನ ಕಾವ್ಯ ಪುರಾತನ ತಾಮ್ರ ಶಿಲಾ ಮತ್ತಿತರ ಶಾಸನಗಳ ಸಂಶೋಧನಾ ಕಾರ್ಯದ ಅಪ್ರತಿಮ ವಿಮರ್ಶಕರೂ ಸಿದ್ಧಾಂತಿಗಳೂ ಆಗಿ ಕನ್ನಡ ಸರಸತಿಯ ಬಹುಮುಖ ಸರ್ವತೋಮುಖ ಸೇವೆ ಸಲ್ಲಿಸಿದವರಲ್ಲಿ ಅಗ್ರಗಣ್ಯರು-ಶ್ರೀ ಪೈ ಅವರು.

ಒಬ್ಬ ಮಹಾನ್ ವ್ಯಕ್ತಿಯ ಕಾರ್ಯಭಾಗದ ಯೋಗ್ಯತೆಯನ್ನು ತಾವಾಗಿ ತಿಳಿಯಬಲ್ಲವರು ನಮ್ಮಲ್ಲಿ ಬಹು ಮಂದಿ ಇಲ್ಲ. ಕೀರ್ತಿಶೇಷ ಎ.ವಿ.ವರದಾಚಾರ್ಯರ ಶಾಕುಂತಲ ನಾಟಕಕ್ಕೆ ನುಗ್ಗುತ್ತಿದ್ದ ಜನ ಅವರ ರಸವನ್ನು ಆಸ್ವಾದಿಸಬಲ್ಲವರಲ್ಲ. ಅವರ ಯೋಗ್ಯತಾ ನಿರ್ಣಯದ ಬುದ್ಧಿಶಕ್ತಿ ಅವರಲ್ಲಿ ಇಲ್ಲ. ಆದರೂ ಹೋಗುತ್ತಿದ್ದರೇಕೆ? ಅನೇಕಮಂದಿ ಪ್ರಾಜ್ಞರು ಆ ನಾಟಕವನ್ನೂ ವರದಾಚಾರ್ಯರನ್ನೂ

ಬಾಯಿತುಂಬ ಹೊಗಳುತ್ತಾರೆ. ಅಂಥ ದೊಡ್ಡವರನ್ನು ಅವರ ನಾಟಕವನ್ನು ನೋಡಬೇಕೆಂಬ ಅತಿ ಕುತೂಹಲದಿಂದ ಅಲ್ಲವೇ? ಇಲ್ಲಿ ಅಜ್ಞರಿಗೆ ದಾರಿತೋರಿದ್ದು ಪ್ರಾಜ್ಞರು ಎಂಬುದೂ ನಿಜವಲ್ಲವೇ?

ರಾಷ್ಟ್ರಕವಿ ಗೋವಿಂದ ಪೈ ಅವರ ಹೆಸರು ಕೂಡ ಕೇಳದವರು ನಾಡಿನಲ್ಲಿ ಅನೇಕ ಮಂದಿ ಈಗಲೂ ಇದ್ದಾರು. ಯಾರು ರಾಷ್ಟ್ರಕವಿಯವರ ಕೃತಿಗಳನ್ನೋದಿ ಜೀರ್ಣಿಸಿಕೊಂಡಿರುವರೋ ಅಂಥ ಪ್ರಾಜ್ಞರು-ಶಾಕುಂತಲ ನಾಟಕಕ್ಕೆ ದಾರಿ ತೋರಿದವರಂತೆ- ಶ್ರೀ ಗೋವಿಂದ ಪೈ ಅವರ ವಿಚಾರದಲ್ಲಿ ಅಜ್ಞರಿಗೆ ಮಾರ್ಗದರ್ಶನ ಮಾಡಲಿ!

ಮಂಜೇಶ್ವರ ಸುಬ್ರಹ್ಮಣ್ಯ ಷಷ್ಠಿ ಹೆಸರಾದದ್ದು. ವರ್ಷದಲ್ಲಿ ಒಂದೆರಡು ದಿನ ಆ ದೇವರ ಭಕ್ತರಿಗೆ ಅದೊಂದು ವಿಶೇಷ ಕ್ಷೇತ್ರ. ಆದರೆ ಹಿರಿಯ ಕಿರಿಯ ಸಾಹಿತ್ಯ ಭಕ್ತರಿಗಾಗಿ ಸದಾ ಕಾಲವೂ ಮಂಜೇಶ್ವರವನ್ನೊಂದು ಮಹಾ ಪುಣ್ಯಕ್ಷೇತ್ರವೆನಿಸಿದ್ದು ರಾಷ್ಟ್ರಕವಿ ಗೋವಿಂದ ಪೈ ಅವರು.

ಪೈಗಳ ಶೈಲಿ, ಪದಪ್ರಯೋಗಗಳ ರೀತಿ ಅವರವೇ. ಅದೊಂದು ಮೇಲ್ಪಂಕ್ತಿಯಾಗಿರಬಲ್ಲುದಾದರೂ ಅನುಸರಿಸಲೂ ಅನುಕರಿಸಲೂ ಅಷ್ಟೇನೂ ಸುಲಭವಲ್ಲ.

ಸಭೆ ಸಮಾರಂಭಗಳಲ್ಲಿ ಭಾಗಿಯಾಗಲು ಅವರು ಕೊಂಚಕ್ಕೆ ಒಪ್ಪುತ್ತಿರಲಿಲ್ಲ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠ ಸ್ವೀಕಾರವನ್ನೊಪ್ಪಿಸಿಕೊಳ್ಳಲೂ ಹಲವು ವರ್ಷಗಳ ಒತ್ತಾಯವೇ ಆಗತ್ಯವಾಯಿತು. ಅವರ ಭಾಗಕ್ಕೆ ಅದೆಲ್ಲ ಒಣ ಪ್ರತಿಷ್ಠೆ. ಬಹಿರಾಡಂಬರ. ಅವರು ತಮ್ಮ ಲೇಖನ ವ್ಯವಸಾಯದಲ್ಲೇ ನಿರತರಾಗಿರಲು ಇಷ್ಟಪಡುವವರು. ತಮಗೆ ಪ್ರಾಣಪ್ರಿಯವಾದ ಕೆಲಸದಲ್ಲಿಯೇ ತಾವು ತಮ್ಮಂತೆ ಇದ್ದುಕೊಳ್ಳುತ್ತೇವೆ. ಬೇರೆ ಕೆಲಸ ಹಚ್ಚಬೇಡಿ. ತಾವದಕ್ಕೆ ನೆರವಾಗುವವರಲ್ಲ-ಎಂದು ಅಪರೋಕ್ಷವಾಗಿ ಸೂಚಿಸುವವರು. ಆದರೆ ಇದಕ್ಕೊಂದು ಅಪವಾದವೆಂದರೆ ಕೀರ್ತಿಶೇಷ ಧರ್ಮಸ್ಥಳದ ಶ್ರೀ ಮಂಜಯ್ಯ ಹೆಗ್ಡೆ ಅವರು. ಅವರಲ್ಲಿ ಶ್ರೀ ಪೈ ಅವರಿಗೆ ಅಪಾರ ಪ್ರೀತಿ: ಭಕ್ತಿ ವಿಶ್ವಾಸ. ಆದ್ದರಿಂದಲೇ ಮೂಡಬಿದರೆಯಲ್ಲಿ ಶ್ರೀ ಹೆಗ್ಡೆಯವರ ಸನ್ಮಾನಾರ್ಥವಾದ ಒಂದು ಸಾರ್ವಜನಿಕ ಸಭೆಯ ಅಧ್ಯಕ್ಷಸ್ಥಾನವನ್ನು ಉತ್ಸಾಹದಿಂದ ವಹಿಸಿಕೊಂಡರು. ಹಾಗೇ ಶ್ರೀ ಪೈ ರಾಷ್ಟ್ರಕವಿಯಾದ ಸಂದರ್ಭದಲ್ಲಿ ಶ್ರೀ ಪೈ ಅವರ ಗೌರವಾರ್ಥವಾಗಿ ಧರ್ಮಸ್ಥಳದಲ್ಲಿ ಶ್ರೀ ಹೆಗ್ಗಡೆ ಅವರು ಏರ್ಪಡಿಸಿದ ಸಮಾರಂಭದಲ್ಲಿ ಸಂತೋಷದಿಂದ ಭಾಗಿಯಾಗಿ ಶ್ರೀ ಹೆಗ್ಗಡೆ ಅವರಿತ್ತ ಉಡುಗೊರೆ ಉಚಿತಗಳನ್ನು ಆದರದಿಂದ ಸ್ವೀಕರಿಸಿದರು. ದಾನ ಔದಾರ್ಯದ ಇಬ್ಬರು ಸಹೃದಯರ ಸಮಾವೇಶ ಇದೇ ಎಂಬುದು ಇಲ್ಲಿ ಎದ್ದು ತೋರುತ್ತಿತ್ತು.

ನನ್ನ ಅವರ ಸಂಪರ್ಕ "ಕಂಠೀರವ"ನ "ದಸರಾ ಸಂಚಿಕೆ" ಮೂಲಕ ಆಯಿತು. ಅವರು ಹಲವಾರು ಅಮೂಲ್ಯ ಲೇಖನಗಳನ್ನು ಅದಕ್ಕೆ ಒದಗಿಸಿಕೊಟ್ಟರು. ತಮ್ಮ ಕೈ ಬರಹದ ಪ್ರತಿಯಲ್ಲಿ ಒಂದೇ ಒಂದು ಮುದ್ರಣ ದೋಷವೂ ಇರಕೂಡದೆಂದು ಕೊನೆಯ ಮುದ್ರಣಕ್ಕೆ ಮುನ್ನ ಅದರ ಕರಡು ಪ್ರತಿ ಅಥವಾ "ಫ್ರೂಫ್"ನ್ನು ತಾವೇ ಖುದ್ದಾಗಿ ತಿದ್ದಿ ಕೊಡುವ ಅಥವಾ ಟಪ್ಪಾಲ್ ಮೂಲಕ ಕಳುಹಿಸಿಕೊಡುವ ಕಟ್ಟುನಿಟ್ಟಾದ ಈ ಕ್ರಮಕ್ಕೆ "ಕಂಠೀರವ"ನೂ ಒಂದು ಅಪವಾದವಾಗಿರಲಿಲ್ಲವೆನ್ನುವ.

ಮುಂದೆ ಈ ಸಂಪರ್ಕ ಬೆಳೆದು. ಅವರ ಸ್ನೇಹ ಆದರ ಅಭಿಮಾನಗಳಿಗೆ ಪಾತ್ರನಾದ ನನಗೆ ಶ್ರೀ ದಾಮೋದರ ಬಾಳಿಗರ ಗ್ರಂಥ ವ್ಯವಹಾರದ ಸಂಸ್ಥೆಯಲ್ಲಿ ಅವರು ಮಂಗಳೂರಿಗೆ ಬಂದಾಗಲೆಲ್ಲ ತಮ್ಮ ದರ್ಶನ ನೀಡುತಿದ್ದರು. ಸಾಹಿತಿಗಳು ಮತ್ತು ಸಾಹಿತ್ಯದ ವಿಷಯದಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾಗಿ ವ್ಯಕ್ತಪಡಿಸುತ್ತಿದ್ದರು. ಒಂದೊಂದೇ ಘನತರ ವಿಚಾರವನ್ನು ಅವರು ಎತ್ತಿಯಾಡುತ್ತಿದ್ದಂತೆ ಅವರೆಂಥ ಮಹಾ ಮೇಧಾವಿ ರಸಿಕರು! ಅವರ ಜ್ಞಾಪಕಶಕ್ತಿ ಎಷ್ಟು ಅಗಾಧ! ಹೊರ ಹಾಕಿದ್ದಕ್ಕೂ ಹೆಚ್ಚಾಗಿ ಒಳಗೆ ತುಂಬಿಕೊಂಡಂತಿರುವ ಆ ಜ್ಞಾನ ಸಂಪತ್ತು ವಿದ್ವತ್ತು ಪಾಂಡಿತ್ಯಗಳ ಅಕ್ಷಯ ಪಾತ್ರವೇ ಅವರು.?-ಹೀಗೆ ವಿಸ್ಮಯ ಪಡುತ್ತಿದ್ದೆ. ವಸ್ತುತ: ಕೆಲವೇ ಮಂದಿ ಅವರ ಆಪ್ತರಲ್ಲಿ ನಾನೂ ಒಬ್ಬನೆಂದು ಅವರು ಎಣಿಸಿದ್ದರು. ಇದು ನನ್ನ ಜೀವನದಲ್ಲಿನ ಒಂದು ಮಹಾ ಯೋಗ!

ಶ್ರೀ ಪೈ ಕನ್ನಡದ ಘನ ವಿದ್ವಾಂಸರು. ಆದರೆ ಕನ್ನಡಿಗರು ಮನೆಯಲ್ಲಿ ಬಳಸುವ. ಹೊರಗಿನವರಿಗೆ ತಿಳಿಯದ ಕೆಲವು ಕನ್ನಡ ಪ್ರಯೋಗಗಳೂ ಇವೆ. ಅವನ್ನು ವಿಚಾರಿಸಿ ತಿಳಿದುಕೊಳ್ಳುವ ಆ "ವಿದ್ಯಾರ್ಥಿ ಗುಣ" ಅವರ ಗುರುಸ್ಥಾನದಲ್ಲಿದ್ದ ದಿ॥ ಪಂಜೆಯವರಂತೆ ಇವರಲ್ಲಿಯೂ ಕೊನೆತನಕವೂ ಇತ್ತು. ನನ್ನ ಒಂದು ಪುಸ್ತಕದಲ್ಲಿ "ಎಡವಟ್ಟು" "ಬದರಿಕೊಂಡು" ಎಂದು ಮುಂತಾದ ಪ್ರಯೋಗ ಮಾಡಿದ್ದೆ. ಶ್ರೀ ಪೈ ಅವರು ನನ್ನಲ್ಲಿ ಕುರಿತಾಗಿ ಅವುಗಳ ಪ್ರಸ್ತಾಪ ಮಾಡಿ ಅದರ ಅರ್ಥ ಮತ್ತು ಪ್ರಯೋಗವನ್ನು ತಿಳಿದುಕೊಂಡರು.

ವಸ್ತುತ: ತಾನಿನ್ನೂ ಕಲಿಯಬೇಕಾದದ್ದು ತಿಳಿಯ ಬೇಕಾದದ್ದು ಏನೂ ಉಳಿದಿಲ್ಲ ಎಂಬ ಉಬ್ಬಿದ ಕೊಬ್ಬಿದ ತಲೆ ವಿದ್ವಾಂಸ ಶ್ರೀ ಪೈ ಅವರಲ್ಲ. ವಿದ್ವಾಂಸನಾದರೂ ತಾನಿನ್ನೂ ವಿದ್ಯಾರ್ಥಿ ಎಂದು ಯಾರು ತಿಳಿದಿರುವನೋ ಅವನೇ ನಿಜವಾದ ವಿದ್ವಾಂಸ. ತುಂಬಿದ ಕೊಡ. ಶ್ರೀ ಪೈ ಅಂಥಾ ವಿದ್ವಾಂಸರು.

"ಕಂಠೀರವ"ದ "ಗಣರಾಜ್ಯ ಸಂಚಿಕೆ"ಗೊಂದು ಲೇಖನ ಬಯಸಿ ಶ್ರೀ ಪೈ ಅವರಿಗೆ 62ನೇ ಇಸ್ವಿ ದಶಂಬರದಲ್ಲಿ ಒಂದು ಪತ್ರ ಬರೆದಿದ್ದೆ. ತಾ॥ 5-1-63ರಲ್ಲಿ ನನಗೆ ಅವರಿಂದ ಉತ್ತರವೂ ಬಂತು. ಹಿಂದೆ ಪ್ರಕಟವಾದ ಅವರ ಕವನವೊಂದನ್ನು ಎತ್ತಿಕೊಳ್ಳಲು ಅನುಮತಿ ನೀಡಿದ್ದರು. ಮತ್ತೆ ಹೇಳಿದ್ದರು:-

"ಒಂದೆರಡು ವರ್ಷಗಳಿಂದ ಹೊಸ ಗದ್ಯವನ್ನಾಗಲೀ ಪದ್ಯವನ್ನಾಗಲೀ ಬರೆದಿಲ್ಲ. ಲೇಖನ ಕಳುಹಿಸಿಕೊಡಬೇಕೆಂದು ಬರೆದ ನಿಮ್ಮ ಪತ್ರ ಓದಿದ ನೆನಪು ನನಗಿದೆ. ಆದರೆ ನನ್ನ ಈಗಣ 80 ವರ್ಷಕ್ಕೆ ಅನುಗುಣ ಮರವೆಯಿಂದ ಅದನ್ನು ನಾನು ಎಲ್ಲಿ ಇಟ್ಟಿದ್ದೇನೆ ಎಂಬ ನೆನಪಿಲ್ಲದೆ ನಾನು ತುಂಬ ಹುಡುಕಿದರೂ ಅದು ಸಿಗಲಿಲ್ಲ" ಎಂದಿದ್ದರು.

ಮತ್ತೊಂದು ಮಾತೂ ಅದರಲ್ಲಿ-"ನೀವು 'ಕಂಠೀರವ' ಸಂಪಾದಕತ್ವವನ್ನು ಮರಳಿ ಕೈಗೊಂಡು" ಎಂದಿತ್ತು. ನಾನು ಆ ಸಂಪಾದಕತ್ವವನ್ನು ಬಿಟ್ಟಿದ್ದೇ ಇಲ್ಲವಾಗಿ ಮರವೆಯ ಮೋಡ ಅವರನ್ನು ಮುತ್ತುತ್ತ ಬರುತ್ತಿದೆ ಎಂದು ಹೇಳಿಕೊಂಡೆ. ಅನಾರೋಗ್ಯದಲ್ಲಿದ್ದರೂ ಅವರು ನನ್ನಲ್ಲಿ ಅಭಿಮಾನದಿಂದ ಬರೆದಿದ್ದ ಪತ್ರಕ್ಕೆ ಬೆಲೆ ಕಟ್ಟಲಾರದೆ ಹೋದೆ.

ಶ್ರೀ ಗೋವಿಂದ ಪೈ ಅವರು "ಕಂಠೀರವ" ದಸರಾ ಸಂಚಿಕೆಗಳಿಗೆ ಬರೆದಿದ್ದ ಕೆಲವು ಸರ್ವೋತ್ಕೃಷ್ಟ ಲೇಖನಗಳು ನನ್ನ ನಿತ್ಯ ಪಾರಾಯಣದ ಪವಿತ್ರ ಸಾಹಿತ್ಯವಾಗಿವೆ. ಅವು ನನ್ನಲ್ಲಿ ಹಾಗಿರುವಷ್ಟು ಕಾಲ ರಾಷ್ಟ್ರಕವಿ ಶ್ರೀ ಮಂಜೇಶ್ವರ ಗೋವಿಂದ ಪೈ ಅವರು ಈಗಲೂ ಮುಂದೆಯೂ ನನ್ನ ಭಾಗಕ್ಕೆ ಜೀವಂತರಾಗಿಯೇ ಇದ್ದಾರೆ.



# ರಾಷ್ಟ್ರಕವಿ ಎಮ್. ಗೋವಿಂದ ಪೈಗಳವರ ವೈಶಿಷ್ಟ್ಯ

**ಶ್ರೀ ಉಗ್ರಾಣ ಮಂಗೇಶರಾಯ**

ಎಮ್ ಗೋವಿಂದ ಪೈಗಳವರು ಮಂಜೇಶ್ವರ ಗೋವಿಂದ ಪೈಗಳಲ್ಲ-ಮಂಗಳೂರು ಗೋವಿಂದ ಪೈಗಳು: ಮಂಜೇಶ್ವರದಲ್ಲಿ ಅವರು ನೆಲಸಿದವರಾಗಿ ಆ ಭ್ರಮೆಗೆ ಅವಕಾಶವಾಯಿತು. ಮಂಗಳೂರಿನಲ್ಲಿ ಹುಟ್ಟಿ, ಮಂಗಳೂರಿನಲ್ಲಿ ಬೆಳೆದು, ಮಂಗಳೂರಿನಲ್ಲೇ ಹೆಚ್ಚಿನ ವಿದ್ಯಾಭ್ಯಾಸ ಹೊಂದಿದವರಾದರೂ ಅವರ ತಾಯಿಯ ತೌರೂರಾದ ಮಂಜೇಶ್ವರ ಅವರ ನೆಲೆವೀಡಾಗಿ ಸಾಹಿತ್ಯ ಪ್ರೇಮಿಗಳಿಗೆಲ್ಲ ಯಾತ್ರಾ ಸ್ಥಳವಾಯಿತು. ಅವರ ಸಮೀಪ ಸ್ನೇಹಿತರಿಗೆ ಹೊರತು ಮಿಕ್ಕವರಿಗೆ ಅವರು ಮಂಜೇಶ್ವರ ಗೋವಿಂದ ಪೈಗಳಾದರು.

ಮಂಜೇಶ್ವರ ಗೋವಿಂದ ಪೈಗಳವರಿಗೂ ಮಂಜೇಶ್ವರ ಅನಂತರಾಯರಿಗೂ ಬಹು ಸ್ನೇಹ. ನನಗೂ ಅನಂತರಾಯರಿಗೂ ಅಂತಹ ಸ್ನೇಹವಿದ್ದುದರಿಂದ ಪೈಗಳವರಿಗೂ ನನಗೂ ಸಹಜವಾಗಿ ಸ್ನೇಹವಾಯಿತು. ಸಾಹಿತ್ಯ ಕ್ಷೇತ್ರದಲ್ಲಿ ಅವರ ಹೆಸರು ಆಗಲೇ ಪ್ರಸಿದ್ಧವಾಗಿತ್ತು. ಅನಂತರಾಯರು, ನಾನು ಕೂಡಾ ಹಲಕೆಲವು ಕವಿತೆಗಳನ್ನು ರಚಿಸಿ ಪೈಗಳವರ ಮೆಚ್ಚಿಕೆಗೆ ಪಾತ್ರರಾಗಿದ್ದೆವು.

ಗೋವಿಂದ ಪೈಗಳವರಲ್ಲಿ ಆಡಂಬರ ಲವಲೇಶವಿದ್ದಿರಲಿಲ್ಲ. ನಮ್ಮ ಮೊದಲನೆಯ ಭೆಟ್ಟಿಯಲ್ಲಿ ನನಗದರ ಅರಿವಾಯಿತು. ಪ್ರಾಯದಲ್ಲಿ ಅವರು ನನಗೆ ಹಿರಿಯರೆಂದು, ನಾನು ಅವರನ್ನು ಬಹುವಚನದಲ್ಲಿ ಸಂಬೋಧಿಸಿದೆ. ಅವರು ಕೂಡಲೇ ಅದು ಕೂಡದು. ನಮ್ಮೊಳಗೆ ನೀನು ತಾನು ಎಂಬ ವ್ಯವಹಾರವೇ ಸಾಕೆಂದು ಸ್ಪಷ್ಟವಾಗಿ ಹೇಳಿದರು. ಅಂದಿನಿಂದ ವ್ಯವಹಾರದಲ್ಲಿ ನಮ್ಮೊಳಗೆ ಒಂದು ಸಮಾನತೆ ಉಂಟಾಯಿತು.

ನಾವು ಕನ್ನಡ ಭಾಷಾಭಿಮಾನಿಗಳಾದರೂ-ವ್ಯವಹಾರ ವಾತಾವರಣ ಹಾಗಿದ್ದುದೇ ಕಾರಣವಿರಬಹುದು-ನಮ್ಮೊಳಗೆ ಪತ್ರ ವ್ಯವಹಾರವು ಇಂಗ್ಲಿಷಿನಲ್ಲೇ ನಡೆಯುತ್ತಲಿತ್ತು. ಪೈಗಳು ಹಾಗೆ ಹೇಳಬಹುದಾದರೆ ಬಹುಭಾಷಾ ಪ್ರಿಯರು-ಸಂಸ್ಕೃತ, ಲೆಟಿನ್, ಜರ್ಮನ್, ಗ್ರೀಕ್, ಅರಬೀ ಭಾಷೆಗಳ ಪರಿಚಯ ಅವರಿಗೆ ತಕ್ಕಮಟ್ಟಿಗೆ ಇತ್ತು. ಮದ್ರಾಸಿನಲ್ಲಿ ಓದುತ್ತಿದ್ದಾಗ ಇಂಗ್ಲಿಷಿನಲ್ಲಿ ಅಗ್ರಗಣ್ಯರೆನ್ನಿಸಿ ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿದ್ದರು-ರಾಷ್ಟ್ರಪತಿ ಶ್ರೀ ಸರ್ವಪಳ್ಳಿ ರಾಧಾಕೃಷ್ಣರು ಮುಂತಾದ ಮಹಾ ಮಹಾ ಪ್ರಭೃತಿಗಳೇ ಅವರ ಸಹವರ್ಗದವರಿದ್ದಾಗ.

ಅಂತಹವರ ಮನಸ್ಸು ಕನ್ನಡ ಭಾಷಾ ಸೇವೆಯ ಕಡೆಗೆ ತಿರುಗಿದುದು ಕನ್ನಡಿಗರ ಭಾಗ್ಯ. "ಬೆಲೆಯಿಂದಕ್ಕುಮೇ ಕೃತಿ? ಗಾವಿಲ! ಭುವನದ ಭಾಗ್ಯದಿಂದಮಕ್ಕುಂ" ಎಂಬ ಕವಿಕುಂಜರನ ಮಾತು ಸತ್ಯ. ಪೈಗಳವರಲ್ಲಿ ಸಹಜವಾಗಿ ಹುದುಗಿದ್ದ ಪ್ರತಿಭೆ ಅವರ ಕನ್ನಡದ ಗುರು ಪಂಜೆ ಮಂಗೇಶರಾಯರ ಪ್ರೇರಣೆಯಿಂದ ಹೊರಹೊಮ್ಮಿತೆನ್ನಬಹುದು. ಪಂಜೆಯವರು ಪ್ರಾಸಪ್ರಿಯರು. ಶಿಷ್ಯ ಪೈಗಳವರು ಪ್ರಾಸದ ಸಂಕಲೆಯನ್ನು ಕಡಿದು ಹಾಕಿದವರು. ಅದರೂ ಆ ಬಗೆಗೆ ಗುರುಗಳ ಆಶೀರ್ವಾದವಿತ್ತೆಂದು ನಾನು ಕೇಳಿದ್ದೇನೆ.

"ನುತ ಶಬ್ದಾಲಂಕಾರದೊಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ" ಎಂಬುದು ಕವಿರಾಜಮಾರ್ಗವಾದರೆ ಅದನ್ನು ಅಲ್ಲಗಳೆದು "ಆನೆ ನಡೆದುದೆ ಮಾರ್ಗ" ಎಂಬಂತೆ ಹೊಸ ಮಾರ್ಗವನ್ನು ಕನ್ನಡಿಗರಿಗೆ ಹಾಕಿಕೊಟ್ಟಿದ್ದುದು ಪೈಗಳಲ್ಲಿ ಕಾಣುವ ದೊಡ್ಡ ವೈಶಿಷ್ಟ್ಯವೆನ್ನಬಹುದು. ಅದಕ್ಕೆ ಧೈರ್ಯ ಸಾಹಸಗಳು ಬೇಕು. ಸಂಪ್ರದಾಯ ಪ್ರಿಯರ ನಿಷ್ಠುರ ಟೀಕೆಗಳಿಗೆ ಎದೆಗೊಡಬೇಕು. ಪೈಗಳವರು ಆ ಬಗೆಗೆ ಎಂಟೆದೆಯುಳ್ಳವರೆನ್ನಬಹುದು.

ಇಲ್ಲಿ ಪೈಗಳವರ ಉದಾರ ಹೃದಯತೆಗೆ ಒಂದು ನಿದರ್ಶನ ಕೊಡಬಹುದು. ಪ್ರಾಸರಹಿತ ಕವಿತೆಗಳ ಟೀಕೆಗಳ ಗೊಂದಲದಲ್ಲಿ ಅವರ ಸ್ನೇಹಿತರಾಗಿದ್ದ ಮಂಜೇಶ್ವರ ಅನಂತರಾಯರು ಅವರನ್ನೇ ಬಹು ನಿಷ್ಠುರವಾಗಿ ಟೀಕಿಸಿದ್ದರು. ಆಗ ಆ ವಿಷಯದಲ್ಲಿ ಒಂದೆರಡು ಲೇಖನಗಳನ್ನು ನಾನೂ ಬರೆದಿದ್ದೆ. ಅನಂತರಾಯರು ಮಾಡಿದ ಟೀಕೆ, ಅವರ ನೆರಳಂತಿದ್ದ ನನ್ನ ಬರಹವೇ ಎಂದು ಪೈಗಳವರು ಅಲ್ಲಲ್ಲಿ ಹೇಳಿಕೊಂಡು ಬರುತ್ತಿದ್ದರು. ಆದರೂ ನಾನು ಸಂಧಿಸಿದಾಗಲೆಲ್ಲ ಅದರ ಮಾತೆತ್ತದೆ ನನ್ನಲ್ಲಿ ಯಾವ ತರದ ವರ್ತನೆಯ ವ್ಯತ್ಯಾಸವನ್ನು ಕಾಣಿಸದೇ ಇದ್ದರು. ನಾನು ಕೂಡ ಅವರ ಗುಣವನ್ನು ಮನಸ್ಸಿನಲ್ಲೇ ಮೆಚ್ಚಿದೆನೇ ಹೊರತು ಆ ಟೀಕೆಯ ನಿಜವಾದ ಕರ್ತೃ ಯಾರೆಂದು ತಿಳಿಸಲೇ ಇಲ್ಲ.

ಸಮಯ ಕ್ಲಪ್ತತೆ ಗೋವಿಂದ ಪೈಗಳವರ ಒಂದು ವಿಶಿಷ್ಟ ಗುಣ. ಅವರಿಗೆ ಯಾರ ಒಂದು ಪತ್ರ ಬಂದರೂ ಒಡನೆಯೇ ಅದಕ್ಕೆ ಉತ್ತರ ಬರೆದಾರು. ಒಂದು ವೇಳೆಗೆ ಕೂಡಲೇ ಜವಾಬು ಬರೆಯಲು ಅವಕಾಶವಿಲ್ಲವಾದರೆ "ತಮ್ಮ ಪತ್ರ ಬಂದವೆ: ಕೆಲವೇ ದಿವಸಗಳಲ್ಲಿ ಅದಕ್ಕೆ ಸಮರ್ಪಕ ಉತ್ತರ ಕೊಡುವೆ" ಎಂದು ಶೀಘ್ರ ಪತ್ರವೊಂದನ್ನು ಬರೆದಾರು. ಅವರ ಪತ್ರ ವ್ಯವಹಾರವೆಲ್ಲ ನೇರಳೆ ಶಾಯಿಯಲ್ಲಿ. ನೇರಳೆ ಬಣ್ಣ ಅವರ ಲಾಂಛನವೆಂದೇ ಹೇಳಬಹುದು. ಒಂದು ಸಲ ಮಾತ್ರ ಅವರ ನೇರಳೆ ಶಾಯಿಯೆಲ್ಲ ಮುಗಿದು, ಪೇಟೆಯಲ್ಲಿ ಎಲ್ಲಿಯೂ ಸಿಗದೆ ಅದನ್ನು ಸಂಪಾದಿಸಿಕೊಳ್ಳುವ ವರೆಗೆ ಕಪ್ಪು ಶಾಯಿಯಲ್ಲೇ ಕೆಲವರಿಗೆ ಪತ್ರ ಬರೆಯಬೇಕಾಯಿತು! ಅಂತಹ ಒಂದೆರಡು ಪತ್ರಗಳು ನನ್ನಲ್ಲಿವೆ.

ಪೈಗಳವರು ತುಂಬಾ ಓದಿದವರು-ಓದುತ್ತಲೇ ಇದ್ದವರು. ಅವರ ಪುಸ್ತಕ ಭಂಡಾರವು ಖಾಸಗಿ ಪುಸ್ತಕ ಭಂಡಾರಗಳಲ್ಲಿ ಬಲು ದೊಡ್ಡದು. ಒಂದು ಗ್ರಂಥವನ್ನು ಕೊಂಡೊಡನೆ ಅದನ್ನು ಆಮೂಲಾಗ್ರ ಓದಿ ಅದರಲ್ಲಿರುವ ಮುಖ್ಯ ವಿಷಯಗಳನ್ನು ನೇರಳೆಶಾಯಿಯ ಅಡಿಗೆರೆಗಳಿಂದ ಗುರುತಿಸಿ ಅವುಗಳನ್ನೆಲ್ಲ ಮನನ ಮಾಡಿಕೊಂಡ ಮೇಲೆಯೇ ಗ್ರಂಥವನ್ನು ತಮ್ಮ ಸರಸ್ವತಿ ಮಹಲಿನಲ್ಲಿಡುತ್ತಿದ್ದರು.

ಇಂತಹ ಸಾಹಿತಿಗಳ ಮನೆ ಸಾಹಿತ್ಯಾಭಿಮಾನಿಗಳಿಗೆ ಒಂದು ಯಾತ್ರಾ ಸ್ಥಳವಾಗಿದ್ದುದು ಏನೂ ವಿಶೇಷವಲ್ಲ. ಅವರನ್ನು ಕಾಣುವುದಕ್ಕೆ ಹೋಗುವ ಮುನ್ನ ಅವರಿಗೆ, ತಲಪುವ ತಾರೀಕು ತಿಳಿಸಿ ಪತ್ರವೊಂದು ಬರೆದರಾಯಿತು. ಪಂಡರಪುರದ ವಿಠೋಬನು ಭಕ್ತರ ನಿರೀಕ್ಷಣೆಯಿಂದ ಕಾದು ನಿಂತಿದ್ದಂತೆ ತನ್ನ ಮನೆಯಲ್ಲಿದ್ದು ಅವರ ದಾರಿ ಕಾಯುತ್ತಿದ್ದರು. ಅವರ ಆದರ ಉಪಚಾರವು ಸರ್ವರಿಗೂ ಒಂದೇ ತರಹದ್ದು. ಎಲ್ಲರನ್ನೂ ಹಿರಿಯಣ್ಣನಂತೆ ಬಹು ಪ್ರೀತಿ ವಿಶ್ವಾಸಗಳಿಂದ ನಡೆಸುತ್ತಿದ್ದರು. ಅವರ ಆತಿಥ್ಯಕ್ಕಿಂತಲೂ ಅವರ ಮಾತುಕತೆ ಹೆಚ್ಚಿನ ಸವಿಯುಳ್ಳದ್ದೆಂದು ಎಲ್ಲರ ಅನುಭವವು.

ಗೋವಿಂದ ಪೈಗಳವರ ಇನ್ನೊಂದು ವೈಶಿಷ್ಟ್ಯವೆಂದರೆ ಅವರ ಲೇಖನಗಳನ್ನು ಓದಲಿ, ಓದದಿರಲಿ; ಮೆಚ್ಚಲಿ, ಮೆಚ್ಚದಿರಲಿ; ಅವರ ಹೃದಯಕ್ಕೆ ಹೌದೆಂದು ತೋರಿದುದನ್ನು "ಸ್ವಾಂತ: ಸುಖಾಯ" ಎಂದು ವಿಷಯವನ್ನು ನಿರ್ದಾಕ್ಷಿಣ್ಯವಾಗಿ ಸುತರ್ಕದಿಂದ ಪ್ರತಿಪಾದಿಸುತ್ತಿದ್ದರು. ಅವರ ಸಂಶೋಧನ ಕೃತಿಗಳಿಗೆ "ಇದರ ಎಲ್ಲಾ ಹಕ್ಕುಗಳು ಕಾದಿರಿಸಲಾಗಿದೆ" ಎಂದು ಪ್ರಾರಂಭದಲ್ಲಿ ಇದ್ದುದನ್ನು ಓದಿದೊಡನೆ- "ಓದುವ ಹಕ್ಕು ಕೂಡ" ಎಂದು ಕೆಲವರು ತಮಾಷೆ ಮಾಡಿದ್ದುದು ಅವರ ಕಿವಿಗೆ ಬಿದ್ದಿತ್ತು. ಅದರಿಂದ ಅವರೇನಾದರೂ ಎದೆಗುಂದಿದವರಲ್ಲ. ಅವರು ಮೊದಮೊದಲು ಆ ರೀತಿಯ ಬರವಣಿಗೆಗಳಿಗೆ ನಾವು ಪಳಗಿದವರಲ್ಲವಾಗಿ ಇಂಗ್ಲಿಷಿನಲ್ಲಿ Journal of Indian History, Poona Oriental Series, New Indian Antiquary ಮುಂತಾದವುಗಳಲ್ಲಿ ಬರೆಯುತ್ತಿದ್ದರು. ಅವರ ಆಗಿನ ಲೇಖನಗಳಲ್ಲಿ Genealogy and Chronology of the Vakatakas, Rulers of Punnata, Were Hermaeus and Kujula Kadphises Joint Rulers?—ಇವು ಅವರ ಅಪಾರವಾದ ಸಂಶೋಧನಾ ಶಕ್ತಿಯನ್ನು ವ್ಯಕ್ತಗೊಳಿಸುವುವು. ಆ ಮೇಲೆ ಅವರ ದೃಷ್ಟಿಕೋನ ಬದಲಾಗಿ ಆ ರೀತಿಯ ಸಂಶೋಧನಾ ಲೇಖನಗಳನ್ನು ಕನ್ನಡದಲ್ಲಿ ಬರೆಯತೊಡಗಿ ಕನ್ನಡಿಗರಿಗೆ ಒಂದು ವಿಶಿಷ್ಟ ದಾರಿಯನ್ನು ತೋರಿಸಿಕೊಟ್ಟರು. "ಕರ್ನಾಟಕಕ್ಕೆ ಜೈನ ಧರ್ಮದ ಆಗಮನ. ಪುನ್ನಾಟ ಅರಸರು. ಮಳವಳ್ಳಿಯ ಎರಡು ಶಿಲಾಲೇಖಗಳು. ಪ್ತೊಲೋಮಿಯ ಪಿಪ್ರೋಕೂರ. ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ-ಅವುಗಳಲ್ಲಿ ಮುಖ್ಯವಾದುವುಗಳು. ಯಾವೊಂದು ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿಯೂ ಗೋವಿಂದ ಪೈಗಳವರ ಒಂದು ಸಂಶೋಧನಾತ್ಮಕ ಲೇಖನವಿದ್ದೇ ಇದ್ದೀತು. ನಾನಾದರೂ ಯಾವುದಕ್ಕೂ ಮೊದಲು ಅದನ್ನೇ ಓದುವ ಸಂತೋಷವಿದ್ದವನು. ಅದನ್ನು ತಿಳಿದು ಪೈಗಳವರು ಅವರ ಮುಖ್ಯ ಲೇಖನಗಳ ಒಂದೊಂದು ಪ್ರತಿಯನ್ನು ನನಗೆ ಕಳುಹಿಸುತ್ತಿದ್ದರು. ನನ್ನಂತೆಯೆ ಇತರರೂ ಕೂಡ ಪ್ರಥಮತ: ಅವನ್ನೇ ಓದಿ ಆನಂದಿಸುತ್ತಿದ್ದರೆಂದು ನನ್ನ ನಂಬಿಕೆ.

ಭಾಷೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುವುದು ಪೈಗಳವರದು ಇನ್ನೊಂದು ವೈಶಿಷ್ಟ್ಯ. ಮುಖ್ಯವಾಗಿ ಅವರಿಗೆ ಕನ್ನಡ ಪದಗಳ ಮೇಲೆ ಪ್ರೇಮ ಹೆಚ್ಚು. ವ್ಯವಹಾರದಲ್ಲಿ ಎಂದೋ ನಷ್ಟವಾಗಿ ನಿಘಂಟುಪಾಲಾಗಿದ್ದ ಅಚ್ಚಗನ್ನಡ ಪದಗಳನ್ನು ಹೆಕ್ಕಿ ಪುನ: ಬಳಕೆಗೆ ತರುವುದೂ ಅವರಿಗೆ ಪ್ರಿಯವಾಗಿತ್ತು. ಅವಕ್ಕೆ ಒಂದು ವೇಳೆಗೆ ಅರ್ಥವಾಗದೆ ಹೋದೀತೆಂಬ ಭಯದಿಂದ ಅವಕ್ಕೆ ಅರ್ಥವನ್ನು ಕೆಳಗೆ ಅಂಕಿಸುತ್ತಿದ್ದರು. ಇದು ಅವರ ಕವಿತೆಗೆ ಒಂದು ತೊಡಕು ಎಂದು ಕೆಲವರು ಅನ್ನುತ್ತಿದ್ದರು. 'ಇಸು' ಪ್ರತ್ಯಯಗಳಿಂದ ಹೊಸ ಪ್ರಯೋಗಗಳನ್ನು ಮಾಡಿದ್ದುದು ಕೆಲವರ ಕಣ್ಣಿಗೆ ಕಸದಂತಿತ್ತು. ಮಹಾಕವಿಗಳು ಆ ರೀತಿ ಪ್ರಯೋಗಗಳನ್ನು ಮಾಡಲು ಅಧಿಕಾರವುಳ್ಳವರೆಂದೂ ನಾವು ಅವನ್ನು ಮೆಚ್ಚ ಕಲಿಯಬೇಕೆಂದೂ ನನ್ನ ಮತ. ಆ ಬಗೆಗೆ ದೃಷ್ಟಾಂತವಾಗಿ ಅಂತಹದ್ದೊಂದು ಸಂದರ್ಭದಲ್ಲಿ ಕವಿಕುಂಜರನ "ಭಾಪಾ ! ನಮೋಸ್ತು: ತಮ್ಮಡಿ ದೇವಕಿ ವೈನೆರೆದಳೆಂದು ಬಂದಿರೆ?-ಯಾವುದನುಡಶಂದಿರಿ? ಬತ್ತಳೆ ಬಂದಿರಿ ! ಎಂದಾ ವಧು **ಮೈದುನಿಸಿ** ನಗುತಮಡ್ಡಂ ಬಂದಳ್" ಎಂಬ ಅರ್ಧನೇಮಿ ಪುರಾಣದ ಪ್ರಯೋಗವನ್ನು ಕೊಟ್ಟಿದ್ದೆ.

ಪೈಗಳವರಿಗೆ ಸ್ತುತಿ, ಸನ್ಮಾನ ಎಂದೂ ಸಹನೆಯಾಗುತ್ತಿರಲಿಲ್ಲ. ಮದ್ರಾಸು ಸರಕಾರ ಅವರನ್ನು ರಾಷ್ಟ್ರಕವಿಗಳೆಂದು ಗೌರವಿಸುವ ಕಾರ್ಯವು ಸುಲಭವಾಗಿರಲಿಲ್ಲ. ಅವರ ಸ್ವಭಾವವನ್ನು ತಿಳಿದು, ಮುನ್ನವೇ. ಮಂಜೇಶ್ವರ ಅನಂತರಾಯರು "ಆ ಗೌರವಕ್ಕೆ ತಾವು ಯೋಗ್ಯರು-ಆ ಪದವಿಯನ್ನು ತಾವು ಸ್ವೀಕರಿಸಬೇಕೆಂದು" ಆಗ್ರಹ ಪೂರ್ವಕ ಬರೆದಿದ್ದರು. ಅದೇ ಮೇರೆ ಇತರರೂ ಬರೆದಿದ್ದರೆಂದು ನಾನು ಕೇಳಿದ್ದೇನೆ. ಸ್ನೇಹಿತರ ಒತ್ತಾಯದಿಂದಲೇ ಆ ಪದವಿಯನ್ನು ಅವರು ಸ್ವೀಕರಿಸಿದರೆನ್ನಬಹುದು. ಅಳಕೆಯ ಲೋಕಸೇವಾ ವೃಂದದವರು ಪೈಗಳವರಿಗೂ ಶ್ರೀ ಕಡವ ಶಂಭು ಶರ್ಮರವರಿಗೂ ಮಾನಪತ್ರವನ್ನು ಮಿತ್ರರ ಭಾಷಣಗಳಿಂದ ಕಲಾಭಿಮಾನಿಗಳ ಒಂದು ಸಭೆಯಲ್ಲಿ ಅರ್ಪಣ ಮಾಡುವ ಉದ್ದೇಶದಿಂದ ಪುತ್ತೂರಿಗೆ ಅವರನ್ನು ಆಮಂತ್ರಿಸಲು ಹೋದಾಗ ಅವರು ಅದಕ್ಕೆ ಸುತರಾಂ ಒಪ್ಪಲಿಲ್ಲ. ಅನಂತರ ಅವರ ಅನುಮತಿಯಿಂದ ಅವರ ಪರೋಕ್ಷದಲ್ಲಿ ಸಭೆ ಜರುಗಿಸಿ ಮಾನಪತ್ರವನ್ನು ಸಭೆಯಲ್ಲಿ ಓದಿ ಹೇಳಿ ಅವರ ಮನೆಯ ಏಕಾಂತದಲ್ಲಿ ಸಮರ್ಪಿಸುವುದಾಯಿತು. ಮಂಗಳೂರಿನ ಕಲಾಭಿಮಾನಿಗಳು ಅವರು ಅಸ್ವಸ್ಥವಾಗಿ ಮಲಗಿದ್ದಾಗ ಅವರ ಅನುಮತಿಯನ್ನು ಕೇಳಲು ಅವಕಾಶ ಮಾಡಿಕೊಳ್ಳದೆ ಅವರಿಗಾಗಿ ಒಂದು ದೊಡ್ಡ ಸನ್ಮಾನ ಸಭೆಯನ್ನು ಜರುಗಿಸಿದರು. ಅದು ತನಗೆ ಬೇಕಿಲ್ಲವೆಂದು ಸುದೃಢವಾಗಿ ಹೇಳಲೋ ಎಂಬಂತೆ ಸನ್ಮಾನ ಮಾಡುವುದಕ್ಕೆ ಮೊದಲೇ ಅವರು ಇಹಲೋಕವ್ಯಾಪಾರ ಮುಗಿಸಿದರು.

ಪ್ರಾಸದ "ಕಟ್ಟ"ದಿಂದ ನಿಂತಲ್ಲೇ ನಿಂತ ನೀರನ್ನು ಆ ಕಟ್ಟ ಕಡಿದು ಭಾಷಾ ಪ್ರವಾಹವನ್ನು ಎಡರು ತೊಡರುಗಳಿಲ್ಲದೆ ಹರಿಯಬಿಟ್ಟ ಪೈಗಳವರು ಚಿಕ್ಕ ಕವಿತೆ, ನೀಳ್ಗವಿತೆ, ಗೀತಾನಾಟಕ. ಸಂಶೋಧನಾತ್ಮಕ ಕೃತಿಗಳಿಂದ ವಿವಿಧ ಭಾಷಾ ಸೇವೆ ಮಾಡಿ ತನ್ನ ತುಂಬು ವಯಸ್ಸಿನಲ್ಲಿ ಸ್ವರ್ಗಸ್ಥರಾದರು. ಅವರ ಕೀರ್ತಿ ಕರ್ನಾಟಕ ಭಾಷಾ ಪ್ರಪಂಚದಲ್ಲಿ ಸ್ಥಿರವಾಗಿರುವುದು. ಶೇಕ್ಸ್‌ಪಿಯರಿನ ವಿಷಯವಾಗಿ ಅವನ ಸಮಕಾಲಿಕನಾದ ಬೆನ್ ಜಾನ್ಸನ್ ಆಡಿದ- 'He was not of an age, but of all time' ಮಾತನ್ನು ಯಥಾರ್ಥವಾಗಿ ರಾಷ್ಟ್ರಕವಿ ಗೋವಿಂದ ಪೈಗಳ ವಿಷಯದಲ್ಲಿಯೂ ಹೇಳಬಹುದು.

# ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರು

**ವೈದ್ಯಗುರು ಎಂ. ಆರ್. ಭಟ್**

ಶ್ರೀಮಾನ್ ರಾಷ್ಟ್ರಕವಿಯವರು ವಿಭಿನ್ನ ಸಾಹಿತ್ಯ ಸಂಸ್ಕೃತಿಗಳ ಒಂದು ಆಶ್ಚರ್ಯಪೂರ್ಣ ಸಮ್ಮಿಶ್ರಣ; ಪಾಂಡಿತ್ಯ ಹಾಗೂ ಪ್ರತಿಭೆಯ ಕೇಂದ್ರ; ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವತ್ತಿನ ತಪೋಭೂಮಿ: ಕೋಮಲತೆ, ಸೌಂದರ್ಯ, ಸಹನಶೀಲತೆಯ ಕಾಮಧೇನು: ಕವಿತಾ ಕಾಮಿನಿಯ ಸತ್ಪುತ್ರ; ಸಂಶೋಧನೆ ಪರಿಶೋಧನೆಗಳ ಮನೋಹರ ಮಂದಿರ; ಶ್ರೀ ಭೂಸಂಪನ್ನ ಪ್ರಕಾಶಮಾನ ವ್ಯಕ್ತಿ.

ಸಾಹಸಯುಕ್ತ ಅನ್ವೇಷಕರು ಅವರ ಹೃದಯದ ಆಂತರಿಕ ರಹಸ್ಯವನ್ನು ಹಾಗೂ ಅವರ ಪಾಂಡಿತ್ಯದ ಬಹುಮುಖ ಪ್ರತಿಭೆಯನ್ನು ಅರಿಯಲು ಸದಾ ಜಿಜ್ಞಾಸಾತತ್ಪರರಾಗುತ್ತಾರೆ. ಆದರೆ ಹೆಚ್ಚಾಗಿ, ಅವರ ಭಗೀರಥ ಪ್ರಯತ್ನವು ಅಸಫಲತೆಯ ಗಹನ ಅಂಧಕಾರದಲ್ಲಿ ಅಡ್ಡಾಡಿ, ಮೋಸಗೊಳ್ಳುತ್ತದೆ. ರಾಷ್ಟ್ರಕವಿಗಳ ಕವಿತೆಯು ಛಾಯಾವಾದದ ಕವಿತೆ: ಅದನ್ನು ಅರಿಯಲು ಒಂದು ಪ್ರೇಮಪೂರ್ಣ ಹಾಗೂ ಸೂಕ್ಷ್ಮತಮ ದೃಷ್ಟಿಯು ಅತ್ಯಗತ್ಯ. ಅನಂತ ಉತ್ಕೃಷ್ಟ ಭಾವನೆಗಳಿಂದ ತುಂಬಿ ತುಳುಕುತ್ತಿರುವ ಅವರ ಪಾಂಡಿತ್ಯವು ತಿಳಿಯಲಸಾಧ್ಯವಲ್ಲವೆ?

ಅವರಲ್ಲಿ ಅಗಮ್ಯ ಗಾಂಭೀರ್ಯವಿತ್ತು. ಆಕರ್ಷಣದ ಪುಟ ನೀಡಲು ಅವರಲ್ಲಿ ಪ್ರೇಮವಿತ್ತು. ಅವರ ಪಾಂಡಿತ್ಯವು ಸಾರ್ವದೇಶಿಕ ಸಾಹಿತ್ಯ ಪ್ರೇಮದ ಪರಿಣಾಮವೆಂದರೆ ಅತಿಶಯೋಕ್ತಿಯಾಗದು. ಅವರ ಸಾಹಿತ್ಯ ಪ್ರೇಮವು ಅನಂತ ಹಾಗೂ ನಿಸ್ಸೀಮ. ಮೃತ್ಯುಶಯ್ಯೆಯ ಮೇಲೆಯೂ ಸಾಹಿತ್ಯದಿಂದಲೇ ಮನಶ್ಶಾಂತಿ ಹೊಂದಿದವರು. ಅವರ ಮುಖ ಕಮಲವು ಆನಂದದಾಯಕ. ಅವರ ನಯನಗಳು ಹೃದಯ ಸ್ಪರ್ಶಿಯಾಗಿದ್ದವು. ಅವರ ವಾಕ್ಸಂಪತ್ತು ಅದ್ವಿತೀಯ ಹಾಗೂ ಪ್ರತಿಭಾಸಂಪನ್ನ: ಅವರ ಸ್ಮರಣ ಶಕ್ತಿಯು ಆಶ್ಚರ್ಯಕಾರಕ: ಅವರ ವಾಗ್ಧಾರೆಯ ಸಮ್ಮುಖ, ಸಬಲರು ಅಬಲರಾಗುತ್ತಿದ್ದರು; ಅವರ ಶಾಂತಹೃದಯವು ಶಾಂತಿಪೂರ್ಣ ಲಕ್ಷ್ಯದ ಮೇಲೆ ಶಾಂತಿಪೂರ್ವಕ ಚಲಿಸುತ್ತ ಅನಂತ ಶಾಂತಿಯನ್ನು ಹೊಂದುತ್ತಿತ್ತು.

ಅವರು ಭಾವುಕ ಹಾಗೂ ದೃಢಪ್ರತಿಜ್ಞರು: ಅವರ ಕ್ರೋಧದಲ್ಲಿಯೂ ಪ್ರೇಮವಿತ್ತು. ತಿರಸ್ಕಾರದಲ್ಲಿಯೂ ಸಹಾನುಭೂತಿಯಿತ್ತು; ಉಪೇಕ್ಷೆಯಲ್ಲಿಯೂ ಆಕುಲ ಆಹ್ವಾನವಿತ್ತು: ಅವರ ಕ್ಷಮತೆಯು ಐಶ್ವರ್ಯದಲ್ಲಿಯೂ ದಾರಿದ್ರ್ಯದಲ್ಲಿಯೂ ಇತ್ತು: ಅವರು ಸರ್ವಸ್ವವನ್ನು ಹೊಂದುತ್ತಿದ್ದರು. ಸರ್ವಸ್ವವನ್ನು ನೀಡುತ್ತಿದ್ದರು. ಧರ್ಮದ ಹಾಗೂ ದೇಶದ ಸಂರಕ್ಷಣೆಗೋಸ್ಕರ ಸದಾ ಸಿದ್ಧರಿದ್ದರು. ಅವರ ಶಿಲಾಲೇಖಗಳ ಪರಿಜ್ಞಾನವು ಶ್ರೇಷ್ಠತರದ್ದು. ಅವರ ಸಂಶೋಧನಾತ್ಮಕ ಹಾಗೂ ಪರಿಶೋಧನಾತ್ಮಕ ಕೃತಿಗಳು ಕನ್ನಡ ನಾಡಿನ ಗೌರವವನ್ನೂ ಜ್ಞಾನ ಸಂಪತ್ತನ್ನೂ ಹೆಚ್ಚಿಸಿವೆ: ವೇದ, ಬ್ರಾಹ್ಮಣ, ಉಪನಿಷತ್ತು, ದರ್ಶನ ಶಾಸ್ತ್ರ ಇವೆಲ್ಲ ಅವರ ಮೆಚ್ಚಿನ ಗ್ರಂಥಗಳು. ಇವೆಲ್ಲ ರಾಷ್ಟ್ರೀಯ ಚರಿತ್ರವನ್ನು ಜಾಗೃತಗೊಳಿಸಲು ಸಹಾಯಕವಾಗಿವೆ. ಅವರು ಸಾಹಿತ್ಯಪ್ರೇಮದ ಮೂರ್ತಿ. ಅವರು ಅನೇಕ ಭಾಷಾ ವಿಶಾರದರು. ಆಂಗ್ಲ ಭಾಷೆಯ ಪಂಡಿತೋತ್ತಮರು. ಸಂಸ್ಕೃತ ಭಾಷೆಯಲ್ಲಿ ಅಪ್ರತಿಮ ಸಾಹಸ ಮಾಡಿದವರು.

ಅವರು ಸಂಗೀತಪ್ರಿಯರು; ಸಂಗೀತಜ್ಞರೂ ಅಹುದು; ಸ್ವರಾದಿಗಳ ವಿಕಾಸದ ಕುರಿತು ಲೇಖನ ಬರೆದವರು. ಯಕ್ಷಗಾನ ಪ್ರೇಮಿಗಳು. ಈ ಸಕಲ ಶಾಸ್ತ್ರಗಳ ಇತಿಹಾಸವನ್ನು ಯಥಾಸ್ಥಿತಿ ಉಲ್ಲೇಖಿಸಿದವರು. ಅನೇಕ ಕಲೆಗಳ ಕುರಿತು ಸಮುಚಿತವಾಗಿ ಉಲ್ಲೇಖಿಸಿ ಕೃತ ಕೃತ್ಯರಾದರು. ಅವರ ಸ್ವಕೀಯ ಗ್ರಂಥಾಲಯವು ವಿಶಾಲ ಹಾಗೂ ಅಪೂರ್ವ ಮತ್ತು ಸರ್ವಸಂಪನ್ನವಾಗಿದೆ: ಅವರ ಬಹುಮುಖ ವಿದ್ವತ್ತಿನ ನಿದರ್ಶನವಿದು.

ಶ್ರೀ ಕೃಷ್ಣನು ಜಗದೀಶ್ವರನ ಪೂರ್ಣಾವತಾರ; ಅವನು ಜಗತ್ತಿನ ಮಹಾ ತತ್ತ್ವವೇತ್ತನು; "ಕೃಷ್ಣಾತ್ಪರಂ ಕಿಮಪಿ ತತ್ತ್ವಮಹಂ ನಜಾನೇ" ಎಂದು ಹೇಳಿ ಶ್ರೀ ಕೃಷ್ಣನಿಗೆ ರಾಷ್ಟ್ರಕವಿಗಳು ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದ್ದರು. ಅವರ ಸೂಕ್ಷ್ಮ ಜೀವನದರ್ಶನ, ಅವರ ರಾಜನೈತಿಕ ಜ್ಞಾನ, ಅವರ ಉತ್ಕಟ ಸಾಹಿತ್ಯ ಭಕ್ತಿ, ಅವರ ಧಾರ್ಮಿಕ ಭಾವನೆಗಳು ಇವೆಲ್ಲ ನಮಗಿಂದು ಸ್ಮರಣೆಗೆ ಬಂದು. ಅವರ ಜೀವನದ ಸಮಗ್ರ ರೂಪವನ್ನು ವಿವೇಕ ಪೂರ್ವಕವಾಗಿ ನಾವು ಅವಲೋಕಿಸಿ ಸ್ಫೂರ್ತಿಹೊಂದಿ ಕನ್ನಡ ನಾಡಿನಲ್ಲಿ ಹಾಗೂ ಭಾರತದಲ್ಲಿ ಮೆರೆಯಬೇಕಾಗಿದೆ. ವೈದಿಕ ರಾಜ್ಯ ಶಾಸನ ಪದ್ಧತಿಗಳು ಅವರಿಗೆ ಉತ್ತಮವೆನಿಸುತ್ತಿದ್ದುವು. ಅವರು ಭಾರತೀಯ ಸಂಸ್ಕೃತಿ ಹಾಗೂ ಸಭ್ಯತೆಯ ಪ್ರತೀಕರು: ಅವರು ಸಾಧಕರು: ಸಾಧನಾ ತತ್ಪರರು: ತಪಸ್ವಿಗಳು: ಮಹಾ ಮೇಧಾವಿಗಳು: ಮತ್ತು ಮಹಾಮಹಿಮರು.

ಅವರಿಗೆ ಜೀವನದಲ್ಲಿ ಉದಾಸೀನತೆಯಿರಲಿಲ್ಲ: ವಿಲಾಸದ ಕಡೆಗೆ ಅವರ ಪ್ರವೃತ್ತಿಯಿರಲಿಲ್ಲ: ಅವರಲ್ಲಿ ಆತ್ಮಿಕ ದುರ್ಬಲತೆಯಿರಲಿಲ್ಲ; ಅನೈತಿಕತೆಯಿರಲಿಲ್ಲ: ರಾಷ್ಟ್ರದ ವಾಸ್ತವಿಕ ಉನ್ನತಿಯಾಗಬೇಕೆಂಬುದೇ ಅವರ ಗಮ್ಯವಾಗಿತ್ತು.

ಭಿನ್ನ ಭಿನ್ನ ಶಾಸ್ತ್ರಗಳಲ್ಲಿ ವರ್ಣಿತವಾದ ವೈಜ್ಞಾನಿಕ ವಿಷಯವೇ ತಥ್ಯಕಥನ; ತಥ್ಯಕಥನದಿಂದಲೇ ದೇಶದ ಅಭಿವೃದ್ಧಿ-ಎಂದು ಅವರು ಅನೇಕ ಸಲ ಒತ್ತಿ ಹೇಳುತ್ತಿದ್ದರು.

ಶ್ರೀ ಮದ್ಭಾಗವತ, ಪುರಾಣ, ಮೀಮಾಂಸಾದಿ ದರ್ಶನ ಶಾಸ್ತ್ರ, ಧರ್ಮಶಾಸ್ತ್ರ, ಷಡಂಗಗಳು, ವೇದಗಳು, ಗಂಧರ್ವವೇದ, ಶಿಲ್ಪಾದಿ ವೇದಗಳು-ಇವನ್ನೆಲ್ಲ ಭಕ್ತಿಪೂರ್ವಕ ಅಭ್ಯಸಿಸಿ, ಮೆರೆದವರು. ಧರ್ಮ ಶಬ್ದಕ್ಕೆ ವಿಭಜಿತರಾಗದೆ ಐಕ್ಯದಲ್ಲಿದ್ದು ವಿಜ್ಞಾನ-ಪ್ರಜ್ಞಾನ-

ಕಲೆಗಳಲ್ಲಿ ಮುಂದೆ ಸಾಗಿ ಮೆರೆಯುವುದೆಂಬ ಅರ್ಥವನ್ನು ಇಟ್ಟುಕೊಂಡು. ನಾವು ಧರ್ಮ ಸಂರಕ್ಷಕರಾಗಬೇಕು ಎಂದು ಘೋಷಿಸಿದವರು ಅವರು. ಸ್ವವೇಷ, ಸ್ವಜೀವನ, ಸ್ವಧರ್ಮ, ಸ್ವಸಂಸ್ಕೃತಿ, ಸ್ವದೇಶ, ಸ್ವ-ಇತಿಹಾಸ-ಇವೆಲ್ಲವುಗಳ ಭಜಕರಾಗಬೇಕೆಂದು ಹೇಳುತ್ತಿದ್ದರು.

ಜ್ಯೋತಿಶ್ಶಾಸ್ತ್ರದಲ್ಲಿ ಅಗಾಧ ಪಾಂಡಿತ್ಯವನ್ನು ಗಳಿಸಿದವರು. ಜ್ಯೋತಿರ್ಗಣಿತದ ಕುರಿತು ತೀಕ್ಷ್ಣಮತಿಯ ಗಣಿತಜ್ಞರು; ಮುಹೂರ್ತ ಶಾಸ್ತ್ರದಲ್ಲಿ ಸಹ ಪಾರಂಗತರು. ಜಾತಕಫಲ, ಮುಹೂರ್ತ ಮತ್ತು ಇತರ ಶಾಖೆಗಳ ಘನವಿದ್ವಾಂಸರು. ಅವರ ಅವಸಾನದಿಂದ ಕನ್ನಡ ನಾಡಿಗೆ ಹಾಗೂ ಭಾರತಕ್ಕೆ ತುಂಬಲಾರದ ನಷ್ಟ; ಅವರ ಆತ್ಮಕ್ಕೆ ಚಿರಶಾಂತಿಯನ್ನು ಬಯಸುವಾ.



# ಒಂದು ನೆನಪು

**ಶ್ರೀ ಶ್ರೀರಂಗ**

ದಿವಂಗತ ಮಂಜೇಶ್ವರ ಗೋವಿಂದ ಪೈ ಅವರನ್ನು ನಾನು ಭೇಟಿಯಾದದ್ದು ಅಯ್ದೋ ಆರು ಸಲವೋ. ಒಂದು ದೃಷ್ಟಿಯಿಂದ ವೈಯಕ್ತಿಕವಾಗಿ ಅವರ ಪರಿಚಯ ನನಗೆ ಹೆಚ್ಚಾಗಿ ಇದ್ದಿರಲಿಲ್ಲ ಎನ್ನಬಹುದು. "ಒಂದು ದೃಷ್ಟಿಯಿಂದ" ಎನ್ನುವುದಕ್ಕೆ ಶ್ರೀ ಪೈ ಅವರ ಸ್ವಭಾವ ವೈಶಿಷ್ಟ್ಯವೇ ಕಾರಣವಾಗಿದೆ. ಮೊದಲ ಸಲ ಅವರನ್ನು ಕಂಡದ್ದು ಚೆನ್ನಾಗಿ ಸ್ಮರಣೆಯಲ್ಲಿದೆ. 31–32 ವರ್ಷಗಳ ಹಿಂದಿನ ಮಾತು. ಶ್ರೀ ಶಿವರಾಮ ಕಾರಂತರದು ಅದೇ ಪರಿಚಯವಾಗಿತ್ತು. ಪುತ್ತೂರ ದಸರಾ ಉತ್ಸವದಲ್ಲಿ ಭಾಷಣ ಮಾಡಲು ನನ್ನನ್ನು ಕರೆಯಿಸಿಕೊಂಡಿದ್ದರು. ಆಗ ಕನ್ನಡದಲ್ಲಿ ಧೈರ್ಯವಾಗಿ ಮಾತನಾಡುವ ಅನುಭವ ನನಗಿನ್ನೂ ಇದ್ದಿರಲಿಲ್ಲ; ಸಾರ್ವಜನಿಕ ಭಾಷಣವೇ ನನಗೆ ಹೆಚ್ಚಾಗಿ ರೂಢಿ ಇದ್ದಿರಲಿಲ್ಲವಾದ್ದರಿಂದ ಕೃತಕ ಗಾಂಭೀರ್ಯದಿಂದ, ಪರಿಶ್ರಮದಿಂದ ಮಾತನಾಡುತ್ತಿದ್ದೆ. ಪುತ್ತೂರಿನಲ್ಲಿ ನನ್ನ ಕಾರ್ಯಕ್ರಮವಿದ್ದ ದಿನ ಶ್ರೀ ಪೈಯವರು ಅಲ್ಲಿಯೇ ಇದ್ದರು, ವ್ಯಾಸ ಪೀಠದ ಮೇಲೆಯೇ ಇದ್ದರು. ಪುತ್ತೂರಿನ ಹವೆ ಮತ್ತು ಆಂತರಿಕ ಕಾರಣಗಳಿಗಾಗಿ ಭಾಷಣಕ್ಕಿಂತ ಜ್ವರವೇ ಹೆಚ್ಚಾಗಿತ್ತು. ಮುಗಿಯಿಸಿ ಕುಳಿತುಕೊಳ್ಳಬೇಕೆನ್ನುವಾಗ ಶ್ರೀ ಪೈಯವರು ನನ್ನನ್ನು ತಬ್ಬಿಕೊಂಡು ಅಭಿನಂದಿಸಿದರು; ತತ್‌ಕ್ಷಣ ಒಂದು ಹೆಜ್ಜೆ ಹಿಂದೆ ಸರಿದು ನನ್ನನ್ನು ದಿಟ್ಟಿಸಿ "ನನಗೆ ಅನುಮಾನ ಬಂದಿತ್ತು. ನಿಮ್ಮ ಮುಖವೂ ಬಾಡಿದೆ. ಮೈಯೆಲ್ಲ ಕೆಂಪ ಆಗಿದೆ. ಜ್ವರ ನಿಮಗೆ" ಎಂದವರೇ ಎಲ್ಲ ರೀತಿಯಿಂದಲೂ ಅವಸರ ಮಾಡಿ ನಿವಾಸಕ್ಕೆ ಕರೆತಂದು ಕಷಾಯವನ್ನು (ಹಾಗೆ ನೆನಪು) ಕುಡಿಸಿದರು. ಆ ಗಳಿಗೆಯಲ್ಲಿ ಅವರ ವರ್ತನವನ್ನು ನೋಡಿದಾಗ ಇದು ಮೊದಲ ಪರಿಚಯವಲ್ಲ. ಅನೇಕ ವರ್ಷಗಳಿಂದ ಇವರನ್ನು ಬಲ್ಲೆ. ಇವರು ನನ್ನ ಆತ್ಮೀಯ ಗೆಳೆಯರು ಎಂಬ ಭಾವನೆ ನನ್ನಲ್ಲಿ ಪ್ರೇರಿತವಾಯಿತು. ಅಂತಹ ವ್ಯಕ್ತಿತ್ವ ಅವರದು. ಅವರು ವಯಸ್ಸಿನಿಂದ ಹಿರಿಯರು ಎಂಬ ವಿಚಾರ ಎಂದೂ ಲಕ್ಷ್ಯಕ್ಕೆ ಬರಲಿಲ್ಲ, ಬರುತ್ತಿರಲಿಲ್ಲ.

ಮುಂದೆ 4–6 ಸಲ ವೈಯಕ್ತಿಕ ಭೇಟಿಯಾಗಿರಬೇಕು. "ನೀವು ಮುಂಚೆ ಫುಟ್‌ನೋಟ್ಸ್ ಬರೆದು ಆ ಮೇಲೆ ಲೇಖನವನ್ನು ಬರೆಯುವಂತೆ ಕಾಣುವುದು" ಎಂದು ನಾನು ನುಡಿದಾಗ, ಎಳೆಮಗುವಿನಂತೆ ಗಹಗಹಿಸಿ ನಕ್ಕದ್ದನ್ನು ಇಂದಿಗೂ ನಾನು ಕಣ್ಮುಂದೆ ತಂದುಕೊಳ್ಳಬಲ್ಲವನಾಗಿದ್ದೇನೆ. ಶ್ರೀ ಕಾರಂತರೇ ನನ್ನನ್ನು ಮಂಜೇಶ್ವರಕ್ಕೆ ಅವರ ಮನೆಗೆ ಕರೆದೊಯ್ದಿದ್ದರು. ಒಂದೆಡೆ ಆಡಂಬರವಿಲ್ಲ ಎನ್ನಿಸುವಂತಹ ಆತಿಥ್ಯ ಸತ್ಕಾರ. ಇನ್ನೊಂದೆಡೆ ಪುಸ್ತಕಗಳಿಂದಲೆ ಗೋಡೆಗಳನ್ನು ನಿಲ್ಲಿಸಿದೆ ಏನೋ ಎನ್ನಿಸುವಂತಹ ಗ್ರಂಥ ಸಂಗ್ರಹಾಲಯ. ವಾಚನಾಭಿರುಚಿ, ಅಭ್ಯಾಸ, ಸಂಶೋಧನಾ ಬುದ್ಧಿ, ರಸಿಕತೆ ಮತ್ತು ಕವಿತ್ವ-ಇವೆಲ್ಲವುಗಳನ್ನೂ ಪಡೆದ ಅಂತಹವರನ್ನು ಎಷ್ಟು ನೂರು ವರ್ಷಗಳಿಗೊಮ್ಮೆ ಕಾಣಬಹುದೋ? ಓ! ಆ ಅದ್ಭುತ ಸ್ಮರಣ ಶಕ್ತಿ! ವಯಸ್ಸಿನಿಂದ ತರುಣರಾದ ನಮ್ಮನ್ನು ನಾಚಿಸುವಂತೆ ನಮಗೆ ಸಂಬಂಧಿಸಿದ ಸಂದರ್ಭವನ್ನು ಹಿಂದೆ ಎಂದೋ ನಡೆದದ್ದನ್ನು-ವಿವರವಾಗಿ ಹೇಳುತ್ತಿದ್ದರು. ಅವರು ನಮ್ಮವರು ಎಂದು ಕನ್ನಡಿಗರಿಗೆ ಹೆಮ್ಮೆ. ಅವರ ಸ್ಥಾನವನ್ನು ತುಂಬುವ ವ್ಯಕ್ತಿ ಶತಮಾನಗಳಲ್ಲೂ ಹುಟ್ಟಿಬರಲಾರ ಎಂಬುದು ಕನ್ನಡಿಗರ ದುಃಖ.

ದಿವಂಗತ ಗೋವಿಂದ ಪೈ ಅವರ ಸ್ಮರಣೆಯನ್ನು ನಾವು ಗೌರವದಿಂದ ಮತ್ತು ತಕ್ಕುದಾಗಿ ಕಾಯ್ದುಕೊಳ್ಳುವುದಾದರೆ ಕರ್ನಾಟಕಕ್ಕೆ ಒಂದು ಹಿರಿಯದಾದ ಸಂಶೋಧನಾ ಗ್ರಂಥ ಸಂಗ್ರಹಾಲಯವನ್ನು ನಿಲ್ಲಿಸಬೇಕು; ಉಪಯುಕ್ತ ಗ್ರಂಥಗಳನ್ನು ಬೇರೆ ಭಾಷೆಗಳಿಂದಲೂ ಸಂಗ್ರಹಿಸಬೇಕು. ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಪರಂಪರೆಯನ್ನು ಕುರಿತು ಸಂಶೋಧನಕ್ಕಾಗಿ ಅವರ ಹೆಸರಿನಿಂದ ಪಾರಿತೋಷಕಗಳನ್ನಿಡಬೇಕು. ಶಕ್ಯವಾದರೆ, ನಾಲ್ಕು ದ್ರಾವಿಡ ಭಾಷೆಗಳ ತುಲನಾತ್ಮಕ ಅಭ್ಯಾಸದ ಒಂದು ಕ್ರಮ ಇಲ್ಲವೆ ಒಬ್ಬ ಪ್ರಾಧ್ಯಾಪಕನ ಏರ್ಪಾಟು ಆಗಬೇಕು. ದಿವಂಗತರ ಆತ್ಮಕ್ಕೆ ಶಾಂತಿ ದೊರೆಯಲಿ.



# ಸ್ವರ್ಗೀಯ ಮಂಜೇಶ್ವರ ಗೋವಿಂದ ಪೈಗಳು

**ಶ್ರೀ ಬೈಂದೂರು ಆನಂದ ರಾವ್**

ಸ್ವರ್ಗೀಯ ಮಂಜೇಶ್ವರ ಗೋವಿಂದ ಪೈಗಳ ವಿದ್ವತ್ಪ್ರಭೆಯನ್ನು "ಪ್ರಬುದ್ಧ ಕರ್ನಾಟಕ"ವು ಸಂಪುಟ 45 ಸಂಚಿಕೆ 3 ಪುಟ143–144–145ರಲ್ಲಿ ತುಂಬಾ ಸ್ತುತಿಸಿರುವುದು. ಆದೇ ಸಂಚಿಕೆಯ ಪುಟ 3ರಲ್ಲಿ ಮಹಾಕವಿ ಕೆ.ವಿ.ಪುಟ್ಟಪ್ಪನವರು ಗೋವಿಂದ ಪೈಗಳನ್ನು ಕುರಿತು ನಿರವದ್ಯ ಕಾವ್ಯ ಮೌಕ್ತಿಕಗಳನ್ನು ಸುರಿಸಿರುವರು. ಅದಲ್ಲದೆ ನೂರಾರು ಪತ್ರಿಕೆಗಳು ಅವರ ಕಾರ್ಯಕಲಾಪಗಳನ್ನು ಉದ್ಘೋಷಿಸಿರುವವು. ಆದ್ದರಿಂದ ಆ ಸಾತ್ವಿಕ ಶಿರೋಮಣಿಯ ಕೂಲಂಕಷ ಪುನರುಚ್ಚಾರಣೆ ಅನಗತ್ಯ.

ಹಿಮಾಚಲದಲ್ಲಿ ಮನೋಹರ ಜಲಾಶಯದ ಬಳಿ ಕ್ರೌಂಚ ವಧುವನ್ನು ನೋಡಿ ಆದಿಕವಿ ವಾಲ್ಮೀಕಿಯ ಹೃದಯ ಸ್ರೋತಸ್ಸು ಪ್ರವಹಿಸಿತೆಂದು ಪ್ರತೀತಿ ಇದೆ. ತದ್ರೀತಿ ಮಾನ್ಯ ಗೋವಿಂದ ಪೈಗಳು ಕ್ರಿ.ಶ. 1930–31ರ ರಾಜಕೀಯ ಆಂದೋಲನದಿಂದ ಆಪ್ಯಾಯನ ಹೊಂದಿ ಕವಿ ಹೃದಯವನ್ನು ತಾಳಿದುದು ನಿದರ್ಶನೀಯವಾಗಿದ್ದಿತು. ಮಹಾತ್ಮಾ ಗಾಂಧಿಯವರ ಮೋಹನ ಮಂತ್ರವನ್ನು ಬಹುಜನದ ಹಿತಕ್ಕಾಗಿ ಜಪಿಸಿದವರು ಅವರು. ಯಾವ ಬಲಾಢ್ಯ ಜನಾಂಗವಾದರೂ ತಮ್ಮ ಕೈಕೆಳಗಿರುವ ನಿರ್ಬಲ ಜನಾಂಗವನ್ನು ಶೋಷಿಸುವುದನ್ನು ತನ್ನ ಹಲವು ಗೀತಿಕೆಗಳಲ್ಲಿ ಖಂಡಿಸಿದ್ದಾರೆ.

ಕನ್ನಡ ಸಾಹಿತ್ಯ ಸಾಮ್ರಾಜ್ಯದ ಕವಿ ಸಮ್ಮೇಲನಗಳಲ್ಲಿ ಗೋವಿಂದ ಪೈಗಳಿಗೆ ಉಚ್ಚಸ್ಥಾನವಿದ್ದು ಅವರ ಅಭಿಪ್ರಾಯವು ಸರ್ವಮಾನ್ಯವಾಗಿದ್ದಿತು. ಯಾವ ಸತ್ಕಾರ್ಯದಲ್ಲಿಯೂ ಅವರು ಕರ್ತವ್ಯದಿಂದ ಹಿಂಜರಿದದ್ದಿಲ್ಲ. ಅವರು ಐಶ್ವರ್ಯವಂತರಾಗಿದ್ದರೂ ಕೂಡಾ. ಗಾಂಧೀಜಿಯವರಂತೆ ಬಡ ಸನ್ಯಾಸಿಗಳಂತಿದ್ದು, ರಷ್ಯದ ಕೌಂಟ್ ಟೋಲ್ಸ್ ಟ್ಯೊಯವರಂತೆ ಕೇವಲ ನಿಸ್ಪ್ರುಹರಾಗಿದ್ದರು. ವಾಗ್ದೇವಿ ಸರಸ್ವತಿಯ ಆರಾಧನೆಯೇ ಅವರ ನಿತ್ಯದ ವ್ರತವಾಗಿದ್ದು. ಕವಿಗಳೊಡನಾಟವೇ ಅವರ ಪಾರಣವಾಗಿದ್ದಿತು.

ಗೋವಿಂದ ಪೈಗಳು ಕ್ರಿ.ಶ.1883ನೆಯ ಸಂವತ್ಸರದಲ್ಲಿ ಪಶ್ಚಿಮ ಕರಾವಳಿಯ ಮಂಜೇಶ್ವರ ಕ್ಷೇತ್ರದಲ್ಲಿ ಜನ್ಮವೆತ್ತಿದ್ದರು. ಬಾಲಕನು ಮುಂದೆ ವಿದ್ಯೆಯಲ್ಲಿ ಪಾಂಡಿತ್ಯ, ಧರ್ಮ ವಿಷಯಗಳಲ್ಲಿ ಹೃದಯ ವೈಶಾಲ್ಯ, ಸಾಮಾಜಿಕ ವಿಚಾರದಲ್ಲಿ ನೈಪುಣ್ಯಗಳನ್ನು ತೋರಿಸಿ ಕೀರ್ತಿವಂತನಾಗುವನೆಂದು ಜ್ಯೋತಿಷ್ಕರು ಪ್ರತಿಪಾದಿಸಿದ್ದರಂತೆ ! ಪಾಠಶಾಲೆಯಲ್ಲಿ ಇಂಗ್ಲೀಷು ಮತ್ತು ಸಂಸ್ಕೃತಗಳಲ್ಲಿ ಅದ್ವಿತೀಯ ಅಭಿರುಚಿಯನ್ನು ತೋರಿಸುತ್ತಿದ್ದರು.

ಕಾಲಾಂತರದಲ್ಲಿ ಅವರು ಕಾವ್ಯರಚನಾತಿಶಯವನ್ನು ತೋರಿಸಿ, ವಾಚಕರಿಗೆ ಕವಿತೆಯ ತತ್ತ್ವ ಸತ್ತ್ವಗಳು ಗ್ರಾಹ್ಯವಾಗಿ ಹೃದಯಂಗಮವಾಗುವಂತೆ ಪ್ರಾಸಾಕ್ಷರದ ಕ್ರಮವನ್ನು ಉಲ್ಲಂಘಿಸಿದರು. ಈ ಪರಿವರ್ತನೆಗೆ ಅನುಗುಣವಾಗಿ ಧಾರ್ಮಿಕ ಇತಿವೃತ್ತವನ್ನು ಹಿಡಿದು (1) ಜೈನ ಮತವನ್ನೆತ್ತಿ "ಗೋಮಟ ಜಿನಸ್ತುತಿ"ಯನ್ನೂ (2) ಕ್ರೈಸ್ತಮತವನ್ನೆತ್ತಿ "ಗೊಲ್ಗೊಥಾ"ವನ್ನೂ (3) ಬೌದ್ಧಮತವನ್ನೆತ್ತಿ "ವೈಶಾಖಿ" ಯನ್ನೂ ರಚಿಸಿದರು. ಅವರ "ನಂದಾದೀಪವು" ಅವರ ಸದ್ಗತಿಹೊಂದಿದ ಧರ್ಮಪತ್ನಿಯ ಸ್ಮರಣಾರ್ಥವಾಗಿ ಸುರಿಸಿದ ಕಂಬನಿ. ಇದನ್ನು ಪಠಿಸುವಾಗ ಕಣ್ಣೀರ ಧಾರೆ ಉಕ್ಕುತ್ತಿದೆ. ಅವರ "ಹಚ್ಚೆರಳು" ಮಹಾಭಾರತದ ಏಕಲವ್ಯನ ಚರಿತ್ರೆ: ಇದರಲ್ಲಿ ಗ್ರೀಕ್ ಛಂದಸ್ಸನ್ನು ಅಲ್ಲಲ್ಲಿ ಪ್ರಯೋಗಿಸಿದ್ದಾರೆ. ಇತರ ಹಲವು ಕವಿತೆಗಳು ಈ ಮೊದಲೇ ಪ್ರಕಟಿತವಾಗಿವೆ. ಅಲ್ಲದೆ ಸಂಖ್ಯಾತೀತ ಹಸ್ತಲಿಪಿಗಳು ಪ್ರಕಟಿತವಾಗಲು ಅವರ ಮಂಜೇಶ್ವರದ ಸದನದಲ್ಲಿ ಕಾದಿರುವವು.

ಗೋವಿಂದ ಪೈಗಳು ಕವಿವರೇಣ್ಯರು ಮಾತ್ರವಲ್ಲದೆ, ಹಿಂದೂಸ್ಥಾನದ ಚರಿತ್ರೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟ ಸಂಶೋಧನ ಮತ್ತು ಅನ್ವೇಷಣಗಳಲ್ಲಿ ದುಡಿದು ದಣಿದವರು. ಅವರ ವಿದ್ವತ್ತನ್ನು ಅರಿತು ಕ್ರಿ.ಶ. 1930ರಲ್ಲಿ ಮದ್ರಾಸು ಯುನಿವರ್ಸಿಟಿಯವರೂ. 1940ರಲ್ಲಿ "ಮುಂಬಯಿಯ ಕನ್ನಡ ಸಂಶೋಧನ ಸಂಸ್ಥೆಯೂ ಗೋವಿಂದ ಪೈಗಳಿಂದ ಕೆಲವು ಪ್ರವಚನಗಳನ್ನು ಮಾಡಿಸಿದ್ದರು. ಅಲ್ಲದೆ ಕ್ರಿ.ಶ.1950ರಲ್ಲಿ ಮುಂಬಯಿಯಲ್ಲಿ ಜರಗಿದ ಕನ್ನಡ ಸಾಹಿತ್ಯ ಪರಿಷತ್ತಿನ ಮಹಾ ಸಭೆಯವರು ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಆರಿಸಿ ಗೌರವಿಸಿದ್ದರು.

ಗೋವಿಂದ ಪೈಗಳು ಬಹು ಭಾಷಾಕೋವಿದರು. ಯೂರೋಪಿನ ಇಂಗ್ಲೀಷು, ಜರ್ಮನ್. ಫ್ರೆಂಚ್. ಲೇಟೀನು. ಗ್ರೀಕ್ ಇತ್ಯಾದಿ: ಏಷ್ಯ ಖಂಡದ ಅರಬಿ, ಫಾರ್ಸಿ. ಹಿಬ್ರು, ಉರ್ದು ಇತ್ಯಾದಿ: ಹಿಂದೂಸ್ಥಾನದ ಪಾಲಿ, ಸಂಸ್ಕೃತ. ಬಂಗಾಳಿ. ಮರಾಠಿ. ಹಿಂದೀ, ಮತ್ತು ದ್ರಾವಿಡ ಭಾಷೆಗಳು ಕೂಡಾ 22ಭಾಷೆಗಳಲ್ಲಿ ಸುಜ್ಞರಾಗಿದ್ದರು. ಗೋವಿಂದ ಪೈಗಳಿಗೆ ಮತ್ತು ಸಂಸ್ಕೃತ, ತಮಿಳು. ತೆಲುಗು, ಮಲೆಯಾಳ ಕವಿಪುಂಗವರಿಗೂ ಏಕಕಾಲದಲ್ಲಿ "ರಾಷ್ಟ್ರಕವಿ" ಪದವಿಯನ್ನು ಮದರಾಸು ಸರಕಾರದವರು ಕೊಟ್ಟಿದ್ದಾಗಿತ್ತು. ಆಗ ಶ್ರೀಮಂತ ಭವನಗರ ಮಹಾರಾಜರು ಮದರಾಸಿನ ಗವರ್ನರ ರಾಗಿದ್ದುದರಿಂದ ಅವರ ಹಸ್ತದಿಂದಲೇ ಈ ಬಹುಮಾನದ "ರಾಷ್ಟ್ರಕವಿ" ಪದವಿಯನ್ನು ಇತ್ತದ್ದಾಗಿತ್ತು. ಶ್ರೀಮನ್ಮಹಾರಾಜರು ಪ್ರತ್ಯೇಕ ಅಭಿನಂದನಭಾಷಣಗಳನ್ನಿತ್ತು ತಾನು ಇಂಗ್ಲೀಷಿನಲ್ಲಿತ್ತ ಅಭಿನಂದನ ವಾಕ್ಯವನ್ನು ಆಯಾ ಕವಿಪುಂಗರಿಗೆ ಅವರವರ ಭಾಷೆಯಲ್ಲಿ ಪರಿವರ್ತಿಸಿ ಹೇಳಲು ಯಾರಾದರೂ ಇದ್ದಾರೋ ಎನ್ನಲು, ಗೋವಿಂದ ಪೈಗಳು ಎದ್ದು ನಿಂತು ನಮಿಸಿ. ತಾನು ಬಲ್ಲೆನೆಂದು ಬಿನ್ನಯಿಸಿ ಪ್ರಶಂಸಾಭಾಜನರಾದರು.

ಗೋವಿಂದ ಪೈಗಳದು ತೀರ ಪುಸ್ತಕಪಾಠವಲ್ಲ. ಹಿಂದೂಸ್ಥಾನದ ಜೈನರ ಸಾಹಿತ್ಯ ಕ್ಷೇತ್ರಗಳಲ್ಲಿ ಸಂಚರಿಸಿ, ಶಿಲಾಸ್ತಂಭಗಳನ್ನೂ ಮುದ್ರಾಬದ್ಧ ಪೇಟಿಕೆಗಳಲ್ಲಿ ಆಚ್ಛಾದಿತವಾದ ಹಸ್ತಲಿಪಿಗಳನ್ನೂ ಪರಾಮರ್ಶಿಸಿದ್ದರು ಅವರು! ಮಂಜೇಶ್ವರದಲ್ಲಿ ಗೋವಿಂದ ಪೈಗಳ ವಾಸಗೃಹವೆಂದರೆ ಪ್ರಶಸ್ತ ತೀರ್ಥಸ್ಥಾನವೆಂಬಂತೆ ಭಾವಿಸುತ್ತಿದ್ದರು ಕನ್ನಡಿಗರು! ಕಾರ್ಯಾರ್ಥಿಯಾಗಿ ಮಂಗಳೂರಿಗೆ ಬಂದ ಕನ್ನಡ ಸಾಹಿತ್ಯ ಭಕ್ತರು ಮಂಜೇಶ್ವರಕ್ಕೆ ಹೋಗಿ ಆ ಸಾಹಿತ್ಯ ಋಷಿಯನ್ನು ಸಂದರ್ಶನಮಾಡುವ ಸಂಪ್ರದಾಯವಿತ್ತು.

ಈ ರೀತಿಯಲ್ಲಿ ಮಾನ್ಯ ಗೋವಿಂದ ಪೈಗಳು :-

"ಗೀರ್ವಾಣ ವಾಕ್ಪ್ರೌಢಿವನಚೈತ್ರಸನ್ನಿಭನು,
ಪಾಶ್ಚಾತ್ಯ ಪೌರ್ವಾತ್ಯ ಸಮ್ಮಿಳಿತ ಸಂಸ್ಕೃತಿಯ
ಸುಫಲದ ಗುಣಗ್ರಾಹಿ ಮಾರ್ಗದರ್ಶಿ ಮಹರ್ಷಿ,
ಎಂದು ಸೀಮಾಂತಧವಳಿತ ಕೀರ್ತಿಯಂ ಪಡೆದು"

ಕ್ರಿ.ಶ.1963ನೆಯ ಸಪ್ಟಂಬರ ತೇದಿ 6ರಲ್ಲಿ ತನ್ನ ಪಾರ್ಥಿವ ಶರೀರವನ್ನು ಪರಿತ್ಯಜಿಸಿದರು.





# ಶ್ರೀ ಶ್ರೀ ಗೋವಿಂದ ಪೈ

**ಶ್ರೀ ಕಯ್ಯಾರ ಕಿಂಞಣ್ಣ ರೈ**

ಕನ್ನಡದ ಕವಿಶ್ರೇಷ್ಠರಲ್ಲೊಬ್ಬರಾದ ಶ್ರೀ ಪಾಂಡೇಶ್ವರ ಗಣಪತಿರಾಯರು 1940ರ ಸಾಲಿಗೆ ಪ್ರಕಟಿಸಿದ "ಚೆಂಗಲವೆ" ಎಂಬ ಕವನ ಸಂಗ್ರಹದಲ್ಲಿ "ಪಂಡಿತವಕ್ಕಿ"ಯನ್ನು ಸಂಬೋಧಿಸಿ ಹೀಗೆ ಹಾಡಿದ್ದಾರೆ.

"ಇತಿಹಾಸ ಸೂತ್ರದಲಿ ಕೋದ ಮುತ್ತುಗಳ,
ಸತ್ಯಮಿಥ್ಯಗಳ ಸಂವಾದ ಬಿತ್ತುಗಳ,
ತಿಂದಿನಿಸು ತೃಪ್ತಿಯನು ತೋರದಿದೆ ಹಕ್ಕಿ-
ಮುಂದಿರುವ ಮೃತ್ಯುವನು ಕಾಣ ಕಣ್ಣಿಕ್ಕಿ !
ರನ್ನ ಪಂಪಾದಿಗಳ ಕಾವ್ಯ ಕಾನನದ
ಉನ್ನತೋನ್ನತ ವೃಕ್ಷರಾಜ ಸಂಪದದ
ನಿನ್ನೆಗಳ ನೆನೆನೆನೆದು ಮರುಳ ಮೌನದಲಿ
ತನ್ನತಾನರಿಯದೆಯೆ ಶುಷ್ಕವ್ಯಾಜದಲಿ
ಹಾಡುವುದ ಮರೆತಿಂತು ಕುಳಿತೆಯೋ ಹಕ್ಕಿ?
ಹಾಡಲಾರದೆ ನಾವು ಅಳುತಿಹೆವು ಬಿಕ್ಕಿ !"

—ಇತಿಹಾಸದ ಇರುಳಲ್ಲಿ ಅಡಗಿರುವ ಸತ್ಯಮಿಥ್ಯಗಳ ಸಂವಾದದ ಬಿತ್ತನ್ನು ತಿನ್ನುವುದರಲ್ಲಿಯೇ ತಲ್ಲೀನತೆಗೊಂಡು, ತನ್ನ ಮುಂದಿರುವ ಮೃತ್ಯುವನ್ನು ಸಹ ಗಣಿಸದೆ, ತನಗೆ ಸಹಜವಾದ ಸವಿಗೊರಲ ಇಂಪಿನ ಹಾಡುವಿಕೆಯನ್ನು ಮರೆತು ಕುಳಿತಿರುವ "ಪಂಡಿತವಕ್ಕಿ" ಯನ್ನು ಸಂಬೋಧಿಸಿ "ಕಾಮನೆಯ ಸಲಿಸು" ಎಂದು ಕವಿ ಪ್ರಾರ್ಥಿಸಿಕೊಂಡರು. ಆ ಪ್ರಾರ್ಥನೆ, ಆ ಎಚ್ಚರ ಶ್ರೀ ಶ್ರೀ ಮಂಜೇಶ್ವರ ಗೋವಿಂದ ಪೈಗಳ ಕುರಿತಾಗಿತ್ತು ! ಕನ್ನಡದ ನವೋದಯ ಕಾಲದ ಆದಿಕವಿಗಳಲ್ಲೊಬ್ಬರಾಗಿದ್ದು 1930ರ ಸಾಲಿಗೇ "ಗಿಳಿವಿಂಡು" ಎಂಬ ಪ್ರತಿಭಾಪೂರ್ಣ ಕವನ ಸಂಕಲನವನ್ನು ಪ್ರಕಟಿಸಿ, ವಿದ್ವತ್ ರಸಿಕರ ಮೆಚ್ಚುಗೆ ಪಡೆದು, ಮುಂದೆ "ಗೊಲ್ಗೊಥಾ"ದಂತಹ ಅಸದೃಶ ಕಾವ್ಯಕೃತಿಯಿಂದಲೂ "ನಂದಾದೀಪದ" ಬೆಳಕಿನಿಂದಲೂ ಕನ್ನಡ ಸಾಹಿತ್ಯ ಲೋಕದಲ್ಲಿ ತನ್ನದೇ ಆದ ವಿಶಿಷ್ಟ ಪ್ರಭೆ ಬೀರಿದ ಕವಿ ಪೈಗಳು ಅನಂತರ ಕೆಲಕಾಲದ ವರೆಗೆ ಕವಿತೆ ಬರೆಯುವುದನ್ನೇ ಬಿಟ್ಟು ಕೇವಲ ಇತಿಹಾಸ ಸಂಶೋಧನಾ ಕಾರ್ಯದಲ್ಲಿ ಮಗ್ನರಾಗಿದ್ದರು. ಅಂತಹ ಸಂದರ್ಭದಲ್ಲಿ ಕನ್ನಡ ರಸಿಕ ಲೋಕ ಶ್ರೀ ಪಾಂಡೇಶ್ವರರ ಮೂಲಕ ಈ ಪ್ರಾರ್ಥನೆ ಸಲ್ಲಿಸಿತು. ಅವರ ಆ ಬಿನ್ನಹ ವ್ಯರ್ಥವಾಗಲಿಲ್ಲ. ಮುಂದೆ "ಹೆಬ್ಬೆರಳು" ಎಂಬ ದೃಶ್ಯ ಕಾವ್ಯವನ್ನೂ "ವೈಶಾಖಿ" ಎಂಬ ಖಂಡಕಾವ್ಯವನ್ನೂ ಅನೇಕ ಚತುರ್ದಶಪದಿಗಳನ್ನೂ, ಅಂತು ಹಲವಾರು ಲಘು ದೀರ್ಘ ಕವನಗಳನ್ನೂ ಅವರು ಬರೆದರು. "ಸವಿಗೊರಲ ಕೋಗಿಲೆ"ಯು ಕನ್ನಡಿಗರ ಕಾಮನೆಯನ್ನು ಸಹಜವಾಗಿ ಸಲ್ಲಿಸಿತು !

ಗೋವಿಂದ ಪೈಗಳು ತನಗೆ ಕಾವ್ಯಪ್ರೇರಣೆ ಉಂಟಾದ ಸಂದರ್ಭದ ಕುರಿತು, ಅವರು ಬರೆದ ಒಂದು ಲೇಖನದಲ್ಲಿ ಈ ರೀತಿ ತಿಳಿಸಿದ್ದಾರೆ.

ಅವರ ಮನೆಯಲ್ಲಿ ತಮ್ಮನ ನೂಲಮದುವೆಯ ಸಂದರ್ಭ: ಫೆಬ್ರುವರಿಯಲ್ಲಿ ಎಂದೂ ಇಲ್ಲದ ಮಳೆ; ರಜೆ ದಿನ. ಹಾಕಿದ ಚಪ್ಪರದಲ್ಲಿ ಒಂದು ಕಡೆ ಅಪ್ಪುಗೆ ಕಟ್ಟುತ್ತಾರೆ. ಮತ್ತೊಂದು ಕಡೆ ಮುಂಡಿಗೆ ಮಡಚುತ್ತಾರೆ. ಬೇರೊಂದು ಕಡೆ ಸೇವಿಗೆ ಒತ್ತುತ್ತಾರೆ. ಜೋಳದ ಗದ್ದೆಯಲ್ಲಿ ಗಿಳಿಗಳ ಕೋಲಾಹಲದಂತೆ ಚಪ್ಪರವೆಲ್ಲಾ ಗದ್ದಲ. ಆ ನಡುವೆ ಕುಗ್ಗಿದ ಕೊರಳಲ್ಲಿ ಹಾಡೊಂದು ಕೇಳಿಸಿತು.

ಅಡವಿಗೆ ಪೋಪರೇನೆ॥ಕಂದಯ್ಯಾ॥ಪಲ್ಲ॥
ಅಡವಿಯೊಳಗೆ ಬಲು। ಕಡು ಖೂಳ ಮೃಗಗಳು
ಬಿಡದೆ ಬಾಧಿಪವೋ ನಿನ್ನ ॥ಅನು॥

ಆ ಹಾಡನ್ನು ಕೇಳಿ ಅವರಿಗೆ ಏನು ತೋಚಿತೋ ದೇವರೇ ಬಲ್ಲ. ಚಪ್ಪರದ ಗವುಜಿ ಕೇಳಿಸಲಿಲ್ಲ. ನೆಟ್ಟಗೆ ಹೋಗಿ ಅಭ್ಯಾಸಪುಸ್ತಕ ಹಿಡಿದು ಬರೆಯ ತೊಡಗಿದರು. ಇಳಿ ಹೊತ್ತಿನೊಳಗೆ ಒಂದು ನಾಟಕ ಬರೆದು ಮುಗಿಸಿದರು. ಎರಡು ಮೂರು ದಿನಗಳಲ್ಲಿ ಇನ್ನೊಂದು ನಾಟಕ ಬರೆದರು. "ಹೀಗೆ ಸಾಹಿತ್ಯ ಮಂದಿರದ ಹೊಸ್ತಿಲಲ್ಲಿ ಅಕಾಂಡವಾಗಿ ಎಡವಿದೆ ಮುಗ್ಗುಕದಕ್ಕೆ ಡಿಕ್ಕಿ ಹೊಡೆದೆ; ಅಗುಳಿ ಇಲ್ಲದ ಬಾಗಿಲು ಹಾರಿತು. ಒಳ ಹೊಕ್ಕೆ; ನನ್ನ ಜೀವಮಾನದಲ್ಲಿ ಇದೊಂದು ಅಮಗ. ನೆನಪಿನಲ್ಲಿ ಹಚ್ಚೆ ಚುಚ್ಚಿದಂತಿರುವ ಆ ದಿನವನ್ನು ಎಂದಿಗೂ ಮರೆಯುವಂತಿಲ್ಲ." ಇಂತು ಪೈಗಳು ಹೇಳಿಕೊಂಡಿದ್ದಾರೆ. ಕಂದಯ್ಯನು ಅಡವಿಗೆ ಹೋಗುವಾಗಿನ ಆ ಕರುಣಾಮಯವಾದ ಕವಿಯ ಬಾಲ ಹೃದಯದ ತಂತಿಯನ್ನು ಅಲುಗಾಡಿಸಿರಬೇಕು. ಆದಿಕವಿ ವಾಲ್ಮೀಕಿಗೆ ಯಾವ ಶೋಕವು ಶ್ಲೋಕವನ್ನು ಬರೆವಂತೆ ಸ್ವಯಂಪ್ರೇರಣೆಯಿತ್ತಿತೋ ಅಂತಹುದೇ ಒಂದು ಕರುಣೆಯ ಸನ್ನಿವೇಶ ಈ ಕವಿಗೂ ಪ್ರೇರಕ ಶಕ್ತಿಯಾಯಿತೆಂಬುವನ್ನು ನಾವಿಲ್ಲಿ ಗಮನಿಸಬೇಕಾಗಿದೆ.

ಗೋವಿಂದ ಪೈಗಳು ಕನ್ನಡ ನವೋದಯದ ಕ್ರಾಂತಿ ಕವಿಗಳಲ್ಲಿ ಒಬ್ಬರು. ಕನ್ನಡ ಕಾವ್ಯದೇವಿ ದ್ವಿತೀಯಾಕ್ಷರಪ್ರಾಸದ ತೊಡುಗೆ ಧರಿಸಿ ಕುಸಿದುಹೋಗಿದ್ದಳು. ಪ್ರಾಸವೇ ಕವಿತೆಯ ಆಸುವೆಂದು ಪ್ರಾಚೀನರು ನೆರೆನಂಬಿ ನಡೆದು ಬಂದಿರಲು, ಅಂತಹ ಪರಂಪರಾಗತ ಸಂಪ್ರದಾಯವೊಂದನ್ನು ಪ್ರತಿಭೆ ಹಾಗೂ ತಾರ್ತಿಕ ತೀಕ್ಷ್ಣಮತಿಯಿಂದ ಮುರಿದುಹಾಕಿ ಮುಂದೆ ಬಂದವರಲ್ಲಿ ಅವರು ಮೊದಲಿಗರು. "ಪ್ರಾಸವ ನೀಗಲೇ ತೊರೆಮುಟಿಸುವುದೇ ನಿಶ್ಚಯಂ"-ಎಂಬ ನಿರ್ಧಾರದಿಂದ ಮುಂದಡಿಯಿಟ್ಟ ಕೀರ್ತಿ ಪೈಗಳದು. ಅವರ ಪ್ರಾಸರಹಿತ ಕವಿತೆ "ಸ್ವದೇಶಾಭಿಮಾನಿ" ಪತ್ರಿಕೆಯಲ್ಲಿ ಮೊತ್ತಮೊದಲು ಅಚ್ಚಾದಾಗ ಕನ್ನಡ ಕಾವ್ಯಮಾರ್ಗದಲ್ಲಿ ಹುಲಿ! ಹುಲಿ! ಎಂಬಂತಹ ಬೊಬ್ಬೆಯೆದ್ದಿತು. "ಇಂದು ಒಬ್ಬನೇ ನಡೆವ ಮೇಕೆ ದಾರಿಯೇ ಮುಂದೆ ತೇರು ಎಳೆವ ಹೆದ್ದಾರಿ" ಎಂದು ಅವರು ಅಂದು ಮಾಡಿದ ಧೀರ ನಿರ್ಧಾರದಲ್ಲಿ ಎಂತಹ ಭವ್ಯ ಭವಿಷ್ಯ ಸತ್ಯ ಅಡಕವಾಗಿತ್ತೆಂದು ನಾವಿಂದು ಅರ್ಥಮಾಡಿಕೊಳ್ಳಬಹುದಾಗಿದೆ.

1900ರ ಕಾಲಕ್ಕೇ ಗೋವಿಂದ ಪೈಗಳು ಕವನಿಸಲು ತೊಡಗಿದ್ದರು. ಅವರ ಮೊದಲ ಕವಿತಾ ಸಂಗ್ರಹ "ಗಿಳಿವಿಂಡು" ಕಳೆದ ಅರ್ಧ ಶತಮಾನಕ್ಕೂ ಮೀರಿ ಕವಿಯ ಅಕುಂಠಿತ ಕಾವ್ಯವಾಣಿ ಕನ್ನಡನಾಡಿನಲ್ಲಿ ನಿನದಿಸಿತು. "ಗಿಳಿವಿಂಡು" ಕವನಸಂಗ್ರಹದಲ್ಲಿ 45 + 1 ಕವನಗಳಿವೆ: "ಉಮರ್ ಖಯ್ಯಾಮ್" ಕಾವ್ಯ ಖಂಡವೂ ಸೇರಿಕೊಂಡಿದೆ. ಅದರಲ್ಲಿ ಹೆಚ್ಚಿನವೆಲ್ಲ ಭಾವ ಗೀತೆಗಳು; ಭಕ್ತಿ ಗೀತೆಗಳು: ರಾಷ್ಟ್ರಗೀತೆಗಳು. ಛಂದಸ್ಸು, ಶೈಲಿ. ಭಾವನೆ-ಇಂತು ಹಲವು ಪ್ರಕಾರಗಳಲ್ಲಿ ಎಲ್ಲವೂ ಸುಂದರವೂ ಸ್ವತಂತ್ರವೂ ಆದವುಗಳೇ. ಲೌಕಿಕ ಪಾರಮಾರ್ಥಿಕತೆಗಳಿಗೆ ದೈವಿಕ ಮಾನವೀಯತೆಗಳಿಗೆ, ತ್ರಿಕಾಲಗಳಲ್ಲೂ ಅನ್ಯೋನ್ಯವಿರುವ ಮಧುರಸಂಬಂಧವನ್ನು ಗ್ರಹಿಸಿಕೊಂಡು ಪೈಗಳು ಕವನಿಸಿದ್ದಾರೆ. ಈ ಉದಾತ್ತ ದೃಷ್ಟಿ ನಮ್ಮ ಭಾರತೀಯ ಸಂಸ್ಕೃತಿಯ ಹಿನ್ನೆಲೆಯದು. ನಮ್ಮ ಸಂಸ್ಕೃತಿ ಪ್ರಪಂಚಕ್ಕೆ ನೀಡುವ ವರದಾನವಿದು. ಪೈಗಳ ಕವನಗಳಲ್ಲಿ ಆ ಉನ್ನತ ಸಂಸ್ಕೃತಿಯ ಪ್ರತೀಕ ಅಚ್ಚೊತ್ತಿದಂತೆ ಕಾಣುತ್ತಿದೆ. ಆ ಕವನ ಸಂಕಲನವನ್ನು ಕವಿ "ನನ್ನ ಕೃಷ್ಣೆಗೋ ಕೃಷ್ಣನಿಗೋ. ವ್ಯಕ್ತಿದ್ವಯಗಳ ದ್ವಯಕೊ "ಕೃಷ್ಣಾರ್ಪಣ" ಮಾಡಿದ್ದಾರೆ!

"ಗೊಲ್ಗೊಥಾ" ಕವಿತೆ 1931ರ ಸಾಲಿಗೆ ರಚಿತವಾಯಿತು. ಕನ್ನಡ ಸಾಹಿತ್ಯ, ಜೈನ. ಲಿಂಗಾಯತ. ಬ್ರಾಹ್ಮಣ ಇತ್ಯಾದಿ ಭಾರತೀಯ ಧಾರ್ಮಿಕ ಪುರಾಣಕಥೆಗಳಿಂದ ಪುರಾಣ ತುಂಬಿದ್ದು ನಾವೀನ್ಯತೆಯಿಲ್ಲದೆ ನರಳುತ್ತಿರುವುದನ್ನು ನಾವು ಇಂದಿಗೂ ನೋಡುತ್ತಿದ್ದೇವೆ. ಅಂತಹ ಸಂದರ್ಭದಲ್ಲಿ ಆಂಗ್ಲ ಸಾಹಿತ್ಯವನ್ನು ಅಭ್ಯಾಸ ಮಾಡಿದವರು, ಪಶ್ಚಿಮದ ಗಾಳಿಯನ್ನು ಸೇವಿಸಿದವರು. ಹೊಸ ದಾಟಿ ಹಿಡಿದು ಕೆಲವು ಕವನಗಳನ್ನು ಬರೆದರೂ. ಪ್ರಪಂಚದ ಪ್ರಖ್ಯಾತ ಪುರಾಣ ಹಾಗೂ ಸಾಹಿತ್ಯವೆನಿಸಿದ ಬೈಬಲಿನ ಆಧಾರದಿಂದ ಕನ್ನಡ ಸಾಹಿತ್ಯ ಸತ್ವವನ್ನು ವೃದ್ಧಿಗೊಳಿಸಲು ಯತ್ನಿಸಿದವರು ತೀರಾ ವಿರಳವೆನ್ನಬಹುದು. ಅಂತಹ ಲೋಪವನ್ನು ಹೋಗಲಾಡಿಸಿ. ಕ್ರಿಸ್ತಪುರಾಣವನ್ನೆತ್ತಿಕೊಂಡು ಅಪ್ರತಿಮ ಕಾವ್ಯ ಖಂಡವನ್ನು ರಚಿಸಿದವರಲ್ಲಿ ಗೋವಿಂದ ಪೈಗಳು ಮೊದಲಿಗರು ಮಾತ್ರವಲ್ಲ ಅದ್ವಿತೀಯರೆನ್ನಬಹುದು.

"ಗೊಲ್ಗೊಥಾ" ಏಸುವಿನ ಕಡೆ ದಿನದ ದುರಂತ ಚಿತ್ರಣ. ಸತ್ಯಕ್ಕಾಗಿ ಪ್ರಾಣತೆತ್ತ ಜಗದ್ವಂದ್ಯನಾದ ಮಹಾ ವಿಭೂತಿ ಪುರುಷನ ಪುಣ್ಯಕಥೆ. ಮಹಾತ್ಮಾ ಏಸುವಿನ ಉನ್ನತ ವ್ಯಕ್ತಿತ್ವಕ್ಕೆ ಸಲ್ಲಬೇಕಾದ ಗೌರವ ಗಾಂಭೀರ್ಯಗಳು ಈ ಕಾವ್ಯ ಖಂಡದ ಪ್ರತಿಪಂಕ್ತಿಯಲ್ಲಿ ಪದಪುಂಜಗಳಲ್ಲಿ ಒಡಮೂಡಿ ಬಂದಿವೆ. ಕಾವ್ಯಮಯ ವಾಣಿ ಹೊನಲಾಗಿ ಹರಿದಿದೆ. ಇಲ್ಲಿನ ವರ್ಣನೆ, ಚಿತ್ರಣ. ಆಯಾ ವ್ಯಕ್ತಿ ಸನ್ನಿವೇಶಗಳನ್ನು ನಮ್ಮ ಕಣ್ಣಮುಂದೆ ಕಟ್ಟುವಂತೆ ಇದೆ. ಗೊಲ್ಗೊಥಾದಲ್ಲಿ ಬರುವ ಉಪಮಾದಿ ಅಲಂಕಾರಗಳು ಅಸದೃಶವಾದವುಗಳು. ಕಥಾವಸ್ತು. ಅಲಂಕಾರ ನಿರೂಪಣೆ. ಶೈಲಿ ಇವುಗಳೆಲ್ಲದರಲ್ಲಿಯೂ ಈ ಖಂಡಕಾವ್ಯವು ಅಪೂರ್ವವೆನ್ನಬಹುದು. ಚಿರನೂತನವೂ ಶಾಶ್ವತವೂ ಆಗಿ ನಿಲ್ಲತಕ್ಕ ಕವಿಕೃತಿಯಾಗಿದೆ.

ಗೋವಿಂದ ಪೈಗಳ ಮುಂದಿನ ಕೃತಿ ದೃಶ್ಯಕಾವ್ಯವಾದ "ಹೆಬ್ಬೆರಳು." ಇದು ಏಕಲವ್ಯನ ಕಥೆ. 1946ರ ಸಾಲಿಗೆ ಇದನ್ನು ಬರೆಯಲಾಗಿದೆ. ನಾಟಕದ ಮೂಲ ವಸ್ತು ಮಹಾಭಾರತದಿಂದ ಆಯ್ದುಕೊಂಡಿದ್ದರೂ ನಾಟಕಕ್ಕೆ ಕಳೆಯೇರುವಂತಹ ಕೆಲವು ಮಾರ್ಪಾಟುಗಳನ್ನು ಕವಿಗಳು ಮಾಡಿದ್ದಾರೆ. ಈ ನಾಟಕದ ಲಕ್ಷಣ. ಭಾಷಾ ಸೌಂದರ್ಯ. ರಸಿಕರ ಮನಸೆಳೆಯುವಂತಹುದು. ಇಲ್ಲಿನ ಉಪಮೆ ದೃಷ್ಟಾಂತ ಅರ್ಥಾಂತರನ್ಯಾಸಾದಿ ಅಲಂಕಾರಗಳು ಚಿತ್ತಾಕರ್ಷಕವಾಗಿವೆ. ಪಾತ್ರಗಳಿಗೆ ಉಚಿತವಾದ ಭಾಷಾ ಪ್ರಯೋಗ ಈ ಕೃತಿಯ ಒಂದು ವೈಶಿಷ್ಟ್ಯ. ಈ ದೃಶ್ಯ ಕಾವ್ಯವೂ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕಾಣ್ಕೆ. "ಹೆಬ್ಬೆರಳು" ನಾಟಕದ ಕೊನೆಯಲ್ಲಿ ಕವಿ ತನ್ನ ಕಾವ್ಯಧ್ಯೇಯವನ್ನು ಇಂದಿನ ಯುಗವಾಣಿಯನ್ನು ಸಂದೇಶರೂಪವಾಗಿ ಸಾರಿದ್ದಾರೆ. ಹಿಂದೆ ಆರ್ಯರು ಅನಾರ್ಯರೆಂದು ಭೇದಮಾಡಿ ಸೆಣಸಾಡಿ ನಮ್ಮ ಹಿರಿಯರು ದೇಶದ ಐಕ್ಯ ಕೆಡಿಸಿ ಮಾತೃಭೂಮಿ ಪರತಂತ್ರಹೊಂದಿತು. ಇಂದಾದರೂ ನಾವು ಅದೇ ಹಾದಿ ತುಳಿಯುತ್ತೇವೆ. ನಾವು ನೀವೆಂದು ಮೇಲು ಕೀಳೆಂದು ಜಗಳಾಡಿಕೊಂಡಲ್ಲಿ ಪುನಃ ದೇಶದ ಸ್ವಾತಂತ್ರ್ಯ ಮಾಯವಾದೀತು. ಹಾಗಾಗಿ ನಾವೆಲ್ಲರೂ ಐಕ್ಯದಿಂದ ಸೌಹಾರ್ದದಿಂದ ಬಾಳುವುದು ನಮ್ಮ ತಾಯಿಳೆಯ ಹೆಬ್ಬಾಳಿಕೆಯ ಮರ್ಮವೆಂದು ಪೈಗಳು ಸತ್ಯ ಸಂದೇಶವೊಂದನ್ನು ಇದರಲ್ಲಿ ಸಾರಿ ತಿಳಿಸಿದ್ದಾರೆ.

ಬುದ್ಧದೇವನ ಕೊನೆಯ ದಿನವನ್ನು ಚಿತ್ರಿಸಿ ಪೈಗಳು "ವೈಶಾಖಿ" ಎಂಬೊಂದು ಖಂಡಕಾವ್ಯ ರಚಿಸಿದರು. "ಗೊಲ್ಗೊಥಾ"ದಂತೆ ಇದರಲ್ಲಿಯೂ ಲೋಕದ ಮಹಾ ವಿಭೂತಿ ಪುರುಷನೊಬ್ಬನ ಅಂತಿಮ ದರ್ಶನ ಆಗುತ್ತದೆ. ಅಲ್ಲಿ ಯೇಸುವಿನ ಅಕಾಲ ಮರಣ ಚಿತ್ರಿತವಾಗಿದ್ದರೆ ಇಲ್ಲಿ ಬುದ್ಧದೇವನ ತುಂಬಿದಾಯುಷ್ಯದ ಕೊನೆಗಾಲ ರೂಪಿತವಾಗಿದೆ. ಈ ಕಾವ್ಯ ಭಾಗದ ಕಥಾವಸ್ತು ಬೌದ್ಧ ಧರ್ಮ ಗ್ರಂಥವಾದ ಪಾಲಿಭಾಷೆಯ ಮಹಾ ಪರಿನಿಬ್ಬಾಸ ಸೂತ್ರದಿಂದ ಉದ್ಧವವಾದುದು. ಕನ್ನಡದಲ್ಲಿ ಬೌದ್ಧ ಪುರಾಣಗಳನ್ನಾಧರಿಸಿ ಬರೆದ ಕಾವ್ಯಗಳೂ ವಿರಳವೇ. "ಗೊಲ್ಗೊಥಾ"ದಂತೆ ಈ ಕೃತಿಯೂ ನೂತನ ಮಾತ್ರವಲ್ಲ ಶಾಶ್ವತವೂ ಆಗಿ ಉಳಿಯ ತಕ್ಕುದಾಗಿದೆ. ಕ್ರಿಸ್ತ ಮತ್ತು ಬುದ್ಧ ಪುರಾಣಗಳ ಆಳವಾದ ಅಭ್ಯಾಸ ಗೋವಿಂದ ಪೈಗಳಿಗೆ ಇರುವುದಕ್ಕೆ ಈ ಕಾವ್ಯಗಳಲ್ಲಿ ಬಂದಿರುವ ಆ ಉಭಯ ಧಾರ್ಮಿಕ ಪಾರಿಭಾಷಿಕ ಶಬ್ದಗಳೇ ನಿದರ್ಶನ ನೀಡಿವೆ. ಈ ತೆರನ ಪ್ರತಿಭಾಪೂರ್ಣ ಪಾಂಡಿತ್ಯ ಕನ್ನಡದಲ್ಲಿ ಹಲವರಿಗೆ ಸಿದ್ಧಿಸಿಲ್ಲ.

"ನಂದಾದೀಪ" ಎಂಬ ಕವನಮಾಲಿಕೆಯನ್ನು ತನ್ನ ಅಗಲಿದ ಸಹಧರ್ಮಿಣಿಯ ನೆನಪಿಗಾಗಿ ಕೆಲಕಾಲದಿಂದ ಪೈಗಳು ಬರೆಯುತ್ತಾ ಬಂದಿದ್ದರು. ಅವರ ಪತ್ನಿ ಹರೆಯದಲ್ಲಿಯೇ ತೀರಿಹೋಗಿದ್ದರು. ಅಗಲಿದ ಪತ್ನಿಯ ಕುರಿತು ಗೋವಿಂದ ಪೈಗಳು ಬಹಳ ಮಾರ್ಮಿಕವಾಗಿ ಬರೆದಿದ್ದಾರೆ. "1927ನೆಯ ಸಪ್ಟಂಬರದಲ್ಲಿ ನನ್ನ ಕೈ ಹಿಡಿದಾಕೆ ವೈಕುಂಠವಾಸಿಯಾದಳು. ಆಕೆಯ ಮಗ್ಗುಲದಾಯಿಯಂತಿದ್ದ ನನಗೆ ಅವಳ ಅಗಲುವಿಕೆಯಿಂದ . . . ಒಡಲಿಲ್ಲದ ನೆರಳಿನಂತಾಯಿತು. ನನ್ನ ಸಹಧರ್ಮಿಣಿಯ ನೆನಪಿಗೆ ಬಾಷ್ಪಾಂಜಲಿಯಾಗಿ ನಮ್ಮನ್ನು ಅಗಲಿಸಿದ ವಿಧಾತ್ರನಿಗೆ ಶ್ರದ್ಧಾಂಜಲಿಯಾಗಿ ಕೆಲವು ಕವಿತೆಗಳನ್ನು ರಚಿಸಬೇಕೆಂದು ಅದೇ ಮೇ ತಿಂಗಳಲ್ಲಿ ಬರೆಯತೊಡಗಿದೆ. ಅಂದು ಅವಳ ಅಗಲುವಿಕೆಯಿಂದ ನನ್ನಲ್ಲಿ ಹೊತ್ತಿ ನಾನು ಇದ್ದಿರುವ ನತಾನಂದದ ಶೋಕಾನಲದಿಂದ ದೇವರ ಮುಂದೆ ಹಚ್ಚಿರಿಸಿದ ದೀಪ ಎಂಬರ್ಥದಲ್ಲಿ ಆ ಕವಿತೆಗಳನ್ನು 'ನಂದಾದೀಪ' ಎಂದೆ. ನಂದಾದೀಪ "ಠಾಗೂರರ ಗೀತಾಂಜಲಿ" ಮಾದರಿಯ ಕವನ ಮಾಲೆ. ನಾಡಿನ ವಿವಿಧ ಪತ್ರಿಕೆಗಳಲ್ಲಿ ಆಗಾಗ ಈ ಕವನಗಳು ಅಚ್ಚಾಗುತ್ತಿದ್ದು ಕವಿ ಆಶ್ವಾಸನೆಯಿತ್ತಂತೆ ಅವರು ಜೀವಿಸಿರುವ ತನಕ ಹೊತ್ತಿಸಿದ ಈ ದೀಪ ಬೆಳಗುತ್ತಾ ಇತ್ತು. ಇದು ಸಂಗ್ರಹವಾಗಿ ಸಂಕಲನ ರೂಪವಾಗಿ ಪ್ರಕಟವಾದಾಗ ಕನ್ನಡ ಸಾರಸ್ವತ ಸಂಪತ್ತು ಈ ಕೃತಿಯಿಂದಲೂ ಹೆಚ್ಚುವುದೆಂಬುದರಲ್ಲಿ ಸಂಶಯವಿಲ್ಲ.

ಇಂಗ್ಲಿಷಿನ ಸೊನೆಟ್ ಮಾದರಿಯ ಕವನಗಳನ್ನು ಕನ್ನಡದಲ್ಲಿ ಪ್ರಯೋಗಕ್ಕೆ ತಂದವರಲ್ಲಿ ಪೈಗಳು ಮೊದಲಿಗರು ಮಾತ್ರವಲ್ಲ ಸಿದ್ಧಹಸ್ತರೂ ಆಗಿದ್ದರು. "ಕಿರಿದರೊಳೆಪಿರಿದು ಅರ್ಥವನ್ನು ಅರಿಪುವ" ಈ ಚತುರ್ದಶಪದಿಗಳ ರಚನೆ ತುಂಬಾ ಜಾಣ್ಮೆಯ ಕಲಾಮಯ ಕಾರ್ಯ. ಅಂತೆಯೇ ಹಲವರಿಗೆ ಅದು ಸರಿಯಾಗಿ ಸಿದ್ಧಿಸಿಲ್ಲ. ಅಂತಹ ಹಿರಿಯ ಸಿದ್ಧಿಯೊಂದನ್ನು ಅವರು ದೊರಕಿಸಿಕೊಂಡರೆಂಬುದರಿಂದಲೇ ಅವರಾ ಚತುರ್ದಶಪದಿಗಳು ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಸ್ಥಾನಪಡೆಯುವಂತಹವುಗಳಾಗಿವೆ. ಇವೆಲ್ಲವೂ ಬೇಗನೇ ಸಂಗ್ರಹೀತವಾಗಿ ಪ್ರಕಟಿತವಾಗಿ ಕನ್ನಡ ಸಾಹಿತ್ಯ ಸಂಪತ್ತನ್ನು ಹೆಚ್ಚಿಸುವಂತೆ ಆಗಲಿ ಎಂದು ನಾವು ಹಾರೈಸಬೇಕಾಗಿದೆ. ಅಂತೆಯೇ ಅವರು ಬರೆದ ಗಾಂಧೀಜಿಯ ಕೊನೆಯ ದಿನಗಳ ಕುರಿತಾದ ಹಾಗೂ ಶ್ರೀ ಕೃಷ್ಣನ ಕೊನೆಯ ದಿನಗಳ ಬಗೆಗೆ ಇರುವ ಕವಿತೆ ಕೂಡಾ ಪ್ರಕಟವಾಗಿ "ವಾಗ್ದೇವಿಯ ಭಂಡಾರ" ಬೆಳಗುವಂತಾಗಲಿ ಎಂದು ನಾವು ಆಶಿಸುತ್ತೇವೆ.

ಗೋವಿಂದ ಪೈಗಳ ಕವಿತೆಗಳನ್ನು ಓದಿ ಅರ್ಥಮಾಡಿಕೊಳ್ಳುವುದು ಕಷ್ಟಕರವೆಂಬೊಂದು ವಾದವಿದೆ. ಪಾಂಡಿತ್ಯವಿಲ್ಲದ ಪ್ರತಿಭೆಯನ್ನು ಗುರುತಿಸಲಾರದ, ಆಳವನ್ನು ಅರ್ಥವಿಸಲೊಲ್ಲದವರಿಗೆ ಅಂತಾಗುವುದೇನೋ ಸಹಜವೇ. ಕಾವ್ಯ ಶಕ್ತಿಯನ್ನು ಶ್ರೀಯುತರು ನಿರಂತರ ಶ್ರದ್ಧಾಭ್ಯಾಸ ಬಲದಿಂದ, ತಪೋಜೀವನದಿಂದ ಸಿದ್ಧಿಸಿಕೊಂಡವರು. ಪಾಶ್ಚಾತ್ಯ. ಪೌರಾಸ್ತ್ಯ ಸಾಹಿತ್ಯ ಸಂಸ್ಕೃತಿಗಳ ಆಳವಾದ ಅಭ್ಯಾಸ ಬಲದಿಂದ ಉತ್ತಮ ಕವಿತಾ ಶಕ್ತಿಯನ್ನು ಗಳಿಸಿದವರು. ವ್ಯಾಸ, ಕಾಳಿದಾಸ, ಶೇಕ್ಸ್‌ಪೀಯರ್, ಮಿಲ್ಟನ್, ಪಂಪ, ರನ್ನರಂತಹವರ ಕಾವ್ಯಗಳ ನಿತ್ಯ ಸಹವಾಸವಲ್ಲಿರುವವರು. ಹಾಗಾಗಿ ಅವರ ಕವಿತೆಗಳನ್ನು ಅರ್ಥಮಾಡಿಕೊಳ್ಳಲು, ಅವುಗಳ ಸ್ವಾರಸ್ಯ ತಿಳಿಯಲು ಓದುವವನು ಅಂತಹುದೇ ಸಾಧನೆ ತಪಸ್ಸುಗಳ ಮಾರ್ಗ ಹಿಡಿಯಬೇಕಾಗುವುದು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪೈಗಳು ಒಂದು ದೊಡ್ಡ ನಿಧಿಯಾಗಿದ್ದರು. ಅಂತಹ ನಿಧಿಯನ್ನು ಪಡೆದ ನಾವು ನಿಜವಾಗಿಯೂ ಧನ್ಯರೆನ್ನಬೇಕು.

ಕವಿತೆಯಂತೆ ಸಂಶೋಧನೆಯೂ ಕವಿಗಳಿಗೆ ಅತಿ ಪ್ರಿಯವಾದ ಕಾರ್ಯ. ಯಾವುದೇ ಸಂಶೋಧನೆಯೆಂದರೆ ಸತ್ಯದ ಸಂಶೋಧನೆ; ಸತ್ಯದ ಸಂಶೋಧನೆಗೆ ಹೊರಟವನಿಗೆ ಪೂರ್ಣ ಸತ್ಯ ತಿಳಿವ ತನಕ ವಿಶ್ರಾಂತಿಯಿಲ್ಲ. ಇಂತಹ ಸಂಶೋಧನಾ ಮಾರ್ಗದಲ್ಲಿ ಅವರು ಹಲಗಾಲ ಬಹು ದೂರ ಸಾಗಿ ಹೋಗಿದ್ದಾರೆ. ಭಾರತದ ಇತಿಹಾಸ, ಕನ್ನಡದ ಇತಿಹಾಸ, ಕವಿಗಳ ಇತಿಹಾಸ ಈ ಕುರಿತು ಆಂಗ್ಲ ಕನ್ನಡ ಉಭಯ ಭಾಷೆಗಳಲ್ಲಿಯೂ ಅನೇಕ ಲೇಖನಗಳನ್ನು ಬರೆದಿದ್ದಾರೆ. ಸಾಕಷ್ಟು ಪ್ರಸಿದ್ಧ ಯಶಸ್ಸುಗಳನ್ನು ಗಳಿಸಿದ್ದಾರೆ. ಗ್ರೀಕ್ ನಾಟಕದಲ್ಲಿ ಕನ್ನಡ ಮಾತುಗಳು ಬಂದಿವೆಯೆಂಬುದನ್ನು ಅವರು ಸೋದಾಹರಣ ವಿಮರ್ಶಿಸಿ ತೋರಿಸಿದ್ದಾರೆ. ಕನ್ನಡ ಕವಿ ಚರಿತ್ರೆಯನ್ನು ಸಂಗ್ರಹಿಸಿ ದಿವಂಗತ ರಾ॥ ನರಸಿಂಹಾಚಾರ್ಯರು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದರೂ, ಆ ಕುರಿತು ಸಂಶೋಧನೆಯ ಮಥನಗೈದು ಸತ್ಯದ ನವನೀತವನ್ನು ಎತ್ತಿತೋರಿಸುವಲ್ಲಿ ಗೋವಿಂದ ಪೈಗಳು ವಹಿಸಿದ ಪಾತ್ರ ಹಿರಿದಾದುದು; ಚಿರಸ್ಮರಣೀಯವಾದುದು. ಕವಿತಾ ಮಾರ್ಗ ಬೇರೆ. ಸಂಶೋಧನಾ ಮಾರ್ಗ ಬೇರೆ. ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು. ವಿಶಿಷ್ಟವಾದ ದೈವ ಕೃಪೆಯುಳ್ಳವರು ಅವೆರಡನ್ನೂ ಕೈಕೊಂಡು ಹೊತ್ತನ್ನು ಹಿಡಿತದಲ್ಲಿ ಬಳಸಿದರೆ ಸವ್ಯಸಾಚಿಸಬಹುದಾದರೂ ನನ್ನ ಬಗೆಗಾದರೋ ಅವು ಮುಳುವಾಗಿವೆ. ಹಾಲು ಕಾಸಲಿಕ್ಕೂ. ಹುರುಳಿ ಹುರಿಯಲಿಕ್ಕೂ ಸರಿಯಾಗದೆ ಅವನ್ನು ಸವಡಿಸಲಿಕ್ಕೆ ಯತ್ನಿಸುವಲ್ಲಿ ಒಂದು ಒರೆಯಲ್ಲಿ ಎರಡು ಕತ್ತಿಗಳನ್ನು ಸಿಕ್ಕಿಸಲಿಕ್ಕೆ ಪೇಚಾಡುತ್ತೇನೆ. ಅವಲ್ಲಿ ಒಂದೋ ಅಥವಾ ಎರಡೂ ಮುರಿಯದಿವೆಂದು ಬಲ್ಲೆ. ಆದರೆ ಎಷ್ಟೋ ವರ್ಷಗಳಿಂದ ಅವೆರಡನ್ನೂ ಸಾಧಿಸುತ್ತಾ ಹೋದ ಮೇಲೆ ಇನ್ನು ಹೆಡಮೆಟ್ಟಲಾಗುವುದಿಲ್ಲ. ಕಾಲವೂ ತಪ್ಪಿತು. ಕಾಲೂ ತಪ್ಪಿತು. ಇನ್ನು ಈಸಿದಷ್ಟು ಈಸುವುದು ಮತ್ತೆ ಗಂಗಾದೇವಿ ತೇಲಿಸಿಕೊಂಡು ಹೋದಲ್ಲಿ" ಈ ವಿನಯದ ವಾಣಿ ಅವರ ಉನ್ನತ ವ್ಯಕ್ತಿತ್ವಕ್ಕೆ ಭೂಷಣಪ್ರದವಾದುದು. ಆದರೆ ಕನ್ನಡ ಸಾಹಿತ್ಯ ಶರಧಿಯ ಈ ತಿಮಿಂಗಿಲವು ಯಾವೊಂದು ಅಡ್ಡ ಪ್ರವಾಹವನ್ನೂ ಗಣಿಸದೆ ಒಂದು ಇಷ್ಟೂ ಕಾಲು ತಪ್ಪದೆ ಕ್ಷೀರಸಾಗರದ ಪುಣ್ಯ ಪ್ರವಾಹದ ಕಡೆಗೇ ಧಾವಿಸಿತೆಂದು ನಾವು ಹೆಮ್ಮೆಯಿಂದ ಇಂದು ಹೇಳಬಹುದಾಗಿದೆ.

ಗೋವಿಂದ ಪೈಗಳ ವಿನಯ ಸರಳತೆಗಳ ನಿದರ್ಶನವಾಗಿ ಒಂದು ಸಂದರ್ಭವನ್ನು ಇಲ್ಲಿ ನಾವು ಸ್ಮರಿಸತಕ್ಕುದಿದೆ. ಅರ್ಪಿತವಾಗಿದ್ದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪೀಠವನ್ನು ಅವರು ಅನೇಕ ಸಲ ಒಲ್ಲೆನೆಂದು ಅಲ್ಲಗಳೆದಿದ್ದರು. ಹಿರಿಯರ ಹಾಗೂ ಆತ್ಮೀಯರಾದವರ ಒತ್ತಾಯಕ್ಕೆ ಬಲಿಬಿದ್ದು ಮದ್ರಾಸು ಸರಕಾರ ಒಪ್ಪಿಸಿದ "ರಾಷ್ಟ್ರಕವಿ" ಬಿರುದನ್ನು ಅಂಗೀಕರಿಸಿಕೊಂಡು ಸಾರ್ವಜನಿಕ ಋಣಕ್ಕೆ ಗುರಿಯಾದ ತಾನು ಕನ್ನಡ ತಾಯಿಯ ಋಣವನ್ನೂ ತೀರಿಸಿಬಿಡುತ್ತೇನೆಂದು ನಿಶ್ಚಯ ಮಾಡಿದರೋ ಎಂಬಂತೆ ಅದೇ ವರ್ಷದ ಸುಮಾರಿಗೆ ಮುಂಬಯಿಯಲ್ಲಿ ಜರಗುವ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಒಪ್ಪಿಕೊಂಡರು. ಪೈಗಳು ಅಧ್ಯಕ್ಷರಾಗುತ್ತಾರೆಂಬ ಆಕರ್ಷಣೆಯಿಂದಲೇ ನಾನೂ ಮುಂಬಯಿ ಸಮ್ಮೇಳನಕ್ಕೆ ಹೋಗಿದ್ದೆ. ಅವರನ್ನು ಮುಂಬಯಿಯಲ್ಲಿ ನಾನು ಮೊದಲು ಕಂಡುದು ವಿಶ್ವವಿದ್ಯಾನಿಲಯದ

ಹುಲ್ಲು ಹಾಸಿದ ಹೊರ ಅಂಗಣದಲ್ಲಿ ಎಂದು ನೆನಸು. ಆ ಮೆತ್ತಗಿನ ಹುಲ್ಲು ಹಾಸಿನ ಮೇಲೆ ಶ್ರೀ ಶ್ರೀಗಳಾದ ಎಂ. ಆರ್. ಶ್ರೀ ಮಾಸ್ತಿ, ಕಾರಂತ, ಹೆಬ್ಬಾರ್ ಮೊದಲಾದ ಪ್ರತಿಷ್ಠಿತರ ಮಧ್ಯೆ ಪೈಗಳು ನಕ್ಷತ್ರಗಳ ನಡುವೆ ಧ್ರುವ ನಕ್ಷತ್ರದಂತೆ ವಿರಾಜಮಾನರಾಗಿ ಮಂಡಿಸಿದ್ದರು. ಅವರ ಮಂಜೇಶ್ವರದ ಮನೆಯದೇ ಸರಳ ವೇಷ, ಸರಳ ಹಾಗೂ ನಿಶ್ಚಳ ನುಡಿ, ಅದೇ ಆತ್ಮೀಯತೆಯ ವಾತಾವರಣ ಅಲ್ಲಿಯೂ ಪಸರಿಸಿತ್ತು. ಪೈಗಳ ಮಾತುಗಳನ್ನು ಕುಳಿತಿದ್ದವರೆಲ್ಲರೂ ಮೈಯೆಲ್ಲ ಕಿವಿಯಾಗಿ ಆಲಿಸುತ್ತಿದ್ದರು. ಆ ರಸಿಕ ಗುಂಪಿನ ಬಳಿ ನಾನೂ ಬಂದೆನು. "ನೀವೂ ಬಂದಿದ್ದೀರಾ? ಒಳ್ಳೆಯದು ಕುಳಿತುಕೊಳ್ಳಿ" ಎಂದು ಆತ್ಮೀಯ ಭಾವನೆಯಿಂದ ನನ್ನನ್ನು ಬರಮಾಡಿಕೊಂಡರು. ಆ ಸಂದರ್ಭದಲ್ಲಿ ನಾನು ಅವರ ಕುರಿತಾಗಿ ಬರೆದಿದ್ದ ಅವರ ಕವನ ಹಾಗೂ ಜೀವನ ಪರಿಚಯಾತ್ಮಕ ಪುಸ್ತಕವೊಂದನ್ನು ಅವರ ಕೈಗೆ ಒಪ್ಪಿಸಿದೆ. "ಸರಿ, ಎಲ್ಲದರ ಜೊತೆಗೆ ಇದೂ ಇರಲಿ" ಎಂದು ಹೇಳುತ್ತಾ ಅದನ್ನು ವಿಶ್ವಾಸಪೂರ್ವಕ ಸ್ವೀಕರಿಸಿ ನನ್ನ ಅಪೇಕ್ಷೆಯಂತೆ ಒಂದು ಪ್ರತಿಯಲ್ಲಿ ಅವರ ಹಸ್ತಾಕ್ಷರವನ್ನು ಲೇಖಿಸಿ ನನ್ನ ಕೈಗಿತ್ತರು. ಮುಂದೆ ಕೆಲವು ವರ್ಷಗಳನಂತರ ನಾನು ಅವರ ಮನೆಗೆ ಹೋಗಿದ್ದಾಗ ಅವರ ವಿಪುಲ ಪುಸ್ತಕ ಭಂಡಾರವನ್ನು ನನಗೆ ದರ್ಶಿಸುತ್ತಾ ನಾನು ಅವರ ಕುರಿತು ಬರೆದಿದ್ದ ನನ್ನ ಲಘುಕೃತಿಯನ್ನಾದರೂ ಬಹು ಜಾಗರೂಕತೆಯಿಂದ ಅವರಾ ಪುಸ್ತಕ ಭಂಡಾರದಲ್ಲಿ ಇರಿಸಿಕೊಂಡುದನ್ನು ಅಲ್ಲಿಂದ ತೆಗೆದು ನನಗೆ ತೋರಿಸಿದ ಅವರಾ ವಿಶ್ವಾಸ ನನ್ನನ್ನು ಮೈಮರೆಯುವಂತೆ ಮಾಡಿದೆ.

ಮುಂಬಾಯಿಯ ಆ ಸಮ್ಮೇಳನವು ಅಲ್ಲಿನ ಸುಪ್ರಸಿದ್ಧ ಭವನಗಳಲ್ಲಿ ಒಂದಾದ ಕಾವ್‌ಸ್‌ಜಿ ಜಹಾಂಗೀರ್ ಹಾಲಿನಲ್ಲಿ ಜರಗಿತು. ಕನ್ನಡ ನಾಡಿನ ನಾನಾ ಕಡೆಗಳಿಂದ ಹಿರಿಯ ಕಿರಿಯರನೇಕರು ಆಗಮಿಸಿದ್ದರು. ಮುಂಬಯಿಯಲ್ಲಿಯೇ ನೆಲಸಿರುವ ಸಹಸ್ರ ಸಂಖ್ಯೆಯ ಕನ್ನಡಿಗರೂ ಬಂದು ಸೇರಿದ್ದರು. ಗೋವಿಂದ ಪೈಗಳು "ರಾಷ್ಟ್ರ ಕವಿ"ಗಳೆಂದೂ ಇತಿಹಾಸ ಸಂಶೋಧಕರೆಂದೂ ಬಹು ಭಾಷಾ ಪಂಡಿತರೆಂದೂ ನಾಡಿನಾದ್ಯಂತ ಖ್ಯಾತರಾಗಿದ್ದ ಕಾರಣ, ಕನ್ನಡಿಗರು ಮಾತ್ರವಲ್ಲದೆ ಮರಾಠಿ, ಗುಜರಾಥಿ, ಹಿಂದೀ, ಇಂಗ್ಲಿಷ್ ಭಾಷೆಗಳ ವಿದ್ವಾಂಸರನೇಕರು ದರ್ಶನಾಕಾಂಕ್ಷಿಗಳಾಗಿ ಬಂದಿದ್ದರು. ಅಂತೂ ಆ ಸಭೆ ಶ್ರೀಮಂತರಿಂದಲೂ ಧೀಮಂತರಿಂದಲೂ ಕೂಡಿತ್ತು. ಸಭಾ ವೇದಿಕೆಯ ಮೇಲೆ ಕನ್ನಡದ ಹಿರಿಯರು ಕೆಲವರು ಆಸೀನರಿದ್ದರು. ನನ್ನ ಹತ್ತಿರ ಕುಳಿತ್ತಿದ್ದ ಮೈಸೂರಿನ ಮಿತ್ರರೊಬ್ಬರು ವೇದಿಕೆಯಲ್ಲಿನ ಮಹನೀಯರನ್ನೆಲ್ಲಾ ವೀಕ್ಷಿಸಿ ಗೋವಿಂದ ಪೈಗಳು ಎಲ್ಲಿದ್ದಾರೆಂದು ನನ್ನೊಡನೆ ಪ್ರಶ್ನಿಸಿದರು. ಪೈಗಳಾದರೋ ವೇದಿಕೆಯ ಕೆಳಗೆ ಸಭಾಸ್ಥಳದಲ್ಲಿ ನಮಗಿಂತ ಎರಡು ಸಾಲು ಮುಂದಿರುವ ಆಸನದಲ್ಲಿಯೇ ಕುಳಿತಿದ್ದರು. ಅದೇ ವೇಷ, ಅದೇ ಸರಳತೆ, ಅವರ ಮಂಜೇಶ್ವರದ ಮನೆಯಲ್ಲಿ ಎಂತೋ ಅಂತೆಯೆ ಇದ್ದರು. ಮೊಗತುಂಬಿದ ಮೀಸೆ. ಎದ್ದು ನಿಂತ ಬಿಳಿಕೂದಲು. ತೇಜಸ್ವೀ ನೇತ್ರಗಳು. ಖಾದೀ ಮುಂಡು. ಅರ್ಧಕೈ ಅಂಗಿ. ಮುಂಬಯಿ ನಗರದ ವಿಶೇಷ ವೇಷಭೂಷಣಾಲಂಕೃತ ಪ್ರತಿಷ್ಠಿತ ಆಢ್ಯ ವ್ಯಕ್ತಿಗಳ ಮಧ್ಯೆ ಈ ಕಾವ್ಯರ್ಷಿ ತಮ್ಮ ಸರಳತೆಯಲ್ಲಿಯೂ ಮಹೌನ್ನತ್ಯದಿಂದ ಶೋಭಿಸುತ್ತಿದ್ದರು. ಈ ನಾಟಕ ಚೆನ್ನಾಗಿಯೇ ನೆರವೇರಲಿ ಎಂದು ನಮ್ಮ ಹತ್ತಿರವೇ ಪೈಗಳು ಕುಳಿತಿದ್ದರೂ ಮೈಸೂರಿನ ಆ ಮಿತ್ರರಿಗೆ ನಾನು ಅವರನ್ನು ತೋರಿಸುವ ಗೋಜಿಗೆ ಹೋಗಲಿಲ್ಲ. ಇಂತಹ ಕುತೂಹಲ ಅಲ್ಲಿದ್ದ ಇನ್ನೂ ಹಲವರಲ್ಲಿ ಆಗಲೇ ಉಂಟಾಗಿದ್ದುದು ತಿಳಿಯಬಹುದಾಗಿತ್ತು.

ಸಂಪ್ರದಾಯದಂತೆ ಅಧ್ಯಕ್ಷ ಸ್ಥಾನಕ್ಕೆ ಗೋವಿಂದ ಪೈಗಳ ಹೆಸರು ಕ್ರಮಬದ್ಧವಾಗಿ ಸೂಚಿಸಲ್ಪಟ್ಟು ಅನುಮೋದಿತವಾಯಿತು. ಪೈಗಳು ತಾನು ಕುಳಿತಿದ್ದ ಸ್ಥಳದಿಂದ ನಿರಾಡಂಬರರಾಗಿ ಎದ್ದು ವೇದಿಕೆಯ ಮೇಲೆ ಏರಿ ಹೋದರು. ಮೇಲೆ ಆಸೀನರಾಗಿದ್ದ ಹಿರಿಯರಲ್ಲಿ ಕನ್ನಡ ಕುಲಪುರೋಹಿತ ಶ್ರೀ ಶ್ರೀ ಆಲೂರ ವೆಂಕಟರಾಯರೂ ಒಬ್ಬರು. ಆಗಲೇ ಅವರು ತಮ್ಮ ಹಿಂದಿನ ರಾಜಕೀಯ ಜೀವನದಿಂದ ದೂರ ಸರಿದು ಆಧ್ಯಾತ್ಮದ ಹಾದಿ ಹಿಡಿದಿದ್ದರು. ತಪಸ್ವಿಯಂತೆ ಇದ್ದರು. ಅಲ್ಲಿ ಮಂಡಿತರಾದವರಲ್ಲಿ ಬಹುಶ: ಗೋವಿಂದ ಪೈಗಳಿಗಿಂತ ವಯಸ್ಸಿನಲ್ಲಿ ಹಿರಿಯರಾದವರು ಅವರು ಒಬ್ಬರೇ ಇರಬೇಕು. ಪೈಗಳು ವೇದಿಕೆಯನ್ನೇರಿದವರೇ ಅಧ್ಯಕ್ಷ ಪೀಠವನ್ನು ಸ್ವೀಕರಿಸುವ ಮುನ್ನ ಆಲೂರು ವೆಂಕಟರಾಯರ ಕಾಲುಮುಟ್ಟಿ ನಮಸ್ಕಾರ ಮಾಡಿದರು ! ಸಭೆ ಒಮ್ಮೆ ಸ್ತಂಭೀಭೂತವಾಯಿತು ! ಆಲೂರರ ನಯನಗಳಿಂದ ಗಳಗಳನೆ ಆನಂದಬಾಷ್ಪ ಸುರಿಯುತ್ತಿತ್ತು. ಕನ್ನಡ ಸಾಹಿತ್ಯ ರಂಗದಲ್ಲಿ ತನ್ನ ಹಿರಿದಾದ ಪ್ರತಿಭೆ ಪಾಂಡಿತ್ಯಪೂರ್ಣ ದುಡಿಮೆಯಿಂದ ಇಂತಹ ಉನ್ನತ ಮನ್ನಣೆಯ ಪೀಠವನ್ನು ಏರುವ ಸಂದರ್ಭದಲ್ಲಿ ತಾನು ಈ ಕ್ಷೇತ್ರದಲ್ಲಿ ದುಡಿಯಲು ತೊಡಗಿದಾಗ ಯಾವ ಹಿರಿಯರು ತನಗೆ ಸ್ಫೂರ್ತಿ ಚೇತನವನ್ನಿತ್ತರೋ ಅಂತಹರಿಗೆ ಗೌರವವನ್ನು ಅರ್ಪಿಸುವ ಉನ್ನತ ಭಾವನೆಯ ಇಂತಹ ಪ್ರತ್ಯಕ್ಷ ನಿದರ್ಶನ ಇನ್ನೆಲ್ಲಿಯೂ-ಯಾವ ಸಭೆ ಸಮ್ಮೇಳನದಲ್ಲಿಯೂ. ನಾನು ಅದುವರೆಗೆ ಕಂಡಿರಲಿಲ್ಲ. ಗೋವಿಂದ ಪೈಗಳ ಈ ವಿನಯವೇ ಅವರನ್ನು ಆ ಮಹೌನ್ನತ್ಯಕ್ಕೆ ಏರಿಸುವಂತಿತ್ತು. ಆ ಮೇಲೆ ಅವರು ದೀರ್ಘವಲ್ಲದ ತನ್ನ ಅಧ್ಯಕ್ಷ ಭಾಷಣವನ್ನು ಓದ ತೊಡಗಿದರು. ಭಾಷಣದ ಶೈಲಿಯಾದರೋ ಗೋವಿಂದ ಪೈಗಳದೇ ಶೈಲಿ ಎಂಬಂತೆ ಅನನ್ಯ ಸಾಧಾರಣವೂ, ಶುದ್ಧವೂ, ವಿಶಿಷ್ಟವೂ ಆಗಿತ್ತು. ಭಾಷಣವನ್ನು ಕೊನೆಗೊಳಿಸುತ್ತಾ ಅವರು ಹೀಗೆ ಹೇಳಿದರು. "ನನ್ನನ್ನು ಹೆತ್ತ ತಾಯಿಯ ಮೊಲೆಯಲ್ಲಿ ಹಾಲಿರಲಿಲ್ಲ : ಓ ಕನ್ನಡದ ತಾಯೇ ಅನಾಥನಾಗಿದ್ದ ನನಗೆ-ನೀನಾದರೋ ಪಯಸ್ವಿನಿ ಧಾರಾಳ ಸ್ತನವನ್ನು ಊಡಿಸಿದೆ. ನಿನ್ನ ಈ ಋಣವನ್ನು ನಾನು ಎಂತು ತೀರಿಸಲಿ?" ಇಂತು ಭಾಷಣವನ್ನು ಕೊನೆಗೊಳಿಸುವಾಗ ಪೈಗಳ ಕಂಠ ಗದ್ಗದಿತವಾಗಿತ್ತು. ಕಣ್ಣುಗಳಲ್ಲಿ ನೀರು ಊರುತ್ತಿತ್ತು. ಸಭೆ ಮೂಕ ಮೌನದಿಂದ ಆಲಿಸುತ್ತಾ ಮೈಮರೆತಿತ್ತು. ನೂರಾರು ಪುಟಗಳಲ್ಲಿ ಸಾವಿರಾರು ಪದ ಪುಂಜಗಳಲ್ಲಿ ಹೇಳಲಾರದ ಅರ್ಥಪೂರ್ಣ ಭಾವನೆಯನ್ನು ಅವರು ಈ ಚಿಕ್ಕ ವಾಕ್ಯದಲ್ಲಿ ಅಡಕ ಮಾಡಿ ತಿಳಿಸಿದ್ದರು. ರಸಿಕರನ್ನು ಅಂತೂ ತಲೆದೂಗಿಸಿದ್ದರು. ಗೋವಿಂದ ಪೈಗಳ ತಾಯಿ ಮಾತು ಕೊಂಕಣಿ: ತಾಯ್ನೆಲ ತುಳುನಾಡು. ಕೊಂಕಣಿ ತುಳುಭಾಷೆಗಳೆರಡರಲ್ಲಿಯೂ ಸಾಹಿತ್ಯ ಸಂಪತ್ತಿಲ್ಲ. ಹಾಗಾಗಿ ಹೆತ್ತ ತಾಯಿ ಮೊಲೆಯಲ್ಲಿ ಹಾಲಿರಲಿಲ್ಲ. ಅಂತು ಈ ಶಿಶು ತಬ್ಬಲಿಯಾಗಿದ್ದಾಗ ಕನ್ನಡ ತಾಯಿ ತನ್ನ ಧಾರಾಳ ಮೊಲೆ ಹಾಲನ್ನಿತ್ತು ಪೋಷಿಸಿದಳು; ಪುಷ್ಟಿಗೊಳಿಸಿದಳು. ಈ ತೆರನ ಸಮ್ಮೇಳನಾಧ್ಯಕ್ಷಸ್ಥಾನದ ಸನ್ಮಾನ ಮಾಡಿ ಮೆರೆಸಿದಳು. ಈ ತಾಯಿಯ ಋಣ ನಿಜವಾಗಿಯೂ ಹಿರಿದಲ್ಲವೆ? ಅದನ್ನು ಹೇಗೆ ತೀರಿಸಲಿ ಎಂಬ ಧ್ಯಾನದಿಂದಲೇ ಕಳೆದ ಅರ್ಧ ಶತಮಾನಕ್ಕಿಂತಲೂ ಹೆಚ್ಚಿನ ಕಾಲ ಸಾಹಿತ್ಯ ತಪಸ್ಸಿನಲ್ಲಿ ತೊಡಗಿದ್ದ ಅವರು ತಮ್ಮ ಉತ್ಕೃಷ್ಟ ಕೃತಿರಚನಾ ಕಾರ್ಯಗಳಿಂದ ಕಂಡಿತವಾಗಿಯೂ ಕನ್ನಡ ತಾಯಿಯ ಋಣ ವಿಮುಕ್ತರಾದರೆಂದು ನಾವು ಇಂದು ಹೇಳಬಹುದಾಗಿದೆ.

ಕೊನೆಯ ಕಾಲಕ್ಕೆ ಗೋವಿಂದ ಪೈಗಳಿಗೆ ಇದ್ದ ಒಂದು ಚಿಂತೆ ಗೋವೆಯೂ ಸ್ವತಂತ್ರವಾಗಬೇಕು ಎಂಬುದು. ಅವರ ಜೀವಿತ ಕಾಲದಲ್ಲಿಯೇ ಅದು ನೆರವೇರಿತು. ಇದರಿಂದ ಅವರ ಆತ್ಮಕ್ಕೆ ಹೆಚ್ಚಿನ ಸಮಾಧಾನ ಆಗಿರಲೇಬೇಕು. ಗೋವೆಯ ಸತ್ಯಾಗ್ರಹಕ್ಕಾಗಿ ಹೊರಟ ಸತ್ಯಾಗ್ರಹಿಗಳನ್ನು ಅವರು ಗದ್ಗದಿತರಾಗಿ ಆಶೀರ್ವದಿಸಿದ್ದರು. "ಗೋವೆ ನಮ್ಮದು; ಮುದುಕನಾದೆ; ನಾನೇ ಈ ಹೋರಾಟಕ್ಕೆ ಹೋಗಬೇಕಾಗಿತ್ತು; ಹೋಗಿಬನ್ನಿ; ನಿಮಗೆ ಶ್ರೀ ದೇವರು ಸಕಲ ಭಾಗ್ಯಗಳನ್ನು ಕರುಣಿಸಲಿ. "ಹೀಗೆ ಅವರು ಆ ಸತ್ಯಾಗ್ರಹಿಗಳನ್ನು ಮನಸಾರೆ ಹರಸಿ ಬೀಳ್ಕೊಟ್ಟಿದ್ದರು. ಗೋವೆಯ ಕುರಿತು ನಾನು ಬರೆದ ಕವಿತೆಗಳನ್ನು ಮೆಚ್ಚಿ ಆಶೀರ್ವಚನ ಪೂರ್ಣವಾದ ಪತ್ರ ಬರೆದಿದ್ದರು. ಹಿಂದೆ ಮತಾಂಧರಾದ ವಿದೇಶೀ ಕ್ರಿಸ್ತಿಯನ್ ಮಿಶನರಿಗಳ—ಎಂದರೆ ಪೋರ್ಚುಗೀಸರ ಕ್ರೂರ ದಬ್ಬಾಳಿಕೆಗೆ ತುತ್ತಾಗಿ ತಮ್ಮ ಪ್ರಾಣ ಮಾನ ಧರ್ಮ ರಕ್ಷಣೆಗಾಗಿ ಗೋವೆಯಿಂದ ಹಿಂದುಗಳು ಓಡಿಹೋಗಬೇಕಾಗಿತ್ತು. ಹಾಗೆ ನಿರಾಶ್ರಿತರಾಗಿ ವಲಸೆ ಬಂದು ಪಶ್ಚಿಮ ಕರಾವಳಿಯಲ್ಲಿ ನೆಲೆಸಿದವರಲ್ಲಿ ಪೈಗಳ ಹಿರಿಯರೂ ಸೇರಿದ್ದರೆಂಬುದೂ ಗೋವೆಯ ಕುರಿತಾದ ಅವರ ವ್ಯಗ್ರತೆಗೆ ಪ್ರಬಲ ಕಾರಣವೆನ್ನಬಹುದಾದರೂ. ಎಲ್ಲದಕ್ಕಿಂತಲೂ ಮಿಗಿಲು ಅವರ ಉಜ್ವಲ ದೇಶಾಭಿಮಾನವೆಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಗೆಳೆಯ ಅಮ್ಮೆಂಬಳ ಆನಂದರ ಜೊತೆಯಲ್ಲಿ ಸ್ವತಂತ್ರವಾದ ಗೋವೆಯನ್ನು ಸಂದರ್ಶಿಸಿದವನೇ ನಾನು ಆ ಪುಣ್ಯ ಭೂಮಿಗೆ ತಲೆಬಾಗಿ ನಮಸ್ಕರಿಸಿ ಅಲ್ಲಿನ ಸ್ವತಂತ್ರವೂ ಪಾವನವೂ ಆದ ಪುಣ್ಯಧೂಳಿಯನ್ನು ಕಾಗದದಲ್ಲಿ ಕಟ್ಟಿಕೊಂಡು ಊರಿಗೆ ಹೊತ್ತುತಂದ ನೆನಸು ಇಂದಿಗೂ ನನ್ನನ್ನು ರೋಮಾಂಚನಗೊಳಿಸುತ್ತದೆ.

ದಕ್ಷಿಣ ಕನ್ನಡದಿಂದ ಕಾಸರಗೋಡು ಬೇರ್ಪಟ್ಟ ಕುರಿತೂ ಅವರಿಗಿದ್ದ ಕೊರಗು ಹಿರಿದಾದುದು......"ಈ ಜೀವಂತ ಮೈ ಕಡಿತದಿಂದ ನನ್ನ ಹೃದಯ ನೊಂದು ಬೆಂದು ಇದೆಯಾದರೂ ನನ್ನ ಕರುಳಿನ ಕೊರಗು ಎಂದರೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯನ್ನು ಜೀವಂತ ಸಿಗಿದು ಅದರ ಪಂಚಪ್ರಾಣಗಳಲ್ಲಿ ಒಂದರಂತಿರುವ ಕಾಸರಗೋಡು ತಾಲೂಕನ್ನು ಅದರಿಂದ ಸೆಳೆತೆಗೆದ ನೃಶಂಸತೆ. ಕಣ್ಣಿನಲ್ಲಿ ನೆತ್ತರು ತೋರದ ನೃಶಂಸತೆ !......ನಮ್ಮ ಜಿಲ್ಲೆಯ ತೆಂಕಣ ತಾಲೂಕನ್ನು ಅದು ದುರ್ದೈವದಿಂದ ಮಲೆಯಾಳದ ಮಗ್ಗುಲಲ್ಲೇ ಇದೆ ಎಂಬ ಅದೊಂದು ಹೊಳ್ಳು ನೆವದಿಂದ ಕೇರಳದಲ್ಲಿ ಹೊಗಿಸುವುದಾದರೂ ತನ್ನ ಸುಲಿದ ತೊಗಲನ್ನು ತನ್ನ ಮೈಗೇ ಹೊಲಿವುದಲ್ಲ : ಒಬ್ಬನ ಕಣ್ಣನ್ನು ಬಲಾತ್ಕಾರದಿಂದ ಕಿತ್ತು ಮತ್ತೊಬ್ಬನಿಗೆ ತೊಡಿಸುವ ದುರುಳತನವಲ್ಲದೆ ಮತ್ತೇನಂತೆ? ಇದೂ ನೀತಿಯೆ? ಮಹಾತ್ಮಾ ಗಾಂಧಿಯವರು ಇದನ್ನು ಒಪ್ಪುತ್ತಿದ್ದರೆ? "ಇಷ್ಟೊಂದು ತೀಕ್ಷ್ಣವಾಗಿ ಕಾಸರಗೋಡಿನ ಬಗ್ಗೆ ಅವರು ಕಳವಳ ವ್ಯಕ್ತಪಡಿಸುತ್ತಾ ನಿರಾಶೆಯಲ್ಲಿಯೂ ಇಂತು ಸಾಂತ್ವನದ ಮಾತು ಹೇಳಿದ್ದಾರೆ. "ಕೇಳಲೊಲ್ಲದ ಕಿವಿಗಳಿಗೆ ಕೇಳಿಸುವ ಬಗ್ಗೆ ವೃಥಾ ಮರಕಾಲುಗಳನ್ನು ಹಿಸುಕುತ್ತಾ ಕೈಗಳನ್ನು ನೋಯಿಸಿಕೊಳ್ಳುವುದಕ್ಕಿಂತ ಗುಡ್ಡಕ್ಕೆ ಮಣ್ಣು ಹೊರುವ ಆ ಕೆಲಸವನ್ನು ಬಿಟ್ಟು, ನಮ್ಮ ಮನವಿಯನ್ನು ನೆಟ್ಟಗೆ ದೇವರಿಗೇ ಮಾಡಿದರೆ ಲೇಸಲ್ಲವೆ? ಆತನು ನಿಶ್ಚಯವಾಗಿಯೂ ನಾವು ಆಡಿದುದನ್ನು ಕೇಳಿಯೇ ಕೇಳುವನು; ನಾವು ಬೇಡಿದುದನ್ನು ನೀಡಿಯೇ ನೀಡುವನು. ಆ ತನಕ ನಾವು ತಾಳಬೇಕು; ಅದರ ನಡುಗಾಲದಲ್ಲಿ ನಾವು ಕೈಗೊಳ್ಳಬೇಕಾದ ಸಾಂತ್ವನವೆಂದರೆ ಇವೆರಡು ಗಾದೆಯ ಮಾತುಗಳಲ್ಲಿ 'ತಾಳಿದವ ಬಾಳಿಯಾನು' ಎಂದು ನಮ್ಮ ಬಗ್ಗೆ; 'ಏರಿದವ ಇಳಿದಾನು' ಎಂದು ನಮ್ಮ ಸರಕಾರದ ಬಗ್ಗೆ. ಅಷ್ಟೆ" ದೇವರಿಗೆ ಮೊರೆಯಿಡುವುದು ಹೊರತು ಕಾಸರಗೋಡಿನ ಕನ್ನಡಿಗರಿಗೆ ಇಂದು ಬೇರೆ ದಾರಿಯಿಲ್ಲವೆಂಬುದು ಸ್ಪಷ್ಟವೇ. ನಾನು ಕಾಸರಗೋಡಿನ ಆಂದೋಲನದಲ್ಲಿ ಸೇರಿಕೊಂಡ ಸಂದರ್ಭ ಒಮ್ಮೆ ಗೋವಿಂದ ಪೈಗಳನ್ನು ಸಂದರ್ಶಿಸಿದಾಗ "ಅಯ್ಯೋ ಇದರಿಂದಾಗಿ ಕವಿತೆಯ ಒರತೆ ಬತ್ತುವುದಲ್ಲಾ" ಎಂದು ನನಗೆ ಎಚ್ಚರಿಕೆ ಇತ್ತರು. ರಾಜಕೀಯವನ್ನೂ ಕವಿತೆಯನ್ನೂ ಸವ್ಯಸಾಚಿಸಿ ಮುಂದುವರಿಸುವುದು ನಿಜವಾಗಿಯೂ ಕಷ್ಟವೇ ಆಗಿದೆಯೆಂದು ನನಗೂ ವಿದಿತವಾಗುತ್ತಿದೆ. ಆದರೆ ಅವರದೇ ಮಾತಿನಲ್ಲಿ ಹೇಳುವುದಾದರೆ ಇಷ್ಟು ಕಾಲ ಹೀಗೆ ಮುಂದುವರಿದನಂತರ ಇನ್ನು ಹಿಂದಡಿಯಿಡಲಾರದೆ ಈ ಉಭಯ ವಿರುದ್ಧ ಪ್ರವಾಹಗಳ ಸೆಳೆತಕ್ಕೆ ಸಿಲುಕಿ ನಾನು ಹೋರಾಡುತ್ತಿದ್ದೇನೆ. ಕೇರಳದಿಂದ ಕಾಸರಗೋಡನ್ನು ವಿಮೋಚನೆಗೊಳಿಸಿದರೆ ಗೋವಿಂದ ಪೈಗಳ ಆತ್ಮಕ್ಕೂ ಸಮಾಧಾನವಾದೀತೆಂದು ನಂಬಿ ಮುಂದಡಿಯಿಡುತ್ತೇವೆ. ಆತ್ಮ ಪರಮಾತ್ಮನಲ್ಲಿ ಐಕ್ಯಹೊಂದಬೇಕೆಂಬುದೇ ಅಂತಿಮ ಧ್ಯೇಯ. ಮರುಹುಟ್ಟನ್ನು ನಂಬುವ ನಾವು ನಮಗೆ ಪುನರ್ಜನ್ಮ ಬರುವುದಿದ್ದರೆ ಪೈಗಳು "ತೌಳವ ಮಾತೆ" ಎಂಬ ಕವಿತೆಯಲ್ಲಿ ಆಶಿಸಿದಂತೆ "ಬೇಡುವೆ ನವ್ವಾ-ಬೀಳ್ಕೊಡುವಂದೆನ್ನನೆತ್ತಿದಂಕದಿ ನಿನ್ನ-ಮರಳಿಬಾರ ಕಂದಾ ನನ್ನುದರದಿ-ಎಂದು ತಬ್ಬಿ ಹರಸೆನ್ನ" ಎಂದು ಕಾಸರಗೋಡಿನ ಕನ್ನಡ ತಾಯಿಯೊಡನೆ ಮೊರೆಯಿಡುತ್ತೇವೆ.

ಬೆನ್ನಹಿಂದೆ ಉನ್ನತ ಶಿಖರದಿಂದ ಶೋಭಿಸುವ ಪಶ್ಚಿಮಾದ್ರಿ; ಕಣ್ಣಮುಂದೆ ಕಂಗೊಳಿಸುವ ಧೀರ ಗಂಭೀರ ವಿಶಾಲ ನೀರ ನೀಲಿ ಸಮುದ್ರ; ಈ ಉಭಯ ಮಹತ್ತುಗಳ ಮಧ್ಯೆ ತುಳುನಾಡ ತಪೋವನದ ಕಾವ್ಯರ್ಷಿಯಾಗಿ ಗೋವಿಂದ ಪೈಗಳು ಮಂಜೇಶ್ವರದಲ್ಲಿ ಅರ್ಧ ಶತಮಾನಕ್ಕಿಂತಲೂ ಹೆಚ್ಚಿನ ಕಾಲ, ಸಾಹಸಮಯ ಸಾಹಿತ್ಯ ಸೇವೆ ಉಗ್ರತಪಸ್ಸಾಧನೆಯಲ್ಲಿ ತೊಡಗಿ ಇಷ್ಟಾರ್ಥ ಸಿದ್ಧಿಯನ್ನು ಪೂರ್ಣವಾಗಿ ಪಡೆದರು.ಅವರು ಏಕಾಂಗಿಯಾಗಿ ಏಕಧ್ಯಾನದಲ್ಲಿ ಈ ಮಹಾ ಸಾಧನೆಗೆ ತೊಡಗಿದರೆಂಬುದರಿಂದಲೇ ಅವರಿಗೆ ಅಂತಹ ಅಪೂರ್ವಸಿದ್ಧಿ ಕೈಗೂಡಿ ಬಂತು. ಪೈಗಳಿಗೆ ಗುಂಪು ಒಗ್ಗುತ್ತಿರಲಿಲ್ಲ. ಬೇಕಾಗಿಯೂ ಇರಲಿಲ್ಲ: ಅಂತೆ ಅವರು ಯಾವ ಗುಂಪನ್ನೂ ಕಟ್ಟಿಕೊಳ್ಳಲಿಲ್ಲ. ಹಾಗಾಗಿಯೇ ಎಲ್ಲಾ ಗುಂಪಿನವರಿಗೂ ಅವರು ಬೇಕಾದವರಾದರು. ಅವರು ಕೀರ್ತಿಯನ್ನು ಎಂದೂ ಹಾರೈಸಿರಲಿಲ್ಲ. ಆದರೆ ಕೀರ್ತಿಕನ್ಯೆ ಅವರನ್ನೇ ಅರಿಸಿ ವರಿಸಿದಳು. "ನರತ್ನಮನ್ವಿಷ್ಯತಿಮೃಗ್ಯತೇಹಿತತ್" ಎಂಬ ಕಾಳಿದಾಸೋಕ್ತಿ ಪೈಗಳಲ್ಲಿ ಸರಿಗೂಡಿ ಬಂತು. ಸಮ್ಮೇಳನಾಧ್ಯಕ್ಷ ಪೀಠ, "ರಾಷ್ಟ್ರಕವಿ" ಬಿರುದು ಯಾವುದಕ್ಕೂ ಅವರು ಸುಲಭವಾಗಿ ಒಪ್ಪಲಿಲ್ಲ. ಅವರ ಸ್ವತಂತ್ರ ಪ್ರಕೃತಿಗೆ, ಸಾಹಿತ್ಯ ತಪಸ್ಸಿಗೆ ಇವುಗಳಿಂದೆಲ್ಲಾ ತೊಂದರೆಯೇ ಒದಗುವುದೆಂದು ಅವರು ಅರಿತಿರಬೇಕು. ಹೇಗಿದ್ದರೂ ಅವರು ಅಂತಹ ಉನ್ನತ ಸ್ಥಾನಗಳಲ್ಲಿ ಮಂಡಿಸುವುದು ಮಾನ ಮರ್ಯಾದೆ ಪಡೆಯುವುದು ಜನತೆಯ ಅನಿವಾರ್ಯವಾದ ಅಪೇಕ್ಷೆಯಾಗಿತ್ತು. ಜನತೆಯ ಆ ಪ್ರಬಲ ಇಚ್ಛಾಶಕ್ತಿಗೆ ಅವರು ತಲೆಬಾಗಿದರು. ಆ ಗೌರವ ರತ್ನ ಕಿರೀಟ ಅವರ ಶಿರವನ್ನು ಶೋಭಾಯಮಾನವಾಗಿ ಅಲಂಕರಿಸಿತು.

ಗೋವಿಂದ ಪೈಗಳು ಮಂಜೇಶ್ವರದವರೆಂದೇ ಪ್ರಸಿದ್ಧಿ; ಅವರ ಕುಟುಂಬದ ಹಿರಿಯರ ಮನೆ-ತಂದೆಯ ಮನೆ-ಮಂಗಳೂರು. ಅವರು ಹುಟ್ಟಿದುದೂ ಬೆಳೆದುದೂ ಮಂಜೇಶ್ವರದಲ್ಲಿ; ತಾಯಿಯ ತವರು ಮನೆಯಲ್ಲಿ; ಆದಾಗಿ ಅವರ ಹೆಸರಿನ ಆದಿಯ ಮಂ. ಅಥವಾ ಎಂ. ಎಂಬುದು ಮಂಜೇಶ್ವರ ಹಾಗೂ ಮಂಗಳೂರು ಈ ಉಭಯ ಸ್ಥಳಗಳಿಗೂ ಸಮಾನವಾಗಿ ದೀಪಕಾಲಂಕಾರವಾಗಿ ಅನ್ವಯಿಸುತ್ತದೆ. ತಂದೆಯ ಪರಂಪರೆಯಿಂದ ಮಂಗಳೂರಿನವರಾಗಿಯೂ ತಾಯಿಯ ಪರಂಪರೆಯಿಂದ ಮಂಜೇಶ್ವರದವರಾಗಿಯೂ ಎರಡು ಮನೆಗಳ ಕೀರ್ತಿ ಬೆಳಗಿಸಿದವರು. ಅವರ ಆಯುಸ್ಸಿನ ಬಹ್ವಂಶವನ್ನು ಅವರ ಮಂಜೇಶ್ವರ ಮನೆಯಲ್ಲಿಯೇ ಕಳೆದರು. ಅಲ್ಲಿಯೇ ತನ್ನ ಸಾಹಿತ್ಯ ಸಂಶೋಧನೆಗಳ ಸಕಲ ಸಿದ್ಧಿಯನ್ನೂ ಪಡೆದರು.

ಗೋವಿಂದ ಪೈಗಳು ಜನ್ಮತ: ಜೀವನತ: ಸರಸ್ವತೀ ಕೃಪಾಪಾತ್ರರು; ಅವರು ಗೌಡಸಾರಸ್ವತ ಬ್ರಾಹ್ಮಣರು. ಸರಸ್ವತೀ ನದಿಯ ದಂಡೆಯಲ್ಲಿ ಇವರ ಮೂಲ ವಂಶಜರು ನೆಲಸಿದ್ದರೆಂಬುದರಿಂದ ಸಾರಸ್ವತರೆಂದು ಹೆಸರು ಬಂತೆಂದು ಹೇಳುತ್ತಾರೆ. ಗೋವಿಂದ ಪೈಗಳು ಹಲವು ಭಾಷಾ ಪಂಡಿತರು; ದೇಶೀಯ ಹಾಗೂ ವಿದೇಶೀಯ ಭಾಷಾಪಾಂಡಿತ್ಯ ಗಳಿಸಿದವರು; ಬಿ.ಎ.ಪರೀಕ್ಷೆಯಲ್ಲಿ ಇಂಗ್ಲೀಷಿನಲ್ಲಿ ವಿಶ್ವವಿದ್ಯಾನಿಲಯದ ಪ್ರಶಸ್ತಿ ಪದಕ ಪಡೆದವರು. ಅವರ ಮನೆಯಲ್ಲಿದ್ದ ಅಮೂಲ್ಯ ಗ್ರಂಥ ಭಂಡಾರವೂ ಅವರು ತಮ್ಮ ಕೃತಿಗಳ ಕೆಳಗೆ ಕೊಡುತ್ತಿದ್ದ ಟಿಪ್ಪಣಿಗಳೂ ಅವರಾ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. ಇಂತಹ ಸಂಪತ್ತಿನಿಂದ ಭಾಗ್ಯವಂತರಾದ ಅವರು ಕವಿತೆ, ಹಾಗೂ ಸಂಶೋಧನೆಗಳನ್ನು ಸವ್ಯಸಾಚಿಸಿ ಕೃತಾರ್ಥರಾದರು.

ಪರೆಯದಲ್ಲಿಯೇ ಅವರ ಪತ್ನಿ ತೀರಿಹೋಗಿದ್ದು ಅವರಿಗೆ ಮಕ್ಕಳಿಲ್ಲದಿದ್ದರೂ ತಮ್ಮಂದಿರನ್ನೂ ಅವರ ಮಕ್ಕಳು ಮೊಮ್ಮಕ್ಕಳನ್ನು ಪುತ್ರವಾತ್ಸಲ್ಯ ವಿಶೇಷದಿಂದ ನೋಡುತ್ತಿದ್ದರು. ಅವರೆಲ್ಲರೂ ಇವರನ್ನು ಬಹುವಾಗಿ ಗೌರವಿಸುತ್ತಿದ್ದರು. ಒಬ್ಬ ಯ:ಕಶ್ಚಿತ್ ಕನ್ನಡ ಯಾತ್ರಿಕನಾದರೂ ಅವರ ಸಂದರ್ಶನಕ್ಕಾಗಿ ಬಂದರೆ ತಿಂಡಿತೀರ್ಥಗಳನ್ನಿತ್ತು ಉಪಚರಿಸುತ್ತಿದ್ದರು. ಕೊನೆಕೊನೆಗಂತೂ ಮಂಜೇಶ್ವರ ಗೋವಿಂದ ಪೈಗಳ ನಿಮಿತ್ತದಿಂದ ಮಂಜೇಶ್ವರವು ಕನ್ನಡದ ಮುಖ್ಯ ಕ್ಷೇತ್ರದಂತಾಯಿತು. ಧರ್ಮಸ್ಥಳ. ಉಡುಪಿ. ಕಾರ್ಕಳ. ಮೂಡಬಿದರೆಗಳಂತೆ ಕನ್ನಡ ಯಾತ್ರಿಕರನ್ನು ಆಕರ್ಷಿಸಿತು. ಗೋವಿಂದ ಪೈಗಳೊಡನೆ ಸಂಭಾಷಣೆ ನಿಜವಾಗಿಯೂ ಒಂದು ರಸದೂಟ; ಪ್ರಪಂಚದ ಯಾವುದೇ ಒಂದು ವಿಷಯವನ್ನಾದರೂ ಎತ್ತಿಕೊಂಡರೆ ಅಧಿಕಾರ ವಾಣಿಯಿಂದ ಅವರು ಮಾತನಾಡುತ್ತಿದ್ದರು. ಅಂಕೆ ಸಂಖ್ಯೆಗಳನ್ನಿತ್ತು ಸಿದ್ಧಾಂತಿಸುತ್ತಿದ್ದರು. ಅವರಲ್ಲಿಗೆ ಬರುವವರು ಹೆಚ್ಚಾಗಿ ಯಾವುದಾದರೊಂದು ಸಾಹಿತ್ಯಿಕ ಸಂಶೋಧನಾತ್ಮಕ ಸಮಸ್ಯೆಯ ಭಾರವನ್ನು ಹೊತ್ತುಕೊಂಡೇ ಬರುತ್ತಿದ್ದರು. ಹಾಗೆ ಬಂದವರ ತಲೆಹೊರೆಯನ್ನು ಇವರು ಇಳಿಸಿ ಸಮಾಧಾನ ಪಡಿಸುತ್ತಿದ್ದರು. ಅವರು ಮಾತನಾಡುತ್ತಿದ್ದರೆ ಅವರ ಇದಿರಿನಲ್ಲಿ ಭೋರ್ಗರೆಯುತ್ತಿರುವ ಕಡಲ ನಿರ್ಘೋಷದೊಂದಿಗೆ ಅವರ ಕಂಠದ ದನಿಮೇಳೈಸಿದಂತೆ ತೋರುತ್ತಿತ್ತು. ಸಂಭಾಷಣೆಯ ಕಾಲದಲ್ಲಿ ಮಧ್ಯೆ ನಾವು ಮಾತನಾಡಿ ಅಪಸ್ವರ ಹೊರಡಿಸುವುದು ಸಾಧ್ಯವೇ ಇರಲಿಲ್ಲ. ಬಂದವರೊಡನೆ ಬಿಚ್ಚು ಮನಸ್ಸಿನಿಂದ ಮಾತನಾಡುತ್ತಿದ್ದರು. ಮಾತಿನಿಂದ ಮೈಮರೆಸುವ ಕಲೆ ಅವರಿಗೆ ಸಿದ್ಧಿಸಿತ್ತು. ಕನ್ನಡದ ಒಂದು ಮಹಾ ಸಂಸ್ಥೆಯಾಗಿ, ಸಾರಸ್ವತ ಸಂಪತ್ತಾಗಿ. ದೊಡ್ಡದೊಂದು ನಿಧಿಯಾಗಿ, ಕನ್ನಡಿಗರ ಸಂದರ್ಶನ ಪುಣ್ಯ ಕ್ಷೇತ್ರವಾಗಿ, ಕನ್ನಡ ವಿಶ್ವಕೋಶವಾಗಿ. ಗೋವಿಂದ ಪೈಗಳು ಜೀವಿಸಿದರು. ಅವರು ಕೇವಲ ಓರ್ವ ವ್ಯಕ್ತಿ ಆಗಿರದೆ ಶಕ್ತಿಪುಂಜವಾಗಿದ್ದರು. ಹಿರಿದಾದ ಬದುಕನ್ನು ಬಾಳಿದರು.

ತುಳುನಾಡು ಓರ್ವ ರತ್ನಾಕರವರ್ಣಿಯನ್ನು ಪಡೆಯಿತು. ಒಬ್ಬ ಪಾರ್ತಿಸುಬ್ಬನನ್ನು ಜೋಗುಳಿಸಿತು: ಒಬ್ಬ ಮುದ್ದಣನನ್ನು ಪಾಲಿಸಿತು. ಒಬ್ಬರು ಗೋವಿಂದ ಪೈಗಳನ್ನು ಹರಸಿತು,

ಈ ಹೆಮ್ಮೆ ನಮ್ಮದು; ಈ ಹೆಮ್ಮೆ ಕನ್ನಡಿಗರದು !



# ಪಂಡಿತಪಕ್ಷಿ ಗೋವಿಂದ ಪೈ

ಶ್ರೀ. ವೆಂಕಟಕೃಷ್ಣ ರಾವ್, ಉಡುಪಿ

## ಕಾಲಾಯ ತಸ್ಮೈ ನಮಃ

'ಕನ್ನಡ ನುಡಿ (1951 ಮಾರ್ಚ್) ಎಂಬ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿತವಾದ ದಿವಂಗತ ಗೋವಿಂದ ಪೈಯವರ 'ಕನ್ನಡ ಪ್ರಬಂಧದ ಅವತಾರ' ಎಂಬ ಪ್ರಬಂಧದಲ್ಲಿ ಪ್ರಸಂಗಾತ್ ಆಗ ದಿವಂಗತರಾಗಿದ್ದ ಶ್ರೀನಿವಾಸರಾಯರ-ವ-ಪಂಜೆ ಮಂಗೇಶರಾಯರ ಅತಿ ಸೊಗಸಾದ "ಹಲ್ಲಿ" "ಬಂದಣಿಗೆ" ಮೊದಲಾದ ಪ್ರಬಂಧಗಳು ಕ್ಷಣಿಕವಾದ ಮಿಂಚಿನಂತೆ ಹೊಳೆವಷ್ಟರಲ್ಲಿ ಕಳೆದುಹೋದವಲ್ಲಾ! ಕನ್ನಡ ಸಾಹಿತ್ಯದಿಂದ ಸದ್ಯೆವ ಲುಪ್ತವಾಗಿ ಹೋದವು !-ಎಂದವರೇ ಉದ್ಗಾರವೆತ್ತಿದ್ದರು. ಈಗ ಅವರೇ "ಸ್ಮೃತಿ ಪಥ"ವನ್ನು ಮುಟ್ಟಿದ್ದರಿಂದ ನಾವೂ ಅದೇ ಉದ್ಗಾರವನ್ನು "ಸರ್ವಂ ಯಸ್ಯ ವಶಾದಗಾತ್ ಸ್ಮೃತಿಪಥಂ ಕಾಲಾಯ ತಸ್ಮೈನಮಃ" ದು:ಖದಿಂದ ಸ್ಮರಿಸಿ ಕಂಬನಿಗಳನ್ನು ಸುರಿಸಬೇಕಾಗಿ ಬಂದಿದೆಯಲ್ಲವೆ?

ಕನ್ನಡ ಕವಿಶ್ರೇಷ್ಠರಲ್ಲೊಬ್ಬರಾದ ಶ್ರೀ ಪಾಂಡೇಶ್ವರ ಗಣಪತಿರಾಯರು 1940ರಲ್ಲಿ ಪ್ರಕಟಿಸಿದ "ಚೆಂಗಲವೆ" ಎಂಬ ಕವನ ಸಂಗ್ರಹದಲ್ಲಿ "ಪಂಡಿತವಕ್ಕಿ" ಎಂದು ಇವರನ್ನು ಸಂಬೋಧಿಸಿ ಹೀಗೆ ಹಾಡಿದ್ದರು.

ಇತಿಹಾಸ ಸೂತ್ರದಲಿ ಕೋದ ಮುತ್ತುಗಳ<br>
ಸತ್ಯಮಿಥ್ಯಗಳ ಸಂವಾದ ಬಿತ್ತುಗಳ<br>
ತಿಂದಿನಿಸು ತೃಪ್ತಿಯನು ತೋರದಿರೆ ಹಕ್ಕಿ<br>
ಮುಂದಿರುವ ಮೃತ್ಯುವನು ಕಾಣಕಣ್ಣಿಕ್ಕಿ !

ಅರ್ಥಾತ್ ಇತಿಹಾಸದ ಇರುಳಲ್ಲಿ ಅದ್ದಿರುವ ಸತ್ಯಮಿಥ್ಯಗಳ ಅನ್ವೇಷಣದ ಬೀಜಗಳನ್ನು ತಿನ್ನುವುದರಲ್ಲಿಯೇ ತಲ್ಲೀನವಾಗಿದ್ದರೆ ತನ್ನ ಮುಂದಿರುವ ಮೃತ್ಯುವನ್ನೂ ಗಣಿಸದೆ, ತನಗೆ ಸಹಜವಾದ ಸವಿಗೊರಲ ಇಂಪಾದ ಹಾಡುವಿಕೆಯನ್ನೂ ಮರೆತು ಕುಳಿತಿದ್ದ ಈ ಪಂಡಿತ ಪಕ್ಷಿಯನ್ನು ಸಂಬೋಧಿಸಿ ಕವಿ ಕಾಮನೆಯನ್ನು ಸಲ್ಲಿಸು, ಎಂದು ಪ್ರಾರ್ಥಿಸಿ, ಎಚ್ಚರಿಕೆಯನ್ನೂ ಕೊಟ್ಟಿದ್ದರು. ಅಂತೂ ಇವರ ಆಂತರಿಕ ಒಲವು ಇತಿಹಾಸದ ಸತ್ಯಮಿಥ್ಯದ ಅನ್ವೇಷಣೆಯೆಂಬುದು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಪ್ರಬುದ್ಧ ಕರ್ನಾಟಕ, ವಪ್ರಸೂಕ್ಷ್ಮೋಪನಿಷತ್ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾದ ಅನೇಕ ಲೇಖನಗಳಿಂದ ಒಡೆದು ತೋರುವುದು. ಅಂತೂ ಸವಿಗೊರಲ ಕವಿ ಕೋಕಿಲೆಯು ಕನ್ನಡದಲ್ಲಿ ಎಂತು ನಿಷ್ಣಾತ ಕಲಿಗಳಾಗಿ ಕೀರ್ತಿ ಪಡೆದಿರುವರೋ, ಅಂತೆಯೇ ಐವತ್ತು ವರ್ಷಗಳೂ ಅವಿಶ್ರಾಂತವಾಗಿ ಆಂಗ್ಲ, ಗ್ರೀಕ್, ಪ್ರಾಕೃತ, ಸಂಸ್ಕೃತಾದ್ಯನೇಕ ಭಾಷೆಗಳಲ್ಲಿಯೂ ಕವನಗಳನ್ನು ರಚಿಸಿದ್ದರೆಂಬುದು ನಮ್ಮ ಕನ್ನಡಿಗರಿಗೆ ಹೆಮ್ಮೆಯ ವಿಷಯ. ಅವರನ್ನು ಮಹಾ ಜೀವಂತ ವಿಶ್ವಕೋಶ (Walking Encyclopaedia) ಎಂದು ಸಂಬೋಧಿಸಿದವರೂ ಇದ್ದಾರೆ. ಇವರು "ಕವಿರವಿ"ಯೆಂಬ ಕ್ಷೇಮೇಂದ್ರನ ಮಾತಿಗೆ ಅತ್ಯುಚ್ಚ ದೃಷ್ಟಾಂತವಾಗಿ "ಅವಿಲುಪ್ತವ್ಯಾಪ್ತಿಭಿ: ಸೂಕ್ತಿ ಪಾದೈ: ನಯತಿ ನವನವತ್ವಂ" ಎಂದು ಹೇಳಿದಂತೆ ಯಾವ ಯಾವ ವಿಷಯಗಳನ್ನು ಮುಟ್ಟಿದರೋ ಅವೆಲ್ಲವುಗಳಿಗೂ ನೂತನ ಕಳೆಯನ್ನು ಬೀರಿ ಕವಿ ಕಂಡಷ್ಟು ರವಿ ಕಾಣನೆಂಬ ನಾಣ್ಣುಡಿಗೆ ತಾನೇ ಉದಾಹರಣರಾಗಿ ಯಶ:ಕಾಯರಾಗಿರುವರು.

ಇವರ ಸಾಹಿತ್ಯ ತಪಸ್ಸೇನೋ ಘೋರವಾಗಿದ್ದರೂ ಸಾಮಾನ್ಯರಂತೆ ಗೌರವವನ್ನು ಅಪೇಕ್ಷಿಸದೆ ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಯನ್ನು ಅನೇಕ ಸಲ ನಿರಾಕರಿಸಿದರು. ಕ್ರಿಶ್ಚಿಯನ್ ಕಾಲೇಜಿನಲ್ಲಿ ವಿದ್ಯಾರ್ಥಿದೆಶೆಯಲ್ಲಿದ್ದಾಗಲೇ 1906ರಲ್ಲಿ "Ripon Gold Medal" ಎಂಬ ಸುವರ್ಣ ಪಾರಿತೋಷಕವೇನೋ ಇವರನ್ನು ಹುಡುಕಿಕೊಂಡಿದ್ದರೂ ಕಾರಣಾಂತರಗಳಿಂದ ಬಿ.ಎ.ಪರೀಕ್ಷೆಯನ್ನು ಸಂಪೂರ್ಣ ಬರೆಯಲಾಗದೆ ಒಂದು ಭಾಗದಲ್ಲಿ ಮಾತ್ರ ಉಚ್ಚದರ್ಜೆಯಲ್ಲಿ ಪಾಸಾಗಿ ಆ ಪದವಿಯನ್ನು ನಿರಾಕರಿಸಿಯೇ ಬಿಟ್ಟಿದ್ದರು. ಏನೋ ನಮ್ಮ ದಕ್ಷಿಣಕನ್ನಡದವರ ಸ್ಥಾನ ಮಾನಗಳನ್ನು ಕಾಪಾಡುವರೆಯೋ ತಿಳಿಯದು. ಹೇಗೋ ರಾಷ್ಟ್ರಕವಿಯ ಪ್ರಶಸ್ತಿಯನ್ನು ಒಪ್ಪಿದರು. ನಿಸರ್ಗಭಿನ್ನಾಸ್ಪದಗಳಾದ ಲಕ್ಷ್ಮೀ ಸರಸ್ವತಿಯರೂ ಇವರಲ್ಲಿ ತಾಂಡವವನ್ನಾಡುತ್ತಿದ್ದುದರಿಂದ ಕನ್ನಡಿಗರಿಗಂತೂ ವಿಶೇಷವಾದ ಉಪಕಾರವಾಯಿತು. ಕನ್ನಡಿಗರಲ್ಲಿ ಇವರಿಗೆ ತುಂಬಾ ಅಭಿಮಾನ. ಇವರ ಸವಿನಯ ತಿಂಡಿತೀರ್ಥಗಳನ್ನುಣ್ಣದ ಕನ್ನಡಿಗನಿಲ್ಲ. ಸಾಹಿತ್ಯದ ರಸದೂಟವನ್ನು ಎಲ್ಲರಿಗೂ ಬಡಿಸಿ ಕೃತಾರ್ಥರಾಗಿದ್ದಾರೆ. ಒಂದೇ ಸಲ ನಾನು ಅವರ ಭಾಷಣವನ್ನು ನಮ್ಮ ಕಾಲೇಜಿನಲ್ಲಿ ಕೇಳಿದ್ದೆ. ಊರಿಗೆ ಹೋದ ಕೂಡಲೇ ಅವರ ಲೇಖನಗಳ ಸುರಿಮಳೆಯನ್ನೇ ಅನುಗ್ರಹಿಸಿ, ಆಗಾಗ್ಗೆ ನಾನು ಬರೆದ ಪತ್ರಗಳಿಗೆ ಕ್ಷಿಪ್ರವಾಗಿ ಉತ್ತರ ಬರೆದು ನನ್ನನ್ನು ಎಂದಿಗೂ ಮರೆಯದಂತೆ ಋಣಿಯನ್ನಾಗಿ ಮಾಡಿದ್ದಾರೆ. ಅವರ ಆತಿಥ್ಯವನ್ನು ಸ್ವತ: ಸ್ವೀಕರಿಸಲು ಮಂಜೇಶ್ವರಕ್ಕೆ ಹೋಗಲಿಲ್ಲವಲ್ಲಾ ಎಂಬುದೇ ನನ್ನ ದು:ಖ.

ಮಾಧ್ವರಿಗಂತೂ ಮಂಜೇಶ್ವರವೆಂದರೆ ಅತಿಪಾವನವಾದ ಕ್ಷೇತ್ರ. ಶ್ರೀ ಮನ್ಮಧ್ವಾಚಾರ್ಯರ ಜೀವನ ಚರಿತ್ರೆಯನ್ನು ಸ್ವರ್ಣಾಕ್ಷರಗಳಲ್ಲಿ ಬರೆದ ನಾರಾಯಣ ಪಂಡಿತಾಚಾರ್ಯರ ಜನ್ಮಭೂಮಿಯದು. ಇವರ ತಂದೆ ವಿಕ್ರಮ ಪಂಡಿತಾಚಾರ್ಯರಿಗೆ ಶ್ರೀ ಮಧ್ವಾಚಾ

ರ್ಯರು ತಾನೇ ಅರ್ಚಿಸಿಕೊಂಡು ಬಂದಿದ್ದ ಶ್ರೀ ದೇವಿಯನ್ನೂ ನಾರಾಯಣನ ದಿವ್ಯ ವಿಗ್ರಹವನ್ನೂ ಅನುಗ್ರಹಿಸಿ "ಕಾವುಮಠ"ವೆಂದಿವರ ಮನೆಗೆ ಹೆಸರಿಟ್ಟು, ತಪ್ತ ಮುದ್ರಾಧಾರಣೆಯನ್ನೂ ಸಚ್ಛಾಸ್ತ್ರ ಪ್ರವಚನೆಯನ್ನೂ ಮಾಡಿದರೆಂದು ಕರುಣಿಸಿದ ಸ್ಥಳವದು. ಇಲ್ಲಿಯ ವಿಷ್ಣು ಮಂಗಲ ದೇವಾಲಯದಲ್ಲಿ ಶ್ರೀ ಮಧ್ವಾಚಾರ್ಯರೇ ಕೆಲದಿನ ತಮ್ಮ 58 –59ನೆಯ ವರ್ಷದಲ್ಲಿ ತಂಗಿದ್ದು ಒಂದು ಚಾತುರ್ಮಾಸವನ್ನು ಇಲ್ಲಿಯೇ ಕಳೆದಿದ್ದರೆಂದೂ ಗೋವಿಂದ ಪೈಗಳೇ ಪ್ರಕಟಿಸಿದ ಶ್ರೀ ಮಧ್ವಾಚಾರ್ಯರ ಕಾಲ ನಿರ್ಣಯವೆಂಬ ತಮ್ಮ ಲೇಖನದಲ್ಲಿ ಸಿದ್ಧಾಂತಿ ಸಿದ್ದಾರೆ. ಈ ಕ್ಷೇತ್ರವು ಈಗಲೂ 'ಕಣ್ವತೀರ್ಥ'ವೆಂದು ಪ್ರಸಿದ್ಧವಾಗಿದೆ. ಈ ಲೇಖನವೇ ಇವರ ಸಂಸ್ಕೃತ ಭಾಷೆಯ ಅಗಾಧ ಪಾಂಡಿತ್ಯಕ್ಕೂ ಪ್ರಾಚೀನ ಭಾರತದ ಇತಿಹಾಸದ ಕುರುಹುಗಳನ್ನೂ ಸಿಕ್ಕಿದಲ್ಲಿ ಹೆಕ್ಕುವ ಕೌಶಲಕ್ಕೂ ಸಾಕಷ್ಟು ಸಾಕ್ಷ್ಯವನ್ನೊದಗಿಸಿಕೊಡುವದು. ಈ ಗೋವಿಂದ ಪೈಗಳ ದಿವ್ಯ ಚರಿತದಿಂದ ಈ ಮಂಜೇಶ್ವರವು ಮಾಧ್ವರಿಗೆ ಮಾತ್ರ ಪಾವನ ಕ್ಷೇತ್ರವಾದುದಲ್ಲದೆ ಇಡಿ ಕರ್ನಾಟಕ ದೇಶದವರಿಗೆ ಪವಿತ್ರ ಕ್ಷೇತ್ರವಾಗಿ ಪರಿಣಮಿಸಿದೆಯೆಂದೊತ್ತಿ ಹೇಳಬಯಸುವೆವು. ಅಶೋಕನ ಶಿಲಾ ಲೇಖನಗಳಲ್ಲಿ "ಸತಿಯ ಪುತ್ರ" ಎಂಬ ಪದವು ಬಂದಿದ್ದರೆ ಅದರ ನಿಜವಾದ ಅರ್ಥ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳೆಂಬುದನ್ನು **Dr. S. Krishnaswami Iyangar Commemmoration** ಗ್ರಂಥದಲ್ಲಿ ಸಿದ್ಧಾಂತಿಸಿದ ಮಹನೀಯರಿವರು. ಈ ಮಂಜೇಶ್ವರ ಕ್ಷೇತ್ರವನ್ನು ಕೇರಳೀಯರಿಗೆ ಬಿಟ್ಟು ಕೊಟ್ಟ ನಾವು ಕನ್ನಡಿಗರೆಂದೆದೆತಟ್ಟಿ ಕೊಳ್ಳಬಹುದೇ? ಈಗಲಾದರೂ ಇವರ ಸ್ಮಾರಕಾರ್ಥವಾಗಿಯಾದರೂ ಈ ಕ್ಷೇತ್ರವನ್ನು ಮಿಲನಗೊಳಿಸುವರೆ ಪ್ರಯತ್ನ ಹೂಡುವಾ.



# ರಾಷ್ಟ್ರಕವಿ ಗೋವಿಂದ ಪೈ

ಕೀರ್ತನಕೇಸರಿ ಶ್ರೀ ಭದ್ರಗಿರಿ ಕೇಶವದಾಸರು

ಏಳು ವರ್ಷಗಳ ಹಿಂದಿನ ಮಾತು; ಮಂಜೇಶ್ವರದ ಹೆಸರಾಂತ ಮನೆತನವಾದ ಶ್ರೀ ರಾಮಚಂದ್ರ ಶೆಣೈಯವರ ಮನೆಯಲ್ಲಿ ನಮ್ಮನ್ನು ಹರಿಕಥೆಗಾಗಿ ಆಮಂತ್ರಿಸಿದ್ದರು. ಶೆಣೈರವರು ಊರಿನಲ್ಲಿರಲಿಲ್ಲ. ಅವರ ವೃದ್ಧ ತಾಯಿಯವರು ನಮ್ಮನ್ನು ಕಥೆಗಾಗಿ ಆಮಂತ್ರಿಸಿದ್ದರು. ನಾವು ಅವರ ಮನೆ ಮುಟ್ಟಿದಾಗ ಸಂಜೆ 5ಗಂಟೆಯಾಗಿತ್ತು.

"ಯಾರದು?"

"ನಾವು"

"ಒಳಗೆ ಬನ್ನಿ"

ನಾವು ಒಳಗೆ ತೆರಳಿದೆವು. ಮೃಗರಾಜನಾದ ಸಿಂಹವು ತನ್ನ ಗುಹೆಯಲ್ಲಿ ಏಕಾಂಗಿಯಾಗಿ ಕುಳಿತುಕೊಳ್ಳುವಂತೆ ಸುಮಾರು 72 ಮಳೆಗಾಲ ಕಂಡ, ಬಾಳಿನ ಕಲ್ಲಿನೊಂದಿಗೆ ಮಾತಾಡಿದ, ಬಿಳಿಕೂದಲಿನ, ದುಂಡುಮುಖದ, ಪೌರುಷಚಿಹ್ನೆಯಾದ ಭಾರೀ ಮೀಸೆಯ, ವ್ಯಕ್ತಿಯೊಂದು ಸಾದಾ ಖಾದಿ ಉಡುಪಿನೊಂದ ಕುಳಿತಿತ್ತು. ಇವರ್ಯಾರೆಂದು ಯೋಚಿಸುವ ಮೊದಲೇ ಅವರ ವ್ಯಕ್ತಿತ್ವಕ್ಕೆ ನಮ್ಮ ಶಿರ ಅವರನ್ನು ಬಾಗಿ ನಮಸ್ಕರಿಸಿತು.

ಪ್ರತಿ ನಮಸ್ಕಾರ ಗೈದ ಆ ವ್ಯಕ್ತಿ ಕೇಳಿತು "ನೀವು ಬಂದ ಉದ್ದೇಶವೇನು?"

"ಹರಿಕೀರ್ತನೆ ನಡೆಸಲು"

"ಮನೆಯ ಯಜಮಾನರು ಇಲ್ಲದಿರುವಾಗ ಏನು ಹರಿಕಥೆ...?"

"ಅಜ್ಜಿ ಬಾರೆಂದರು. ಬಂದೆವು."

"ಈಗ ನೀವು ಹರಿಕಥೆ ನಡೆಸಿದರೆ ಕೇಳುವವರ್ಯಾರು?"

"ಒಬ್ಬರು ಅಜ್ಜಿ, ಇನ್ನೊಬ್ಬರು ನೀವು."

ವ್ಯಕ್ತಿ ಮುಗುಳ್ನಕ್ಕರು. ಅಷ್ಟರಲ್ಲಿ ಮನೆಯಜ್ಜಿ ಬಂದು "ಗೋವಿಂದಾ. ಅವರಿಗೆ ಕಥೆ ಪ್ರಾರಂಭಿಸಲು ಹೇಳು" ಎಂದರು.

ಯಾರ ಮುಂದೆ ನಾವು ಕಥೆ ಮಾಡಬೇಕೆಂಬುದು ಆಗ ನಮಗೆ ಹೊಳೆಯಿತು. ಅವರೇ ಕರ್ನಾಟಕ ಮಾತೆಯ ಕೀರ್ತಿಯನ್ನು ಎಲ್ಲೆಡೆ ಪಸರಿಸಿದ ಮಹಾಕವಿ. ಮಹಾಸಂಶೋಧಕ. ರಾಷ್ಟ್ರಕವಿ ಶ್ರೀ ಮಂಜೇಶ್ವರ ಗೋವಿಂದ ಪೈಗಳವರು.

"ಯಾವ ಕಥೆ ಮಾಡಲಿ?"

"ಯಾವುದಾದರೂ ಭಕ್ತರ ಕಥೆ ಮಾಡು. ಅಜ್ಜಿಗೆ ಕನ್ನಡ ಸರಿಯಾಗಿ ಬರುವುದಿಲ್ಲ. ಕೊಂಕಣಿ ಭಾಷೆಯಲ್ಲಿ ಹೇಳು."

ನಾವು ಸಂತ ದಾಮಾಜಿ ಪಂತರ ಕಥೆಯನ್ನು ಪ್ರಾರಂಭಿಸಿದೆವು. ಎರಡು ಗಂಟೆಗಳ ಕಾಲ ಕಥೆ ನಡೆಯಿತು. ನೆರೆಕೆರೆಯವರು ಕಥೆ ಪ್ರಾರಂಭವಾದ ಬಳಿಕ ಬಂದು ಸೇರಿದ್ದರು. ಮಂಗಳಾರತಿಯೊಂದಿಗೆ ಕಥಾಕಾರ್ಯಕ್ರಮವು ಮುಕ್ತಾಯವಾಯಿತು.

ಶ್ರೀ ಗೋವಿಂದ ಪೈಯವರು ನಮ್ಮನ್ನು ಪ್ರೇಮದಿಂದ ಹರಸಿದರು. ಆದರದಿಂದ ಒಳಕ್ಕೆ ಕರೆದೊಯ್ದರು. ಕವಿ ಏನು ಪ್ರಶ್ನಿಸುವರೋ ಎಂದು ದಿಗಿಲು. ಕಾಫಿ ಕುಡಿಯಲು ಕುಳಿತಾಗ ಕೇಳಿಯೇ ಬಿಟ್ಟರು. "ದಾಮಾಜಿಪಂತನಿಗಾಗಿ ವಿಠಲನು ಹೊಲೆಯನ ವೇಷ ಧರಿಸಿ ಬಂದನೆಂದು ಕಥೆಯಲ್ಲಿ ಹೇಳಿದೆಯಲ್ಲಾ. ವಿಠಲನು ಹೊಲೆಯನಾಗಿ ಬಂದನೋ? ಅಥವಾ ಬೀದರ ಬಾದಷಹನಿಗೆ ಹೊಲೆಯನೇ ವಿಠಲನಾಗಿ ಕಂಡನೋ?" ಎಂದು ಪ್ರಶ್ನಿಸಿದರು. ಜ್ಞಾನಿಗೆ ಗೀತೆಯಲ್ಲಿ ಹೇಳಿರುವಂತೆ "ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇಗವಿಹಸ್ತಿನಿ॥ ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ...॥ ಬ್ರಾಹ್ಮಣ. ಆಕಳು. ಆನೆ. ನಾಯಿ. ಚಂಡಾಲ. ಇವರೆಲ್ಲರಲ್ಲೂ ಭಗವಂತನೊಬ್ಬನೇ ಕಾಣಿಸುವನು. ಅಜ್ಞಾನಿಯಾದ ಬಾದಷಹನಿಗೆ ಜ್ಞಾನದೀಪ್ತಿಯನ್ನು ಕರುಣಿಸಲು ಬರುವಾಗ ವಿಠಲನೇ ಹೊಲೆಯ ವೇಷದಿಂದ ಬಂದನು. ಅವನ ಕಣ್ಣು ತೆರೆಸಿ ದೇವರು ಅದೃಶ್ಯನಾದ ಬಳಿಕ ರಾಜನು ಹೊಲೆಯನಲ್ಲೂ ದೇವರನ್ನು ಕಾಣುವ ಶಕ್ತಿಯನ್ನು ಪಡೆದನು. ನೀವು ಮಹಾಕವಿಗಳು. ಅದಿರಲಿ, ಕೊಂಕಣಿ ಭಾಷೆಯಲ್ಲಿ ಲಿಪಿ ಯಾವುದು?" ಎಂದು ಕೇಳಿದೆ.

"ಅಷ್ಟು ಗೊತ್ತಿಲ್ಲವೇ? ದೇವನಾಗರಿ ಲಿಪಿಯೇ ಕೊಂಕಣಿಗೆ ಹಿಂದೆ ಲಿಪಿಯಾಗಿತ್ತು." (ಏನನ್ನೋ ಸ್ಮರಿಸಿಕೊಂಡ ಶ್ರೀಗೋವಿಂದ ಪೈಯವರು ನಿಟ್ಟುಸಿರುಗರೆಯುತ್ತಾ)

"ನನಗೆ ಇಬ್ಬರು ತಾಯಂದಿರು. ಓರ್ವ ಮಾತೆಯ ಸ್ತನ್ಯವನ್ನು ಕುಡಿದೂ ಆಕೆಯ ಸೇವೆಯನ್ನು ಮಾಡದ ಪಾಪಿ ನಾನು. ಎಂಥಾ ರಾಷ್ಟ್ರಕವಿಯಾದರೇನು? ಕನ್ನಡಾಂಬೆಯ ಸೇವೆಯೇನೋ ಗೈದು ನಾನು ಸ್ವಲ್ಪ ಮಟ್ಟಿಗೆ ಕೃತಾರ್ಥನಾದೆನು. ಆದರೆ ಕೊಂಕಣಿ ಭಾಷೆಗಾಗಿ ಯಾವ ಸೇವೆಯನ್ನೂ ಸಲ್ಲಿಸಲು ನನ್ನಿಂದಾಗಲಿಲ್ಲ. " ಎಂದರು.

"ನಿಮ್ಮ ಇಷ್ಟು ವರ್ಷದ ಬಾಳಿನಲ್ಲಿ ನೀವು ತಿಳಿದ ವಿಷಯದ ಒಟ್ಟು ಸಾರವೇನು?" ಎಂದು ಕೇಳಿದೆ.

"ದೇವರಿದ್ದಾನೆ. ದೇಹವೆಂಬುದೊಂದು ಹೊದಿಕೆ. ನಿಷ್ಫಲಾಪೇಕ್ಷೆಯಿಂದ ಕರ್ತವ್ಯ ಮಾಡು. ಸಾವಿಗಾಗಿ ಭಯಪಡಬೇಕಾಗಿಲ್ಲ. ಸಾಯುವ ತನಕ ಕರ್ತವ್ಯ ಬಿಡಬಾರದು. ದೇವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಇಷ್ಟೇ ನಾನು ಬಾಳಿನಲ್ಲಿ ತಿಳಿದುದು."

"ಹೇ ಕೇಶವಾ, ನಿನ್ನಂಥ ವಿದ್ಯೆ, ಬುದ್ಧಿ ಇರುವ ಹುಡುಗರು ವ್ಯರ್ಥಕಾಲ ಕಳೆಯಬಹುದೇ? ಏನು ನಿಮಗಾಗಿ ಮುದುಕರೇ ದುಡಿಯಬೇಕೇ?" ಎಂದವರೇ ಆವೇಶದಿಂದಲೋ ಎಂಬಂತೆ ಧಡಧಡನೆ ಮನೆಯೊಳಕ್ಕೆ ಓಡಿದರು. ಅವರ ಕೈಯಲ್ಲೊಂದು ದಪ್ಪ ಪುಸ್ತಕ ಕಂಡು ಬಂತು. ಅದನ್ನೆತ್ತಿ ನನ್ನ ಕೈಗೆ ಕೊಡುತ್ತಾ "ಇದೋ ಇದು ತುಲಸೀದಾಸರು ಬರೆದ ರಾಮಾಯಣ. ರಾಮಚರಿತ ಮಾನಸವೆಂದು ಇದರ ಹೆಸರು. ಈ ಪುಸ್ತಕವನ್ನು ಹಿಡಿದುಕೊಂಡು ಈಗಲೇ ಮಂಜೇಶ್ವರ ಶ್ರೀಮದನಂತೇಶ್ವರ ದೇವರ ಸನ್ನಿಧಿಗೆ ಹೋಗು. ಇದನ್ನು ಕನ್ನಡದಲ್ಲಿ ತರ್ಜುಮೆಮಾಡುವೆನಾಗಿ ಪ್ರತಿಜ್ಞೆಮಾಡು. ಸಾಯುವ ಮೊದಲು ನಾನೇ ಇದಕ್ಕೆ ಮುನ್ನುಡಿಯನ್ನು ಬರೆಯುವೆನು" ಎಂದರು. ವೃದ್ಧ ಕವಿಯ ಕಣ್ಣಲ್ಲಿ ನೀರು ಹರಿದಿತ್ತು. ನಿಮ್ಮ ಆಶೀರ್ವಾದ ಎನ್ನುತ್ತಾ ನಡುಗುವ ಕೈಗಳಲ್ಲಿ ನಾನು ಪುಸ್ತಕವನ್ನೆತ್ತಿಕೊಂಡೆ. ದೇವರ ಮುಂದೆ ಹೋಗಿ ಪ್ರತಿಜ್ಞೆ ಮಾಡಿದೆ. ಅದುವೇ ರಾಷ್ಟ್ರಕವಿ ಗೋವಿಂದ ಪೈಯವರೊಂದಿಗೆ ನನ್ನ ಮೊದಲ ಭೇಟಿ.

ಒಂದೆರಡು ತಿಂಗಳುಗಳು ಕಳೆದವು. ಪುನಃ ಶೆಣೈರವರ ಮನೆಗೆ ಹೋದೆವು. ಅಂದು ಶ್ರೀರಾಮಚಂದ್ರ ಶೆಣೈರವರು ಮನೆಯಲ್ಲಿದ್ದರು. ಶ್ರೀ ಗೋವಿಂದ ಪೈಯವರನ್ನೂ ಕರೆಸಿದರು. ಸಮರ್ಥರಾಮದಾಸರ ಕಥೆ. ಕೆಲವು ಘಟನೆಗಳಲ್ಲಿ ಶ್ರೀ ಪೈಯವರು ಮಧ್ಯೆ ಮಧ್ಯೆ ಉದ್ಗಾರಗರೆಯುತ್ತಿದ್ದರು. ಕ್ರಿ.ಶ. 1681ನೆಯ ಮಾಘ ಪಂಚಮಿಯಂದು ಸಮರ್ಥ ರಾಮದಾಸರು ಸಜ್ಜನಗಡದಲ್ಲಿ ಶ್ರೀರಾಮ, ಲಕ್ಷ್ಮಣಾದಿ ಮೂರ್ತಿಗಳನ್ನು ಪ್ರತಿಷ್ಠೆಗೈದರು; ಎಂದು ಕಥೆಯಲ್ಲಿ ಹೇಳುತ್ತಿರುವಂತೆಯೇ ಇಸವಿಗಳ ಸಾಗರವಾದ ಪೈಯವರು ತಲೆತುರಿಸಿಕೊಳ್ಳುತ್ತಾ "ತಾಳು, ತಾಳು, ತಾಳು ಏನೆಂದೇ? ಸಾವಿರದ ಆರುನೂರು ಎಂಭತ್ತೊಂದೇ?" ನಾನು ನಡುಗುತ್ತ ಹೇಳಿದೆ. "ನನಗೆ ಹಾಗೇ ಓದಿದ ನೆನಪು. ಅವರು ಕ್ರಿ.ಶ. 1608ರಲ್ಲಿ ಚೈತ್ರ ಶುದ್ಧ ನವಮಿಯಂದು ಹುಟ್ಟಿನುದು. ಕ್ರಿ. ಶ. 1681ರ ಮಾಘ ಪಂಚಮಿಯಂದು ರಾಮ ಪ್ರತಿಷ್ಠೆಗೈದು ನಾಲ್ಕೇ ದಿನದಲ್ಲಿ ಎಂದರೆ ಮಾಘ ನವಮಿಯಂದು ರಾಮನಲ್ಲಿ ಐಕ್ಯರಾದರೆಂದು ಡಾ|| ರಾನಡೆಯವರ (Mysticism of Maharastra) ಎಂಬ ಗ್ರಂಥದಲ್ಲಿ ಓದಿದ ಜ್ಞಾಪಕ. ತಪ್ಪಿದ್ದರೆ ಕ್ಷಮಿಸಿ"ರೆಂದೆನು. ಪೈಯವರು ತಲೆದೂಗುತ್ತಾ "ಹೌದು, ಹೌದು, ಹೌದು. ಅದು ಸರಿ. ಇತ್ತೀಚೆಗೆ ವೃದ್ಧಾಪ್ಯದಿಂದ ಸ್ಮರಣ ಶಕ್ತಿಯೇ ಕಮ್ಮಿಯಾಗಿದೆ. ಕಥೆ ಮುಂದರಿಸು" ಎಂದರು. ಆ ದಿನ ಕಥೆ ಮುಕ್ತಾಯವಾದ ಬಳಿಕ ಶ್ರೀ ಪೈಯವರು ಪ್ರೇಮದಿಂದ ಬೆನ್ನು ಸವರಿದರು. ಕೈಯ ಮೃದುತ್ವದ ಹಿಂದೆ ಅದೆಷ್ಟು ಆಶೀರ್ವಾದಗಳು ಇದ್ದುವೋ ಹೇಳಲಾರೆ. ಅದು ಪೈಯವರೊಂದಿಗೆ ನನಗಾದ ಎರಡನೆಯ ಭೇಟಿ.

ಬಳಿಕ ಗೋವಿಂದ ಪೈಯವರೊಂದಿಗೆ ನಾನು ಕಲೆತುದು ಕರ್ನಾಟಕ ಏಕೀಕರಣವಾದ ಬಳಿಕ. ಗೋವಿಂದ ಪೈಯವರ ದುಃಖ ಹೇಳತೀರದು. "ಮಂಜೇಶ್ವರ, ಕಾಸರಗೋಡುಗಳು ಕರ್ನಾಟಕದ ಅವಿಭಾಜ್ಯ ಅಂಗ. ಕಾಸರಗೋಡನ್ನು ಕೇರಳದಲ್ಲಿ ಸೇರಿಸಿದವರು ಯಾವಾಗಲೂ ನನಗೆ ಶತ್ರುಗಳೇ ಎನ್ನುತ್ತಾ "ನಾನು ಬದುಕಿರುವಾಗಲೇ ಇದನ್ನು ನೋಡಬೇಕಾಯಿತಲ್ಲಾ" ಎಂದು ನಿಟ್ಟುಸಿರುಗರೆವರು. "ನನಗೆ ಪೋಸ್ಟ್‌ಮ್ಯಾನ್ ಪತ್ರ ತಂದು ಕೊಡಲಿ ಅಥವಾ ಕೊಡದಿರಲಿ, ನನ್ನ ವಿಳಾಸ ಬರೆಯುವಾಗ ನೀವೆಲ್ಲರೂ ಎಂ.ಗೋವಿಂದ ಪೈ. ಮಂಜೇಶ್ವರ. ದಕ್ಷಿಣ ಕನ್ನಡ (ಎಸ್.ಕೆ.) ಎಂದೇ ಬರೆಯಬೇಕು. ನಾನು ಸಾಯುವ ತನಕ ಕರ್ನಾಟಕದವನೇ" ಎಂದರು ಗೋವಿಂದ ಪೈ.

"ಅದಿರಲಿ, ನೀನು ಅಂದು ಮಾಡಿದ ಪ್ರತಿಜ್ಞೆಯನ್ನು ಮರೆತೆಯೋ? ನಿಮಗೆ, ಈಗಿನ ಕಾಲದ ತರುಣರಿಗೆ, ಕಷ್ಟವೆಂಬುದು ಗೊತ್ತಿಲ್ಲ. ಛಲವಂತೂ ಇಲ್ಲವೇ ಇಲ್ಲ. ಹಟತೊಟ್ಟು ಬರೆಯಬೇಕು. ಆಗ ಮಾತ್ರ ಗ್ರಂಥವನ್ನು ಬೇಗನೇ ಮುಗಿಸಬಹುದು. ಮುನ್ನುಡಿ ನಾನೇ ಬರೆಯುವೆ ತಿಳಿಯಿತೇ?"

"ತುಲಸೀ ರಾಮಾಯಣ ನನ್ನ ನಿತ್ಯದ ಪಾರಾಯಣದ ಗ್ರಂಥ. ಅದನ್ನು ಪದ್ಯರೂಪಿಯಾಗಿ ಶ್ರೀ ಶಂಭು ಭಟ್ಟರೆಂಬುವರು ಕನ್ನಡದಲ್ಲಿ ಬರೆದಿದ್ದಾರೆ. ಗದ್ಯರೂಪಿಯಾಗಿ ಭಾರದ್ವಾಜರೆಂಬುವರು ಬಾಲಕಾಂಡವನ್ನು ಬರೆದು ಪ್ರಕಟಗೊಳಿಸಿದ್ದಾರೆ. ಹಿಂದೀ ಮೂಲ ಶ್ಲೋಕಗಳನ್ನು ಬರೆದು ಕನ್ನಡದಲ್ಲಿ ಅರ್ಥ ಬರೆದು ಆ ಗ್ರಂಥವನ್ನು ಪೂರ್ತಿ ಮಾಡು. ನಾನು ಮುದುಕ. ನನ್ನ ಕೈಯಿಂದ ಇನ್ನು ಆಗುವುದಿಲ್ಲ." ಎಂದರು. "ಭಗವದ್ಗೀತೆಯಲ್ಲಿ ಯಾವ ಅಧ್ಯಾಯದ ಮೇಲೆ ನಿಮಗೆ ಪ್ರೀತಿ" ಎಂದು ಕೇಳಿದೆ. ಅದಕ್ಕವರು "ಗೀತೆಯಲ್ಲಿ ಓದಬೇಕು, ಹನ್ನೆರಡನೆಯ ಅಧ್ಯಾಯ. ಎಲ್ಲ ಅಧ್ಯಾಯಗಳಿಗಿಂತಲೂ ಅದು ಚಿಕ್ಕದು. ಆದರೆ ಅರ್ಥಗರ್ಭಿತವಾದುದು. ಪರಮಾತ್ಮನು ಕೆಲವೇ ಮಾತುಗಳಲ್ಲಿ ಭಕ್ತಿಯೋಗವನ್ನು ಸಾರಿದ್ದಾನೆ. ಅದನ್ನು ನಾನು ನಿತ್ಯ ಪಠನಮಾಡುತ್ತೇನೆ" ಎಂದರು.

ಬೆಂಗಳೂರಿನ ಶಂಕರಮಠದಲ್ಲಿ ಶ್ರೀಮನ್ಮಹಾಭಾರತ ಹರಿಕಥೆ ನಡೆಯಿತು. ಅದರ ಮಂಗಲಗೈದು ಇಲ್ಲಿಂದ ಎರಡು ಬಸ್ಸು ದಾಸಕೀರ್ತನ ಮಂಡಳಿಯ ಭಕ್ತರೊಂದಿಗೆ ನಾವು ಯಾತ್ರೆಗೆ ಹೊರಟೆವು. ಧರ್ಮಸ್ಥಳ, ಉಡುಪಿ, ಕಾರ್ಕಳ, ಮೂಲ್ಕಿ, ಮಂಗಳೂರು, ಗುರುಪುರ, ಭದ್ರಗಿರಿ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿ, ಕಾಞ್ಞಂಗಾಡಿನ ರಾಮನಗರದ ಶ್ರೀ ರಾಮದಾಸರನ್ನು ಭೇಟಿ ಮಾಡಿ ಅಲ್ಲಿಂದ ಮಂಜೇಶ್ವರಕ್ಕೆ ಬಂದೆವು. ದೇವರನ್ನೂ, ಸದ್ಗುರು ಸುಧೀಂದ್ರತೀರ್ಥರನ್ನೂ ಭೇಟಿಯಾಗಿ ರಾಷ್ಟ್ರಕವಿ ಗೋವಿಂದ ಪೈಯವರ ಮನೆಗೆ ಹೋದೆವು. ಭಕ್ತರೆಲ್ಲಾ ನಿಮ್ಮನ್ನು ನೋಡಲಾಶಿಸುವರು. ಸ್ವಲ್ಪ ಹೊರಗೆ ಬನ್ನಿರೆಂದೆ. ತನ್ನನ್ನು ನೋಡಬಂದವರನ್ನು ಎಂದೂ ಪೈಯವರು ಬೇಸರಗೊಳಿಸಿದ್ದಿಲ್ಲ. ಒಂದು ಪುಟ್ಟ ಮಗುವೇ ಬೇಕಾದರೆ ಪತ್ರ ಬರೆಯಲಿ. ತಕ್ಷಣವೇ ಉತ್ತರ ಬರೆಯುವುದು ಅವರ ಸ್ವಭಾವ. ಸಿಂಹವು ಗುಹೆಯಿಂದ ಹೊರಬಂದಿತು. ಬಸ್ಸಿನಲ್ಲಿ ಕುಳಿತುಕೊಂಡಿರುವ ಮಂಡಳಿಯ ಭಕ್ತರನ್ನು ಕುರಿತು "ಇವರೇ ನಮ್ಮ ಗುರುಗಳು" ಎಂದೆ. ಆಗ ಪೈಯವರು ಗುಡುಗುತ್ತಾ "ಹೌದು ಗುರುಗಳು. ಯಾವ ಮಠದ ಗುರುಗಳು?" ಎಂದರು. ಎಂದೂ ಪ್ರತಿಷ್ಠೆಯನ್ನು ಅಪೇಕ್ಷಿಸಿದವರಲ್ಲ ಶ್ರೀ ಪೈಯವರು. ಇನ್ನೊಮ್ಮೆ ಈ ಭಾಗ್ಯ ದೊರಕುವುದೋ, ಇಲ್ಲವೋ. ಎಲ್ಲರೂ ಅವರಿಗೆ ವಂದಿಸಿ ಆಶೀರ್ವಾದ ಪಡೆಯಿರಿ ಎಂದೆ. ಮಂಡಳಿಯ ಭಕ್ತರು ಗುಂಪುಗುಂಪಾಗಿ ಶ್ರೀ ಪೈಯವರ ಪಾದ ಮುಟ್ಟಿ ನಮಸ್ಕರಿಸುತ್ತಿರಲು ಪೈಯವರು ಗಟ್ಟಿಯಾಗಿ ಹರಸುತ್ತಾ "ಎಲ್ಲರಿಗೂ ಶುಭವಾಗಲಿ.

ಸದ್ಯ ನನ್ನ ಕಾಲನ್ನು ಎಳೆದೊಯ್ಯಬೇಡಿ. ನನ್ನ ಕಾಲು ನನಗೇ ಇರಲಿ" ಪೈಯವರ ಮಾತು ಘರ್ಜನೆ. ಅದರ ಹಿಂದೆ ಸಾತ್ವಿಕವಾದ ಪ್ರೇಮದ ಸರಳ ಹೃದಯವಿದೆ ಎಂಬುದನ್ನು ಬಲ್ಲವರೇ ಬಲ್ಲರು. ಅವರ ದರ್ಶನದಿಂದ ಎಲ್ಲರಿಗೂ ಆನಂದವಾಯಿತು.

ಆ ಬಳಿಕ ಶ್ರೀ ಗೋವಿಂದ ಪೈಯವರೊಂದಿಗೆ ಪತ್ರ ವ್ಯವಹಾರವಿತ್ತು. ಅವರ ಅಪ್ಪಣೆಯಂತೆ ನಾನು ರಾಮಚರಿತ ಮಾನಸವನ್ನು ತರ್ಜುಮೆ ಮಾಡಲಾರಂಭಿಸಿದೆ. ಪುಟ್ಟ ಪುಟ್ಟ ಪುಸ್ತಕಗಳಾಗಿ ತಿಂಗಳಿಗೆರಡರಂತೆ ರಾಮಚರಿತ ಮಾನಸವನ್ನು ಪ್ರಕಟಗೊಳಿಸಿದೆ. ಅವು ಹನ್ನೆರಡನೆಯ ಜ್ಯೋತಿಯ ತನಕ ನಿರಾತಂಕವಾಗಿ ಪ್ರಕಟವಾಯಿತು. ಇನ್ನು ಪೂರ್ತಿಯಾಗುವಷ್ಟರೊಳಗೆ ಏಷ್ಟು ಸಮಯವಾಗುವುದೋ ಎಂಬ ಭಯದಿಂದ ಆ ಹನ್ನೆರಡು ಜ್ಯೋತಿಗಳನ್ನು ಶ್ರೀ ಗೋವಿಂದ ಪೈಗಳವರಿಗೆ ಕಳುಹಿಸಿದೆ. ಅವರು ದಯಮಾಡಿ ಈ ಕೆಳಗಣ ಆಶೀರ್ವಾದದ ಮುನ್ನುಡಿಯನ್ನು ಬರೆದು ಕಳುಹಿದರು. ಅವರು ಬರೆದಂತೆ ಅವನ್ನು ಕೆಳಗೆ ಕೊಡಲಾಗಿದೆ.

## ನಾಲ್ಕು ಮಾತು

ಹಿಂದೀ ಭಾಷೆಯಲ್ಲಿ ಸಂತಕವಿ ತುಲಸೀದಾಸನಿಂದ ರಚಿತವಾಗಿ ಸಮಗ್ರ ಉತ್ತರ ಭಾರತದಲ್ಲಿ ಶ್ರೀ ತುಲಸೀದಾಸ ರಾಮಾಯಣವೆಂದು ಹೆಸರುವಾಸಿಯಾಗಿರುವ ಶ್ರೀ ರಾಮಚರಿತ ಮಾನಸ ಎಂಬ ಕಾವ್ಯದ ಹಿಂದೀ ಮೂಲ ಪದ್ಯಗಳನ್ನು ಕೊಟ್ಟು ಅವುಗಳ ಅದಿಯಲ್ಲಿ ನೀವು ಕನ್ನಡಿಸಿರುವ ಗದ್ಯರೂಪದ ಅರ್ಥವನ್ನೂ ಕೊಟ್ಟು ನೀವು ಕ್ರಮಶ: ಪ್ರಕಟಿಸುತ್ತಿರುವ ಜ್ಯೋತಿಗಳಲ್ಲಿ ನೀವು ದಯವಿಟ್ಟು ನನಗೆ ಕಳುಹಿಸಿರುವ ಕೆಲವು ಜ್ಯೋತಿಗಳು ಇಲ್ಲಿಗೆ ಮುಟ್ಟಿ ಅವನ್ನು ಓದಿ ನೋಡಿದೆ. ಬಹಳ ಚೆನ್ನಾಗಿದೆ. ನಿಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ.

ಆ ಜ್ಯೋತಿಗಳನ್ನು ಪರಿಶೀಲಿಸುವಲ್ಲಿ ಬೆಳೆಯಗುಣ ಮೊಳೆಯಲ್ಲಿ ಕಾಣುತ್ತದೆಂಬ ಗಾದೆಯ ಸತ್ಯಕ್ಕೆ ಅನುರೂಪವಾಗಿ ಇನ್ನು ಮುಂದಣ ಕೊನೆಯವರೆಗಣ ಮಿಕ್ಕವೆಲ್ಲ ಜ್ಯೋತಿಗಳು ಕೂಡ ಇದೇ ರೀತಿಯಾಗಿ ಚೆನ್ನಾಗಿ ಇರಬೇಕೆಂದು ಯಥಾವತ್ತಾಗಿ ನಿಶ್ಚಯಿಸಲಾಗುತ್ತದೆ.

ಈ ಕನ್ನಡ ಅನುವಾದವು ಆಧುನಿಕ ಕನ್ನಡ ಅನುವಾದ ಸಾಹಿತ್ಯದಲ್ಲಿ ನಾಮಾಂಕಿತವಾಗಿ ಬಾಳುತ್ತಿರುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಮಂಜೇಶ್ವರ,
26–5–61.

ಇತಿ ತಮ್ಮ
ಗೋವಿಂದ ಪೈ.

ಈ ಮುನ್ನುಡಿಯನ್ನು ರಾಮಚರಿತ ಮಾನಸದ ಹದಿಮೂರನೆಯ ಜ್ಯೋತಿಯಲ್ಲಿ ಪ್ರಕಟಿಸಲಾಗಿದೆ. ರಾಮಚರಿತ ಮಾನಸಕ್ಕೆ ಮುನ್ನುಡಿ ಬರೆಯುವೆನೆಂದು ಶ್ರೀಯುತರ ವಾಣಿಯನ್ನು ಅವರೇನೋ ಬರೆದು ಸತ್ಯಪಡಿಸಿದರು. ಆದರೆ ನಾನು ಮಾತ್ರ ರಾಮಚರಿತ ಮಾನಸವನ್ನು ಪೂರ್ತಿಗೊಳಿಸಲಾರದೆ ಇದ್ದೇನೆ. ಅವರ ನಿಧನದ ವಾರ್ತೆ ದೇಶಕ್ಕೆ ಸಿಡಿಲೆರಗಿದಂತಾಗಿದೆ. ಕರ್ನಾಟಕ ಮಾತೆ ತನ್ನ ಹಿರಿಯ ಪುತ್ರನನ್ನು ಕಳೆದುಕೊಂಡುದಕ್ಕೆ ಕಂಬನಿಗರೆಯುತ್ತಿದ್ದಾಳೆ. ಕಾವ್ಯ ಪ್ರಪಂಚದಲ್ಲಿ ಎಲ್ಲ ವಿಷಯದಲ್ಲೂ ಅವರು ಹಿರಿಯರೆಂದು ಎಲ್ಲ ಕವಿಗಳೂ ಒಪ್ಪಿದ್ದಾರೆ. ಅವರ ಸರಳತೆ, ಕಂಡದ್ದನ್ನು ಕಂಡಂತೆ ಆಡುವ ಗುಣ, ಕಾವ್ಯ ಗಾಂಭೀರ್ಯ ಮುಂತಾದುವುಗಳನ್ನು ಕಂಡ ಮದ್ರಾಸು ಸರ್ಕಾರವು ಅವರನ್ನು ರಾಷ್ಟ್ರಕವಿಯೆಂದು ಸನ್ಮಾನಿಸಿ ತಾನು ಧನ್ಯವಾಯಿತು. ಅವರ ಕೃತಿಗಳಿಗೆ ಕೆಳಗಡೆಯಿಂದ ಅವರೇ ಅರ್ಥ ಬರೆಯಬೇಕಾಗಿತ್ತು. ಅವರಂಥವರು ಇನ್ನೊಬ್ಬರು ದೊರೆಯುವುದು ದುರ್ಲಭವೇ ಸರಿ. ಅವರ ನುಡಿಯು ನಮ್ಮನ್ನು ಮುನ್ನಡೆಸಲಿ. ಅವರ ಸ್ಫೂರ್ತಿಯು ನಮಗೆ ಆದರ್ಶವಾಗಲಿ.

# ಹೊರ ಆವರಣವನ್ನು ಭೇದಿಸಿದಾಗ ಒಳಗಿನ ಜೀವ, ಸತ್ಯ; ಸುಂದರ; ಹೃದ್ಯ.

ಶ್ರೀ ವಿ. ಸೀತಾರಾಮಯ್ಯ

## ವ್ಯಕ್ತಿಕಾಣಿಕೆ

ಇದು ವ್ಯಕ್ತಿಶವಾದ ಒಂದು ಕಿಳಿಗಾಣಿಕೆ. ಗೋವಿಂದ ಪೈಗಳ ಪಾರ್ಥಿವ ಶರೀರವೊಂದು ತಾನೇ ನಮಗೆ ಇಂದು ಕಣ್ಮರೆಯಾದುದು? ಅವರ ಕೃತಿಗಳ ಸ್ವರೂಪ, ಬೆಲೆಗಾಣ್ಕೆ ನಾಳೆ ನಡೆಯಲಿವೆ. ಮುಂದಿನ ದಶಕಗಳಲ್ಲಿ ನಡೆಯುತ್ತವೆ; ಅವರ ಹೆಜ್ಜೆ, ಜಾಡು, ಉಸಿರು, ಬುದ್ಧಿ, ಹೃದ್ವಿಲಾಸಗಳು ಉಳಿದಿರುತ್ತವೆಯಾಗಿ; ಅವನ್ನು ಪ್ರತಿಫಲಿಸುವ ಕೃತಿಗಳಿರುತ್ತವೆಯಾಗಿ; ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವಕ್ಕೆ ನೆಲೆ, ಸ್ಥಾನ, ಬೆಲೆ ಇರುತ್ತವೆ. 1962ರ ಡಿಸೆಂಬರ್ ಕಡೆಕಡೆಗೆ ಅವರನ್ನು ಕಂಡಾಗ ಕಣ್ಣು ಬೆಂದು ತೇಲಿತ್ತು. ದೇಹ ದುರ್ಬಲವಾಗಿತ್ತು. ಸಪ್ಟೆಂಬರ್ 27, 28, 29ರಲ್ಲಿ ಮಂಗಳೂರಲ್ಲಿ ಅವರಿಗೆ ಗಂಥ ಹೂ ಅರ್ಪಿಸಬೇಕೆಂದೂ. 50,000 ರೂ. ನಿಧಿಯನ್ನು ಕೂಡಿಸಿ ಅದನ್ನು ಅವರ ಹೆಸರಲ್ಲಿ ಸಾಹಿತ್ಯ ಕಾರ್ಯಗಳಿಗಾಗಿ ವಿನಿಯೋಗಿಸಬೇಕೆಂದೂ ಗೊತ್ತಾಗಿತ್ತು. ಆ ಉತ್ಸವ ನಡೆವ ಮುಂಚೆ ಅವರು ಕಣ್ಣು ಮುಚ್ಚಿಕೊಂಡರು. ಕೊರಳ ಹಾರ ನೆನಪಿನ ಮಾಲೆಯಾಗಬೇಕಾಗಿ ಬಂತು. ಅವರಿಗೆ ಒಲಿದ ಮಿತ್ರವರ್ಗಕ್ಕೆ ಸಾರ್ವಜನಿಕವಾಗಿ ಒಂದೆರಡು ಪ್ರೀತಿಯ ಕೃತಜ್ಞತೆಗಳ ಮಾತನ್ನಾಡುವ ಅವಕಾಶವಿಲ್ಲವಾಯಿತು. ಅಚ್ಚ ಭಾರತೀಯರು ಅವರು; ಮಂಜೇಶ್ವರದಲ್ಲಿ ಗೋವಿಂದ ಪೈ ಆಗಿದ್ದ ಜೀವ ಇಂದಿನದಲ್ಲ; ಎಷ್ಟೋ ಜನ್ಮಗಳಲ್ಲಿ ಸಂಸ್ಕೃತಿ ಪಥದಲ್ಲಿ ಈವರೆಗೆ ನಡೆದದ್ದು ; ಈ ಒಡಲಲ್ಲಿ, ಜೀವದಲ್ಲಿ ಈ ಬಗೆಯಲ್ಲಿ ನುಡಿದದ್ದು. ನಡೆದದ್ದು ಹೀಗೆ; ನಾವು ಕಂಡಂತೆ; ಕಾಣದಂತೆ; ಮುಂದೆ, ಅದನ್ನು ಇಲ್ಲಿಂದ ಮುಂದುವರಿಸಿ ತನ್ನ ಪೂರ್ಣತೆಯನ್ನು ಆ ಜೀವ ಸಾಧಿಸಿಕೊಳ್ಳಲಿದೆ-ಎಂದೋ ಯಾವ ರೂಪದಲ್ಲಿಯೋ-ಇದು ಅವರ ನಂಬಿಕೆ. ಆ ನಂಬಿಕೆಗೆ ಚ್ಯುತಿಯಿಲ್ಲ. ಲೋಕ ಸಂಸ್ಕೃತಿಗೆ ಈ ಜನ್ಮಾಂತರ ಸಂಸ್ಕಾರದ ಮತ್ತು ಪರಿಪಾಕದ ತತ್ವ ನಮ್ಮ ನಾಡಿನ ಕಾಣಿಕೆ.

ಮಾಡಬೇಕಾದುದನ್ನು ಮಾಡಿದರು. ಕಾಲ ಬಂದಾಗ ತಮ್ಮನ್ನು ಕಾಲಕ್ಕೆ ಅರ್ಪಿಸಿಕೊಂಡರು. "ಅನಾಯಾಸೇನಮರಣಂ, ವಿನಾದೈನ್ಯೇನ ಜೀವನಂ" ಎಂದು ಬಯಸುವುದು ನಮ್ಮಲ್ಲಿ ವಾಡಿಕೆ. ಅವರ ದೇಹಕ್ಕೆ ಏನಾಯಾಸ, ನೋವು ಆಯಿತೋ. ಬಿಟ್ಟಿತೋ; ಜೀವಕ್ಕೆ ಯಾವ ಘಾಸಿ ತಟ್ಟಿತೋ ಇಲ್ಲವೋ; ಅವರ ಮನೋವಿಲಾಸಕ್ಕೂ ಆತ್ಮಕ್ಕೂ ಯಾವ ಶೃಂಖಲತೆಯೂ ಇರಲಿಲ್ಲ. ಸರ್ವದಾ.ಸ್ವತಂತ್ರ.ಅಪರಾಧೀನ ಸತ್ತ್ವ ಅವರದು. ಯಾರಿಗೂ ಬಾಗಲಿಲ್ಲ ; ಯಾರ ಹಂಗಿಗೂ ಬೀಳಲಿಲ್ಲ-ಒಂದು ದಿನ, ತಮ್ಮ ವಶರಾಗಿ ತಾವಿರಬಲ್ಲವರೆಗೂ, ಮಂಜೇಶ್ವರದ ಮನೆಯಲ್ಲಲ್ಲದೆ ಮಂಗಳೂರಲ್ಲಿ-ಪ್ರೀತಿಯ ತಮ್ಮಂದಿರ-ಅವರ ಮಕ್ಕಳ ಮನೆಯಲ್ಲಿ-ಕೂಡ ಉಳಿಯಲೊಲ್ಲೆನೆಂದು ಹಟಮಾಡಿ ಸಂಜೆಗೆ ಗೂಡು ಸೇರಿಕೊಳ್ಳಬಯಸುತ್ತಿದ್ದ ಚೇತನ ಅವರದು. ಚಿಕಿತ್ಸೆಗಾಗಿ ಮಂಗಳೂರಿಗೆ ಹೋಗಿರಲೂ ಮೊದಮೊದಲು ಒಪ್ಪಲಿಲ್ಲ. ಕಡೆಗೆ ಹಾಗೆ ಹೋದವರು ತನ್ನ ಪ್ರೀತಿಯ ತಮ್ಮನ ಮಗ ಶ್ರೀ ತುಕಾರಾಮ ಪೈಗಳ ಮನೆಯಲ್ಲಿ ತೀರಿಕೊಂಡರೆಂದು ವರದಿಯಾಗಿದೆ. ಅವರ ಮನಸ್ಸೇ ನಡೆದಿದ್ದರೆ ಆ ಕೊನೆ ಮಂಜೇಶ್ವರದ ತಮ್ಮ ಮನೆಯಲ್ಲಾಗಿದ್ದರೆಯೇ ಅವರು ಹೆಚ್ಚು ತೃಪ್ತಿಪಡುತ್ತಿದ್ದರೇನೋ. ಮಕ್ಕಳ. ತಮ್ಮಂದಿರ ವಿಷಯದಲ್ಲಿ ಅತೃಪ್ತಿ, ಅಸಮಾಧಾನದಿಂದಲ್ಲ, ಆ ಮಾತು. ಆ ಜೀವದ ಪಕ್ಷಪಾತ , ಆ ಅಭಿಮಾನದ ಹಟ ಹಾಗೆ ಎಂದು ತಿಳಿಸುವುದಕ್ಕೆ ಮಾತ್ರ.

## ಸ್ವಭಾವ ಲಕ್ಷಣ

ಮಂಜೇಶ್ವರ ಇನ್ನೂ ಕೇರಳದಲ್ಲಿದೆ. ಅದನ್ನು ಕೇರಳಕ್ಕೆ ಕೊಡಿಸಿದವರು ಇಂದು ನಮ್ಮಲ್ಲಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಇದ್ದಾರೆ. ಅವರು ನೆರವು ಕೊಟ್ಟರೆ ಅದು ಕನ್ನಡ ನಾಡಿಗೆ ಪುನ: ಸೇರಿ ಪೈಗಳ ಆಸೆ ನೆರವೇರೀತು. ಆದರೆ ಕೇರಳದವರನ್ನು ಅವರು ಒಲಿಸಿಕೊಟ್ಟಾರೆ? ಸರಳ. ನಿರ್ಮಲ ಪೈಗಳ ಮನಸ್ಸು; ಬಿಚ್ಚು ಹೃದಯದ ನುಡಿ; ಹೃದಯಕ್ಕೂ ನಾಲಗೆಗೂ ನಡುವೆ ಅಂತರವಿಲ್ಲ. ಸ್ನೇಹ ಸಂಪತ್ತಿ, ದುರ್ದಮ್ಯ ಚಿತ್ತವೃತ್ತಿ ಅವರ ಸ್ವಭಾವ ಲಕ್ಷಣಗಳು. ಇಂಗ್ಲೀಷ್ ಸಾಹಿತ್ಯದಲ್ಲಿ ವಿಶೇಷಾಂಕವನ್ನೂ. ಸ್ವರ್ಣ ಪದಕವನ್ನೂ ಮದರಾಸು ವಿಶ್ವವಿದ್ಯಾನಿಲಯದ ಬಿ.ಎ. ಪರೀಕ್ಷೆಯಲ್ಲಿ ಸಂಪಾದಿಸಿದರೂ ಡಿಗ್ರಿಯನ್ನಾಗಲಿ ಪದಕವನ್ನಾಗಲಿ ತೆಗೆದುಕೊಳ್ಳದೆ ಆ ಪ್ರಕಟಣೆಯ ಪ್ರಶಸ್ತಿಯೇ ಸಾಕೆಂದರು. ಯಾವುದರಲ್ಲಿಯೂ ಖಚಿತವಾದ್ದು ಅವರ ಮನಸ್ಸು; ನಡತೆ. ಕಡೆಗೆ ತಮ್ಮ ಹೆಸರನ್ನು ಇಂಗ್ಲಿಷಿನಲ್ಲಿ Govind Pai ಎಂದೇ ಬರೆಯಬೇಕು. ಕನ್ನಡದಲ್ಲಿ ಗೋವಿಂದ ಪೈ ಎಂದು ಬರೆಯಬೇಕು ಎಂದು ಹಿಡಿದು ಸಾಧಿಸಿದರು. ತಾಯ ಮನೆಯ ಕಡೆಯಿಂದ ಹೆಚ್ಚು ಲಾಲನೆ ಪಾಲನೆ ಪಡೆದು ಮನೆತನದಲ್ಲಿ ಸಾಕಷ್ಟು ಮಟ್ಟಿನ ಶ್ರೀಮಂತಿಕೆ ಇದ್ದುದರಿಂದ ಸಂಸಾರದ ಯಾವ ಆರ್ಥಿಕ ಕಾರ್ಪಣ್ಯಕ್ಕೂ ಸಿಕ್ಕದೆ ನೆಮ್ಮದಿಯಲ್ಲಿ ತಮ್ಮ ಜೀವನವನ್ನು ನಡೆಸಿದರು. ಬೇಕಾದ ಪುಸ್ತಕಗಳನ್ನು ಕೊಂಡರು; ಹಲವಾರು ಭಾಷೆಗಳವೂ. ವಿದ್ವತ್ತೆಯವೂ ಅವು. ತಮ್ಮಂದಿರು ಅವರನ್ನು ತಂದೆಯಂತೆ, ಹಿರಿಯರಂತೆ ನಡೆಸಿಕೊಂಡು ಪ್ರೀತಿಸೇವೆ ಸಲ್ಲಿಸಿದರು. ಅವರ ಬರವಣಿಗೆ, ಕೀರ್ತಿಗಳನ್ನು ರೂಢಿಸುವುದಕ್ಕಾಗಿಯೇ ಇದ್ದಾರೋ ಎಂಬಂತೆ ತಮ್ಮ ಸುಬ್ರಾಯ ಪೈಗಳು ತಾವೇ ಕಾಯಿಲೆ ಬಿದ್ದು ಅಸಹಾಯರಾಗುವವರೆಗೂ ಅವರ ನೆರಳಂತೆ

ಇದ್ದುಕೊಂಡು ದುಡಿದರು. ಇತ್ತ ತಮ್ಮ ಓದೇನೋ, ಬರವಣಿಗೆಯೇನೋ, ಸ್ನೇಹಗಳೇನೋ, ಅಷ್ಟಕ್ಕೆ ಮೀಸಲಾಗಿತ್ತು ಗೋವಿಂದ ಪೈ ಕಾಲ; ಬದುಕು ವಿದ್ಯೆಗೇ ಮೀಸಲಾದ್ದು.

## ಸಾಕಲ್ಯ

ಫ್ರೆಂಚ್, ಜರ್ಮನ್, ಪರ್ಷಿಯನ್, ಇಟಾಲಿಯನ್, ಗ್ರೀಕ್‌ಗಳಲ್ಲಿ; ಸಂಸ್ಕೃತ, ಪ್ರಾಕೃತ, ತಮಿಳು, ಕೊಂಕಣಿ, ತುಳು, ಮರಾಠಿ, ಹಿಂದಿ, ಬಂಗಾಳಿಗಳಲ್ಲಿ-ವಿಶೇಷ ಜ್ಞಾನ ಪಡೆದಿದ್ದರಾದುದರಿಂದ ತಮ್ಮ ಅಗತ್ಯಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲ ಎಲ್ಲೆಲ್ಲಿಂದಲೂ ದೊರಕಿಸಿಕೊಂಡರು. ಕನ್ನಡದ ಸೇವೆಗೆ ಅವನ್ನು ವಿನಿಯೋಗಿಸಿದರು. ಅತ್ಯದ್ಭುತವಾದ ಸ್ಮೃತಿಶಕ್ತಿ ಇದ್ದ ಅವರಿಗೆ ಸಂಗತಿಗಳು–ಪುಸ್ತಕಗಳು, ಪುಟಗಳು ತಿಥಿ, ವಾರ, ನಕ್ಷತ್ರ, ಇಸವಿ, ತಿಂಗಳು–ಹಗಲಿರುಳು ಗಂಟೆ ಕೂಡ ಅಚ್ಚಾಗಿ, ವಾಚೋವಿಧೇಯವಾಗಿದ್ದವು. ಕಡೆಯ ಒಂದೆರಡು ವರ್ಷಗಳಲ್ಲಿ ನೆನಪು ಹೊರಳುತ್ತಿದೆ ಎಂದರು. ಆಗಲೂ ಆ ನೆನಹು ವಿಸ್ಮಯಕರವಾದದ್ದೇ. ಒಂದು ನಿಮಿಷ ತಲೆ ಚಚ್ಚಿಕೊಂಡರಾಯಿತು. ಅದು ಮರುಕಳಿಸಲೇ ಬೇಕು. ಅವರು ಕೈಕೊಂಡ ಇತಿಹಾಸ ಸಂಶೋಧನೆ, ಭಾಷೆ, ಕವಿಗಳ ಕುಲ, ಮತ ಚರಿತ್ರೆಗಳು ಅಂಥವಕ್ಕೆ ಸ್ಮೃತಿಶಕ್ತಿ ಸಂಪನ್ನವಾಗಿ ಊಡದಾದರೆ ಅವನ್ನು ಸಾಧಿಸುವುದು ಕಷ್ಟ. ಇದಕ್ಕಾಗಿ ಅವರಿಗೆ ಕನ್ನಡನಾಡು ಅಷ್ಟಿಷ್ಟು ಮಾನ್ಯತೆ ಕೊಟ್ಟಿತಾದರೂ ಅದರ ವಿಶೇಷವನ್ನು ಬೆಳೆಸಲು ಇನ್ನಷ್ಟು ಅವಕಾಶ ಕೊಡಲಿಲ್ಲವೇನೋ. ಈ ನಾಡಲ್ಲಿ ಯಾರಿಗೂ ಏನೂ ಬೇಡ.

ಮಾನ್ಯತೆಯನ್ನು ಅವರು ನಿರೀಕ್ಷಿಸಲಿಲ್ಲ. ಅದನ್ನು ಸುಲಭವಾಗಿ ಒಪ್ಪಲಿಲ್ಲ ಕೂಡ. ಅಂಥವರ ಪ್ರಯೋಜನವನ್ನೂ ಪಡೆಯಲಾರದ ದೌರ್ಭಾಗ್ಯ ಕನ್ನಡ ನಾಡಿನದು. ಅವರಿಗೆ ಮಾನ್ಯತೆ ಯಾರು ಕೊಡಬೇಕು? ಅವರು ಮಾಡಬಲ್ಲದ್ದನ್ನೆಲ್ಲ ಅವರಿಂದ ಮಾಡಿಸಿಕೊಳ್ಳುವ ಪುಣ್ಯ-ಏಕೆ ಬುದ್ಧಿಯೇ ಇಲ್ಲವಾಗಿದೆ. ಅಲ್ಲದೆ ಇಂಥ ಜನಕ್ಕೆ ಯಾರು ಏಕೆ ದುಡಿಯಬೇಕು? ಈ ಭಾಷೆಯಲ್ಲಿ ಕೃತಿ, ಸಂಶೋಧನೆ ಯಾವ ಭಾಗ್ಯಕ್ಕಾಗಿ ಮಾಡಬೇಕೋ? ಇಂಗ್ಲಿಷಲ್ಲಿಯೋ ಹಿಂದಿಯಲ್ಲಿಯೋ ಮಾಡಿದ್ದರೆ ಅವರ ಖ್ಯಾತಿ, ಕೆಲಸದ ಪ್ರಯೋಜಕತೆ ಅತಿಶಯವಾಗುತ್ತಿತ್ತಲ್ಲವೆ ಎಂದು ನೊಂದುಕೊಂಡದ್ದುಂಟು-ಒಮ್ಮೊಮ್ಮೆ ಗೋವಿಂದ ಪೈ. ಹಲವೇಳೆ ಅವರು ಹತ್ತಾರು ವರ್ಷ ವ್ಯಾಸಂಗ ಮಾಡಿ, ಅದರ ಫಲವಾಗಿ ಮಾಡಿದ ಕವಿ, ಕೃತಿ, ಮತ, ಶಕ, ಸಾಹಿತ್ಯ ಚರಿತ್ರೆ, ಕಾಲ ನಿರ್ಣಯಗಳನ್ನು ಅಚ್ಚು ಮಾಡುವ ಪ್ರಕಾಶಕರು ಪತ್ರಿಕೆಗಳವರು ಸಾಕಷ್ಟು ಇಲ್ಲವಾದರೆನ್ನಬೇಕು. ಬೇಡಿದವರಿಗೆ ಲೇಖನವನ್ನು ಅವರು ಎಂದಿಗೂ ಇಲ್ಲವೆಂದವರಲ್ಲ. ನೋವೋ ಹರ್ಷವೋ, ಕೀರ್ತಿಯೋ ಅಪಕೀರ್ತಿಯೋ, ಲಾಭವೋ, ನಷ್ಟವೋ. ಅವರಿಗೆ ಆ ಲೆಕ್ಕವಿರಲಿಲ್ಲ- ಹೇಳಬೇಕಾದುದನ್ನು ಹೇಳಿದರು. ಕೇಳಿದವರಿಗೆ ಸಕಾಲಕ್ಕೆ ಲೇಖನ ಕಳಿಸಿದರು. ಕಳಿಸಿದ ಲೇಖನ ಅಚ್ಚಾಗಲು ತಿಂಗಳು, ವರ್ಷ ತಡವಾದಾಗ ನೊಂದರು. ಆದರೆ ತನ್ನನ್ನು ನೋಡುವವರು, ಮೆಚ್ಚುವವರು, ಬಳಸುವವರು, ಇಲ್ಲವೆಂದು-ಗಿಡ ಚಿಗುರು, ಹೂ ಹಣ್ಣು ಬಿಡುವುದನ್ನು ಹೇಗೆ ನಿಲ್ಲಿಸದೊ ಹಾಗೆ–ತಮ್ಮ ತಿಳಿವಳಿಕೆಯನ್ನು ಇತರರಿಗೆ ದೊರಕಿಸುವ ಕಾರ್ಯಭಾಗದಲ್ಲಿ ಅವರು ಎಂದೂ ತಪ್ಪಿದವರಲ್ಲ. ಇತರರು ತಪ್ಪಿದರೆಂದು ತಮ್ಮ ಧರ್ಮವನ್ನು ಅವರೇಕೆ ಕೆಡಿಸಿಕೊಂಡಾರು? ಕಾಗದ ಬರೆದವರಿಗೆ ಉತ್ತರ ಒಡನೆಯೇ ಬರುತ್ತಿತ್ತು. ಪುಸ್ತಕ ಕಳಿಸಿದವರಿಗೆ ಮೆಚ್ಚಿಕೆಯ ವಿಶ್ವಾಸದ, ಮಾರೋಲೆ ಬರುತ್ತಿತ್ತು. ಆ ಬಗ್ಗೆ ಅವರನ್ನು ಸರ್ವದಾ ನೆಚ್ಚಬಹುದಿತ್ತು. ಆ ನೆಚ್ಚಿಕೆ ಅವರ ಜೀವಧರ್ಮ, ಸ್ವರೂಪ ಲಕ್ಷಣ ಎನ್ನಬಹುದು. ಎಲ್ಲದರಲ್ಲಿಯೂ ಅದೇ ಶ್ರದ್ಧೆ ನಿಷ್ಠೆ, ಯಾವುದನ್ನು ಮಾಡಿದರೂ ತಮ್ಮ ಪರಮಾವಧಿ ಎಚ್ಚರದ ವಿನಿಯೋಗ, ಹಸ್ತಪ್ರತಿಗಳಲ್ಲಿ ಸಾಲು, ಟಿಪ್ಪಣಿ, ಅಧಿಕಾರ, ಗ್ರಂಥನಿರೂಪಣೆ ಅವುಗಳಿಗೆ ಬಳಸಬೇಕಾದ ಅಚ್ಚಿನ ಅಕ್ಷರದ ಗಾತ್ರ (Fount) ನಿರ್ದೇಶನ ಎಲ್ಲವೂ ಖಚಿತವಾಗುತ್ತಿದ್ದವು. ಯಾವುದನ್ನಾದರೂ ಹೊಡೆದೋ ತಿದ್ದಿಯೋ ಇದ್ದರೆ ಅದಕ್ಕೆ ಕೆಳಗೀಟು ಹಾಕಿ ಹಾಳೆಯ ಎಡದಲ್ಲಿ ಬಿಡುವಾದ ಸ್ಥಳಾವಕಾಶದಲ್ಲಿ ಸರಿಯಾದ ರೂಪವನ್ನು ಸ್ಫುಟವಾಗಿ, ಸರಿಯಾಗಿ ಪುನ: ಬರೆಯುತ್ತಿದ್ದರು. ಪಾಟಲವರ್ಣದ ಅವರ ಲೇಖನಿಯ ಮಸಿ, ಲೇಖನದ ಒಡಲಿಗೆ ಬಳಕೆಯಾದರೆ ಬೇರೆ ಬಣ್ಣದ್ದು ತಿದ್ದುಪಾಡುಗಳಿಗೆ ಬಳಸಲಾಗುತ್ತಿತ್ತು. ಅಷ್ಟು ಖಚಿತ (Fool-proof, Knave-proof) (ದಡ್ಡರ ದುರ್ಜನರ ಮೇಲೆ ವಿಮೆ ಅದು) ಅವರ ಆ ಬರವಣಿಗೆ.

## ಖಂ (ಅವರ ಕಂ) ಡಿತ

**ಅವರಿಂದ ಲೇಖನ ಬೇಡುವುದು, ಬರಸುವುದು, ತರಿಸಿಕೊಳ್ಳುವುದು ಹೆಚ್ಚಲ್ಲ; ಅದನ್ನು ಅಚ್ಚುಮಾಡುವುದನ್ನು ಮಾತ್ರ ಅವರು** ನಿರ್ದೇಶಿಸಿದಂತೆಯೇ ಮಾಡಬೇಕು. ಒಂದು ಶಬ್ದರೂಪ, ವಿರಾಮ ಚಿಹ್ನೆ ಚ, ತು ತಪ್ಪಿ ಅಚ್ಚಾದರೆ-ಅದು ಉದ್ದೇಶಪೂರ್ವಕವಾಗಿ ಸಂಪಾದಕರೋ, ಇನ್ನಾರೋ ಮಾಡಿದರೆಂದು ಗೊತ್ತಾದರೆ-ಅವರ ಪ್ರತಿಭಟನೆ ಉಗ್ರವಾಗುತ್ತಿತ್ತು. ಗ್ರಹಚಾರ ಬಿಡಿಸುತ್ತಿದ್ದರು. ಪ್ರತ್ಯಂಶವನ್ನೂ ಅಷ್ಟು ತೀರ್ಮಾನವಾಗಿ ಅವರು ಮಾಡಿಕೊಂಡಿದ್ದುದರಿಂದಲೇ ಒಂದು ಪ್ರತ್ಯಯದ ಪರವಾಗಿ ಅವರು ಇನ್ನೊಬ್ಬರಿಗೆ ಸೋಲುತ್ತಿರಲಿಲ್ಲ. ಅವರ ವ್ಯಾಕರಣ, ಛಂದಸ್ಸು, ಶಬ್ದ ನಿರ್ಮಾಣ ಎಲ್ಲಕ್ಕೂ ಆಧಾರ–ಸಮಾನಾಧಿಕರಣ–ಇರುತ್ತಿತ್ತು. ತಮಗೆ ಬೇಕಾದ ಮಾತು ಬಳಕೆಯಲ್ಲಿ ಇದ್ದರಾಯಿತು. ಇಲ್ಲವಾದರೆ ಹೊಸತಾಗಿ ಒಂದನ್ನು ನಿರ್ಮಾಣ ಮಾಡಿಕೊಳ್ಳುತ್ತಿದ್ದರು. (Bon Mot, Mot Juste) ಎಂಬ ಮಾತುಗಳುಂಟಲ್ಲವೆ? (ಉತ್ತಮವಾದ್ದು, ಉಚಿತವಾದ್ದು) ಎಂದರೆ, ಅಷ್ಟು ಅವಧಾನದಿಂದ ಅವರು ಯತ್ನಮಾಡುತ್ತಿದ್ದರು. ಒಂದೇ ಮಾತಿನ ಬಳಕೆ ನಾಲ್ಕು ಪ್ರಕಾರವಾಗಿ ಇದ್ದು, ಅವನ್ನು ರೂಢಿಸುವುದು ಶಕ್ಯವೆಂದು ತೋರಿದರೆ ಆ ನಾಲ್ಕನ್ನೂ ಬಳಸುತ್ತಿದ್ದರು. T. E. Lawrence ಹಾಗೆ ಮಾಡುತ್ತಿದ್ದರು. ಅಚ್ಚುಕೂಟದಲ್ಲಿ ಕರಡನ್ನು ತಿದ್ದುವವರೊಬ್ಬರು ಒಂದೇ ಊರಿನ ಹೆಸರು 5–6 ರೀತಿ ಬೇರೆ ಬೇರೆ ಅಕ್ಷರ ಸಂಯೋಜನೆಯಲ್ಲಿದೆ. ಸರಿಯಾದ ರೂಪವನ್ನು ಬಳಸೋಣ ಅದು ಯಾವುದೆಂದು ತಿಳಿಸಿರಿ ಎಂದರಂತೆ. ಅವರು "Good; there are three more: insert them on such and such pages" ಎಂದರಂತೆ. (ಇನ್ನೂ ಮೂರು ರೂಪಗಳಿವೆ ಅವನ್ನು ಈ ಪುಟಗಳಲ್ಲಿ ಸೇರಿಸಿ ಎಂದ

ರಂತೆ.) ಏಕರೂಪಕ್ಕೆ ಗುಲಾಮರಾಗಿ ಕಟ್ಟುಬೀಳಲು ಅವರಿಗೆ ಇಷ್ಟವಿರಲಿಲ್ಲ. ವಿದ್ವದ್ ಲೇಖನಗಳಲ್ಲಿ ಮಾತ್ರವೇ ಹೀಗಲ್ಲ; ಕವಿತೆಯಲ್ಲಿ ಈ ನಿಷ್ಠೆ ಇನ್ನೂ ಅತಿಶಯ; ಅಲ್ಲಿಯೂ ಮೊದಲಿಂದಲೂ ಧಾರಾಳವೇ; ಸ್ವತಂತ್ರವೇ, ನಿರ್ಭೀತಿಯೇ. ಮೊದಲಬಾರಿಗೆ ಪ್ರಾಸಬಿಟ್ಟು Blank Verse ಪದ್ಯ ಬರೆದವರಲ್ಲಿ ಅವರು ಮುಂದಾಳು. ತಮಗೆ ಬೇಕಾದ ರೂಪ ಪ್ರಯೋಗಗಳನ್ನು ಹೇಗೋ ರೂಢಿಸಿಕೊಂಡಾರು: "ಮಾತನ್ನು ಈ ಅರ್ಥದಲ್ಲಿ ಬಳಸಿದ್ದೇನೆ" ಎಂದು ಅಡಿ ಟಿಪ್ಪಣಿಕೊಟ್ಟಾರು. ಕೊಡದಿದ್ದರೆ ಅಲ್ಪ ವ್ಯುತ್ಪತ್ತಿಯುಳ್ಳವರಿಗೆ ಕಷ್ಟವಾಗುವುದೆಂದು ಗೊತ್ತು. ಅದನ್ನು ಆಕ್ಷೇಪಣೆ ಮಾಡಿದರೆ ಪಂಪ, ನಾಗಚಂದ್ರಾದಿಗಳ. ಶಾಸನಗಳ. ವ್ಯಾಕರಣ ಸೂತ್ರಗಳ ಆಧಾರ, ಸಾದೃಶ್ಯ ನಿರೂಪಣೆ ಸಮರ್ಥನೆಗೆ ನುಗ್ಗಿ ಬರುತ್ತಿತ್ತು. ಇಂಥದ್ದು ಹಿಂದೆ ಆಗಿದೆಯಲ್ಲವೆ ಎನ್ನುವರು. ಅವರ ವ್ಯುತ್ಪತ್ತಿ ಅಲ್ಲಿ ಅತಿಶಯವಾದ್ದರಿಂದಲೇ ಅವರ ಕೃತಿ ಇತರರಿಗೆ ಕಷ್ಟ. ಆ ಹೊರ ಆವರಣವನ್ನು ಭೇದಿಸಿದರೆ ಒಳಗಿನ ಜೀವ ಸತ್ವ ಸುಂದರ, ಹೃದ್ಯ, ಅದನ್ನು ನಿವೇದಿಸುವ ಮನಸ್ಸು ಸತ್ಯಕ್ಕೆ ಹೇಗೆ ಹಾ ತೊರೆಯುತ್ತಿತ್ತು ಎಂಬುದನ್ನು ಯಾರೂ ಕಾಣಬಹುದಾಗಿತ್ತು.

## ಕೃತಿಗಳು

ಅವರ ಇತಿಹಾಸ ಸಂಶೋಧನೆ. ವಾದಗಳನ್ನು ಕುರಿತು ವಿದ್ವಾಂಸರು ನಾಳೆ ಯಾವುದೂ ನಿರ್ಣಯಕ್ಕೆ ಬರಬಹುದು; ಆದರೆ ಅವರು ತಮ್ಮ ತೀರ್ಮಾನಗಳನ್ನು ಸಾಧಿಸಲು ಒದಗಿಸುತ್ತಿದ್ದ ಪ್ರಮಾಣಗಳ ಶ್ರೇಣಿ. ಪ್ರಪಂಚ ಅದ್ಭುತವಾದ್ದು. ಯಾವುದನ್ನು ಸಾಹಿತ್ಯ ಗದ್ಯವೆನ್ನುತ್ತೇವೋ ಅದನ್ನು ಹೆಚ್ಚಾಗಿ ಅವರು ಬರೆಯಲಿಲ್ಲ. ಈಚೆಗೆ ಅವರ ಕೃಷ್ಣಚರಿತೆ ಅಚ್ಚಾಗಿದೆಯಂತೆ. ನಾನದನ್ನು ಇನ್ನೂ ಓದಿಲ್ಲ. ಅದು ಭಾಷಾಂತರವೇನೊ. ಅವರ ಕವನಗಳನ್ನು ನಾನು ಓದಿದ್ದೇನೆ. ಗಿಳಿವಿಂಡಿನ ಹಲವು ಕವಿತೆಗಳು ಅತೀವ ಸುಂದರವಾಗಿವೆ. ಜರ್ಮನ್ ಕವಿ "Theodor Korner" ಎಂಬೊಬ್ಬನ "Prayer During the Battle" ಎಂಬ ಯುದ್ಧ ಗೀತವನ್ನು ಬೆಳಸಿ ಬರೆದ "ಕೊಳಂಗುಳದ ಮನವಿ" ಎಂಬುದನ್ನು ಮೊದಲು ಓದಿದಾಗ ನನಗೆ ರೋಮಾಂಚವಾಯಿತು. ಒಂದು ಪದ್ಯದ ಕೊನೆಯ ಸಾಲನ್ನು ಎರಡನೆಯದರ ಮೊದಲ ಸಾಲಾಗಿ ಅದರ ಕೊನೆಯದನ್ನು ಮುಂದಿನದರ ಮೊದಲ ಸಾಲಾಗಿ ಮಾಡಿಕೊಂಡು ಅದರ ಧ್ವನಿ. ಭಾವ. ಏರುವ ರಚನಾತಂತ್ರ ನನಗೆ ಸ್ಫೂರ್ತಿಕೊಟ್ಟಿತು. ಉಮರ್‌ಖಯ್ಯಾಮನ ರುಬಾಯಿಗಳನ್ನು ರುಬಾಯಿರಚನಾ ತಂತ್ರವನ್ನು ಅನುಸರಿಸಿಯೇ ಬರೆದಿದ್ದಾರೆ: ಅವರ "ನಂದಾದೀಪ"ದ ಹಲವು ಗೀತಗಳ ಸೌಭಾಗ್ಯ ಕನ್ನಡಕ್ಕೆ ಹೊಸತು. ಟೆನ್ನಿಸನ್ ಕವಿಯ "In Memoriam" ಅಂತಹ ಪ್ರೀತಿ ನಿವೇದನ ಅಲ್ಲಿನದು. ಸಣ್ಣ ವಯಸ್ಸಿನಲ್ಲಿ ತೀರಿಕೊಂಡ ಪ್ರಿಯವರ ಭಾರ್ಯೆಗೆ ಸ್ಮೃತಿ ನಿವೇದನೆ ನಂದಾದೀಪ. ಆ ಮೇಲೆ ಅವರ "ವೈಶಾಖಿ" "ಗೊಲ್ಗೊಥಾ" "ಪ್ರಭಾಸ" ಮುಂತಾದ ಹಿರಿಗವನಗಳು ಬಂದವು. ಅವರ ನಾಟಕಗಳಲ್ಲಿ ಕೆಲವನ್ನು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಿಸಲು ಒಪ್ಪಿ ನನಗೆ ಅನುಮತಿಕೊಟ್ಟರು. ಅವರ "ಹೆಬ್ಬೆರಳು" "ಚಿತ್ರಭಾನು" ನಾಟಕಗಳೂ ಬೇರೆ ಬೇರೆ ರೀತಿಯಲ್ಲಿ ಚೆಲುವಾದವು. ಹೆಬ್ಬೆರಳಲ್ಲಿ ಬರುವ ಹಾಡಿನ ಒಂದು ಪಲ್ಲವಿ "ಸುಸೂಸೂಸು" ಎಂದಾಗಿಯೇನೋ ಹೊಮ್ಮುತ್ತದೆ. ಅದನ್ನು ಹುಡುಗರಂತೆ ಹೆಬ್ಬೆರಲು ತರ್ಜನಿಗಳ ವಿಸ್ತಾರ ವಿನ್ಯಾಸದಿಂದ ತುಟಿಗಿಟ್ಟು ಸಿಳ್ಳೆ ಹೊಡೆಯುವಂತೆ ಧಾಟಿ ಏರ್ಪಡಿಸಿ ಹಾಡುತ್ತಿದ್ದ ಆ ಧಾರಾಳವನ್ನು ನೋಡಬೇಕಿತ್ತು. ಅದು ಅಲ್ಲಿನ ಲಯದ ನೆಲಗಟ್ಟು.

## ನಿವೇದನೆ

ನನಗೆ ಇಂದು ಅವರ ಸ್ನೇಹದ ನೆನಪು ಮುಖ್ಯ. ಸುಮಾರು 1924–25ರಲ್ಲಿ ನನ್ನ ಗುಡಿಸಲಿಗೆ ಅವರು ದಯಮಾಡಿಸಿದರು. ನನಗೆ ಹಿರಿಯರಾದ, ಚಾಮರಾಜ ಪೇಟೆಯಲ್ಲಿ ನನ್ನ ಮುಂದಿನ ರಸ್ತೆಯವರಾದ, ನಂಗಪುರಂ ವೆಂಕಟೇಶಯ್ಯಂಗಾರ್ಯರ ಜೊತೆಯಲ್ಲಿ ಬಂದರು. ಎಸ್.ವಿ.ಅವರ ಎರಡನೆಯ ಮಗನೂ ನಾನೂ ಸಹಪಾಠಿಗಳು. ಇವರು ನನ್ನ ಮನೆಗೆ ಬಂದ ಸಂತೋಷ ಅಂಥಿಂಥದಲ್ಲ. ನನ್ನ ತಾಯಿಗೆ ಆ ದಿನ ಆದ ಹಿಗ್ಗನ್ನು ಹೇಳತೀರದು. ಆ ಮೇಲೆ ಬೆಳಗಾವಿಯಲ್ಲಿ 1926ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ ಅವರನ್ನು ಪುನ: ಕಂಡೆ; ಬಹುಶ: ಅವರ ಪತ್ನಿಯ ಅಸ್ಥಿ ಶೇಷಗಳನ್ನು ಕಾಶಿ ಪ್ರಯಾಗಗಳಿಗೆ ಒಯ್ದು ಹಿಂತಿರುಗುತ್ತಿದ್ದರೆಂದು ಕಾಣುತ್ತದೆ. ಆ ಮೇಲೆ ಏಕಾಂಗಿಯಾಗಿಯೋ ಕಾರಂತರಂತಹ ಇತರ ಗೆಳೆಯರೊಡನೆಯೋ ಶ್ರೀ ಡಿ.ವಿ.ಜಿ. ಮಾಸ್ತಿ ಮುಂತಾದ ಹಿರಿಯರೊಡನೆಯೋ ಅವರಲ್ಲಿಗೆ ಹೋಗಿಯೂ ಆ ಸ್ನೇಹ ಸೌಭಾಗ್ಯವನ್ನು ಉಂಡಿದ್ದೇನೆ. ಯಾವಾಗ ಮಂಗಳೂರಿಗೆ ಪುತ್ತೂರಿಗೆ ಹೋದರೂ-ಇದು 20–30 ಬಾರಿಯಾದರೂ ಈ ವರೆಗೆ ಆಗಿರಬೇಕು-ಬಹುತರ ಅವರಲ್ಲಿಗೆ ಹೋಗದೆ ಬಂದುದಿಲ್ಲ. ಹೋಗದೆ ಬಂದ ಎರಡು ಸಾರಿಗಾಗಿ ಅವರಿಂದ ತೀಕ್ಷ್ಣವಾದ ಆಕ್ಷೇಪಣೆಯನ್ನು-ಏಕೆ ಭರ್ತ್ಸನೆಯನ್ನೇ-ಅನುಭವಿಸಬೇಕಾಯಿತು. ಎಂದು ಹೋಗಲಿ ಕರುಳ ಅಣ್ಣನಂತಹ ಅಕ್ಕರೆ ಅವರಿಗೆ; ಏನು ಊಟ. ತಿಂಡಿ. ಮಾತು. ಪ್ರೀತಿ, ಸಹಚಾರ! ಕಂಡ ಕ್ಷಣದಿಂದ ಜತೆ ಬಿಡುವ ಕ್ಷಣದವರೆಗೂ ಮಾತಿನ ಹಬ್ಬ. ಅವರ ಜೊತೆಗೆ ಮಂಜೇಶ್ವರದ ನನ್ನ ಅವರ ಗೆಳೆತನ ಅಲ್ಲಿನ ಕಡಲಿನದು: ಜೊತೆಗೆ ಕಡಲಿಗೆ ಹೋಗುವುದು: ಹಗಲು. ಸಂಜೆ ಅದರ ಮುಚ್ಚಟೆಯನ್ನು ಅನುಭವಿಸುವುದು: ಹರಟೆ: ಲೋಕ ವಿಚಾರ. ಧರ್ಮಾಧರ್ಮ ಪ್ರಸಂಗ; ರಾಜಕೀಯ, ಸಾಹಿತ್ಯ ವಿಮರ್ಶೆ-ಎಲ್ಲವೂ ಬರುವವೇ. ಅಭಿಪ್ರಾಯ ಭಿನ್ನತೆ ಬಂದಾಗ ಅವರ ಅಭಿಪ್ರಾಯ ಅವರದೇ; ನಮ್ಮದು ನಮ್ಮದೇ; ವಾದ ಬಿಗಿದು "ಹೌದುಂಟು-ಅಲ್ಲವೊ" ಎಂದರಾಯಿತು, ನಮ್ಮ ಬಾಯಿ ಮುಚ್ಚಿತು.

## ಅಭಿಪ್ರಾಯ

ಮತ ರಾಜಕೀಯ ವಿಷಯಗಳಲ್ಲಿ ಅವರ ಅಭಿಪ್ರಾಯ ತೀಕ್ಷ್ಣ. 'ಕ್ಷುರಸ್ಯ ಧಾರಾ ಸದೃಶಂ.' ಕೆಲವಲ್ಲಿ ಕಠಿಣವಿತ್ತು. ಸತ್ಯವನ್ನು ಅವರು ಕಂಡ ರೀತಿ ಹಾಗೆ. ಅವರ ಪೂರ್ವಗ್ರಹ ಕೆರಳಿದಾಗ ಆ ಬಿರುಗಾಳಿ ಬೀಸಿ ನಿಲ್ಲುವವರೆಗೂ ಮರೆಯಾಗುವುದೋ ಮೌನವಾಗಿರುವುದೋ ಒಳಿತು. ಅದನ್ನು ನುಡಿಯುವ ರೀತಿಯೂ ಅಂತೇ. ನಮಗೆ ಒಪ್ಪಿತವಾಗದಾಗಲೂ ಉಗ್ರವೆನ್ನಿಸಿದಾಗಲೂ ನಾವು ಕಿಮ್ಮಗೆ ನಿಲ್ಲಬೇ

ಕಾದ್ವೇ. ಅದರ ವಾಸನೆ ಬಂದ ಕೂಡಲೇ ನಾನಂತೂ ಪಿಮ್ಮೆಟ್ಟಿ ಮೌನ ತಾಳುತ್ತಿದ್ದೆ. ನನ್ನ ಮನಸ್ಸು ಅವರಿಗೆ ಗೊತ್ತಿತ್ತಾದ್ದರಿಂದ ನನ್ನ ಮೆದುತನವನ್ನು ಅವರು ಎತ್ತಾಡಿದುದುಂಟು. ಒಂದು ಸಲವಂತೂ ರಾತ್ರಿ 10–11 ಗಂಟೆ ವೇಳೆಗೆ ವಾದಪಬ್ಬಿ ನಾವು ಕನ್ನಡ ಬಾವುಟವೆಂದು ಹೆಸರಿಟ್ಟು ಪರಿಷತ್ತಿಂದ ಪ್ರಕಟಿಸಿದ ಪುಸ್ತಕವನ್ನು ಕುರಿತು ಕುರುಕ್ಷೇತ್ರ ಯುದ್ಧವೇ ನಡೆಯಿತು. ಎಷ್ಟೋ ಬೇರೆ ಕನ್ನಡ ಸಂಸ್ಕೃತ ಮಾತುಗಳಿರುವಾಗ ಬಾವುಟವೆಂದುದೇಕೆ ಎಂದೇ ಆರಂಭವಾಯಿತು. ಅಲ್ಲಿನ ಕೃತಿಗಳ ಆಯ್ಕೆಯ ವಿಷಯದಲ್ಲಿಯೂ ಹಾಗೆಯೇ. ಅಂದು ನಾನು ಹೇಗೆ ಉಳಿದುಕೊಂಡೆನೋ ನನಗೇ ಈಗಲೂ ತಿಳಿಯದ ಅಚ್ಚರಿಯಾಗಿದೆ. ಅವರಿಗೆ ಆ ಸಂಕಲನದ ಪ್ರತಿಜ್ಞೆಯನ್ನು ತಿಳಿಸಿ, ಆಯ್ಕೆಗೆ ಅವರನ್ನು ಒಪ್ಪಿಸಲು ವಿಶ್ವ ಪ್ರಯತ್ನವಾಯಿತು. ಆದರೆ, ಎಂದೇ ಆಗಲಿ ಯಾವ ವಿಷಯದಲ್ಲಿಯಾಗಲಿ, ವಾದದಲ್ಲಿ ಎಷ್ಟು ಭಿನ್ನತೆ ಬಂದರೂ ಅದು ಬೇರೆ ಪ್ರಪಂಚ.

## ಕಡಲು

ಮಾನವನಾಗಿ ಅವರ ಸ್ನೇಹ, ಬಾಂಧವ್ಯಗಳದು ಪೂರ್ತಿ ಬೇರೆ ಇರುತ್ತಾ ಅದಕ್ಕೆ ಎಂದೂ ಚ್ಯುತಿ ಇಲ್ಲ. ಆ ಪ್ರೀತಿಗೆ, ಸವಿಗೆ, ಮಾರ್ದವಕ್ಕೆ ಮಿತಿ ಇಲ್ಲ. ಸಾಂಕರ್ಯವಿಲ್ಲ. ಅವರ ನಗೆ ಒಂದು ಬೆಳದಿಂಗಳು, ಒಂದು ಮಿರುಗುವ ಆದರೆ ಸ್ನಿಗ್ಧವಾದ, ಬೇಗೆ ಇಲ್ಲದ ಬಿಸಿಲು. ಅದರ ತಣ್ಪಿನಲ್ಲಿ ಅದರ ಸುಖೋಷ್ಣದಲ್ಲಿ ಆಳಿದ ಸೌಖ್ಯ ನನ್ನದು. ಅವನ್ನು ಇನ್ನಾರು ಹಾಗೆ ಒದಗಿಸಿಯಾರು? ಆಕೃತಿ, ದಿಟ್ಟ, ಪುಷ್ಟ, ಮೀಸೆ ತಲೆಗೂದಲು ನರೆತ ಸಿಂಗದ ಅಯಾಲು. ಅವರ ವೇಷವೋ; ಒಂದು ಖಾದಿ ಮೊಂಡು ತೋಳಿನ ಬನಿಯನ್; ಉಟ್ಟ ಒಂದು ದಟ್ಟಿ, ಮೈಮೇಲೆ ಭುಜದಿಂದಿಳಿದು ಒಂದು ತುಂಡು ಟವಲ್:-ಇದ್ದರಿತ್ತು ಇಲ್ಲವಾದರಿಲ್ಲ. ಪೂರಿ, ಕಾಫಿ, ಸೇವು, ಅವಲಕ್ಕಿ ಆಯಿತು. ಭಟ್ಟರು ಒಳಗೆ ಪೂಜೆ ಮಂಗಳಾರತಿ ಮಾಡುತ್ತಿರುವವರು. ಮಧ್ಯಾಹ್ನಕ್ಕೆ ಕಿಚಡಿಯದೋ ಪತ್ರೊಡೆಯದೋ ಔತಣ ಕಾದಿರಲು ನಾವಂತೂ ನಡೆವೇ ನಡೆದೆವು. ಅವರ ಕೈಯಲ್ಲಿಯೂ ಒಂದು ಛತ್ರಿ: ಮಳೆಗೆಂದು; ಬಿಸಿಲಿಗೆಂದು. ಅದನ್ನು ಹಿಡಿಯಲೇಬೇಕೆಂಬ ನಿಯಮವಿಲ್ಲ. ಕಡಲಿಗೆ ಹೋದೆವು. ಕರೆಯ ಮಳಲಲ್ಲಿ ತಿರುಗಿದೆವು. ಸಾಕಪ್ಪ ಇನ್ನು ಮುಂದೆ ಬೇಡ. ಅಲ್ಲಿ ಹೊಯಿಗೆ ಹೊಳ್ಳು, ಆಚೆ ನಮ್ಮ ಕಡಲು ನೇರ ಆಳವಾಗುತ್ತದೆ. ಅದನ್ನು ನಂಬುವ ಹಾಗಿಲ್ಲ. ನಿಮಗೆ ಮೈಮೇಲೆ ಪರಿವೆಯಿರುವುದಿಲ್ಲ. ಬನ್ನಿ-ಎನ್ನುತ್ತಿರುವವರೇ. ಒಂದು ಸಲ, ಕಡೆಯದು-ಅವರು ಜೊತೆಗೆ ಬರಲಶಕ್ತರಾಗಿದ್ದರು. ನನ್ನನ್ನು ತುಂಬಾ ದೂರ ಹೋಗದಂತೆ ಎಚ್ಚರವಾಗಿ ನೋಡಿಕೊಳ್ಳಲು ಇನ್ನೊಬ್ಬರನ್ನು ಗೊತ್ತು ಮಾಡಿ ಕಳಿಸಿದ್ದರು. ಅಂಥದು ಅವರ ತಾಯೊಲವು, ತಾಯ್ಗಾಪು: ಜುಲೈ ಆಗಸ್ಟುಗಳಲ್ಲಿ ಮಳೆ, ಬಿರುಗಾಳಿ ಗುಡುಗುಗಳ ಹೊಯಿಲು, ಆರ್ಭಟ, ಕಡಲಲೆಯ ಘೋಷದ ಜೊತೆಗೆ ಗಾಳಿ ಮಳೆ ಕಡಲುಗಳ ಆ ಸೆಣಸಾಟವನ್ನು ಮಂಜೇಶ್ವರಕ್ಕೆ ಹೋದಾಗಲೇ ನಾನು ಕಂಡಿರುವುದು. ಪ್ರಕೃತಿಯ ರೌದ್ರ ಆಗ ಕಂಡಂತೆ ನಾನು ಬೇರೆಲ್ಲಿಯೂ ಕಂಡಿಲ್ಲ. ತೆಂಗು. ತಾಳೆ, ಸರುವೆಗಳಿಗೆ, ಬೂತಹಿಡಿದು ಅಲ್ಲಾಡುತ್ತಿರುತ್ತವೆ ಸುತ್ತಿಬೀಸಿ: ತಲೆ, ಕಣ್ಣು, ಕಿವಿ, ಎದೆಗಳನ್ನು ತುಂಬಿ; ಮದಗೊಳಿಸಿ. ದಾಳಿಟ್ಟು ಅವರ ಮನೆಯ ಮಾಡದಿಂದ ಆ ಹೊಯಿಲು ರಾತ್ರಿಯೆಲ್ಲಾ ಕೇಳುತ್ತಿರುತ್ತದೆ ಆ ಉನ್ಮಾದದ ಕೆರಳು.

## ಒಂದು ಸಂಜೆ

ಒಂದು ಸಂಜೆ ದೊಡ್ಡ ಸೂರ್ಯಬಿಂಬ-ಸವರನ್ ಅಮೆರಿಕನ್ ಈಗಲ್ (ಹತ್ತು ಡಾಲರ್ ನಾಣ್ಯ) ಬಣ್ಣ ನೋಡಿರಬೇಕಲ್ಲ ! ಅಂಥದರ ಉರಿವ ಅಗ್ನಿ ತೇಜದ್ದು-ಪಡುವಲಲ್ಲಿ ಮುಳುಗುತ್ತಿತ್ತು. ಬಿಂಬ ಕ್ಷಿತಿಜಕ್ಕೆ ಸೇರಿ ಇಳಿದು ಮಾಯವಾಗಲು ಪೂರ್ತಿ ಎರಡು ನಿಮಿಷ ಹಿಡಿಯಿತು. ಎದುರಿಗೆ ತೆಳು ತೆರೆ ಪೊರೆಯಂತೆ ಕಟ್ಟಿ. ಉತ್ತರ ದಕ್ಷಿಣ ಕವಿಯಿತು. ಪಾಟಲ ವರ್ಣದ ಮಂಚದ ಪರದೆ. ಕಟ್ಟಿದಂತೆ; ಒಟ್ಟು ಮೂರು ಕಡೆ ನಾಟಕ ಮಂದಿರದಲ್ಲಿ ರಂಗದ ಪರದೆ ಕಟ್ಟಿದಂತೆ. ದಿಗಂತವನ್ನು ತಿಳಿಮೋಡಗಳ ಅಲೆಹೊರಳು ರಂಜಿಸಿ ಮೆಟ್ಟಲು ಮೆಟ್ಟಲು ಕಟ್ಟಿತ್ತು. ಅದರಂಚನ್ನು ಸೂರ್ಯಾಸ್ತದ ಹೊಳಪು-ಹೊಂಬೆಳಕು ರಂಜಿಸುತ್ತಿತ್ತು. ನಾಟಿಂಗ್‌ಹಂ ಜರಿತೆರೆ ತೆರೆದಂತೆ. ಮುಗ್ಧನಾಗಿ ಕುಳಿತಿದ್ದೆ. ಪೈಗಳ ಕೆಳಗೈ ನನ್ನ ಕೈಯನ್ನು ಮೆಲ್ಲಗೆ ಒಡಿದು 'ಬಹು ಚಲೋದಿದೆಯಲ್ಲಾ' ಎಂದರು. ಆ ಪೈ ಜುಮ್ಮು ಈ 20–25 ವರ್ಷಗಳ ಮೇಲೆ ಮರಳುತ್ತಿದೆ. ಆ ಸ್ನೇಹಕ್ಕೆ ಏನು ಕೊಟ್ಟೇನು? ಅಂಥ ಪ್ರೀತಿಯ ನೆನಪು ನನ್ನ ಹಲವು ಪುಣ್ಯಗಳಲ್ಲಿ ಜೀವವನ್ನು ಸಹ್ಯಮಾಡಿರುವ ಅಮೃತಾಂಶಗಳಲ್ಲಿ ಒಂದು. ನನ್ನ ಬಾಳಿಗೆ ಸಾರ್ಥಕತೆಯನ್ನು ತಂದು ಅಂಥವು ಉಪಕರಿಸಿವೆ. ಉಪಕಾರ ಪೈಗಳಂಥವರದು. ಅವರು ಸಾಧಿಸಿದ ಸಾರಸ್ವತ, ಸೌಜನ್ಯಗಳ ಕೀರ್ತಿಯಲ್ಲಿ ಒಂದು ಕಿರಿಯಂಶ ನನ್ನ ಪಾಲಿಗೆ ಬರುವುದಾದರೆ ನಾನು ತೃಪ್ತ; ಕೃತಾರ್ಥ.

# ಶ್ರೀ ಮಂ. ಗೋವಿಂದ ಪೈ ಅವರು

**ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ**

ನಮ್ಮ ಹಿರಿಯ ಸಾಹಿತಿ ಶ್ರೀ ಮಂಗಳೂರು ಗೋವಿಂದ ಪೈ ಅವರು ತಿಂಗಳ ದಿನದಲ್ಲಿ ತೀರಿಕೊಂಡರು. ಎಂಬತ್ತು ವರ್ಷದ ತುಂಬು ಜೀವನ ನಡೆಸಿ ಇವರು ಕೃತಕೃತ್ಯರಾಗಿದ್ದರು; ಇದ್ದೂ ಇಂಥ ಮಹನೀಯ ಪುತ್ರರೊಬ್ಬರು ತೀರಿಕೊಂಡರು ಎನ್ನುವುದು ನಾಡಿಗೆ ನುಡಿಗೆ ಅಪಾರ ನಷ್ಟ.

ಗೋವಿಂದ ಪೈ, ಅವರ ಹೆಸರು ಸೂಚಿಸುವಂತೆ, ಗೌಡ ಸಾರಸ್ವತ ಸಮಾಜದವರು. ವೈಷ್ಣವರು. ಪುಣ್ಯವಂತ ಮನೆತನ. ಆಸ್ತಿಯ ನೆಲ ಮಂಜೇಶ್ವರದ ಸುತ್ತಿನಲ್ಲಿ ಇರುತ್ತ ಮಂಜೇಶ್ವರದಲ್ಲಿ ದೊಡ್ಡ ಮನೆಯೂ ಉಂಟು. ನಮಗೆಲ್ಲ ಪರಿಚಯ ಆಗುವ ಕಾಲಕ್ಕೆ ಶ್ರೀಯುತರು ಮಂಜೇಶ್ವರದಲ್ಲಿ ನೆಲಸಿದ್ದ ಕಾರಣದಿಂದ ಅವರ ಹೆಸರಿನ ಆರಂಭದ ಇಂಗ್ಲೀಷ್ "ಎಂ" ಅಕ್ಷರ ಮಂಜೇಶ್ವರದ ಸಂಕೇತ ಎಂದು ಬಹು ಜನರ ತಿಳುವಳಿಕೆ. ಆದರೆ "ಎಂ" ಎಂದರೆ ಮಂಗಳೂರು ಎಂದು ಈ ಮಿತ್ರರು ಮಂಜೇಶ್ವರ ಗೋವಿಂದ ಪೈ ಎಂಬ ವಿಳಾಸಕ್ಕೆ ಬರೆದ ಪತ್ರವೊಂದಕ್ಕೆ ಉತ್ತರ ಕೊಡುವಾಗ ಒಮ್ಮೆ ತಿಳಿಸಿದ್ದುಂಟು.

ಶ್ರೀಯುತರ ಆರಂಭದ ವಿದ್ಯಾಭ್ಯಾಸ ಮಂಗಳೂರಿನಲ್ಲಿ ನಡೆಯಿತು. ಮಂಗಳೂರು ಆಗಿನ ದಿನಕ್ಕೆ ತುಂಬ ಎಚ್ಚೆತ್ತ ಪಟ್ಟಣವಾಗಿತ್ತು. ಬೇಸಲ್ ಮಿಷನ್ನಿನ ಕ್ರೈಸ್ತ ಪಾದ್ರಿ ಜನ, ದಕ್ಷ ಜಾಣ ಆದ ಹಲವರು, ದುಡಿದು ಅದನ್ನು ವಿದ್ಯೆ ಸಂಸ್ಕೃತಿಗಳ ಒಂದು ಹಿರಿಯ ಕೇಂದ್ರವಾಗಿ ಮಾಡಿದ್ದರು. ಹೊಸ ಕನ್ನಡದ ಮುಮ್ಮೊದಲ ಮಾಸ ಪತ್ರಿಕೆ "ಸುವಾಸಿನಿ" ಅಲ್ಲಿಂದಲೇ ಪ್ರಕಟವಾದದ್ದು. ಬೋಳಾರ ವಿಠ್ಠಲರಾಯರೆಂಬ ಹಿರಿಯರು ಮೊದಲಾಗಿ, ನಮ್ಮ ತಲೆಮಾರಿಗೆ ಪರಿಚಿತರಾಗಿ ದುಡಿದ ಶ್ರೀಯುತ ಬೆನಗಲ್ ರಾಮರಾವ್, ಪಂಜೆ ಮಂಗೇಶ ರಾವ್ ವರೆಗಿನ ಹತ್ತಾರು ಜನ ಭಾಷಾ ಸೇವಕರು ಆ ಕೇಂದ್ರದಲ್ಲಿರುತ್ತ ನಾಡಿಗೆ, ನುಡಿಗೆ ಸೇವೆ ಸಲ್ಲಿಸುತ್ತಿದ್ದರು.

ತರುಣ ಗೋವಿಂದ ಪೈ ಈ ಆವರಣದಲ್ಲಿ ಬೆಳೆದವರು; ಶ್ರೀ ಪಂಜೆ ಮಂಗೇಶರಾಯರಿಂದ ಶಾಲೆಯಲ್ಲಿ ಪಾಠ ಕಲಿತವರು. ಚುರುಕು ಬುದ್ಧಿಯ ಭಾವುಕ ಜೀವದ ತರುಣನ ಮೇಲೆ ಆವರಣದ ಪ್ರಭಾವ ಪ್ರಬಲವಾಗಿ ಬಿದ್ದದ್ದು ಆಶ್ಚರ್ಯವೇನೂ ಅಲ್ಲ. ತರುಣ ಪ್ರೌಢ ವಿದ್ಯೆಗೆ ಮದ್ರಾಸು ನಗರಕ್ಕೆ ಹೋದರು. ಜಾಣ ಎನ್ನಿಸಿಕೊಂಡರು. ಬಿ. ಎ. ಪರೀಕ್ಷೆ ನಡೆಯುತ್ತಿದ್ದ ಸಮಯದಲ್ಲಿ ತಂದೆಯವರಿಗೆ ತುಂಬ ಕಾಯಿಲೆ ಎಂದು ತಿಳಿದು ಪರೀಕ್ಷೆಯನ್ನು ಪೂರ್ತಿಯಾಗಿ ಕೊಡಲಾಗದೆ ಹಿಂತಿರುಗಬೇಕಾಯಿತು. ತಂದೆ ಆ ಕಾಯಿಲೆಯಿಂದ ತೀರಿಕೊಂಡರಾದ ಕಾರಣ ಮನೆತನದ ವ್ಯವಹಾರವನ್ನು ನೋಡಿಕೊಳ್ಳಲು ಊರಲ್ಲೇ ನಿಲ್ಲಬೇಕಾಯಿತು. ಇವರು ಮರಳಿ ಕಾಲೇಜಿಗೆ ಹೋಗಲಿಲ್ಲ.

ಆಗಿನ ಕಾಲಕ್ಕೆ ಬಿ. ಎ. ಪರೀಕ್ಷೆಯಲ್ಲಿ ಮೂರು ವಿಭಾಗ ಇರುತಿತ್ತು. ಗೋವಿಂದ ಪೈ ಇಂಗ್ಲಿಷ್ ವಿಭಾಗವನ್ನು ಮುಗಿಸಿ ಬಂದಿದ್ದರು. ಪರೀಕ್ಷೆಯ ತೀರ್ಮಾನ ತಿಳಿದಾಗ ಆ ವಿಭಾಗದಲ್ಲಿ ಇವರು ಮೊದಲ ತರಗತಿಯಲ್ಲಿ ತೇರ್ಗಡೆಯಾಗಿದ್ದುದು ತಿಳಿಯಿತು. ಆ ಮೇಲೆ ಅದರಲ್ಲೂ ಇವರ ಸ್ಥಾನ ಮೊದಲನೆಯದು ಎನ್ನುವುದು ಕಂಡಿತು. ತಂದೆಯವರ ಕಾಯಿಲೆಯಿಂದ ವಿದ್ಯಾಭ್ಯಾಸ ಅಲ್ಲಿಗೆ ಮುಗಿಯದೆ ಗೋವಿಂದ ಪೈ ಕಾಲೇಜಿಗೆ ಹಿಂದಿರುಗಿದ್ದರೆ ಇವರು ಪ್ರೌಢ ವಿದ್ಯೆಯಲ್ಲಿ ಅತ್ಯುನ್ನತ ಪದವಿಗಳನ್ನು ಗಳಿಸುತ್ತಿದ್ದರೆನ್ನುವುದರಲ್ಲಿ ಸಂದೇಹವಿಲ್ಲ.

ಈ ವೇಳೆಗೆ ತರುಣ, ಸಹಜವಾಗಿ ಒಬ್ಬ ಸಾಹಿತಿ ಎನ್ನುವುದು ಕಂಡಿತ್ತು. ಆಂಗ್ಲ ಸಾಹಿತ್ಯದ ಗಾಢ ಪರಿಚಯದಿಂದ ಸಾಹಿತದಲ್ಲಿ ಹೊಸ ಹೆಜ್ಜೆಯನ್ನು ಇರಿಸಬಹುದೆಂಬ ಮನೋಧರ್ಮವೂ ಬೆಳೆದಿತ್ತು. ಪ್ರಾಸ ಇಲ್ಲದೆ ಪದ್ಯವೇ ಇಲ್ಲದಿದ್ದ ನಮ್ಮ ನುಡಿಯಲ್ಲಿ ಪ್ರಾಸವನ್ನು ಬಿಟ್ಟು ಪದ್ಯವನ್ನು ರಚಿಸುವ ಪ್ರಯೋಗವನ್ನು ಮೊದಲಲ್ಲಿ ಮಾಡಿದವರು ಶ್ರೀ ಗೋವಿಂದ ಪೈ ಎಂದು ಕಾಣುತ್ತದೆ. ಕನ್ನಡದಲ್ಲಿ ಇಂಥ ಮಾರ್ಪಾಟನ್ನು ಮಾಡುತ್ತಿರುವ ಲೇಖಕ ಎಂದು ಗೋವಿಂದ ಪೈ ಅವರ ಹೆಸರು ಅಂದಿನ ವಿದ್ಯಾರ್ಥಿವೃಂದಕ್ಕೆ ಪರಿಚಯಕ್ಕೆ ಬಂದಿತ್ತು.

ಆಮೇಲೆ ಶ್ರೀಯುತರು ಮಾಡಿದ ಭಾಷಾ ಸೇವೆ ಸುಪ್ರಸಿದ್ಧವಾಗಿದೆ. ಉನ್ನತ ಧ್ಯೇಯಗಳ, ಉದಾರ ಭಾವಗಳ, ಸೂಕ್ಷ್ಮ ಬುದ್ಧಿಯ ಭಾವುಕ ಚೇತನವೊಂದು ಅರವತ್ತು ವರ್ಷಕಾಲ ಸಾಹಿತ್ಯ ಜೀವನವನ್ನು ನಡೆಯಿಸಿತು. ಭಾವುಕತೆಯೊಂದಿಗೆ ವಿಚಾರ ಶಕ್ತಿಯೂ ಇರುವುದು ಅಪೂರ್ವ ಸಂಯೋಗ. ಗೋವಿಂದ ಪೈಯವರ ಸಾಹಿತ್ಯಸೇವೆ ಈ ಅಪೂರ್ವ ಸಂಯೋಗದ ಫಲವಾಗಿ, ಇತ್ತ ಉನ್ನತ ಕವಿತೆಯಾಗಿ, ಇತ್ತ ಪ್ರಾಕ್ತನ ಅನ್ವೇಷಣ ಆಗಿ, ಬೆಳೆಯಿತು. ಗೋವಿಂದ ಪೈ ಅವರ ಕವಿತೆಯಲ್ಲಿ ಭಾವದಷ್ಟೆ ಸುಂದರವಾಗಿ ದೃಷ್ಟಿಯ ವೈಶಾಲ್ಯವೂ ಪ್ರಕಟವಾಗುತ್ತದೆ. ಸ್ವತ: ಸನಾತನ ಧರ್ಮದ ಮೂಲ ತತ್ವಗಳ ದೃಢ ಉಪಾಸಕರಾದ ಈ ನಮ್ಮ ಹಿರಿಯ ಕವಿ ಕ್ರೀಸ್ತ ಗುರುವಿನ, ಬುದ್ಧ ಗುರುವಿನ ವಿಷಯವಾಗಿ ಉನ್ನತ ಮಟ್ಟದ ಕಾವ್ಯಗಳನ್ನು ರಚಿಸಿದರು. ಹೀಗೆ ಮಾಡುವಲ್ಲಿ ಸನಾತನ ಧರ್ಮದ ಅಸೀಮ ಔದಾರ್ಯದ ಒಂದು ಸಂಕೇತ ಆದರು. ಪೈ ಅವರ ಅನ್ವೇಷಣದ ಕೆಲಸವನ್ನು ಕುರಿತು ಇಂತದೇ ಪ್ರಶಂಸೆಯ ಮಾತನ್ನು ಬಲ್ಲವರು ಹೇಳಿದ್ದಾರೆ. ಪೈ ಅವರು ಅನ್ವೇಷಣಕ್ಕೆ ತೆಗೆದುಕೊಂಡ ಸಂಗತಿ ಹತ್ತಲ್ಲ ಇಪ್ಪತ್ತಲ್ಲ; ನೂರು ಇನ್ನೂರು ಆಗಿರಬಹುದು. ಕನ್ನಡ ಇಂಗ್ಲೀಷು ಅಲ್ಲದೆ ಪೈ ಸಂಸ್ಕೃತ, ಪ್ರಾಕೃತ, ನಮ್ಮ ದೇಶದ ಇತರ ಭಾಷೆಗಳು, ಲೋಕದ ಇತರ ಭಾಷೆಗಳು, ಹಲವನ್ನು ಅಭ್ಯಾಸ ಮಾಡಿದ್ದರು.

ಇವರ ಜ್ಞಾಪಕ ಶಕ್ತಿ ಬೇರೆ ಅಸಾಧಾರಣವಾದದ್ದು. ಈ ಎಲ್ಲಾ ಕಾರಣದಿಂದ ಇವರ ವಿಚಾರಧಾರೆ ಗುರಿ ಹಿಡಿದು ನೇರವಾಗಿ ಧೀರವಾಗಿ ಹರಿಯುತ್ತಿತ್ತು. ಆ ವಿಚಾರ ಮುಟ್ಟಿದ ನಿರ್ಣಯಗಳೆಲ್ಲಾ ಎಲ್ಲರಿಗೂ ಒಪ್ಪಿಗೆ ಆಗುತ್ತಿದ್ದುವು ಎಂದಲ್ಲ. ಆದರೆ ಆ ವಿಚಾರದ ಯಾವ ಭಾಗವಾಗಲಿ ಅರೆಬೆಳಕು ಕೊರೆಬೆಳಕಿನ ನಸುಕು ಮಸುಕಿನಲ್ಲಿ ಅಸ್ಪಷ್ಟವಾಗಿ ನಿಲ್ಲುತ್ತಿರಲಿಲ್ಲ.

ಸ್ವಾತಂತ್ರ್ಯ ಬಂದ ಮೇಲೆ ಮದ್ರಾಸ್ ಸರಕಾರ, ಪ್ರಾಂತ್ಯದ ಭಾಷೆಗಳ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಲು ಐದು ಭಾಷೆಗಳಲ್ಲಿ ಐವರು ಹಿರಿಯರನ್ನು ರಾಷ್ಟ್ರಕವಿ ಎಂದು ಸನ್ಮಾನಿಸಲು ನಿಶ್ಚಯಿಸಿದಾಗ, ಕನ್ನಡದ ಕವಿಯಾಗಿ ಶ್ರೀ ಗೋವಿಂದ ಪೈ ಅವರು ಗೌರವಿಸ ಲ್ಪಟ್ಟರು. ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಗ್ರ ಪೀಠವನ್ನು ಅಲಂಕರಿಸಿದರು. ಉಳಿದವರಂತೆ ಗೋವಿಂದ ಪೈ ಬಹಳವಾಗಿ ಹೊರಕ್ಕೆ ಬರಲಿಲ್ಲ. ಎರಡು ಸಲ ಮಾತ್ರ ಬೆಂಗಳೂರಿಗೆ ಬಂದರು. ಬಂದ ಸಂದರ್ಭದಲ್ಲಿ ಜನರೊಂದಿಗೆ ತುಂಬ ಸರಳವಾಗಿ ನಡೆದುಕೊಂಡರು. ಅವರದು ಸಹಜವಾಗಿ ತುಂಬಾ ಅಕ್ಕರೆಯ ಜೀವ; ಹಸುಮಗುವಿನಂತೆ ಅಚ್ಚ ಸ್ವಭಾವ, ಒಮ್ಮೆ ನೋಡಿದರೆ ಸಾಕು ಒಲಿಯದೆ ವಿಧಿಯಿಲ್ಲ ಎಂಬ ರೀತಿಯ ಸೌಜನ್ಯ, ಸಹಜ ವರ್ತನ.

ಈ ಸೌಜನ್ಯ, ಸಹಜ ವರ್ತನ ಗೋವಿಂದ ಪೈಯವರನ್ನು ಬಲ್ಲ ಎಲ್ಲ ಲೇಖಕರನ್ನೂ ಅವರ ಆತ್ಮೀಯ ಮಿತ್ರರನ್ನಾಗಿ ಮಾಡಿ ದವು. ನಮ್ಮಲ್ಲಿ ಅನೇಕರು ಮಂಜೇಶ್ವರದ ಅವರ ಮನೆಗೆ ಹೋಗಿ ಅವರ ಆತಿಥ್ಯದಿಂದ ಸುಖಿಸಿದ್ದುಂಟು. ಅಂಥ ವೇಳೆಯಲ್ಲಿ ಗೋವಿಂದ ಪೈ ತೋರಿಸುತ್ತಿದ್ದ ಆದರ, ಅಕ್ಕರೆ, ಇಷ್ಟೆಂದು ವರ್ಣಿಸಲಳವಲ್ಲ. ಮೈಸೂರಿಂದ ಹೋದ ನಮ್ಮಂಥ ಜನರಿಗೆ ತಮ್ಮ ಪ್ರದೇಶದ ವಿಶೇಷ ಅಡಿಗೆಯ ಪರಿಚಯ ಮಾಡಿಕೊಡುವುದು ಪೈಯವರ ಒಂದು ಕಾರ್ಯಕ್ರಮ ಎಂಬಂತಾಗಿತ್ತು. ಇದನ್ನು ಸರಿಯಾಗಿ ತಿಳಿಮಕೊಳ್ಳದ ಯಾರೋ ಅವರನ್ನು ಹಾಸ್ಯ ಮಾಡಿವರಂತೆ. ಇದನ್ನು ನಿಲ್ಲಿಸುವುದೇ ಎಂದು ಒಮ್ಮೆ ಗೋವಿಂದ ಪೈ ಯೋಚಿಸಿದರು. ಒಬ್ಬರು ಯಾವುದೋ ಕಾರಣದಿಂದ ಒಲ್ಲದ ಮಾತ್ರಕ್ಕೆ ಉಳಿದವರಿಗೆ ಏಕೆ ಶಿಕ್ಷೆ ಎಂದು ಅವರ ಮೇಲೆ ಆತಿಥ್ಯ ಎಂದಿನಂತೆ ಮುಂದುವರಿಯಿತು.

ತಂದೆಯ ಕಾಯಿಲೆಯ ಸುದ್ದಿ ಕೇಳಿ ಪರೀಕ್ಷೆಯನ್ನು ಮುಗಿಸದೆ ಮನೆಗೆ ಬಂದ ಮಗ ಮನೆಯ ಹಿರಿಯನಾಗಿ ನಿಂತು, ಸಂಸಾರ ವನ್ನು ನೋಡಿಕೊಂಡು ಸೋದರರೊಡನೆ ಬೆಳೆದ ರೀತಿ ಒಂದು ಸುಂದರ ಇತಿಹಾಸ ಆಗುತ್ತದೆ. ಗೋವಿಂದ ಪೈ ಹರೆಯದಲ್ಲೆ ಪತ್ನಿ ಯನ್ನು ಕಳೆದುಕೊಂಡರು. ಮರಳಿ ಮದುವೆಯಾಗಲಿಲ್ಲ. ಅವರಿಗೆ ಮಕ್ಕಳಿರಲಿಲ್ಲ. ಆದರೆ ಕುಟುಂಬದಲ್ಲಿ ಬೆಳೆಯುತ್ತಿದ್ದ ತಮ್ಮನ ಮಕ್ಕಳು ಅವರಿಗೆ ತಮ್ಮದೇ ಮಕ್ಕಳಂತೆ ಅಕ್ಕರೆಯ ವಸ್ತುವಾಗಿದ್ದುವು. ಆ ತಮ್ಮಂದಿರೋ ಈ ಅಣ್ಣನನ್ನು ಒಬ್ಬ ದೇವರು ಎಂಬಂತೆ ನೋಡಿಕೊಳ್ಳುತ್ತಿದ್ದರು. ತಮ್ಮ ಸುಬ್ಬರಾಯ ಪೈ ಕೂಡಾ ಪತ್ನಿಯನ್ನು ಕಳಕೊಂಡರು. ಮರಳಿ ಮದುವೆಯಾಗದೆ ಅಣ್ಣನೊಡನೆ ನಿಂತು ಮಕ್ಕಳನ್ನು ಸಾಕಿದರು. ಬಂದವರ ಆತಿಥ್ಯವನ್ನು ಅಣ್ಣನ ಅಧ್ಯಕ್ಷತೆಯಲ್ಲಿ ಈ ತಮ್ಮ ನಡೆಸುತ್ತಿದ್ದ ಸೊಗಸೇ ಒಂದು ಸೊಗಸು. ಈ ವ್ಯವಹಾರದಲ್ಲಿ ಸುಬ್ಬರಾಯ ಪೈ "ಮಾರ್ಥ" ಆದರೆ ಅನಂತ ಪೈ "ಮೇರಿ". ಹೀಗೆ ಇಬ್ಬರು ತಮ್ಮಂದಿರೂ ಅಣ್ಣನೊಂದಿಗೆ ನಮ್ಮ ಸಮಾಜದ ಸುಸ್ಪಷ್ಟ ಕುಟುಂಬಗಳ ಜೀವನದ ಒಂದು ಸುಂದರ ಆದರ್ಶವನ್ನು ಸಾಧಿಸಿ ತೋರಿಸಿದರು.

ಮನೆಯ ಮಹಡಿಯ ನಡುಸಾಲೆಯ ಗೋಡೆಯ ಮೇಲೆ ಗೋವಿಂದ ಪೈ ಅವರ ಪತ್ನಿಯಯವರ ಚಿತ್ರವೊಂದನ್ನು ತೂಗಿ ಸಿರುವರು. ಗೋವಿಂದ ಪೈ ದಿನವೂ ಬೆಳಗಾತ ತೋಟದಲ್ಲಿ ಸುತ್ತುವ ಹೊತ್ತು ಎರಡು ಹೂವನ್ನು ಬಿಡಿಸಿ ತಂದವರು, ಆ ಚಿತ್ರಕ್ಕೆ ಕುಂಕುಮ ಹಚ್ಚಿ ಆ ಹೂವನ್ನು ಒಪ್ಪಿಸುವರು. ಆ ಮನುಷ್ಯನ ಚೇತನದಲ್ಲಿ ಎಷ್ಟು ಪ್ರೇಮ ಇತ್ತು, ಎಂಥ ಧ್ಯೇಯ ಇತ್ತು. ಎನ್ನುವು ದನ್ನು ತೋರಿಸುವುದಕ್ಕೆ ಈ ಒಂದು ಮಾತು ಸಾಕು.

ಮನೆಗೆ ಬಂದವರಿಗೆ ತಮ್ಮೂರಿನ ಕಡಲನ್ನು ತೋರಿಸುವುದು ಪೈಯವರ ಒಂದು ಮುಖ್ಯ ಕಾರ್ಯ. ಊರ ಬಳಿಯ ಸಮುದ್ರದಂಥ ಒಂದು ದೊಡ್ಡ ವಸ್ತು ಯಾರು ಅನುಭವಿಸುತ್ತಾರೋ . . . . . ಅದು ಅವರ ಸ್ವಂತ ಆಸ್ತಿ. ಮಂಜೇಶ್ವರದ ಕಡಲು ಕರೆಗಳ ಸೌಂದರ್ಯಒಂದುಅಪೂರ್ವ ರೀತಿಯ ಸೌಂದರ್ಯ. ಹರಿದಾರಿ ಉದ್ದ ನಾನೂರು ಗಜ ಅಗಲದ ಇಂಥ ಮರಳ ಹರವು ಬಹಳ ಕಡೆ ದೊರೆ ಯಲಾರದು. ಸ್ನೇಹಿತರನ್ನು ಕರೆದುಕೊಂಡು ಈ ಮರಳ ಮೇಲೆ ನಡೆಯುತ್ತ ತಾವು ಸುಖಿಸಿ ಅವರನ್ನೂ ಸುಖ ಪಡಿಸಿದ ಗೋವಿಂದ ಪೈ ಮಂಜೇಶ್ವರದ ಸಮುದ್ರವನ್ನು ತಮ್ಮ ಜೀವನದ ಆಸ್ತಿಯಾಗಿ ಮಾಡಿಕೊಂಡಿದ್ದರು. ಹಿರಿಯರಾದ ಶ್ರೀ ನವರತ್ನ ರಾಮರಾಯರು ಒಮ್ಮೆ ಮಂಜೇಶ್ವರಕ್ಕೆ ಹೋಗಿದ್ದಾಗ ಆ ನೀರಿನಲ್ಲಿ ಈಸಬೇಕೆಂದು ಬಯಸಿದರಂತೆ. ಗೋವಿಂದ ಪೈ ಒಂದು ದೋಣಿಗೆ ಏರ್ಪಾಡು ಮಾಡಿ ರಾಯರನ್ನೂ ಅವರ ಮಗನನ್ನೂ ಕುಳ್ಳಿರಿಸಿಕೊಂಡು ಕಡಲ ಮೇಲೆ ಕರೆದುಕೊಂಡು ಹೋಗಿ ಅವರ ಸೊಂಟಗಳಿಗೆ ಹಗ್ಗಗಳನ್ನು ಕಟ್ಟಿಸಿ ಇಬ್ಬರನ್ನೂ ಈಸಾಡಿಸಿ ಮರಳಿ ಕರೆತಂದರು.

ಮಂಜೇಶ್ವರ ಕಾಸರಗೋಡು ತಾಲೂಕಿನಲ್ಲಿದೆ. ಕರ್ಣಾಟಕ ಕೇರಳ ಪ್ರಾಂತಗಳ ನಿರ್ಮಾಣದ ಸಂದರ್ಭದಲ್ಲಿ ಕುಟಿಲ ರಾಜಕೀಯದ ಪರಿಣಾಮವಾಗಿ ಕಾಸರಗೋಡು ತಾಲ್ಲೂಕಿನ ಉತ್ತರ ಅರ್ಧ ಕನ್ನಡ ನಾಡಿಗೆ ಸೇರಬೇಕಾಗಿದ್ದದ್ದು ಕೇರಳಕ್ಕೆ ಸೇರಿ ಹೋ ಯಿತು. ಇದು ಗೋವಿಂದ ಪೈ ಅವರಿಗೆ ಒಂದು ದೊಡ್ಡ ಪೆಟ್ಟು ಎನ್ನಿಸಿತು. ಅರ್ಧ ಈ ಕಾರಣದಿಂದ ಅರ್ಧ ದೇಹಸ್ಥಿತಿ ಸರಿಯಾಗಿ ಇಲ್ಲ ವಾಗಿದ್ದರಿಂದ ಅವರು ಈಚೆಗೆ ಮಂಗಳೂರಿನಲ್ಲೇ ನೆಲೆಸಿದರು. ಮೂರು ವರ್ಷದ ಹಿಂದೆ ತುಂಬ ಅನಾರೋಗ್ಯವಾಗಿ ಕುಗ್ಗಿ ಚೇತರಿಸಿ ಕೊಳ್ಳುತ್ತಿದ್ದ ಸಮಯದಲ್ಲಿ ನಾನು ಅವರನ್ನು ಕಾಣುವ ಸಂದರ್ಭ ಒದಗಿತ್ತು. "ಮೈಯ ಪಾಡು ಮೈಗೆ. ನೀನು ಮಾತೆಯನ್ನು ನೆನೆದು ಹರ್ಷವಾಗಿರು ಮನಸ್ಸೆ", ಎಂದು ಪರಮಹಂಸರು ತಮ್ಮ ವ್ಯಾಧಿಯ ದಿನಗಳಲ್ಲಿ ಹಾಡಿಕೊಳ್ಳುತ್ತಿದ್ದರಂತೆ. ಗೋವಿಂದ ಪೈ ಸುಮಾರು ಈ ಸ್ಥಿತಿಯನ್ನು ಮುಟ್ಟಿದ್ದರು. "ಇತ್ತಲಿತ್ತಲ್ ಕೆಳೆಯಿರಿರಾ" ಎಂದು ನಾಟಕದ ವಾಕ್ಯವನ್ನು ಉದ್ಧರಿಸಿ ಬಂದವರನ್ನು ಸ್ವಾಗತಿಸಿದರು. ಎಂದಿನಂತೆ ಆತಿಥ್ಯದಿಂದ ತಣಿಸಿದರು. ಹತ್ತಿರ ಕುಳಿತು ಅಕ್ಕರೆಯ ಮಾತನ್ನು ಆಡಿದರು. ಬೀಳ್ಕೊಡುವಾಗ "ಮತ್ತೆ ಯಾವಾಗ ದರ್ಶನ" ಎಂದು ಕೇಳಿದರು. ನಾನು "ಇಷ್ಟರಲ್ಲೆ ನಾನು ಇಲ್ಲಿಗೆ ಬರುವ ಯೋಚನೆಯಿಲ್ಲ" ಎಂದೆನು. "ಹಾಗಾದರೆ ಮತ್ತೆ ಕಾಣು

ವುದು ಅಲ್ಲೇ", ಎಂದು ಅವರು ಕೈ ಮೇಲಕ್ಕೆ ತೋರಿದರು. ಅರ್ಧ ಹಾಸ್ಯ; ಆದರೆ ಅರ್ಧ ದಿಟವೂ ಹೌದು. ಹಾಸ್ಯದೊಂದಿಗೆ ದೃಢವಾದ ನಂಬುಗೆಯೂ ಸೇರಿತ್ತು. ನಮ್ಮಲ್ಲಿ ಸಂಪ್ರದಾಯದಲ್ಲಿ ಬೆಳೆದವರಿಗೆ "ಅಂತವಂತ ಇಮೇದೇಹಾ: ನಿತ್ಯಸ್ಯೋಕ್ತಾ: ಶರೀರಿಣ:" "ಅವಿನಾಶಿತು ತದ್ವಿದ್ಧಿ ಏನಸರ್ವಮಿದಂ ತತಂ" ಎಂಬ ಗೀತಾ ವಾಕ್ಯಗಳು ನಿಶ್ಚಲ ಸತ್ಯ ಆಗಿರುತ್ತವೆ. ಗೋವಿಂದ ಪೈ ಯಾವ ಮಾತಿಗೂ "ಶ್ರೀ ದೇವರ" ಅನುಗ್ರಹದ ಪ್ರಸಕ್ತಿಯನ್ನು ತರುತಿದ್ದರು. ಇಹ ಜೀವನ ಮುಗಿದಾಗ ತಾನು ದೈವ ಸನ್ನಿಧಿಯನ್ನು ಸೇರಿ ಸುಖಿಸುತ್ತೇನೆ ಎನ್ನುವುದು ಅವರಿಗೆ ತೀರ ಸರಳವಾದ ನಂಬಿಕೆ. "ಅನಿತ್ಯಂ ಅಸುಖಂ ಲೋಕಂ ಇಮಂ ಪ್ರಾಪ್ಯ ಭಜಸ್ವಮಾಂ" ಎನ್ನುವುದೂ ಒಂದು ಗೀತಾ ವಾಕ್ಯ. ಇಂಥ ವಾಕ್ಯವನ್ನು ಸಂತತ ಜೀವನ ಸೂತ್ರವಾಗಿ ಅಂಗೀಕರಿಸಿದ ಗೋವಿಂದ ಪೈಯಂಥ ಶುದ್ಧಚೇತನರಿಗೆ ಈ ನಂಬಿಕೆ ಸಿದ್ಧಿಸಿದ್ದದ್ದು ಆಶ್ಚರ್ಯವೇನಲ್ಲ.

ಆ ನಂಬಿಕೆ ಫಲಿಸಿ ಆಯಿತು. ಹೊದರು ಹುಬ್ಬಿನ, ಪೊದೆ ಮೀಸೆಯ, ಆ ಸಿಂಹ ಲಲಾಟವನ್ನು ನಾವು ಇಲ್ಲಿ ಮತ್ತೆ ಕಾಣುವುದಿಲ್ಲ. ಆದರೆ ಆ ಮೂರ್ತಿಯನ್ನು. ಅದರಲ್ಲಿ ವಾಸ ಮಾಡಿದ ಚೇತನವನ್ನು, ಕಂಡಿದ್ದ ಜನರಿಗೆ ಅವುಗಳ ನೆನವಿನಲ್ಲೇ ತಕ್ಕಷ್ಟು ಸಮಾಧಾನ ದೊರೆಯುತ್ತದೆ. ತೀರಿ ಕೊಂಡವರ ಆತ್ಮಕ್ಕೆ ಶಾಂತಿಯನ್ನು ಬಯಸುವುದು ನಮ್ಮಲ್ಲಿ ಈಚೆಗೆ ಒಂದು ಆಚಾರ ಆಗುತ್ತಿದೆ. ಎಲ್ಲ ಸಂಗತಿಯಲ್ಲಿಯೂ ಆಂಗ್ಲರನ್ನು ಅನುಸರಿಸುವುದು ಶಿಷ್ಟ ಲಕ್ಷಣ ಎಂಬ ಭ್ರಮೆಯಲ್ಲಿ ನಾವು ಈ ವಿಷಯದಲ್ಲಿ ಸಹ ಆಂಗ್ಲ ಆಚಾರವನ್ನು ಅನುಸರಿಸುತ್ತಿದ್ದೇವೆ. ಈ ಪ್ರಾರ್ಥನೆ ಕ್ರೈಸ್ತ ಸಂಪ್ರದಾಯದಿಂದ ರೂಪುಗೊಂಡಿರತಕ್ಕದ್ದು. ಸನಾತನ ಧರ್ಮದ ಸಂಪ್ರದಾಯ ದೇಹವನ್ನು ಬಿಟ್ಟ ಜೀವಕ್ಕೆ ಒಡನೆಯೇ ಒಂದು ಗತಿಯಿದೆಯೆಂದು ಹೇಳುತ್ತದೆ. ಆದ ಕಾರಣ ಮೃತರ ಆತ್ಮಕ್ಕೆ ಸದ್ಗತಿಯನ್ನು ಬಯಸುತ್ತದೆ. ಗೋವಿಂದ ಪೈ ಅವರಂಥ ನಿಷ್ಕಲ್ಮಷ ಸತ್ಯವಂತ ಚೇತನರಿಗೆ ಸದ್ಗತಿ ಕಟ್ಟಿಟ್ಟ ಆಸ್ತಿ. "ನಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತಾ ಗಚ್ಛತಿ, ಕೌಂತೇಯ ಪ್ರತಿಜಾನೀಹಿ ನಮೇ ಭಕ್ತ: ಪ್ರಣಶ್ಯತಿ", ಎಂಬುವು ದೈವ ನೀಡಿದ ಅಭಯ ವಚನಗಳು.

ಇಂಥ ಸಫಲ ಜೀವನ ಒಂದು ಸಣ್ಣ ಕ್ಷೇತ್ರದಲ್ಲಿ ಬೆಳಗಿ ಮುಗಿದರೂ ವಿಶ್ವ ಜೀವನದ ಸಂಪತ್ತಿನ ವಿಭವಗಳಲ್ಲಿ ಒಂದಂಶ ಆಗುತ್ತದೆ.

ನಮ್ಮ ಹಿರಿಯ ಕವಿ ಗೋವಿಂದ ಪೈ ನಮ್ಮ ಸಾಹಿತ್ಯ ಲೋಕದ ಒಂದು ಧ್ರುವ ತಾರೆಯಾಗಿದ್ದಾರೆ; ಬರುವ ತಲೆಮಾರಿನ ಎಲ್ಲ ಲೇಖಕರಿಗೆ ಗುರಿ ತೋರುತ್ತ, ಬೆಳಕು ನೀಡುತ್ತ, ನಿಂತಿರುತ್ತಾರೆ.



# ನೆನಪು ಕಹಿಯಲ್ಲ

**ಶ್ರೀ ಬೈಕಾಡಿ ವೆಂಕಟಕೃಷ್ಣರಾಯರು**

1944ರ ಒಕ್ಟೋಬರ ತಿಂಗಳು. ದಿನ ಸರಿಯಾಗಿ ನೆನಪಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾ ಪ್ರಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಕಾರ್ಯದರ್ಶಿಗಳಾದ ಶ್ರೀ ಕ.ವೆಂ. ರಾಘವಾಚಾರ್ಯರು, ಇವರುಗಳ ಜತೆಯಲ್ಲಿ ಪರಿಷತ್ತಿನ ಸಿಬ್ಬಂದಿಯವನಾಗಿ ನಾನು ಈ ಜಿಲ್ಲೆಯ ಆದಿ ಅಂತ್ಯಗಳನ್ನು ಸುತ್ತಿದ್ದೆ. ಈ ತಿರುಗಾಟದಲ್ಲಿ ಒಂದು ದಿನ ಮಂಜೇಶ್ವರಕ್ಕೂ ಮತ್ತೊಂದು ದಿನ ಪುತ್ತೂರಿಗೂ ಹೋಗುವುದು ಎಂದು ಗೊತ್ತಾಗಿತ್ತು. ಪರಿಷತ್ತಿನಿಂದ ಆ ಬಗ್ಗೆ ಪುತ್ತೂರಿಗೆ ಶ್ರೀ ಶಿವರಾಮಕಾರಂತರಿಗೂ, ಮಂಜೇಶ್ವರಕ್ಕೆ ಶ್ರೀ ಗೋವಿಂದ ಪೈಗಳಿಗೂ ಪತ್ರಗಳು ಹೋಗಿದ್ದುವು. ಕಾರಂತರ ಪರಿಚಯವೇನೋ ನನಗೆ ಆ ವೇಳೆಗೆ ಸಾಕಷ್ಟು ಇತ್ತು. ಅವರ ಕೃತಿಗಳಲ್ಲಿ ಒಂದೆರಡನ್ನು ಓದಿಯೂ ಮುಗಿಸಿದ್ದೆ. ಸತ್ಯವನ್ನು ಮರೆಮಾಚದೆ ಹೇಳಬೇಕಾದರೆ ಆ ತನಕ ನನಗೆ ಶ್ರೀ ಗೋವಿಂದ ಪೈಗಳ ವಿಚಾರ ಏನೂ ಗೊತ್ತಿರಲಿಲ್ಲ. ನನ್ನ ಅಜ್ಞಾನ ಅಷ್ಟು ಆಳವಾಗಿತ್ತು. ನನ್ನ ಶಾಲಾ ದಿನಗಳಲ್ಲಿ ಇವರ ಕವನಗಳನ್ನು ಓದಿದ್ದಿರಬಹುದು. ಅದು ಪರೀಕ್ಷೆಯ ಸಲುವಾಗಿ. ಅನಂತರದ ಅಲ್ಪಕಾಲದ ಅಧ್ಯಾಪಕ ವೃತ್ತಿ-ಆಗಲೂ ನಾನು ಕನ್ನಡದ ಕವಿಗಳ ಗೋಜಿಗೆ ಹೋಗುವ ಸಾಹಸ ಮಾಡಿದವನಲ್ಲ. ಈ ಮಟ್ಟಿಗೆ ನಾನೇನಾದರೂ ಕಣ್ಣು ತೆರೆದಿದ್ದರೆ ಅದು ಸಾಹಿತ್ಯ ಪರಿಷತ್ತಿನಲ್ಲಿ; ಇರಲಿ.

ನಮ್ಮ ಜಿಲ್ಲೆಯ ಉತ್ತರ ಭಾಗದ ತಿರುಗಾಟ ಮುಗಿಸಿ ದಕ್ಷಿಣಾಭಿಮುಖವಾಗಿ ಹೊರಟಿದ್ದೆವು. ಒಂದು ರಾತ್ರಿ ಮಂಗಳೂರಲ್ಲಿ ಉಳಿದು ಮರುದಿನ ಬೆಳಿಗ್ಗೆ ಮಂಜೇಶ್ವರಕ್ಕೆ ಪಯಣಿಸಿದೆವು. ಗೊತ್ತಾದ ವೇಳೆಯಲ್ಲಿ ಮಂಜೇಶ್ವರದ ನಿಲ್ದಾಣದಲ್ಲಿ ಪೈಗಳ ಸವಾರಿ ನಮಗಾಗಿ ಕಾದಿತ್ತು. ಆ ಒಂದು ಗಳಿಗೆಯ ನೆನಪು ನನ್ನ ಮನಸ್ಸಿನಿಂದ ಇನ್ನೂ ಅಳಿಸಿ ಹೋಗದೆ ಉಳಿದಿದೆ. ನಾವು ರೈಲಿನಿಂದ ಇಳಿದಿದ್ದೇವೆ. ಇನ್ನೊಂದು ಗಾಡಿಯಿಂದ ನನ್ನ ಹೆಸರು ಕೂಗಿ ಕರೆದ ಓರ್ವ ಹೆಣ್ಣು ಮಗಳ ದನಿ ಕೇಳಿಸಿತು. ನನ್ನ ಗಮನ ಅತ್ತ ಸರಿಯಿತು. ಕರೆದವಳು ಕನ್ನಡದ ಓರ್ವ ಸಣ್ಣ ಕತೆಗಾರ್ತಿ. ಉಡುಪಿಯ ಕುಮಾರಿ ಕೃಷ್ಣವೇಣಿ. ನನ್ನಲ್ಲಿ ಕನ್ನಡದ ಅಭಿಮಾನ ತುಂಬಿದ ಸಹೋದರಿ ಈಕೆ. ಕನ್ನಡದ ಸಾಹಿತಿಗಳು ಎಂದರೆ ದೇವತೆಗಳು ಎಂದು ಭಾವಿಸಿದವರಲ್ಲಿ ಈಕೆಯೂ ಓರ್ವಳು–ನೀವು ಭಾಗ್ಯಶಾಲಿಗಳು ಪರಿಷತ್ತನ್ನು ಸೇರಿದಿರಿ. ಸಾಹಿತ್ಯದ ಅಶ್ವಿನಿ ದೇವತೆಗಳ ದರ್ಶನ ನಿಮಗೆ ದಿನವೂ ದೊರೆಯುತ್ತದೆ. ಗೋವಿಂದ ಪೈಗಳಲ್ಲಿಗೆ ಹೊರಟಿರಲ್ಲವೆ-ಅತ್ತ ಮಾಸ್ತಿ-ಇತ್ತ ಕವಿಪುಂಗವ ಪೈಗಳು-ಏನು ಭಾಗ್ಯ ನಿಮ್ಮದು–" ಎಂದು ಕೃಷ್ಣವೇಣಿ ಉದ್ಗಾರ ತೆಗೆಯುತ್ತಿರುವಾಗಲೇ ರೈಲು ನಿಧಾನವಾಗಿ ಹೆಜ್ಜೆ ಹಾಕಿತು. ಆದರೆ ನನ್ನ ಪಾಲಿಗೆ ಅದೇ ಅವಳ ಕೊನೆಯ ದರ್ಶನವಾಗುತ್ತದೆ ಎಂದು ನಾನು ಆಗ ಭ್ರಮಿಸಿರಲಿಲ್ಲ. ಅದೇ ಕೆಲವು ದಿನಗಳನಂತರ ಆಕೆ ತೀರಿಕೊಂಡಳು ಎಂದು ಪತ್ರಿಕೆಯಲ್ಲಿ ಓದಿದೆ.

"ಏನು ಮೊಳಹಳ್ಳಿ ಶಿವರಾಯರನ್ನು ಕಾಣಲು ಹೋದಿರಾ?" ಪೈಗಳು ನನ್ನನ್ನು ಪ್ರಶ್ನಿಸಿದರು. ಆ ಗಾಡಿಯಲ್ಲಿ ಮೊಳಹಳ್ಳಿ ಶಿವರಾಯರೂ ಇದ್ದರು.

"ಇಲ್ಲ. ಕೃಷ್ಣವೇಣಿ ಎಂಬ ಉಡುಪಿ ಕತೆಗಾರ್ತಿ-ಅವರನ್ನು ನೋಡಲು ಹೋಗಿದ್ದೆ"–ನಾನೆಂದೆ.

"ಹೌದು, ಹೌದು, ಗವರ್ನ್‌ಮೆಂಟ್ ಕಾಲೇಜಿನಲ್ಲಿ ನನ್ನ ತಮ್ಮ ಸುಬ್ರಾಯನ ಮಗಳೊಂದಿಗೆ ಓದುತ್ತಿದ್ದವರಂತೆ ಈಕೆ. ತಾನು ಬರೆದ ಒಂದೆರಡು ಕತೆ ನನ್ನೆಡೆಗೆ ಕಳಿಸಿದ್ದರು-ಆಕೆಯ ಕೈ ಓಟ ಚೆನ್ನಾಗಿದೆ. " ಹೀಗೆ ಪೈಗಳ ಮಾತಿನ ಲಹರಿ ಮುಂದುವರಿಯಿತು. ಹಾಗೆಯೇ ಹೆಜ್ಜೆಯೂ ಭರದಿಂದ ಸಾಗಿತು. ನಾವೂ ಪೈಗಳನ್ನು ಹಿಂಬಾಲಿಸಿದೆವು–ಅವರ ಮನೆ ಸೇರಿದೆವು. ಅಲ್ಲಿನ ಪರಿಚಯ ನನಗೆ ಹೊಸತಾಗಿದ್ದರೂ ನನ್ನ ಹಿರಿಯರು ರಾಘವಾಚಾರ್ಯರು, ಮಾಸ್ತಿಯವರಿಗೆ ಪೈಗಳ ಮನೆ, ಅಲ್ಲಿನ ಬಂಧುಗಳು ಎಲ್ಲ ತೀರ ಹಳೆಯ ಪರಿಚಯದವರಾಗಿದ್ದರು. ಇದು ಒಂದು ನೆನಪು ನನ್ನ ಮನಸ್ಸಿನಿಂದ ಅಳಿಸಿ ಹೋಗದೆ ಉಳಿದಿದೆ.

ಪೈಗಳ ಮನೆಯಲ್ಲಿ ಒಂದು ದಿನ ಕಳೆದಿದ್ದೆವು. ಅವರ ಆದರ, ಆತಿಥ್ಯ, ಉಪಚಾರ, ಇವೆಲ್ಲ ವರ್ಣಿಸಬೇಕಾದ್ದೇ ಇಲ್ಲ. ಕಾಫಿಯಾದರೆ ಕಾಫಿ, ಇಲ್ಲವಾದರೆ ಚಹಾ, ಅಥವಾ ಎರಡೂ ತೆಗೆದುಕೊಳ್ಳಬೇಕು. ತಿಂಡಿ, ಯಾ ಪದಾರ್ಥಗಳು, ಪಲ್ಯಗಳ ವಿವರ. ಅವುಗಳ ಪ್ರಾದೇಶಿಕ ಹೆಸರುಗಳು-ಎಡೆ ಎಡೆಯಲ್ಲಿ ನಾವೆಲ್ಲ ಮಾತು ಮಾತ್ರ ಆಲೈಸುವುದೇ ಅಥವಾ ತಿಂಡಿ ಖರ್ಚಾಗುತ್ತಿರುವುದೇ ಇದರ ತನಿಖೆ ಉಂಟು. ಪೈಗಳು ಕೊಡುವ ವಿವರಗಳಲ್ಲೆಲ್ಲ ಅದೇ ಸಂಶೋಧನಾ ಶಿಕ್ಷಿತ ಮನಸ್ಸು–ಅದೇ ಧಾಟಿ. ಈ ಕವಿಕುಲದ ರಸಿಕರ ಮಾತುಗಳನ್ನು ಆಲಿಸಿ ಆನಂದ ಪಡುವುದು ಮಾತ್ರ ನನ್ನ ಕೆಲಸವಾಗುತ್ತಿತ್ತು. ನಮ್ಮ ಪೈಗಳು ಸಿಗರೇಟು ಧ್ವಂಸಮಾಡುತ್ತಿದ್ದುದನ್ನು ಮಾತ್ರ ಬಹು ಕುತೂಹಲದಿಂದ ನಾನು ನೋಡುತ್ತಿದ್ದೆ. ಆ ಗಲ್ಲ ಮೀಸೆಗಳ ನಡುವೆ ಚಿಮಿಣಿಯಿಂದ ಬರುತ್ತಿದ್ದ ಹೊಗೆಯಂತೆ ಬರುವ ಸಿಗರೇಟ್ ಹೊಗೆ. ಅದೂ ಪೈಗಳ ಮಾತಿನ ಭರದಲ್ಲಿ ಅವರ ಪರವೆ ಇಲ್ಲದೇ ಬರುತ್ತಿದ್ದಾಗ ಆ ಮೀಸೆಗೇನಾದರೂ ಆಪತ್ತು ಸಂಭವಿಸೀತೆ ಎಂಬುದು ನನ್ನ ಭಯವಾಗಿತ್ತು.

ಕೂಡಿದ್ದು ಹಿರಿಯ ಸಾಹಿತಿಗಳು ಮೂವರು–ಎಂದ ಮೇಲೆ ಮಾತಿನ ವಿಷಯ ಕೇಳಬೇಕೆ? ಅದರಲ್ಲೂ ಮಾಸ್ತಿಯವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಆರಂಭದ ಉತ್ಸಾಹದ ದಿನಗಳು–ಕನ್ನಡದ ಎಲ್ಲ ಸುಖದು:ಖಗಳು-ಪರಿಷತ್ತಿನ ಆಡಳಿತ–ಬಿ.ಎಂ. ಶ್ರೀ ಕಂಠಯ್ಯನವರ ಆರೋಗ್ಯ–ಹೀಗೆ ಅನೇಕ ವಿಚಾರಗಳು ಮಾತಿನ ವಿಷಯಗಳಾಗಿದ್ದುವು. ಮಧ್ಯೆ ಪಂಜೆಯವರ ನೆನಪೂ ಬಂತು. ತನ್ನ ಕನ್ನಡದ ಗುರು

ಗಳಾದ ಪಂಜೆಯುವರ ವಿಷಯ ಬಂದಾಗ ಪೈಗಳ ಮುಖದಲ್ಲಿ ಸ್ವಾಭಾವಿಕವಾದ ಉತ್ಸಾಹ ಕಳೆ ಎದ್ದು ಕಾಣುತ್ತಿತ್ತು. ನಾವು ಮಂಗಳೂರಲ್ಲಿದ್ದಾಗ ಮಂಗಳೂರ ಒಂದು ಪತ್ರಿಕೆ ಮಾಸ್ತಿಯವರನ್ನು ನಮ್ಮ ಜಿಲ್ಲೆಗೆ ಸ್ವಾಗತಿಸುತ್ತಾ ಶ್ರೀನಿವಾಸರು "ಸಣ್ಣ ಕತೆಗಳ ತಾತ" ಎಂಬ ಬಿರುದನ್ನು ಅವರಿಗೆ ದಯಪಾಲಿಸಿತ್ತು. ಈ ಹಿನ್ನೆಲೆಯಿಂದಲೋ ಏನೊ, ಪೈಗಳು ಪಂಜೆಯವರ ನೆನಪು ಬಂದಾಗ ಕನ್ನಡದಲ್ಲಿ ಸಣ್ಣ ಕತೆಗಳನ್ನು ಮೊತ್ತ ಮೊದಲಿಗೆ ಬರೆದವರು ಪಂಜೆಯುವರು ಎಂದರು. ಈ ಸಂಭಾಷಣೆ ಮತ್ತೆ ಹೇಗೆ ಮುಂದುವರಿಯಿತು ಎಂಬುದು ಈಗ ನನಗೆ ನೆನಪಿಲ್ಲ.

ಸಂಜೆ ನಮ್ಮನ್ನು ಕಡಲತೀರಕ್ಕೆ ಕರೆದೊಯ್ದಿದ್ದರು. ನನಗೇನೋ ಗೋವಿಂದ ಪೈಗಳೇ ಒಂದು ಕಡಲು ಅನ್ನಿಸಿತ್ತು. ಪೈಗಳು ಮಾತನ್ನಾರಂಭಿಸಿದರು. ಎಂದರೆ ಕಡಲೂ ತನ್ನ ಘರ್ಜನೆಯನ್ನು ನಿಲ್ಲಿಸಬೇಕು-ಮಾತ್ರವಲ್ಲ ಆ ಮಾತಿನ ಅಲೆಗಳೋ-ಕಡಲಿನ ಅಲೆಗಳಂತೆ ಮೇಲಿಂದ ಮೇಲೆ ಬರುತ್ತಿರುತ್ತವೆ. ಹಾಗೆಂದು ಕೆಲವೊಮ್ಮೆ ಕಡಲಿನಂತೆ ಇವರೂ ಶಾಂತ-ಸೋಮಾರಿ ಹೆಬ್ಬಾವಿನಂತೆ ಬಿದ್ದಿರುತ್ತಾರೆ. ಇನ್ನು ಕಡಲಿನ ಗರ್ಭದೊಳಗೆ ನವರತ್ನಗಳಿವೆಯಂತೆ-ಇನ್ನು ಏನೇನೋ ಇವೆಯಂತೆ-ನಮ್ಮ ಈ ಕವಿಗಳ ಗರ್ಭದಲ್ಲಿ ಏನೆಲ್ಲ ಇಲ್ಲ–ಹಾಗೆ ಇಲ್ಲದಿರುತ್ತಿದ್ದರೆ ಇಷ್ಟೊಂದು ಕಾವ್ಯರತ್ನಗಳು ಹೊರಬರುತ್ತಿದ್ದುವೆ? ಈ ಸಂಶೋಧನೆ ಎಲ್ಲಿ ಸಾಧ್ಯವಿದ್ದಿತ್ತೇ? ಪೈಗಳ ಹೃದಯ ವೈಶಾಲ್ಯವು ಹಾಗೆಯೆ ಕಡಲಿನಂತೆ ವಿಶಾಲವಾಗಿದೆ.

ಮಂಜೇಶ್ವರದ ಗೋವಿಂದ ಪೈಗಳ ಮನೆಯಲ್ಲಿ ತಿರುಗಿದನಂತರ ಅವರ ಪುಸ್ತಕ ಭಂಡಾರ ನೋಡದೆ ಬರುವುದುಂಟೆ? ಅದು ಅವರ ತಪೋ ಮಂದಿರ. ಅವರ ಪುಸ್ತಕ ಭಂಡಾರದ ಕೋಣೆಗೆ ಪುಸ್ತಕ ತುಂಬಿದ ಅಲಮಾರುಗಳೇ ಒಳಗೋಡೆಗಳಾಗಿದ್ದುವು. ಆ ಪುಸ್ತಕಗಳೋ ಗ್ರೀಕ್. ಫ್ರೆಂಚ್. ಪಾಲಿ. ಸಂಸ್ಕೃತ. ಹೀಗೆ ಜಗತ್ತಿನ ನಾನಾ ಭಾಷೆಗಳ ಗ್ರಂಥಗಳು. ಎಡೆ ಎಡೆಯಲ್ಲಿ ಕಾಗದದ ಟಿಪ್ಪಣಿ-ಪೆನ್ಸಿಲು ಗುರುತು-ಅಂತೂ ಪೈಗಳು ಕೈಯಾಡಿಸದ ಗ್ರಂಥ ಅಲ್ಲಿ ಯಾವದೂ ಇದ್ದಂತಿರಲಿಲ್ಲ.

× × × × ×

ಇನ್ನೊಂದು ನೆನಪು-1949ರ ಮಾರ್ಚ್ ತಿಂಗಳ 22ನೆಯ ತಾರೀಕು–ಈ ದಿನವನ್ನು ಕನ್ನಡಿಗರ ಭಾಗ್ಯದ ದಿನ ಎಂದು ನನ್ನ ದಿನಚರಿಯಲ್ಲಿ ಗುರುತಿಸಿದ್ದೆ. ಅದಕ್ಕೆ ಕಾರಣವಾದ ಒಂದು ಸುದ್ದಿಯನ್ನು ನಾನು ಬೆಂಗಳೂರಿನಲ್ಲಿದ್ದ ಆ ದಿನದ ಪ್ರಾತ: ಕಾಲ ಅಲ್ಲಿನ "ತಾಯಿನಾಡು" ಪತ್ರಿಕಾ ಸಂಪಾದಕರು ಶ್ರೀ ಪಿ.ಬಿ. ಶ್ರೀನಿವಾಸರು ನನಗೆ ಟೆಲಿಫೋನ್ ಮೂಲಕ ತಿಳಿಸಿದ್ದರು. ಮದರಾಸ್ ಸರಕಾರ ಮಂಜೇಶ್ವರ ಗೋವಿಂದ ಪೈಗಳಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿ ಸನ್ಮಾನಿಸಲು ನಿರ್ಧರಿಸಿದೆ ಎಂಬುದೇ ಆ ಸುದ್ದಿ. ಯಾವ ಸನ್ಮಾನ ಪ್ರಶಸ್ತಿಗಳನ್ನೂ ಸ್ವೀಕರಿಸಲು ಒಪ್ಪದ ಶ್ರೀ ಗೋವಿಂದ ಪೈಗಳು ಮದರಾಸ್ ಸರಕಾರವನ್ನೂ ನಿರಾಸೆಗೊಳಿಸಿದ್ದರಂತೆ. ಕೊನೆಗೊಮ್ಮೆ ಈ ಕವಿಹೃದಯ ಆತ್ಮೀಯ ಗೆಳೆಯನೊಬ್ಬನ ವಿಶ್ವಾಸಕ್ಕೆ ಒಲಿಯಿತು. "ಕರ್ನಾಟಕ ಕೇಸರಿ" ಎಂಬ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಮಂಜೇಶ್ವರ ಅನಂತ ರಾಯರು ಎಂಬವರು ಗೋವಿಂದ ಪೈಗಳ ಬಾಲ್ಯದ ಗೆಳೆಯರಂತೆ. ಪೈಗಳು ಬರೆದ "ಕವಿಲಕ್ಷ್ಮೀಶನ ಕಾಲ ನಿರ್ಣಯ"ದ ಲೇಖನ ಮತ್ತು ಇನ್ನಿತರ ಲೇಖನಗಳೂ ಅವರ ಪತ್ರಿಕೆಯಲ್ಲಿಯೇ ಪ್ರಕಟವಾಗಿದ್ದುವು. ಅವರು ಬಹುಶ: ಪುತ್ತೂರಿನಲ್ಲಿ ನೆಲೆಸಿದ್ದರು. ಮಂಜೇಶ್ವರ ಅನಂತ ರಾಯರು ತೀವ್ರ ಅಸ್ವಸ್ಥರಾಗಿದ್ದು ಮೃತ್ಯುಮುಖವನ್ನು ನೋಡುತ್ತಿದ್ದಾಗ ತನ್ನ ಬಾಲ್ಯದ ಗೆಳೆಯ ಶ್ರೀ ಗೋವಿಂದನಿಗೆ ರಾಷ್ಟ್ರಕವಿ ಬಿರುದು ದೊರಕಿತು ಎಂಬ ವಾರ್ತೆ ಕೇಳಿದಲ್ಲದೆ ತನ್ನ ಆತ್ಮ ಶಾಂತಿಯಲ್ಲಿ ನೆಲಸದು ಎಂದು ಹೇಳಿದಾಗ, ಅವರ ಒತ್ತಾಯದ ಧರ್ಮಸಂಕಟಕ್ಕೆ ಬಲಿಬಿದ್ದ ಪೈಗಳು ತನ್ನ ಬಾಲ್ಯದ ಗೆಳೆಯನ ಆತ್ಮ ತೃಪ್ತಿಗಾಗಿ ಮದರಾಸ್ ಸರಕಾರದ ಪ್ರಶಸ್ತಿಯನ್ನು ಸ್ವೀಕರಿಸಿದ್ದರು. ಅದರ ಜತೆಯಲ್ಲಿ ದೊರಕಿದ ನಗದು ಹಣವನ್ನೆಲ್ಲ ಸಾರ್ವಜನಿಕ ಕಾರ್ಯಗಳಿಗಾಗಿಯೇ ವೆಚ್ಚಮಾಡಿದ್ದರು. ಈ ವಾರ್ತೆ ನಾನು ಪೈಗಳ ತೀರ ಹತ್ತಿರದ ಬಂಧುಗಳಿಂದಲೇ ಕೇಳಿ ಖಚಿತಪಡಿಸಿಕೊಂಡಿದ್ದೇನೆ.

ಶ್ರೀ ಪೈಗಳನ್ನು ಒಪ್ಪಿಸಿದವರು ದಿವಂಗತ ಶ್ರೀ ನಾರಾಯಣ ಕಿಲ್ಲೆಯವರು ಎಂದು ಇತ್ತೀಚೆ ಬೆಂಗಳೂರ "ಪ್ರಜಾವಾಣಿ"ಯಲ್ಲಿ ಪ್ರಕಟವಾದ ಕವಿಗಳ ಕುರಿತು ಮುಂಬಾಯಿಯ ಸ್ನೇಹಿತರೊಬ್ಬರು ಬರೆದ ಲೇಖನದಲ್ಲಿ ಓದಿದ್ದೆ. ಆದರೆ ಸತ್ಯಾಂಶ ಹೀಗಿಲ್ಲ ಎಂದು ತಿಳಿಸಲು ಈ ವಿವರ ಇಲ್ಲಿ ಕೊಟ್ಟಿದ್ದೇನೆ.

ಕವಿಗಳಿಗೆ ಈ ಸನ್ಮಾನ ದೊರೆತ ಈ ಸಂದರ್ಭದಲ್ಲಿ ನಾನು "ತಾಯಿನಾಡು"ನಲ್ಲಿ ಒಂದು ಲೇಖನ ಬರೆದಿದ್ದೆ. ಅವರಿಗೆ ಅದು ಒಪ್ಪಿಗೆ ಆಗಿತ್ತು. ಅದರ ಜೊತೆಯಲ್ಲಿಯೇ ಪೈಗಳ ಒಂದು ಪಡಿಯಚ್ಚು ಅಚ್ಚಾಗಿತ್ತು. ಅದನ್ನು ನಾನೇ ಒದಗಿಸಿದ್ದೆ. ಆ ಚಿತ್ರ ನೋಡಬೇಕು. ಥೇಟ್ ದೇಶಭಕ್ತ ಗೋವಿಂದ ಪೈಗಳೇ. ದುಂಡು ಮುಖದಲ್ಲಿ ಎದ್ದು ಕಾಣುವ ಆ ಗಲ್ಲಮೀಸೆ, ಕೆದರಿದ ಕೂದಲನ್ನು ಅಡಗಿಸಿದ ಆ ಉದ್ದನೆಯ ಗಾಂಧಿಟೋಪಿ–ನೋಡಿದರೆ ಥಕ್ಕನೆ ಗೋವಿಂದ ವಲ್ಲಭಪಂತರ ನೆನಪನ್ನು ತರುವ ಈ ಪೈಗಳ ಈ ಚಿತ್ರವನ್ನು ಬರೆದವರು ಕನ್ನಡದ ಇನ್ನೋರ್ವ ತರುಣ ಕವಿ ಹಾಗೂ ಸಾಹಿತಿ ಶ್ರೀ ಎಂ.ವಿ.ಸೀತಾರಾಮಯ್ಯನವರು(ರಾಘವ).

ಇದಿಷ್ಟು ಮಾತುಗಳು ರಾಷ್ಟ್ರಕವಿ ಪ್ರಶಸ್ತಿಯ ಕುರಿತಾದದ್ದಾಯಿತು. ಸಮ್ಮೇಳನಾಧ್ಯಕ್ಷ ಪದವಿಯನ್ನು ಎರಡೆರಡು ಬಾರಿ ಶ್ರೀ ಪೈಗಳು ನಿರಾಕರಿಸಿದ್ದರು. ಈ ಮಾತು ನಾನು ಪರಿಷತ್ತಿನಿಂದ ತಿಳಿದಿದ್ದೆ. 1942ರಲ್ಲಿ ಆಗ ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದ ಶ್ರೀ ಕ.ವೆಂ. ರಾಘವಾಚಾರ್ಯರು ಪೈಗಳನ್ನು ಸಮ್ಮೇಳನಾಧ್ಯಕ್ಷ ಪದವಿ ಸ್ವೀಕರಿಸುವಂತೆ ಸ್ವತ: ಒಪ್ಪಿಸಲು ಮಂಜೇಶ್ವರದ ತನಕ ಪ್ರಯಾಣಿಸಿದರಂತೆ. ಆದರೆ ಅದು ಸಾಧ್ಯವಾಗಲಿಲ್ಲ. "ನಮ್ಮ ರಾಷ್ಟ್ರಪಿತ ಗಾಂಧೀಜಿ ಮತ್ತಿನ್ನಿತರ ರಾಷ್ಟ್ರನಾಯಕರು ಸೆರೆಮನೆಯಲ್ಲಿರುವಾಗ, ನಮ್ಮ ಭಾರತ ಮಾತೆ ದಾಸ್ಯ ಶೃಂಖಲೆಯಿಂದ ಬಿಗಿಯಲ್ಪಟ್ಟಿರುವಾಗ ನಾನು ಸಮ್ಮೇಳನಾಧ್ಯಕ್ಷ ಪದವಿಯಲ್ಲಿ ಕುಳಿತು ಹಾರಹಾಕಿಸಿಕೊಂಡು ಮೆರೆಯಲೆ?" ಎಂದು ಹೇಳಿ ಅಂದಿಗೆ ರಾಘವಾಚಾರ್ಯರ ಬಾಯಿಗೆ ಬೀಗ ಹಾಕಿ ಕಳಿಸಿದ್ದರು.

1947ರಲ್ಲಿ ದೇಶ ಸ್ವತಂತ್ರವಾಯಿತು. 1949ರಲ್ಲಿ ಪೈಗಳು ಹೇಗೂ ರಾಷ್ಟ್ರಪ್ರಶಸ್ತಿಯನ್ನು ಸ್ವೀಕರಿಸಿದರು. ಮತ್ತೆ ಪರಿಷತ್ತಿನ ಗಣ್ಯರಿಗೆ ಹೊಸ ಆಸೆ ಮೂಡಿತು. 1950ರಲ್ಲಿ ಬೊಂಬಾಯಿಯಲ್ಲಿ ಜರಗಲಿದ್ದ 34ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ ಪೈಗಳ ಹೆಸ

ರನ್ನು ಸೂಚಿಸುವುದು ಎಂದು ನಿರ್ಧಾರವಾಯಿತು. ಅಂದಿನ ಪರಿಷತ್ತಿನ ಅಧ್ಯಕ್ಷರಾಗಿದ್ದ ದಿ॥ಎಂ.ಆರ್.ಶ್ರೀನಿವಾಸ ಮೂರ್ತಿಗಳ ಆಸೆಯಾದರೂ ಈ ಕಾರ್ಯ ತನ್ನ ಕಾಲದಲ್ಲಿಯೇ ಆಗಬೇಕೆಂಬುದಾಗಿತ್ತು. (ಅನಂತರ 1953ರಲ್ಲಿ ಅವರೂ ತೀರಿಕೊಂಡರು.)ಶ್ರೀ ಎಂ.ಆರ್.ಶ್ರೀನಿವಾಸ ಮೂರ್ತಿಗಳು ಕಾರ್ಯ ಸಾಧಕರು. ಗೋವಿಂದ ಪೈಗಳಿಂದ ನಕಾರದ ಉತ್ತರ ಪಡೆಯಬಾರದು ಎಂಬ ದೀಕ್ಷೆ ತೊಟ್ಟು ಶ್ರೀ ಕಾರಂತರ ಸಹಾಯದಿಂದ ಧರ್ಮಸ್ಥಳದ ಆಗಿನ ಹೆಗ್ಗಡೆಯವರಾಗಿದ್ದ ದಿವಂಗತ ಮಂಜಯ್ಯ ಹೆಗ್ಗಡೆಯವರ ಮೂಲಕ ಪೈಗಳಿಗೆ ಒತ್ತಾಯಹಾಕಿಸಿ ಹೇಗೂ ಪೈಗಳನ್ನು ಒಪ್ಪಿಸಿಯೇ ಬಿಟ್ಟರು. ಪೈಗಳ ಮಾತಿನಲ್ಲಿ ಹೇಳಬೇಕಾದರೆ ಅವರ ಕಟ್ಟುನಿಟ್ಟಾದ ಕೆಲವೊಂದು ಶಿಸ್ತುಗಳನ್ನೂ ವ್ರತಗಳನ್ನೂ ಸ್ನೇಹಿತರಿಗಾಗಿ ಪೈಗಳು ಜಗುಳಿಸಬೇಕಾಯ್ತು. ಅದೂ ಒಂದು ನಾಡಿನ ಭಾಗ್ಯ. ದಿವಂಗತ ಮಂಜಯ್ಯ ಹೆಗ್ಗಡೆಯವರಲ್ಲಿ ಪೈಗಳಿಗೆ ಅಪಾರ ಭಕ್ತಿ-ಗೌರವ. ಅಂತೆಯೇ ಅವರ ಮಾತನ್ನು ಶ್ರೀ ಪೈಗಳು ಮೀರಿರದಾದರು.

1950ರಲ್ಲಿ ಬೊಂಬಾಯಿಯಲ್ಲಿ ಜರಗಿದ 34ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ ಪೈಗಳು ಅಧ್ಯಕ್ಷರಾಗಿ ಒದಗಿಬಂದದ್ದು ಕನ್ನಡ ಸಾರಸ್ವತ ಲೋಕಕ್ಕೆ ದೊರಕಿದ ಎರಡನೆಯ ಜಯ. ಮಂಜೇಶ್ವರದ ಕವಿ ಶ್ರೇಷ್ಠರು ಕನ್ನಡ ಸಾಹಿತ್ಯ ಪ್ರಪಂಚದ ಜಗದ್ಗುರುಗಳುಎಂಬ ವಿಷಯದಲ್ಲಿ ಇಡಿಯ ಕನ್ನಡ ನಾಡಿನ ಯಾವ ಹಿರಿಯ ಕಿರಿಯ ಸಾಹಿತಿಗಳಲ್ಲೂ ಭಿನ್ನಾಭಿಪ್ರಾಯವಿರಲಿಲ್ಲ. ಈಗಲೂ ಇಲ್ಲ. ಆದ್ದರಿಂದಲೇ ಈ ಸಮ್ಮೇಳನ ದೇಶದ ದೊಡ್ಡ ನಗರದಲ್ಲಿ ಪೈಗಳ ಯಶಸ್ಸಿಗೆ ತಕ್ಕಂತೆ ಬಹು ವಿಜ್ರಂಭಣೆಯಿಂದ ಜರುಗಿತ್ತು. ಬಹುತೇಕ ಹೆಚ್ಚು ಮಂದಿ ಸಾಹಿತಿಗಳೂ ಪ್ರತಿನಿಧಿಸಿದ್ದು ಈ ಸಮ್ಮೇಳನದಲ್ಲಿಯೇ. ಪರಿಷತ್ತು–ಸಮ್ಮೇಳನಗಳಿಂದ ದೂರವಿರುತ್ತಿದ್ದ ಶ್ರೀ ಕಾರಂತರೂ ತನ್ನ ಆತ್ಮೀಯ ಹಿರಿಯರು ಶ್ರೀ ಪೈಗಳನ್ನು ಈ ಗದ್ದುಗೆಯಲ್ಲಿ ನೋಡಿ ಆನಂದಪಡಲು ಬೊಂಬಾಯಿಗೆ ಧಾವಿಸಿ ಬಂದಿದ್ದರು. ಪೈಗಳು ಪರಿಷತ್ತಿನ ಅಧ್ಯಕ್ಷರಿಗೆ ಪ್ರತ್ಯೇಕ ಪತ್ರ ಬರೆದು ನನ್ನನ್ನು ಕರಸಿಕೊಂಡಿದ್ದರು. ಸನಿಹದಲ್ಲಿ ಕೂರಿಸಿಕೊಂಡೂ ಇದ್ದರು. ಈ ಆತ್ಮೀಯ ವರ್ತನೆಗಳನ್ನೆಲ್ಲ ನಾನು ಹೇಗೆ ಮರೆಯಲಿ? ಇನ್ನು ಎಷ್ಟು ಸಂಗತಿಗಳು ಇಂಥವು ನೆನಪಿಗೆ ಬರುತ್ತವೆ–ಆದರೆ ಅವು ನನ್ನ ಬಾಳಿನ ಸುಖಸ್ವಪ್ನಗಳು ಮಾತ್ರ.

× × × × ×

1951ರಲ್ಲಿ ಪೈಗಳನ್ನು ಸನ್ಮಾನಿಸಲು ಬೆಂಗಳೂರಲ್ಲಿ ಒಂದು ಕವಿ ಸಮ್ಮೇಳನದ ಏರ್ಪಾಡಿತ್ತು. ಬೆಂಗಳೂರಿನ ಕನ್ನಡ ಸಾಹಿತಿಗಳ ಸಂಘದವರು ಈ ಸಮ್ಮೇಳನವನ್ನು ಜರುಗಿಸಿದವರು. ಶ್ರೀ ತೀ.ನಂ.ಶ್ರೀಕಂಠಯ್ಯನವರು ಆ ಸಂಘದ ಅಧ್ಯಕ್ಷರು. ಶ್ರೀ ಮಧುಗಿರಿ ವಾಸುದೇವ ಮೂರ್ತಿಗಳು ಅದರ ಕಾರ್ಯದರ್ಶಿಗಳಾಗಿದ್ದರು. ಈ ಸಮ್ಮೇಳನದ ಸ್ವಾಗತದ ಏರ್ಪಾಟಿನಲ್ಲಿ ನಾನೂ ಸೇರಿದ್ದೆ. ಈ ಸಂದರ್ಭದಲ್ಲೇ ಶ್ರೀಮಾನ್ ಗೋವಿಂದ ಪೈಗಳು ಬೆಂಗಳೂರು ಮೈಸೂರುಗಳ ಹಲವೆಡೆ ಸುತ್ತಿದರು. ಅನೇಕ ಸನ್ಮಾನ ಕಾರ್ಯಗಳು ನಡೆದುವು. ಇದೊಂದು ಸಂದರ್ಭ ಮಾತ್ರ ಪೈಗಳು ಸ್ವಲ್ಪ ಉದಾರಿಗಳಾಗಿ ನಡಕೊಂಡದ್ದು. ತನ್ನ ಶಿಸ್ತು-ಸಂಪ್ರದಾಯಗಳ ಎಲ್ಲ ಕಟ್ಟುಗಳನ್ನು ಸಡಲಿಸಿದ್ದು. ಹೇಗೂ ಎಲ್ಲ ಕಡೆಯ ಸನ್ಮಾನಗಳನ್ನು ಸ್ವೀಕರಿಸಿದರು. ತನ್ನ ಚಿತ್ರ ಶಾಲೆಗೆ ಸಾಮಾನ್ಯವಾಗಿ ಯಾರಿಗೂ ಪ್ರವೇಶ ನೀಡದ ಕಲಾವಿದ ಶ್ರೀ ವೆಂಕಟಪ್ಪನವರೂ ಶ್ರೀ ಪೈಗಳನ್ನು ಗೌರವದಿಂದ ಬರಮಾಡಿಕೊಂಡು ತನ್ನ ಕೃತಿಗಳನ್ನು ತೋರಿಸಿದರು. ಈ ಒಂದು ಅವಕಾಶವಲ್ಲದಿದ್ದರೆ ನನಗೆ ವೆಂಕಟಪ್ಪನವರ ಚಿತ್ರಗಳನ್ನು ನೋಡುವ ಅವಕಾಶವೇ ದೊರಕುತ್ತಿರಲಿಲ್ಲ. ಪೈಗಳ ಜತೆಯಲ್ಲೆಲ್ಲ ಅವರ ನೆರಳಂತೆ ನಾನು ಹಿಂಬಾಲಿಸುತ್ತಿದ್ದ ಇದೇ ಸಂದರ್ಭ ಬೆಂಗಳೂರ ನಗರಸಭೆಯೂ ತನ್ನ ಇತಿಹಾಸದಲ್ಲೇ ಪ್ರಥಮ ಬಾರಿಗೆ ಓರ್ವ ಕನ್ನಡ ಕವಿಗೆ ಸನ್ಮಾನ ಪತ್ರವನ್ನು ಅರ್ಪಿಸಿ ಗೌರವಿಸಿದ್ದು ; ಮಾಸ್ತಿ, ಗುಂಡಪ್ಪ, ನಿಟ್ಟೂರರು, ಅ.ನ.ಕೃ., ಸಿ.ಕೆ.ವಿ, ವೀ.ಸೀ., ರಾಜರತ್ನಂ ಹೀಗೆ ಎಲ್ಲ ಹಿರಿಯ ಸಾಹಿತಿಗಳೂ ಮಂಗಳೂರು ಬೆಂಗಳೂರು ಎಂಬ ಭೇದವಿಲ್ಲದೆ ಸಾಹಿತ್ಯ ಸಾಮ್ರಾಜ್ಯದ ಈ ಹಿರಿಯನೋರ್ವನನ್ನು ಸ್ವಾಗತಿಸಿ ಕವಿಸಮ್ಮೇಳನದಲ್ಲಿ ಗೌರವಿಸಿದ ಈ ದೃಶ್ಯ ದೇವತೆಗಳ ಕಣ್ಣನ್ನು ತೆರೆಯಿಸಬೇಕು–ನನ್ನ ನೆನಪುಗಳಲ್ಲಿ ಇದೂ ಒಂದು ಅಮೂಲ್ಯವಾದದ್ದು.

ಹಬ್ಬ ತೀರಿಸಿ ಊರಿಗೆ ಹಿಂತಿರುಗುವಾಗ "ಈ ಮೈಸೂರವರ ಜೊತೆಯಲ್ಲಿ ನೀವು ಚೆನ್ನಾಗಿ ಎರಕಹೊಯ್ದವರಂತೆ ಇದ್ದೀರಿ" ಎಂದು ನನ್ನ ಕುರಿತು ಪೈಗಳು ಆಡಿದ ಮಾತುಗಳು ನನ್ನ ಕಿವಿಗಳಲ್ಲಿ ಇನ್ನೂ ದನಿಗೂಡಿಸುತ್ತಿವೆ.

× × × × ×

ಆ ಮೇಲೆ ಪೈಗಳ ದರ್ಶನದ ಲಾಭ ನನಗೆ ದೊರಕಿದ್ದು ಬಹುಶ: 1955ರಲ್ಲಿ ಅಥವಾ ಸ್ವಲ್ಪ ಹಿಂದುಮುಂದಿನಲ್ಲಿ. ಪೈಗಳು ಅವರ ಬಂಧುಗಳೊಡಗೂಡಿ (ಬಹುಶ: ತಮ್ಮ ಸುಬ್ರಾಯಪೈಗಳ ಮಕ್ಕಳು ಅಳಿಯಂದಿರು ಕೂಡಿ) ತಿರುಪತಿ ಯಾತ್ರೆ ಮುಗಿಸಿ ಊರಿಗೆ ಹಿಂತಿರುಗುವವರು ಒಂದು ದಿನ ಮೈಸೂರಲ್ಲಿ ಉಳಿದಿದ್ದರು. ನನಗೆ ಮೈಸೂರಲ್ಲಿ ದಾಸಪ್ರಕಾಶದಲ್ಲಿ ಎಂದು ನೆನಪು–ಅಲ್ಲಿ ಕಾಣಸಿಕ್ಕಿದರು. ಈ ಪರಸ್ಪರ ಭೇಟಿಯೆಂಬುದು ಕಳೆದು ಹೋದ ಒಂದು ಸಂಪತ್ತು ಮತ್ತೆ ದೊರಕಿದಂತೆ ಈರ್ವರಿಗೂ ಬಹಳ ಆನಂದವನ್ನುಂಟುಮಾಡಿತ್ತು. ಏನೇನು ಮಾತು ನಡೆಯಿತು ಈಗ ನೆನಪಿಲ್ಲ. ಆದರೆ ತಿರುಪತಿಯಲ್ಲಿ ಸಿಗರೇಟು ತ್ಯಾಗ ಮಾಡಿದೆ ಎಂದು ಅವರು ಹೇಳಿದ್ದು ಮಾತ್ರ ನನಗೆ ನೆನಪಿದೆ. ಇದರಿಂದ ನಾಲ್ಕು ವರ್ಷ ಕಾಲ ಈ ಹಿರಿಯರು ಕನ್ನಡಕ್ಕಾಗಿ ಹೆಚ್ಚು ಉಳಿಯುವಂತಾಯಿತು. ಎಂದು ಮನಸ್ಸಿನಲ್ಲೇ ಸಂತೋಷಪಟ್ಟುಕೊಂಡೆ.

ಆ ಮೇಲೆ ನಾನು ಪೈಗಳನ್ನು ಸ್ವತ: ಕಾಣುವುದಾಗಲಿಲ್ಲ. ಇದಕ್ಕಾಗಿ ಬಹಳ ಪರಿತಪಿಸಿಕೊಂಡಿದ್ದೇನೆ. ಈಗ ಪ್ರಾಯಶ್ಚಿತ್ತಮಾಡಿಕೊಳ್ಳುವುದು ಮಾತ್ರ ಉಳಿದಿದೆ–ಆದ್ದರಿಂದಲೇ ಈ ಬರೆಹ. ಈ ಕಣ್ಣೀರಿನಿಂದ ಆ ಕಾಣದ ಪಾದಯುಗ್ಮಗಳನ್ನು ತೊಳೆಯುತ್ತಿದ್ದೇನೆ.

ಆದರೆ ಪತ್ರವ್ಯವಹಾರಗಳೇನೋ ನಡೆಯುತ್ತಿತ್ತು. ಬರೆದ ಪತ್ರಗಳಿಗೆ ಮರು ಟಪ್ಪಾಲಿಗೇ ಉತ್ತರಿಸುವ ಒಬ್ಬನೇ ಸಾಹಿತಿ ಅಂದರೆ ನಮ್ಮ ಗೋವಿಂದ ಪೈಗಳು. ಇಂತಿಂತಹರಿಂದಲೇ ಪತ್ರ ಬರಬೇಕೆಂಬ ಶ್ರೀಮದ್ಗಾಂಭೀರ್ಯವೇನೂ ಇಲ್ಲ. ಚಿಕ್ಕ ಮಗು ಬರೆದರೂ ಅದಕ್ಕೂ ಕ್ರಮವಾದ ಉತ್ತರ ಉಂಟು. ಅದೇ ನೇರಳೆ ಬಣ್ಣದ ಶಾಯಿ. ಬಹುಮಟ್ಟಿಗೆ ಪೋಸ್ಟ್ ಕಾರ್ಡ್ ಬಳಸುತ್ತಿದ್ದರು. ಒಂದೆರಡು ಬಾರಿ

ನೀಲಿ ಶಾಯಿ ಉಪಯೋಗಮಾಡಿದ್ದೂ ಉಂಟು. ಇತ್ತೀಚೆಯೆಲ್ಲ ನೇರಳೆ ಶಾಯಿಯೇ ಹೆಚ್ಚು. ಆದರೆ ಹತ್ತಿಪ್ಪತ್ತು ವರ್ಷಗಳ ಹಿಂದೆ ಅವರ ಹಸುರು ಶಾಯಿಯ ಬರಹ ನೋಡಿದ್ದು ನೆನಪು. ಮಿಕ್ಕ ವಿಚಾರಗಳಲ್ಲಿದ್ದಂತೆ ಈ ಶಾಯಿಯ ಉಪಯೋಗದಲ್ಲೂ ಒಂದು ಕ್ರಮ. ಒಂದು ಶಿಸ್ತನ್ನು ಪೈಗಳು ಪಾಲಿಸುತ್ತಿದ್ದರು. ಆದ್ದರಿಂದಲೇ ಇದೂ ನಮಗಲ್ಲಿ ಮಹತ್ವಾಗಿ ಕಂಡಿದೆ.

ಅವರ ಪತ್ರಗಳಲ್ಲಿ ಒಂದೆರಡನ್ನು ಮಾತ್ರ ಆರಿಸಿ ಇಲ್ಲಿ ಉಲ್ಲೇಖಿಸುತ್ತೇನೆ. ಒಂದು ಪತ್ರದಲ್ಲಿ ನನ್ನನ್ನೇ ಮಂಜೇಶ್ವರಕ್ಕೆ ಆಹ್ವಾನಿಸಿದ್ದರು. ಅದು 1959ರಲ್ಲಿ. 1953ರಿಂದ ನಾನು ಊರಲ್ಲಿಯೇ ಅಂದರೆ ಕನ್ನಡ ಜಿಲ್ಲೆಯಲ್ಲಿಯೇ ಇದ್ದರೂ ಒಮ್ಮೆಯೂ ಅತ್ತ ಹೋಗಲಿಲ್ಲ. ಅದು ನನ್ನ ದೊಡ್ಡ ಅಪರಾಧ–ತಾ॥ 27–3–59ರಂದು ನನಗೆ ಬಂದ ಪತ್ರದಲ್ಲಿ ಹೀಗಿತ್ತು "………ಬನ್ನಿ, ತಮಗೆ ಅವಕಾಶ ದೊರೆತಾಗ ದಯವಿಟ್ಟು ಇತ್ತ ಕಡೆಗೆ ಒಮ್ಮೆ ಬೇಗನೆ ಬಂದುಹೋಗಿ……ಬಹಳ ಉಪಕಾರ. ಅನೇಕ ಕಾಲವಾಯಿತು ನಾವು ಒಬ್ಬರನ್ನೊಬ್ಬರು ಕಂಡು ಮಾತನಾಡದೆ………"

1958ರ ಹೊತ್ತಿಗೆ ಅವರ ಆರೋಗ್ಯ ಸಾಕಷ್ಟು ಕೆಟ್ಟಿತ್ತು. ನಾನು ನಮ್ಮ ಊರಿನ ಕರ್ನಾಟಕ ಸಂಘಕ್ಕೆ ಅವರನ್ನು ಆಮಂತ್ರಿಸಿದ್ದೆ. ಬರುವುದಾಗಿ ಒಪ್ಪಿದ್ದರು. ಇಂಥ ದಿನ, ಇಂಥದೇ ಬಸ್ಸು. ಎಲ್ಲ ಗೊತ್ತಾಗಿತ್ತು. ತಾನು ಭಾಷಣ ಮಾಡುವುದಿಲ್ಲ. ಒಂದು ಲೇಖನ ಓದುತ್ತೇನೆ. ರಾತ್ರಿ ಬೇಗನೆ ಮಲಗಬೇಕು. ಎಂದೆಲ್ಲ ಬರೆದಿದ್ದರು. ಆದರೆ ಅವರ ಅನಾರೋಗ್ಯ ಹೆಚ್ಚಾಯಿತು. ಬರಲಾಗುವುದಿಲ್ಲ ಎಂದು ಬರೆದರು. ಆದರೂ ನನ್ನನ್ನು ನಿರಾಸೆಗೊಳಿಸಲಿಲ್ಲ. ಅವರ ತಾ॥ 24–1–58ರ ಪತ್ರ ಹೀಗಿದೆ. "…………ತಾವು ಅತ್ಯಂತ ಪ್ರೀತಿಪುರಸ್ಸರವಾಗಿ ನೀಡಿರುವ ಆಮಂತ್ರಣವನ್ನು ತಲೆಬಾಗಿ ಕೂಡಲೇ ಕೈಗೊಳ್ಳಲಾರದ ಬಗ್ಗೆ ನನ್ನನ್ನು ದಯಮಾಡಿ ಕ್ಷಮಿಸಬೇಕಾಗಿ ಪ್ರಾರ್ಥಿಸುತ್ತೇನೆ……… ಶ್ರೀ ದೇವರು ನನ್ನನ್ನು ಅಸೌಖ್ಯದಿಂದ ಮೇಲೆತ್ತಿ ಉಳಗೊಡಿಸಿದರೆ ಕೊಂಚ ಕ್ಷೇಮ ತೋರುತ್ತಲೇ ನಾನು ಬಂದೇ ಬರುವೆ……… ಮಾನಪತ್ರ ಎಂಬ ಹಳೆಯ ವಿಚಾರವನ್ನು ತೀರ ವಿಸರ್ಜಿಸಿ ಆ ಬಗ್ಗೆ ನನಗೆ ತಾವು ದೃಢವಾದ ನಂಬುಗೆಯನ್ನು ಮುಂದಾಗಿ ಇತ್ತಲ್ಲದೆ ತಮ್ಮ ಕಡೆಗೆ ಹೊರಡುವರೆ ನನ್ನ ಮನಸ್ಸು ಸರ್ವಥಾ ಒಪ್ಪದು."

ದಿನಾಂಕ 24–3–59 ಅವರ ಎಪ್ಪತ್ತೇಳನೆಯ ಹುಟ್ಟಿದ ದಿನ. ಆ ದಿನದಂದು ನನಗೊಂದು ಪತ್ರ ಅವರಿಂದ ಬಂದಿತ್ತು. ಆ ವೇಳೆಗಾಗಲೇ ಅವರನ್ನು ಜೀವನದ ವಿರಕ್ತಿ ಆವರಿಸಿತ್ತು ಎಂಬುದು ಆ ಪತ್ರದಿಂದ ತಿಳಿಯುತ್ತದೆ. ಇದಕ್ಕೇ ಬಹುಮಟ್ಟಿಗೆ ಅವರ ಅನಾರೋಗ್ಯವೇ ಕಾರಣವಾಗಿರಬೇಕು ………"ನನ್ನ ಆರೋಗ್ಯವೀಗ ಗಾಳಿಗೊಡ್ಡಿದ ಸೊಡರಿನಂತೆ ಅತ್ತಿತ್ತ ಅಲುಗಾಡುತ್ತಿದೆ. ಇವತ್ತು ನಾನು ಹುಟ್ಟಿದ ದಿನ. ಇಂದು 77ನೆಯ ವರ್ಷವಾರಂಭಿಸುತ್ತದೆ. ಇನ್ನೆಷ್ಟು ಕಾಲ ಬದುಕಬೇಕು ಸ್ವಾಮಿ? ಶ್ರೀ ದೇವರು ತಮಗೂ ತಮ್ಮೆಲ್ಲವರಿಗೂ ದೀರ್ಘಾಯುರಾರೋಗ್ಯವನ್ನಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡಲಿ! ಎಂದು ಆತನನ್ನು ಪ್ರಾರ್ಥಿಸುತ್ತೇನೆ."

× × × × ×

ಶ್ರೀಮಾನ್ ಗೋವಿಂದ ಪೈಗಳು ಗೌಡ ಸಾರಸ್ವತ ಮನೆತನಕ್ಕೆ ಸೇರಿದವರು. ಅವರ ಮನೆಮಾತು ಕೊಂಕಣಿ. ಆದರೂ ಅವರು ಕವನಿಸಿದ್ದು, ಲೇಖನಿಸಿದ್ದು ಎಲ್ಲ ಕನ್ನಡದಲ್ಲಿಯೆ. ಈ ಮಾತನ್ನೇ ಅವರು ತನ್ನ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿಯೂ ನುಡಿದಿದ್ದಾರೆ. ಆ ಮಾತುಗಳಾದರೂ ಎಂತಹನಲ್ಲೂ ಕನ್ನಡಾಭಿಮಾನವನ್ನು ಹೆಚ್ಚಿಸಬೇಕು. ಅದು ಹೀಗಿದೆ.

> "ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ. ಕನ್ನಡ ಸಾಕುತಾಯಿ: ನನ್ನನ್ನು ಸಾಕಿದ ತಾಯಿ. ಕೊಂಕಣಿಯಲ್ಲಿ ಹೆಸರಿಗೆ ತಕ್ಕಷ್ಟರ ಸಾಹಿತ್ಯವಿದ್ದರೆ ಸಾಕಿತ್ತು. ಫ್ರಾನ್ಸ್ ದೇಶದ ಪ್ರೊವಾನ್ಸ್ (Provence) ಎಂಬ ತೆಂಕಣ ಜಿಲ್ಲೆಯವನಾದ Frederic Mistrel ಎಂಬ ಕವಿ ಫ್ರೆಂಚ್ ಭಾಷೆಯಲ್ಲಿ ವಿಪುಲವೂ ಜಗದ್ವಿಖ್ಯಾತವೂ ಆದ ಸಾಹಿತ್ಯವಿದ್ದರೂ ಅದರಲ್ಲಿ ರಚಿಸದೆ ಅದರಿಂದ ಭಿನ್ನವಾದ ತನ್ನ ತಾಯಿನುಡಿಯಾದ ಪ್ರೊವೆಂಸಾಲ್ (Provencal) ಭಾಷೆಯಲ್ಲಿ ತಾನೆ ತನ್ನ ಕೃತಿಗಳನ್ನು ರಚಿಸಿದಂತೆ ನಾನೂ ನನ್ನ ತಾಯ್ನುಡಿಯಲ್ಲಿ ತಾನೆ ರಚಿಸುತ್ತಿದ್ದೇನೋ. ಆದರೆ ತಾಯಿ ಮೊಲೆಯಲ್ಲಿ ಹಾಲಿಲ್ಲ; ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆದರೆ ಆ ಬಗ್ಗೆ ನನ್ನನ್ನು ಕನ್ನಡದ ಮೊಲೆಯಲ್ಲಿ ಹಾಕಿದಳು. ಈ ತಾಯಿಯಾದರೆ ಪಯಸ್ವಿನಿ ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಊಡಿಸಿಯೂ ಮತ್ತೂ ಬತ್ತದ ದೇವರ ದಯೆಯಿಂದ ಸರ್ವದಾ ಬತ್ತ ಬಾರದ ಸದಾಸ್ನುಹಿ: ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಕ್ಕರೆಯಿಂದ ನನಗೆ ಉಣಿಸಿದಳು. ಆಕೆಯ ಆ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೂ ತೆತ್ತು ತೀರಿಸಲಾರೆ. ತಾಯಿ, ನೀನು ನನ್ನಲ್ಲಿ ಇಟ್ಟ ಮಮತೆಗೂ ನಾನು ನಿನಗೆ ಸಲ್ಲಿಸುತ್ತಿರುವ ಪ್ರತಿ ಮಮತೆಗೂ ಸರ್ವಥಾ ಎಣೆಯಿಲ್ಲ. ನೀನು ನನಗೆ ತರುವಿ ಎಂದರೆ ಅಮೃತದಂತೆ ಮೊಲೆಹಾಲು. ನಾನು ನಿನಗೆ ತರುವೆ ಎಂದರೆ ನಿನ್ನ ಕಾಲುಂಗುಟವನ್ನು ಕೂಡ ತೊಳೆಯ ಸಾಲದ ಕಣ್ಣೀರು. ಬೇರೆ ಏನಿದೆ ನನ್ನಲ್ಲಿ? ಅವ್ವಾ ಅದರಿಂದ ತಾನೇ ತೃಪ್ತಳಾಗು."

ಅವರ ಕನ್ನಡ ಪ್ರೇಮಕ್ಕೆ ಅವರ ಕವನ "ಕನ್ನಡಿಗರ ತಾಯಿ" ಇನ್ನೊಂದು ಸಾಕ್ಷಿ. ಅದರ ಒಂದು ಚರಣ ನೋಡಿ. ನಾಡ ಏಕೀಕರಣಕ್ಕಾಗಿ ಅವರು ಎಂದೇ ಹಂಬಲಿಸಿದ್ದರು.

"ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ?……ನಮ್ಮದೆಯಂ ತಾಯೆ ಬಲಿಸು. ಎಲ್ಲರ ಬಾಯಲ್ಲಿ ನೆಲಸು, ನಮ್ಮ ಮನಮನೊಂದೆ ಕಲಸು! ಇದನೊಂದನೆ ಕೋರುವೆ"

ಹೀಗೆ ಎದೆ ತೆರೆದು ಹಾಡಿದ ನಮ್ಮ ಕವಿಗೆ ನಮ್ಮ ರಾಜಕಾರಣಿಗಳು ಇತ್ತ ಉಡುಗೊರೆ ಏನು? ಅವರು ರಚಿಸಿದ ನಾಡಿನ ಸ್ವರೂಪ ಎಂತಹದು! ಮಂಜೇಶ್ವರವನ್ನೊಳಗೊಂಡ ಕಾಸರಗೋಡನ್ನು ಉಳಿದ ಭಾಗದಿಂದ ಬೇರ್ಪಡಿಸಿದರು!! ಈ ನೋವು ಗೋವಿಂದ ಪೈಗಳ ಎದೆಯನ್ನು ಸಾಕಷ್ಟು ಕೊರೆದಿತ್ತು–



"ನೋಡಿಂದೆ ತುಂಬಿತು ವರುಷವೆಂಬತ್ತು"



"ತನ್ನ ಬೇನೆಯನಣಂ ಗಣಿಸದೆ"



"ಮೊಗ ತುಳುಕುವಾ ತಂಬೆಳಕೊ
ಪ್ರೇಮಾಂಬುನಿಧಿಯನುಬ್ಬರಿಸು
ವಮೃತಾಂಶು ಕಾಂತಿಯೊ"



"ನಯನದಿ ಭವಿಷ್ಯಮಂ ತಿವಿವ
ಪುರುಷನ ದೃಷ್ಟಿ"



" ಜ್ಞಾನದೀ . . .



" ಧ್ಯಾನದೀ . . .



" ಶಾಂತಿಯೀ . . .



" ಕಾಂತಿಯೀ . . .

. . . . ಅಪರ ಭಾನುವ ನೋಡ "

ತಾ॥ 1–11–56ರಂದು ಅವರು ನನಗೆ ಬರೆದ ಪತ್ರ ನೋಡಿ.

"......ಇಂದು ನಮ್ಮ ಹಬ್ಬದ ದಿನ. ಆದರೆ ಇವತ್ತು ನಮ್ಮ ತಾಯಿ ಜಿಲ್ಲೆಯ ಜೀವಮಾನದಲ್ಲಿ ಅದೊಂದು ಘೋರವಾದ ಮಹಾ ದುರ್ದಿನ ! ! ! ಒಂದು ಕಡೆ ನಮ್ಮ ಜಿಲ್ಲೆಯಲ್ಲಿ ಎಷ್ಟೋ ನೂರು ವರ್ಷಗಳಿಗೆ ಒಳಪಟ್ಟಿದ್ದ ನಮ್ಮ ಕಾಸರಗೋಡು ತಾಲೂಕು ಕೇರಳಕ್ಕೆ ಆಹುತಿಯಾಯಿತು. ಮತ್ತೊಂದು ಕಡೆ ನಮ್ಮ ಜಿಲ್ಲೆಯ ಮಿಕ್ಕ ಪಾಲು ಏಕಮಾತ್ರವಾಗಿ ಸುಸಂಗತವೂ ಮಂಗಲವೂ ಆಗಿರುವ "ಕರ್ನಾಟಕ" ಎಂಬ ಹೆಸರಿನ ಪ್ರಾಂತ್ಯದಲ್ಲಿ ಅಲ್ಲ ಮಹಾ ಮೈಸೂರೋ ವಿಶಾಲ ಮೈಸೂರೋ ಅಥವಾ ಮತ್ತೇನೋ ವಿಲಕ್ಷಣವಾದ ಹೆಸರುಳ್ಳ ಪ್ರಾಂತದಲ್ಲಿ ನುಗ್ಗಿಸಲ್ಪಟ್ಟಿತು. !.........ದೇವರು ಇನ್ನು ಏನೇನೆಲ್ಲ ದುರವಸ್ಥೆಗಳನ್ನು ತಂದೊಡ್ಡುವನೋ !.........

ಕವಿಗಳ ಆತ್ಮಕ್ಕೆ ಶಾಂತಿ ಕೋರುವ ನಾವು, ನಮ್ಮ ರಾಜಕಾರಣಿಗಳು–ಅವರಿಗಾಗಿ ಏನು ಸ್ಮಾರಕ ರಚಿಸಿಯೇವು ! ಯೋಚಿಸಿ... ಬದುಕಿದ್ದಾಗ ಮುಳ್ಳಿನ ಹಾಸಿಗೆ–ಈಗ ಹೂವಿನ ಸುಪ್ಪತ್ತಿಕೆ–ಅಂತಾಯ್ತಲ್ಲವೇ?

ಇಲ್ಲಿಗೆ ನನ್ನ ಕೆಲವು ನೆನಪುಗಳು ಬರಿದಾದುವು..... ಇನ್ನುಳಿದ ಒಂದೆರಡು ಮಾತು ಯಕ್ಷಗಾನಕ್ಕೂ ಪೈಗಳಿಗೂ ಇರುವ ಸಂಬಂಧದ ಕುರಿತದ್ದು.

× × × × ×

ನಮ್ಮ ಕನ್ನಡ ಜಿಲ್ಲೆಯ ಯಾವನೋರ್ವ ಭಾವಜೀವಿಯನ್ನೂ ನಮ್ಮ ಅತ್ಯಂತ ಪ್ರಿಯವಾದ ಕಲೆ ಯಕ್ಷಗಾನ ವಿಸ್ಮಿತಗೊಳಿಸದೆ ಇಲ್ಲ. ನಮ್ಮ ಹಳ್ಳಿಯ ಜನರ ಭಾವ ಪ್ರಚೋದನೆಗೆ ಅಲ್ಲಿ ಪ್ರಚುರವಲ್ಲಿರುವ ಜಾನಪದ ಕಲೆಗಳೇ ಬಹುಮಟ್ಟಿಗೆ ಕಾರಣವಷ್ಟೆ ! ನಮ್ಮ ಲ್ಲೆಯ ಎಲ್ಲ ಸಾಹಿತಿಗಳೂ ಯಕ್ಷಗಾನ ಕ್ಷೇತ್ರದಲ್ಲಿ ಒಂದಲ್ಲ ಒಂದು ರೀತಿಯಿಂದ ಸೇವೆ ಸಲ್ಲಿಸಿದ್ದಾರೆ. ಶ್ರೀ ಶಿವರಾಮ ಕಾರಂತರು ಆಗ್ಗ ಯಕ್ಷಗಾನ ಕ್ಷೇತ್ರಕ್ಕೇನೇ ಹೊಸ ವಿಚಾರವನ್ನು ಧಾರೆಯೆರೆದವರು. ಶ್ರೀ ಗೋವಿಂದ ಪೈಗಳಾದರೋ ಚಿಕ್ಕಂದಿನಲ್ಲೇ ಮಂಜೇಶ್ವರದಲ್ಲಿ ಆಗಾಗ್ಗೆ ಜರಗುತ್ತಿದ್ದ ಯಕ್ಷಗಾನ ಬಯಲಾಟಗಳನ್ನು ನೋಡಿ ವಿಸ್ಮಿತರಾಗಿ 1895ರ ಮೇ ತಿಂಗಳಲ್ಲಿ ಒಂದು ಯಕ್ಷಗಾನವನ್ನು ಬರೆಯಲು ನಿಲುಕಿದರಂತೆ. ಈ ಕುರಿತು ಅವರ ಆತ್ಮ ಚರಿತ್ರೆಯಲ್ಲಿ ಅವರೇ ಹೇಳಿದ ಮಾತು ಹೀಗಿದೆ. ...... "ನಾನು 1895ನೆಯ ಮೇ ತಿಂಗಳಲ್ಲಿ ಒಂದು ಯಕ್ಷಗಾನವನ್ನು ಬರೆಯಲಿಕ್ಕೆ ನಿಲುಕಿದೆ. ಹೆಸರು ಮಕರಾಕ್ಷ ಕಾಳಗ. ಕಥೆ 19ನೆಯ ಪುರಾಣವಲ್ಲಿಯದು. ಮಕರಾಕ್ಷನಾರೋ ಆತನೇ ಬಲ್ಲ. ಶ್ರೀ ರಾಮನೇನೋ ಅವನನ್ನು ಸಂಹರಿಸುತ್ತಾನೆ. ಮೂರನೆಯ ಒಂದು ಪಾಲು ಬರೆದಾಯಿತು. ಮನಸ್ಸಿಗೆ ಒಗ್ಗಲಿಲ್ಲ. ಹರಿದುಬಿಟ್ಟೆ" ಅಂದಮೇಲೆ ಪೈಗಳ ಕಾವ್ಯ ಜೀವನವೂ ಯಕ್ಷಗಾನದಿಂದಲೇ ಆರಂಭವಾದಂತಾಯಿತಲ್ಲ ! ನಮ್ಮ ಕವಿ ಮುದ್ದಣ್ಣನೂ ಆರಂಭದಲ್ಲಿ ಬರೆದದ್ದು ಯಕ್ಷಗಾನ ಪ್ರಸಂಗಗಳನ್ನು.

ಆದರೆ ಗೋವಿಂದ ಪೈಗಳು ಬಳಿಕ ಬರೆದ ಯಕ್ಷಗಾನ ಪ್ರಸಂಗಗಳಾವುವೂ ಕಾಣಸಿಗುವುದಿಲ್ಲ. ಹಾಗೆಂದು ಅವರ ಸಂಶೋಧನಾ ಕಾರ್ಯ ಯಕ್ಷಗಾನ ಕ್ಷೇತ್ರದ ತನಕವೂ ವಿಸ್ತರಿಸಿದೆ. 1949ರ ಜೂನ್ ತಿಂಗಳಲ್ಲಿ ಮದ್ರಾಸು ಆಕಾಶವಾಣಿಯಲ್ಲಿ ಯಕ್ಷಗಾನ ಕವಿ ಕುಂಬಳೆಯ ಪಾರ್ತಿಸುಬ್ಬನ ಕುರಿತು ಒಂದು ವಿಚಾರಪೂರಿತ ಭಾಷಣ ಮಾಡಿದ್ದರು. ಅದು ತಾ 3–5–1956ರ ನವಭಾರತದಲ್ಲಿ ಪ್ರಕಟವಾಗಿದೆ. (ಇದೇ ಕಾಲದಲ್ಲಿ ನವಭಾರತದಲ್ಲಿ ಕಾರಂತರ ಲೇಖನ ಯಕ್ಷಗಾನ ಕವಿ ಸುಬ್ಬನ ವಿಚಾರದಲ್ಲಿ ಪ್ರಕಟವಾಗುತ್ತಿತ್ತು.)

ಆ ಭಾಷಣದಲ್ಲಿ ಪೈಗಳು ಪಾರ್ತಿ ಸುಬ್ಬನ ವಿಚಾರದಲ್ಲಿ ಹೇಳಿದ ಕೆಲವೇ ಅಂಶವನ್ನು ಇಲ್ಲಿ ಉದ್ಧರಿಸುತ್ತೇನೆ.

"ನನ್ನ ಪರಮಾಪ್ತರಾದ ವೈಕುಂಠವಾಸಿ ಕುಂಬಳೆಯ ಕವಿರತ್ನ ನರಸಿಂಹ ಲಕ್ಷ್ಮಣ ನಾಯಕರೊಂದಿಗೆ. (ಕ್ರಿ.ಶ. 1874–1945) ಪಾರ್ತಿ ಸುಬ್ಬನು ಯಾವಂದಿನವನಾಗಿರಬಹುದು ಎಂದು ನಾನೊಮ್ಮೆ (1939) ವಿಚಾರಿಸಿದ್ದಲ್ಲಿ ಅವರು ಹೀಗೆ ತಿಳಿಸಿದರು. ಆ ನಾಯಕರ ಸಾಕಷ್ಟು ಹಿರಿಯ ಮಿತ್ರರಾದ ಹಾಗೂ 90 ವರ್ಷಗಳಿಗೆ ದೀರ್ಘಾಯುಷಿಯಾಗಿ ಬಾಳಿದ ಕುಂಬಳೆಯ ಶ್ರೀ ಅನಂತ ಶಾನುಭಾಗ (1860–1950) ಎಂಬ ಪ್ರಸಿದ್ಧ ಅಡಿಕೆಯ ಸರದಾರೊಬ್ಬರು ಅಡಿಕೆಯನ್ನು ಕೊಂಡುಕೊಳ್ಳಲಿಕ್ಕೆ ಕುಂಬಳೆಯ ನೆರೆಗ್ರಾಮಗಳಿಗೆ ಆಗಾಗ್ಗೆ ಹೋಗುತ್ತಲಿದ್ದವರು ಕುಂಬಳೆಯಿಂದ 2–3 ಮೈಲುಗಳೊಳಗೆ ಉಳ್ಳ ಕೋಟೆಕುಂಜೆಯ ಬಳಿ ದೇಶಮಂಗಲ ಎಂಬ ಹಳ್ಳಿಗೆ ಹೋಗುತ್ತಿದ್ದಾಗ ಅಲ್ಲಿ ಸುಬ್ಬಿ ಎಂದೊಬ್ಬ ಮುದುಕಿಯ ಮನೆಯಲ್ಲಿ ತಂಗಿ ಅಲ್ಲಿ ತಮ್ಮ ಕೈಯಡಿಗೆಯನ್ನು ಮಾಡುತ್ತಿದ್ದರಂತೆ. ಇದು ಸುಮಾರು 1879ನೆಯ ಇಸವಿಯ ಕಥೆ. ಆ ಸುಬ್ಬಿ ದೇಶಮಂಗಲ ದೇವಸ್ಥಾನದ ಪಾಟಾಳಿಯೇ, ಪಾಟಾಳಿಗಳ ಮನೆತನದವನೇ ಆದ ಪಾರ್ತಿಸುಬ್ಬನ ಪ್ರಾಯಶ: ಒಬ್ಬಳೇ ಮಗಳ ಮಗಳು. ಆತನಿಗೆ ಗಂಡು ಸಂತತಿ ಇದ್ದಿಲ್ಲ. ಸುಬ್ಬಿಗೆ ಮಕ್ಕಳಿರಲಿಲ್ಲ. ಅಗ್ಗೆ ಆಕೆಗೆ ಸುಮಾರು 60 ವರ್ಷ ಪ್ರಾಯ. ಅಂದರೆ ಆಕೆ ಹೆಚ್ಚು ಕಡಿಮೆ 1819ನೆಯ ಇಸವಿಯಲ್ಲಿ ಹುಟ್ಟಿರಬೇಕು."

ಇವಲ್ಲದೆ ಕವಿರತ್ನ ನರಸಿಂಹ ನಾಯಕರ ತಂದೆ (ವೈ.ವಾ) ಕುಂಬಳೆಯ ಲಕ್ಷ್ಮಣ ನಾಯಕರು (ಕ್ರಿ.ಶ.1812–1907) ಹುಟ್ಟುವ ಕೆಲವು ವರ್ಷಗಳ ಹಿಂದೆ ಪಾರ್ತಿ ಸುಬ್ಬನು ಗತಿಸಿದ್ದನೆಂದೂ ಆತನು ಕುಂಬಳೆಯ ದೊಡ್ಡ ರಾಯಪ್ಪ ನಾಯಕರು ಕಟ್ಟಿದ ಕುಂಬಳೆಯ ದಶಾವತಾರ ಮೇಳದಲ್ಲಿ ಭಾಗವತನಾಗಿ ಇದ್ದನೆಂದೂ ಅವರು ಹುಟ್ಟುವ ಕೆಲ ವರ್ಷಗಳ ಮುಂಚಿನ ಅವರು ಕೇಳಿಬಲ್ಲ ಸುದ್ದಿಯನ್ನು ಹೇಳಿರುವ ನೆನಪು ನನಗಿದೆ."

ಅದೇ ಭಾಷಣದಲ್ಲಿ ಮುಂದೆ ಪಾರ್ತಿಸುಬ್ಬನ ಕೃತಿಗಳ ವಿಮರ್ಶೆಯನ್ನು ಮಾಡುತ್ತಾ ಸುಬ್ಬನ ಪ್ರಸಂಗಗಳಲ್ಲಿ ಸಂಭಾಷಣೆಗಳು ದೇಸಿಗೆ ತಕ್ಕಂತೆ ಸಲುಗೆಯ ಮಾತಿನಲ್ಲಿದೆ ಎಂದು ಹೇಳಿದ್ದಾರೆ. ಅಲ್ಲದೆ ಕನ್ನಡ ಸಾಹಿತ್ಯದಲ್ಲಿ ದೇಸಿ ಮತ್ತು ಮಾರ್ಗ ಇವೆರಡು ಪದ್ಧತಿಗಳೆಂದರೇನೆಂದು ವಿಷದೀಕರಿಸಿದ್ದಾರೆ.

"ಕನ್ನಡ ಸಾಹಿತ್ಯ ದೇಸಿ ಎಂದೂ ಮಾರ್ಗಿ ಎಂದೂ ಎರಡು ವಿಧವಾಗಿದೆ. ಅವುಗಳಲ್ಲಿ ಮಾರ್ಗಿಗಿಂತ ದೇಸಿ ಹಳದು. ಅವೇ ಮೂಲ ಸಾಹಿತ್ಯ. ಅದೇ ಸ್ವಭಾವ ಸಿದ್ಧವಾದ ಕನ್ನಡ ಸಾಹಿತ್ಯ. ದೇಸಿ ಎಂದರೆ ಊರ ಬಾವಿಯಂತೆ; ನೀರು ತಿಳಿಯಾಗಿದೆ, ತಣ್ಣಗಾಗಿದೆ; ಮಾತ್ರವಲ್ಲ ಸೇದಿದಷ್ಟು ಇದೆ. ಊರಿನ ಎಲ್ಲರಿಗೂ ಸಾಲುತ್ತದೆ. ಮಾರ್ಗಿಯಾದರೆ ಹೊಳೆಯಂತೆ; ಎಲ್ಲಿಯೋ ಹುಟ್ಟಿ ಅನೇಕ ಊರುಗಳ ದಾರಿಯಾಗಿ ಹರಿದು ಬರುತ್ತದೆ. ಅದೆಷ್ಟೋ ಬಗೆಯ ಜಲಜಂತುಗಳನ್ನು ಒಳಗೊಂಡಿದೆ. ಎಷ್ಟೋ ಜಲಯಾನಗಳನ್ನು ತಳಕೊಂಡಿದೆ, ಎಷ್ಟೋ ಬಗೆಯ ಧಾತುಗಳ ಪದರುಗಳನ್ನು ಅದ್ದಯಿಸುತ್ತದೆ, ಎಷ್ಟೋ ಮಂದಿ ತೀರ್ಥವೆಂದು ಮಿಂದವರನ್ನು ಸುದ್ದಯಿಸುತ್ತದೆ. ತನ್ನ ದಂಡೆಯ ಆಚಾ ಊರವರಿಗೆಲ್ಲ ತನ್ನ ನೀರನ್ನು ಉಣಿಸುತ್ತದೆ, ತಣಿಸುತ್ತದೆ. ದೇಸಿ ಸಾಮಾನ್ಯ ಜನರ, ಮುಖ್ಯತಃ ಹಳ್ಳಿಯವರ ಜೀವನವನ್ನು ಬಿಂಬಿಸುವುದಾದರೆ ಮಾರ್ಗಿ ಮಹಾಜನರ ವಿಶೇಷತಃ ಪಟ್ಟಣಿಗರ ನಾಗರಿಕರ ಜೀವನವನ್ನು ಚಿತ್ರಿಸುತ್ತದೆ. ಆ ಕಾರಣ ಅವುಗಳ ಆಕೃತಿಯಲ್ಲೂ ಪ್ರಕೃತಿಯಲ್ಲೂ ತುಂಬ ಅಂತರ ಇದೆ. ವೃತ್ತ ಕಂದಗಳಲ್ಲೂ, ಚಂಪುವಿನಲ್ಲೂ, ಷಟ್ಪದಿಗಳಲ್ಲೂ, ರಗಳೆಗಳಲ್ಲೂ ರಚಿಸಿದ ಕಾವ್ಯಗಳು ಹೇಗೆ ಮಾರ್ಗಿಯಲ್ಲಿ ಸೇರುತ್ತವೋ ಹಾಗೆ ಯಕ್ಷಗಾನ ಪ್ರಸಂಗಗಳೂ, ಲಾವಣಿಗಳೂ, ಜಾವಳಿಗಳೂ, ಕೀರ್ತನೆಗಳೂ, ಮದುವೆಯ ಹಾಡುಗಳೂ, ತೊಟ್ಟಿಲ ಹಾಡುಗಳೂ ಮೊದಲಾದುವೆಲ್ಲವೂ ದೇಸಿಯಲ್ಲಿ ಕೂಡುತ್ತವೆ. ಅವುಗಳಲ್ಲಿ ಯಕ್ಷಗಾನವೆಂದರೆ ದೇಸಿಯ ಕಣ್ಣು. ಯಕ್ಷಗಾನಗಳಲ್ಲಿ ಬರೇ ಹಳ್ಳಿಗರನ್ನಲ್ಲ, ರಾಮಾಯಣ-ಭಾರತಗಳ ಮಹಾವೀರರನ್ನೇ ಚಿತ್ರಿಸಿದೆಯಾದರೂ ಆ ಚಿತ್ರಣದ ಹೊದಿಕೆ ದೇಸಿಯ ಸಾಮಾನ್ಯರ ದೃಷ್ಟಿಯಿಂದಲೇ ಹೊರತು ಮಾರ್ಗಿಯ ವಿದ್ವಜ್ಜನರ ದೃಷ್ಟಿಯಿಂದಲ್ಲ."

1957ರ ತನಕವೂ ಅಂದರೆ ಶ್ರೀ ಶಿವರಾಮ ಕಾರಂತರ ಯಕ್ಷಗಾನ ಬಯಲಾಟ ಗ್ರಂಥ ಪ್ರಕಟವಾಗುವ ತನಕವೂ ರಾಮಾಯಣಾದಿ ಪ್ರಸಂಗಗಳನ್ನು ಬರೆದವನು ಕುಂಬಳೆಯ ಪಾರ್ತಿಸುಬ್ಬನೆಂದೇ ಪ್ರಸಿದ್ಧಿಯಾಗಿತ್ತು. ಶ್ರೀ ಶಿವರಾಮ ಕಾರಂತರು ತಮಗೆ ಒದಗಿದ ತಾಳೆ ಓಲೆ ಗ್ರಂಥಗಳ ಆಧಾರದಿಂದ ರಾಮಾಯಣಾದಿ ಪ್ರಸಂಗ ಬರೆದಾತ ಅಜಪುರದ ಅಂದರೆ ಈಗಿನ ಬ್ರಹ್ಮಾವರದ ಸುಬ್ಬನೆಂಬವನು. ಕುಂಬಳೆ ಪಾರ್ತಿಸುಬ್ಬನು ಓರ್ವ ಕೇವಲ ಭಾಗವತನು ಮಾತ್ರ ಎಂದಲ್ಲದೆ ಯಕ್ಷಗಾನ ಕವಿಗಳ ಕಾಲ ಸ್ಥಳಗಳ ನಿರ್ಣಯಕ್ಕೆಡೆ ಆಧಾರವಾದ ಗ್ರಂಥ ಒಂದನ್ನು ಪ್ರಕಟಿಸಿದರು. ಶ್ರೀ ಕಾರಂತರು ತನ್ನ ಈ ಸಂಶೋಧನೆಗೆ ಒದಗಿದ ಎಲ್ಲ ಆಧಾರಗಳನ್ನು ಶ್ರೀ ಪೈಗಳಿಗೂ ತೋರಿಸಿದ್ದರು. ಶ್ರೀ ಪೈಗಳು ನವಭಾರತದಲ್ಲಿ ಪ್ರಕಟವಾದ ತನ್ನ ಇನ್ನೊಂದು ಲೇಖನದಲ್ಲಿ ಸದ್ರಿ ಅಜಪುರವೇ ಕುಂಬಳೆಯ ಹತ್ತಿರದ ಅಜಾವರ ಆಗಿರಬಹುದೆಂದು ತರ್ಕಿಸಿದ್ದೂ ಉಂಟು. ಹೇಗೂ ಇರಲಿ. ಸಂಶೋಧನಾ ಕಾರ್ಯದಲ್ಲಿ ತನಗೆ ಪ್ರತ್ಯಕ್ಷ ದೊರೆತ ಸಾಕ್ಷ್ಯ ಆಧಾರಗಳಲ್ಲದೆ ಯಾವ ನಿರ್ಧಾರಕ್ಕೂ ಬಾರದ ಶ್ರೀ ಪೈಗಳು ಪಾರ್ತಿ ಸುಬ್ಬನ ವಿಚಾರದಲ್ಲಿ ಮಾತ್ರ, ಕೇವಲ ಸ್ಥಳದ ಅಭಿಮಾನದಿಂದಲೋ ಏನೋ ಹೇಳಿಕೆ ಕೇಳಿಕೆಗಳ ಆಧಾರವನ್ನೇ ನಂಬಿದ್ದರು. ಮಾತ್ರವಲ್ಲ ತಾನೇ ನಂಬಿದ ಸಂಗತಿಯನ್ನು ತನಗೇ ಅಲ್ಲ ಎಂದು ಕಾಣುವ ತನಕ ಆ ವಾದ ಸರ್ವಥಾ ಬಿಟ್ಟು ಕೊಟ್ಟವರೂ ಅಲ್ಲ. ಪಾರ್ತಿಸುಬ್ಬನ ವಿಚಾರದಲ್ಲಿ ಪೈಗಳ ಕೊನೆಯ ಅಭಿಪ್ರಾಯ 1962ರಲ್ಲಿ ಕಾಸರಗೋಡಿನ "ಗೀತಾ ಪ್ರಕಾಶನ"ದವರು ಪ್ರಕಟಿಸಿದ "ಮಧುಪುರ" ಎಂಬ ಗ್ರಂಥದಲ್ಲಿ ಪ್ರಕಟವಾಗಿತ್ತು. ಈ ಹೇಳಿಕೆಯಲ್ಲೂ ಪೈಗಳು ತನ್ನ ಹಿಂದಿನ ನಿರ್ಧಾರದಿಂದ ಒಂದು ಇಂಚೂ ಕದಲಿರಲಿಲ್ಲ.

ಇದಲ್ಲದೆ ಶ್ರೀ ಪೈಗಳು ಯಕ್ಷಗಾನದ ವಿಚಾರದಲ್ಲಿ ಸುಮಾರು 1955ರ ಸುಮಾರಿಗೆ ಉಡುಪಿಯ "ರಾಯಭಾರಿ" ಪತ್ರಿಕೆಯವರಿಗೂ ಬರೆದ ಒಂದು ಲೇಖನ ಓದಿದ್ದು ನೆನಪಿಗೆ ಬರುತ್ತದೆ. ಆ ಕಾಲಕ್ಕೆ ನಮ್ಮ ಹಲವು ಯಕ್ಷಗಾನ ಮೇಳಗಳೂ, ಸಂಘಗಳೂ ಯಕ್ಷಗಾನ ಬಯಲಾಟಗಳಲ್ಲಿ ವೇಷಧಾರಿಗಳು ನಾಟಕದ ವೇಷಗಳನ್ನು ಧರಿಸುತ್ತಿದ್ದ ಸಂಪ್ರದಾಯವನ್ನು ಕಡೆಗಣಿಸಿದ್ದರು. ಆಗ "ರಾಯಭಾರಿ"ಯಲ್ಲಿ "ಯಕ್ಷಗಾನದಲ್ಲಿ ನಾಟಕೀಯ ಪದ್ಧತಿ" ಎಂಬ ಕುರಿತು ಸಾರ್ವಜನಿಕ ಅಭಿಪ್ರಾಯಗಳು ಪ್ರಕಟವಾಗುತ್ತಿದ್ದುವು. ಪ್ರಕಟವಾದ ಅಂತಹ ಒಂದು ಅಭಿಪ್ರಾಯಗಳಲ್ಲಿ ಪೈಗಳದ್ದೂ ಒಂದಾಗಿತ್ತು. ಶ್ರೀಯುತರು ಯಕ್ಷಗಾನ, ನಾಟಕ ಇವು ಎರಡು ಪ್ರತ್ಯೇಕವಾದ ಧರ್ಮವುಳ್ಳ ಕಲೆಗಳು, ಇವುಗಳನ್ನು ಒಂದು ಇನ್ನೊಂದನ್ನು ಅನುಕರಿಸುವುದೆಂದರೆ ಮಾವಿನ ಮರಕ್ಕೆ ಬೇವಿನ ಗೆಲ್ಲನ್ನು ಕಸಿ ಕಟ್ಟಿದಂತೆಯೇ ಸರಿ ಎಂಬರ್ಥದಲ್ಲಿ ಹೇಳಿಕೆ ಇತ್ತಿದ್ದರು. ಯಕ್ಷಗಾನ ಕ್ಷೇತ್ರದಲ್ಲಿ ಶ್ರೀ ಪೈಗಳು ಕೈಯಾಡಿಸಿದ ಇತರ ಸಂಗತಿಗಳು ನನಗೆ ನೆನಪಿಲ್ಲ.

1961ರಲ್ಲಿ ನಾವು ಪ್ರಕಟಿಸಿದ "ನಮ್ಮ ಅಜಪುರ" (ಬ್ರಹ್ಮಾವರ ಕರ್ನಾಟಕ ಸಂಘದ ಪ್ರಕಟನೆ) ಎಂಬ ಪ್ರಕಟಣೆಯನ್ನು ನಾವು ಶ್ರೀ ಗೋವಿಂದ ಪೈಗಳಿಗೆ ಅರ್ಪಿಸಿದಾಗ, ಪಾರ್ತಿಸುಬ್ಬನ ವಿಚಾರದಲ್ಲಿ ಪೈಗಳಿಗೆ ವಿರೋಧವಾದ ಅಭಿಪ್ರಾಯವುಳ್ಳ ಈ ಪ್ರಕಟಣೆಯನ್ನು ನಾವು ಅವರಿಗೆ ಅರ್ಪಿಸಿ ಅವರನ್ನು ತಿವಿಯುವ ಹೊಂತಗಾರಿಕೆ ಮಾಡಿದೆವು ಎಂದೂ, ನಾವು ಅವರ ಮನೋಧರ್ಮಕ್ಕೆ ವಿರೋಧವಾಗಿ ಅವರ ಒಪ್ಪಿಗೆ ಇಲ್ಲದೆ ಈ ಕಾರ್ಯ ನಡೆಸಿದೆವು ಎಂದೂ ನಮ್ಮ ಮೇಲೆ ಕೆಸರೆರಚುವ ಕಾರ್ಯ ಕೆಲವು ಸ್ನೇಹಿತರಿಂದ ನಡೆಯಿತು. ಆದರೆ ಸ್ವಭಾವವಾಗಿ ಯಾವ ಸನ್ಮಾನ ಕಾರ್ಯವನ್ನು ಒಪ್ಪದ ಶ್ರೀಯುತ ಪೈಗಳು ನಮ್ಮ ಪ್ರಕಟಣೆಯನ್ನು ಅರ್ಪಿಸಿಕೊಳ್ಳಲು ಬರಹ ಮೂಲಕ ಒಪ್ಪಿಗೆ ನೀಡಿದ್ದರಲ್ಲದೆ ಅದು ಪ್ರಕಟವಾದ ಮೇಲೆ ಅದರ ಕುರಿತು ಎರಡು ಒಳ್ಳೆಯ ಮಾತುಗಳನ್ನು ಹೇಳಿ ನಮ್ಮನ್ನು ಹರಸಿದ್ದರು. ಈ ಪತ್ರಗಳೂ ನಮ್ಮಲ್ಲಿ ಇವೆ. ಇದು ಅವರ ಔದಾರ್ಯ. ಕವಿ ಸಹಜವಾದ ಶುದ್ಧ ನಿಷ್ಕಲ್ಮಷ ಹೃದಯಕ್ಕೆ ಒಂದು ಉದಾಹರಣೆ.

ಇದಿಷ್ಟು ಕುರುಡ ಕಂಡ ಆನೆಯಂತೆ ನಾನು ಕಂಡ ಪೈಗಳ ವಿಚಾರ. ಶ್ರೀ ಪೈಗಳು ನಮ್ಮ ಪಾಲಿಗೆ ದೇವರು. ದೇವರೂ ತಾನೊಬ್ಬ ಕವಿಯಂತೆ. ದೇವರಿಗೂ ಕವಿಗೂ ಧರ್ಮ ಸಾಮಾನ್ಯತೆ ಇದೆಯಂತೆ–ಈ ಧರ್ಮ ಸಾಮ್ಯವನ್ನು ನಾವು ಪೈಗಳಲ್ಲಿ ಕಂಡೆವಾದುದರಿಂದ ನಮಗೆ ಅವರು ದೇವರು. ಅವರ ಕೃತಿಗಳೆಲ್ಲ ನಮ್ಮ ಪಾಲಿನ ಭಾಗ್ಯಗಳು. ಅವೇ ನಮಗೆ ಅಮೃತ. ನಾವು ಮಾತ್ರ ತರುವವೆಂದರೆ ಅವರ ಕಾಲುಂಗುಟವನ್ನು ಕೂಡ ತೊಳೆಯ ಸಾಲದ ಕಣ್ಣೀರು.

# ಗುರುದೇವ ಗೋವಿಂದ ಪೈ

"ಗಿರಿಬಾಲೆ"

"ಗುರುದೇವ ಗೋವಿಂದ ಪೈ ಅವರು ಚಿರನಿದ್ರೆಗೊಳಗಾದರು." ಎಂಬ ಸಮಾಚಾರ ಮೇಜರ್ ಅಪರೇಶನ್ನಿನ ತೀರ ದುರ್ಬಲ ಪರಿಸ್ಥಿತಿಯಲ್ಲಿದ್ದ ನನಗೆ ಗೆಳತಿಯೊಬ್ಬರ ಪತ್ರ ಮೂಲಕ ತಿಳಿದುಬಂದಾಗ ಬರಸಿಡಿಲು ಬಡಿದಂತಾಯಿತು. ಆ ಆಘಾತದಿಂದ ಸುಧಾರಿಸಿಕೊಳ್ಳಲು ತಿಂಗಳುಗಳೇ ಬೇಕಾದುವು. ಈ ನನ್ನ ದು:ಖ ಕೇವಲ ಕನ್ನಡನಾಡಿನ ಹೆಮ್ಮೆಯ ವ್ಯಕ್ತಿಯ ಅಗಲಿಕೆಯಿಂದ ನಾಡಿಗಾದ ನಷ್ಟಕ್ಕಾಗಿ ಎಂದಲ್ಲ, ನನ್ನ ಬಾಳಿನ ಪಥಪ್ರದರ್ಶಕ ಜ್ಯೋತಿ ಕಾಲನ ಬಿರುಗಾಳಿಗೆ ಸಿಕ್ಕಿ ಆರಿಹೋಯಿತಲ್ಲ ! ಮುಂದಾವ ದಿಕ್ಕು? ಎಂಬ ಸ್ವಾರ್ಥಚಿಂತನೆಯಿಂದುಂಟಾದುದು. ದು:ಖದ ಆವೇಗ ಕೊಂಚ ಕಡಿಮೆಯಾಗುತ್ತಲೆ ಅಂದೇ ಗೆಳತಿಗೆ ಬರೆದೆ–ಸೋದರಿ, ಇದೀಗ ಈ ವಿಶಾಲ ವಿಶ್ವದಲ್ಲಿ ನಿಜಕ್ಕೂ ನಾನು ಅನಾಥಳಾದೆ, ಎಂದು.

"ಪೈ" ಅವರನ್ನು ಕನ್ನಡ ಜನತೆಗೆ ಪರಿಚಯ ಮಾಡಿಕೊಡುವುದೆಂದರೆ ಹೂವಿಗೆ ಸುವಾಸನೆ ಹಚ್ಚಿದಂತೆ, ಚಿನ್ನಕ್ಕೆ ಬಣ್ಣಬಳಿದಂತೆ ಯಾ ಸೂರ್ಯನಿಗೆ ಬೆಳಕು ಹಿಡಿದಂತೆ; ಅವರ ವ್ಯಕ್ತಿತ್ವದ ಹಲವು ಮುಖಗಳಲ್ಲಿ ನಾನು ಕಂಡ ಮುಖವೇ ಬೇರೆ. ಅದು ತೀರ ಆತ್ಮೀಯವಾಗಿತ್ತು. ಅದನ್ನು ಪ್ರದರ್ಶಿಸಬೇಕೆಂಬ ಹಂಬಲ ನನಗಿರಲಿಲ್ಲ. ಆದರೆ. ಒಂದು ದಿನ ಮಂಜೇಶ್ವರದಿಂದ ವಿದ್ವಾನ್ ರಮಾಬಾಯಿ ಎಂಬವರು ನನ್ನನ್ನು ಕಾಣಬಂದರು. ಗುರುದೇವರ ವಿಚಾರವಾಗಿ ತುಂಬಾ ಮಾತನಾಡಿ, "ಸಮಾನ ಶೀಲ ವ್ಯಸನೇಷು ಸಖ್ಯಂ" ಎಂಬಂತೆ ನಾವಿಬ್ಬರೂ ಸಮಾನ ದು:ಖಿಗಳು. ನಿಮ್ಮ ವಿಚಾರವಾಗಿ ಪೈ ಅವರು ಆಗಾಗ ನನ್ನಲ್ಲಿ ಪ್ರಸ್ತಾಪಿಸುತ್ತಿದ್ದರು.. ಅವರ ಸ್ಮಾರಕ ಗ್ರಂಥದಲ್ಲಿ ನಿಮ್ಮ ಲೇಖನವೂ ನನ್ನದರ ಜತೆ ಸೇರದೆ ಇದ್ದರೆ ದ್ವಿತೀಯ ಶೂನ್ಯವಾಗುತ್ತದೆ. ಇಷ್ಟರವರೆಗೆ ಮಹಿಳೆಯ ಲೇಖನ ನನ್ನೊಬ್ಬಳದೇ ಸ್ವೀಕೃತವಾಗಿದೆ· ಆ ಕಾರಣ ಅವರನ್ನು ನೀವು ಕಂಡುಕೊಂಡ ಬಗೆಗೆ ಅವಶ್ಯ ಏನನ್ನಾದರೂ ಬರೆಯಬೇಕು" ಎಂದರು. ಎಂದೇ ಈ ಬರೆಹ.

ಪ್ರಪ್ರಥಮ ಪೈ ಅವರ ವಿಚಾರ ನನಗೆ ತಿಳಿದುಬಂದುದು ನನ್ನ ತೀರ ಎಳೆಯವಯಲ್ಲಿ. ಆಗ ನಾನು ಮಲಯಾ ಸ್ಟೇಟಿನಲ್ಲಿದ್ದೆ. ಕನ್ನಡ ಪತ್ರಿಕೆಗಳು ನನ್ನ ಕೈಸೇರುತ್ತಿದ್ದಾಗ ನನಗೆ ಹಬ್ಬದ ಸಂಭ್ರಮವಾಗುತ್ತಿತ್ತು. ಅರ್ಥವಾಗದ ಲೇಖನಗಳನ್ನು ಕೂಡ ಅಕ್ಷರ ಬಿಡದೆ ಓದಿ ಮುಗಿಸುತ್ತಿದ್ದೆ. ವಾತಾವರಣವೆಲ್ಲಾ ಅನ್ಯಭಾಷಾಮಯವಾಗಿದ್ದಾಗ, ಕನ್ನಡವಾಣಿಗಾಗಿ ಕಿವಿಗಳು ಕಾತರಿಸುತ್ತಿದ್ದಾಗ, ಅದರ ಅಭಾವದಲ್ಲಿ ಮನಸಿನಲ್ಲೇ ಕನ್ನಡದ ಸವಿಯನ್ನುಣ್ಣುತ್ತಿದ್ದೆ. ಅಂತಹ ಪರಿಸ್ಥಿತಿಯಲ್ಲಿ ಮಹನೀಯರೊಬ್ಬರು ಬರೆದ ಸಂಶೋಧನ ಲೇಖನವೊಂದು ಒಮ್ಮೆ ಪತ್ರಿಕೆಯಲ್ಲಿ ಪ್ರಕಟವಾಗಿ, "ಮಂಜೇಶ್ವರ ಗೋವಿಂದ ಪೈ ಅವರು ಈ ಅಭಿಪ್ರಾಯ ಪಟ್ಟಿದ್ದಾರೆಂದ ಮೇಲೆ ಈ ವಿಚಾರದಲ್ಲಿ ಸಂಶಯವೇ ಇರಲಾರದು" ಎಂಬರ್ಥದ ವಾಕ್ಯವನ್ನೋದಿ, "ಮಂಜೇಶ್ವರ ಗೋವಿಂದ ಪೈ ಎಂಬವರು ಮಹಾ ಪಂಡಿತರಿರಬೇಕು. ಅವರ ಅಭಿಪ್ರಾಯಕ್ಕೆ ಮತಭೇದವಿಲ್ಲ. ಅವರು ಕನ್ನಡಿಗರು." ಎಂಬ ಅಭಿಮಾನ ತನ್ನಿಂದ ತಾನೇ ಮನದಲ್ಲುದಿಸಿತು. ಮಗದೊಮ್ಮೆ ಯಾವುದೋ ವಿಶೇಷ ಸಂಚಿಕೆಯಲ್ಲಿ ಮೈಸೂರು ಸೀಮೆಯ ಮಹನೀಯರೊಬ್ಬರು ಬರೆದ ದಕ್ಷಿಣ ಕನ್ನಡ ಜಿಲ್ಲೆಯ ಪ್ರವಾಸ ಲೇಖನವನ್ನು ಓದಿದೆ. ಅವರ ಕೊನೆಯ ಲ್ಲೊಂದು ಈ ಅರ್ಥ ಬರುವ ವಾಕ್ಯವಿದ್ದಿತು–"ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೋಡಬೇಕಾದ ಆಶ್ಚರ್ಯಗಳು ಎರಡೇ-ಒಂದು ಸಮುದ್ರ ಮತ್ತೊಂದು ಮಂಜೇಶ್ವರ ಗೋವಿಂದ ಪೈ. ಏಕಾಂತವಾಸಿಗಳಾಗಿ ತಮ್ಮ ಆಶ್ರಮಸದೃಶವಾದ ವಾಸಸ್ಥಾನದಲ್ಲಿ ಪ್ರಕೃತ ಶಿಲಾಲೇಖಗಳ ಸಂಶೋಧನದಲ್ಲಿ ಮಗ್ನರಾಗಿರುವ ಕಾವ್ಯರ್ಷಿ ಪೈ ಅವರನ್ನು ನೋಡದಿದ್ದರೆ ದಕ್ಷಿಣ ಕನ್ನಡದ ಪಯಣ ನಿಷ್ಫಲವೇ ಸರಿ. ಅವರು ಕರ್ನಾಟಕದಲ್ಲಿ ಏನಾಗಿದ್ದಾರೆ? ಏನಾಗಿಲ್ಲ; ಎಂದು ಹೇಳಲು ಬಾರದು. ಅವರು ಎಲ್ಲವೂ ಆಗಿರುವ ಪವಾಡ ಪುರುಷರಾಗಿದ್ದಾರೆ."

ಈ ಎರಡೂ ಪತ್ರಿಕೆಗಳನ್ನು ನಾನು ಓದಿದುದು 1929–30ರ ಸುಮಾರಿನಲ್ಲಿ. ಅದರೆ, ಪೈ ಅವರ ಬಗೆಗೆ ನನ್ನ ಎಳೆಯ ಹೃದಯದಲ್ಲುಂಟಾದ ಹೆಮ್ಮೆ. ಭಕ್ತಿಯ ರೂಪವಾಗಿ ಮಾರ್ಪಟ್ಟು "ಅವರು ನನ್ನ ಗುರುದೇವರಾದರೆ !" ಎಂಬ ಹೇರಾಸೆ ಅದು ಹೇಗೆ ಮೂಡಿತೋ ಯಾಕೆ ಮೂಡಿತೋ ಅರಿಯೆ. ಆದರೆ ಆ ಆಸೆ 22 ವರ್ಷಗಳ ಮೇಲೆ ಫಲಿಸಿತು, ಅಷ್ಟೇ ಅಲ್ಲ ಕೊನೆಯ ವರೆಗೂ ಉಜ್ವಲವಾಗಿ ಜ್ವಲಿಸಿತು.

ಗುರುದೇವರ ಪ್ರತಿ ನನ್ನದು ಏಕಲವ್ಯಭಕ್ತಿಯಿದ್ದಿತು. ಅವರನ್ನು ಕಾಣಬೇಕೆಂಬ ಹಂಬಲವಿಲ್ಲ. ಕಾಣಲು ಸಾಧ್ಯವೆಂಬ ನಂಬುಗೆಯೂ ಇರಲಿಲ್ಲ. ಅಂತಹ ಮಹಾನ್ ವ್ಯಕ್ತಿ ಅಷ್ಟು ಸುಲಭ ಸಾಧ್ಯರೇ? ಅವರನ್ನು ಕಾಣಬೇಕಾದರೆ ಅಂತಹ ಪಂಡಿತರೇ ಆಗಬೇಕು. ನಾನು ಬಯಸುವುದೆಂದರೆ ಕಾಳಿದಾಸನೆಂದಂತೆ, "ಪ್ರಾಂಶು ಲಭ್ಯೇಫಲೇ ಲೋಭಾದುದ್ಬಾಹುರಿವ ವಾಮನ" ಅಲ್ಲದೆ ಮತ್ತೇನು? ಆ ಕಾರಣ ಅವರ ದರ್ಶನವಾಗಲಿ. ಅವರಲ್ಲಿ ಪತ್ರವ್ಯವಹಾರವಾಗಲಿ ಸಾಧ್ಯವಾಗಬಹುದೆಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲ. ದೇವರಲ್ಲಿ ಭಕ್ತಿ ಮಾಡಬಹುದು. ಕಾಣಲೇಬೇಕೆಂದು ಹಂಬಲಿಸುವುದಾಗಲಿ ಹಟ ತೊಡುವುದಾಗಲಿ ಹುಚ್ಚುತನವಾಗಲಾರದೆ? "ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ" ಎಂಬ ದಾಸರಾಯರ ವಾಕ್ಯದಲ್ಲಿ ನಂಬಿಕೆಯಿಟ್ಟು ಏನಾದರೂ ಬರೆಯಬೇಕು. ಎಂದು ತವಕಪಡುತ್ತಿದ್ದ ಮನಸ್ಸಿನ ಪ್ರೇರಣೆಗೆ ಇಂಬುಗೊಟ್ಟು ಲೇಖನಿ ಕೈಯಲ್ಲಿ ಹಿಡಿದಾಗಲೆಲ್ಲ, "ಗುರುದೇವಾ ನನ್ನ ಕೈಯಿಂದ ಏನನ್ನಾದರೂ ಬರೆಸುವಂತೆ ಹರಸಿ" ಎಂದು ಮೌನವಾಗಿ ಪ್ರಾರ್ಥಿಸುತ್ತಿದ್ದೆ. ಆ ಪ್ರಾರ್ಥನೆಯಲ್ಲಿ ತೀರ ನಂಬಿಕೆಯಿತ್ತು ನನಗೆ. ಆ ಮಹಾನ್ ವ್ಯಕ್ತಿಯ ಪ್ರತಿಭೆಯ ಕಿರಣದ

ಮುಂದ ಪ್ರಕಾಶವನ್ನಾದರೂ ಅತ್ಯಧಿಕ ಏಕಾಗ್ರತೆಯಿಂದ ಪಡೆಯಬಲ್ಲೆನೆ? ಏಕೆ ಪಡೆಯಲಾರೆ? ಪಡೆಯಬಲ್ಲೆ ಎಂದುಕೊಳ್ಳುತ್ತ ಹುಚ್ಚುಚ್ಚಾಗಿ ಏನನ್ನಾದರೂ ಬರೆದು ಪತ್ರಿಕೆಗೆ ಕಳುಹಿಸುತ್ತಿದ್ದರೆ ಅದು ಅವರ ಅವ್ಯಕ್ತ ಆಶೀರ್ವಾದ ಬಲದಿಂದ ಪ್ರಕಟವಾಗುತ್ತಿತ್ತೇ ಅಲ್ಲದೆ ಮುಂದೂ ಬರೆದು ಕಳುಹಿಸು ಎಂಬ ಪ್ರೇರಣೆ ದೊರೆಯುತ್ತಿತ್ತು. ಗುರುದೇವರ ಅನುಗ್ರಹದಲ್ಲಿ ನನ್ನ ಬಾಲಿಷ ಬುದ್ಧಿಗಿದ್ದ ನಂಬಿಕೆ ಸುಳ್ಳಾಗಲಿಲ್ಲ.

1952ನೇ ಇಸವಿಯ ವರೆಗೆ ನನ್ನ ಏಕಾಂತ ತಪಸ್ಸು ಹೀಗೆ ಸಾಗಿತು. ಆ ಸಮಯದಲ್ಲಿ ಕಾರಣಾಂತರಾತ್ ನನ್ನಲ್ಲೊಂದು ಹುಚ್ಚು ಬಯಕೆ ಮೂಡಿತು. "ಮಹಿಳೆಯರಿಗಾಗಿಯೇ ಒಂದು ಮಾಸಿಕವನ್ನು ಹೊರಡಿಸಿದರೆ ಹೇಗೆ!" ಎಂಬುದಾಗಿತ್ತು ಅದು. ನನ್ನದು ಕೊಂಚ ಅವಸರದ ಸ್ವಭಾವ. ಮನಸ್ಸಿಗೆ ಬಂದುದೇ ತಡ. ಮೊದಲ ಸಂಚಿಕೆಯ ಕರಡು ಪ್ರತಿ ಸಿದ್ಧವಾಯಿತು. ಆಗ ನಾನು ಬೆಂಗಳೂರಿನ "ಕಥಾವಳಿ" ಮಾಸಪತ್ರಿಕೆಯ ಮಹಿಳಾ ವಿಭಾಗದ ಸಂಪಾದಿಕೆಯಾಗಿದ್ದುದರಿಂದ ಮಹಿಳೆಯರ ಲೇಖನಗಳು ನನ್ನಲ್ಲಿ ಅನೇಕ ಇದ್ದಕಾರಣ ನನಗೆ ಪ್ರತಿ ತಯಾರಿಸುವಲ್ಲಿ ಕಷ್ಟವಾಗಲಿಲ್ಲ. "ಸುಪ್ರಭಾತ"ವೆಂದು ಪತ್ರಿಕೆಯನ್ನು ಹೆಸರಿಸಿದ್ದೂ ಆಯಿತು. ಅದೇ ಹೊತ್ತಿಗೆ ಉಡುಪಿಯ ತರುಣಾಶ್ರಮದವರು ಒಂದು ಸತ್ಕಾರ ಕೂಟವನ್ನೇರ್ಪಡಿಸಿದ್ದರು. ಆಹ್ವಾನಿತಳಾಗಿದ್ದುಕೊಂಡು ಬರೆಯುವಿಕೆಯೊಂದನ್ನು ಚಿಕ್ಕವಳಾಗಿ ಮೈಗೂಡಿಸಿಕೊಂಡ ನಾನು ಅಲ್ಲಿ ಹೋದಲ್ಲಿಟ್ಟ ಹಿರಿಯ ಸಾಹಿತಿಗಳ ಸಂದೇಶಗಳನ್ನು ಕೇಳಿ ಬೆರಗು ಪಡೆದುಹೋದೆ. ಅದರಲ್ಲೂ ನನ್ನ ಧಾರ್ಮಿಕ ಗುರುದೇವರ "ಶ್ರೀಮತಿಯರ ಕತೆಗಳನ್ನು ಓದಿ ನಾನು ಮೆಚ್ಚಿದ್ದೇನೆ." ಎಂಬ ವಾಕ್ಯವನ್ನು ಕೇಳಿ ನನ್ನ ಕಣ್ಣುಗಳು ಕೃತಜ್ಞತೆಯಿಂದ ತುಂಬಿ ಬಂದುವಷ್ಟೇ ಅಲ್ಲ ನನ್ನ ಮನಸ್ಸು ಸಂಕೋಚಗೊಂಡಷ್ಟಕ್ಕೂ ಗುರುದೇವರ ಪ್ರತಿ ಭಕ್ತಿ ಉಕ್ಕಿ ಹರಿಯಿತು. "ನನ್ನ ಬರೆವಣಿಗೆ ಗುರುದೇವರು ಓದುವಷ್ಟು ಭಾಗ್ಯ ಪಡೆಯಿತೆ?" ಎಂದು ಮನಸ್ಸು ಆಶ್ಚರ್ಯಪಟ್ಟಿತು. ಅದು ಎಲ್ಲರನ್ನೂ ಹುರಿದುಂಬಿಸುವ ಬಗೆ ಅವರದು ಎಂಬ ಅರಿವ ಮರುಕ್ಷಣಕೆ ಯೋಚನೆ ಆಗ ಬಾರದಾಯಿತು. "ಭಾಗ್ಯವಂತೆ. ಭಾಗ್ಯವಂತೆ" ಎಂದು ಮನಸ್ಸು ಬಾರಿಬಾರಿಗೂ ಮಿಡಿಯಿತು. ಅವರ ಬಗೆಗೆ ನನಗಿದ್ದ ಅಪಾರ ವಿಶ್ವಾಸ ಕವಲೊಡೆಯಿತು. ಗುರುದೇವರಲ್ಲಿ ದೇವತ್ವವನ್ನೇ ಕಲ್ಪಿಸಿಕೊಂಡೆ. ಅಗೋಚರನಾದ ಪರಮಾತ್ಮನು ತೀರ ಚಿಕ್ಕ ಕೀಟವನ್ನಾದರೂ ತನ್ನ ಕೃಪಾಕಟಾಕ್ಷದಿಂದ ಹೇಗೆ ನೋಡುತ್ತಿರುವನೋ ಅಂತೇ ಗುರುದೇವರು ನನ್ನಂತಹ ಅಲ್ಪಳ ಬರೆಹವನ್ನೂ ಓದಲು ಸಮಯವನ್ನು ಅಳವಡಿಸಿಕೊಳ್ಳುವುದೆಂದರೆ ಅದು ಅವರ ಉದಾರತೆಯ ಹೆಗ್ಗುರುತು ಅಂದುಕೊಂಡೆ.

ಆಗಲೇ ಒಂದು ಯೋಚನೆ ಹೊಳೆಯಿತು. "ಸುಪ್ರಭಾತ"ಕ್ಕೆ ಗುರುದೇವರಿಂದಲೂ, ಸಂದೇಶ ಕಳುಹಿಸಿದ್ದ ಅನ್ಯ ಹಿರಿಯ ಸಾಹಿತಿಗಳಿಂದಲೂ ಆಶೀರ್ವಾದ ಪಡೆಯುವ ಧೈರ್ಯವದು. ನನ್ನ ಬೇಡಿಕೆ ಸಫಲವಾದುದು ಎಲ್ಲರಿಗಿಂತ ಮೊದಲು ಗುರುದೇವರಿಂದ. ನನ್ನ ಪ್ರಾರ್ಥನಾ ಪತ್ರ ತಲುಪಿದೊಡನೆ ಉತ್ತರ ರೂಪವಾಗಿ ಅವರ ಆಶೀರ್ವಚನವೂ ಹೊರಟಿತು. ಮಾರೋಲೆಯಂತೆ ಉತ್ತರಿಸುವುದು ಅವರ ಸ್ವಭಾವವೆಂದು ಅನಂತರ ತಿಳಿದುಬಂದರೂ ನನ್ನ ಮಟ್ಟಿಗೆ ಸ್ವಭಾವಕ್ಕಿಂತಲೂ ಅಕ್ಕರೆ ಹೆಚ್ಚಾಗಿದ್ದಿತು. ಏಕೆಂದರೆ ಮಾರನೆಯ ಮತ್ತೊಂದು ಓಲೆ ನನ್ನ ಕೈಸೇರಿತು. "ಪತ್ರಿಕೆ ಭರಣಿ ಕೃತ್ತಿಕೆಯಲ್ಲಿ ಪ್ರಕಟವಾಗುತ್ತಿದೆ. ಪ್ರಕಟಣೆಯ ದಿನ ಬದಲಾಯಿಸು" ಎಂದು ಬರೆದಿದ್ದರು. ಪಂಚಾಂಗ ನೋಡಿದೆ. ಹೌದು. ಪ್ರಕಟಣೆಯ ದಿನದ ನಕ್ಷತ್ರ ಕೃತ್ತಿಕೆಯಾಗಿತ್ತು. ಅಂದೇ ಪ್ರಕಟವಾಗುವುದೆಂದು ಪ್ರಕಟಿಸಲಾಗಿದ್ದ ಅದನ್ನು ಮುಂದೂಡಲು ಉಪಾಯವಿರಲಿಲ್ಲ. ಗುರುದೇವರ ಆಜ್ಞೆ ಮೀರುವಂತಿರಲಿಲ್ಲ. ಹೆದರಿಕೆ ಹಿಡಿಯಿತು. "ಏನು ಮಾಡಲಿ ಗುರುದೇವಾ" ಎಂದು ಅವರನ್ನೇ ಬರೆದು ಕೇಳಿದೆ. ಮರುಟಪಾಲಿನಲ್ಲಿ ಉತ್ತರ ಬಂತು: "ಚಿಂತಿಸಬೇಡ. ಸಮಯ ಸಾಯಂಕಾಲವಾದುದರಿಂದ ಕೃತ್ತಿಕಾ ಮುಗಿದಿದೆ. ಇದ್ದುದರಲ್ಲಿ ಹಾಕು" ಎಂದು. ಅಂದು ಮೊದಲುಗೊಂಡು ನಿರಂತರ ತಮ್ಮ ಅನುಕೂಲ್ಯ ಸಲಹೆಗಳನ್ನು ನೀಡುತ್ತ ಎಲ್ಲಾ ವಿಧದಲ್ಲೂ ನನ್ನ ರಕ್ಷಕರಂತೆ ಇದ್ದರು ನನಗೆ ನನ್ನ ಗುರುದೇವರು.

ಆಡಂಬರವಿಲ್ಲದ ಅರ್ಚನೆ ಪರಮಾತ್ಮನಿಗೆ ಮುಟ್ಟುವಂತೆ ನನ್ನ ಮೂಕಭಕ್ತಿ ಗುರುದೇವರ ಚಿತ್ತಕ್ಕೆ ಹೊಳೆದಿರಬೇಕು ಎನಿಸುವಂತಹ ಘಟನೆ 1952ರ ಫೆಬ್ರವರಿ 6ರಂದು ನಡೆಯಿತು. "ರಾಯಭಾರಿ" ವಾರಪತ್ರಿಕೆಯ ಸಂಸ್ಥಾಪಕರಾದ ಶ್ರೀ ಯು.ಎಸ್.ನಾಯಕರು "ಸುಪ್ರಭಾತ" ಕಾರ್ಯಾಲಯಕ್ಕೆ ಬಂದು "ಗೋವಿಂದ ಪೈ ಅವರು ಇಲ್ಲಿಗೆ ಬರಲಿದ್ದಾರೆ" ಎಂದರು. ನನಗೆ ಹೇಗಾಗಬೇಡ! ನಾನೇ ಯಾತ್ರೆ ಹೊರಟು ಕಾಣಬೇಕಾದ ದೇವರು ತಾನಾಗಿ ಪ್ರತ್ಯಕ್ಷರಾಗುವುದೆಂದರೆ ನನ್ನ ಪುಣ್ಯವೆಷ್ಟಿರಬೇಕು ಎನಿಸಿತು ನನಗೆ. ಪರಮಾಶ್ಚರ್ಯದಿಂದ ಕೇಳಿದೆ: "ಯಾವ ಪುಣ್ಯಫಲದಿಂದ ನನಗೆ ಈ ಪರಮ ಸೌಭಾಗ್ಯ ಲಭಿಸುತ್ತಿದೆ?" "ಪೈ ಅವರು ನನ್ನ ಸಂಬಂಧಿಕರು. "ರಾಯಭಾರಿ" ಉದ್ಘಾಟನೆಗೆ ಬಂದವರನ್ನು ನಮ್ಮಲ್ಲಿ ಉಳಿಸಿಕೊಂಡಿದ್ದೇವೆ. ಮಾತಿನ ನಡುವೆ, "ಇಲ್ಲಿ "ಸುಪ್ರಭಾತ"ವೆಂಬ ಮಹಿಳಾ ಪತ್ರಿಕೆಯೊಂದು ಹೊರಟಿದೆಯಲ್ಲಾ. ಅದರ ಸಂಪಾದಿಕೆಯೊಬ್ಬ ಹೆಣ್ಣುಮಗಳು. ಏನೆಲ್ಲ ನಡೆಸುತ್ತಿದ್ದಾಳೆ ನಾನು ನೋಡಬೇಕು" ಅಂದರಂತೆ. ಎಷ್ಟು ದೊಡ್ಡ ಮನಸ್ಸು! ಎಂತಹ ಅಸದೃಶ ಕರುಣೆ? ಅತಿಮಾನವ ಗುಣವಿದು. ಅಲ್ಲದೆ ಮತ್ತೇನು?

"ಮನೆಯಿಂದಲ್ಲ ಅಗತ್ಯ ಈಗಲೇ ಕರೆತನ್ನಿ" ಎಂದು ಅಂಗಲಾಚಿದೆ. ಮೈಯೆಲ್ಲ ಕಣ್ಣಾಗಿಸಿ ಕಾದು ನಿಂತೆ. ಬಾಗಿಲ ಮುಂದೆ ಕಾರು ನಿಂತಾಗ ನನ್ನ ಹೃದಯ ಢವಗುಟ್ಟತೊಡಗಿತು. ರಾಮನ ಆಗಮನವನ್ನು ಅರಿತ ಶಬರಿಯ ಸ್ಥಿತಿ ನನ್ನದು. ಅಲಭ್ಯಲಾಭದಿಂದ ಮಾನವ ಹೃದಯದ ಪರಿಸ್ಥಿತಿ ಹೇಗಾಗುವುದೆಂಬುದನ್ನು ಅದನ್ನು ಗಳಿಸಿದವರೆ ಬಲ್ಲರು.

ಹಗಲು ಹತ್ತರ ಹೊತ್ತು. ವಾಹನದಿಂದ ಮೊದಲು ಶ್ರೀ ನಾಯಕರು ಇಳಿದರು. ಅನಂತರ ಗುರುದೇವರು. ಭವ್ಯವಾದ ಆ ಯತಿರೂಪವನ್ನು ಕಂಡು ಯಾರ ಹೃದಯ ನಮಿಸಲಾರದು? ಜ್ಞಾನಾರ್ಜನೆಯ ಭೂಮಾ ಭಾರದಿಂದ ವಿನಮ್ರವಾಗಿದ್ದ ಆ ಜ್ಞಾನದ ಗಣಿ. ತನ್ನಲ್ಲಿ ಏನೂ ಇಲ್ಲವೆಂಬಷ್ಟು ಸರಳವಾಗಿ. "ನಿಮ್ಮನ್ನು ಕಾಣಬೇಕು ಎಂದು ಮುಖ್ಯವಾಗಿ ಬಂದೆ ಯಾಕೆ ಗೊತ್ತೇ? ಏಕಾಕಿನಿಯಾಗಿದ್ದು ಪತ್ರಿಕಾ ವ್ಯವಸಾಯಕ್ಕಿಳಿದ ನೀವು ಪಡುವ ಬವಣೆ ಎಂತಹದು ನೋಡೋಣವೆನಿಸಿತು. ಅಲ್ಲದೆ ಇದು ನಿಮಗೆ ಬೇಕಾಗಿರಲಿಲ್ಲವೆಂದು ತಿಳಿಸೋಣವೆಂದೂ ಅನಿಸಿತು" ಅಂದರು. ನನ್ನ ಪಾಡಿನ ಬಗೆಗೆ ಪಿತೃಹೃದಯದ ಕಳವಳವಿದು.

ಲು ನಾಲ್ಕಾರು ದಿನ ವಿಳಂಬವಾದರೆ, "ನಿನ್ನ ಆರೋಗ್ಯ ಚೆನ್ನಿಲ್ಲವೆ? ಏಕೆ ಪತ್ರವಿಲ್ಲ" ಎಂದು ವಿಚಾರಿಸಿ, "ನಿನ್ನ ಆಯುರಾರೋಗ್ಯ ವೃದ್ಧಿಗಾಗಿ ಶ್ರೀಮದನಂತಪದ್ಮನಾಭನಲ್ಲಿ ಪ್ರಾರ್ಥಿಸಿ ಪ್ರಸಾದವಿಟ್ಟಿದ್ದೇನೆ. ಹಣೆಗೆ ಹಚ್ಚಿಕೋ ಮಂಗಲವುಂಟಾಗುವುದು" ಎಂದು ಪ್ರಸಾದ ಜತೆಗೆ ಕಳುಹಿಸುತ್ತಿದ್ದರು. ಅವರ ಪ್ರಾರ್ಥನೆ ನಿಷ್ಫಲವಾಗುತ್ತಿದ್ದಿಲ್ಲ. ಅವರ ಆಶೀರ್ವಾದ ಬಲದಿಂದ ನನ್ನ ವ್ಯಾಜ್ಯವೂ ಗುಣವಾಯಿತು. ಆಸೆ ಬಿಟ್ಟ ನಮ್ಮ ತಾಯಿಯ ಜೀವ ಕೂಡ ಉಳಿದುಕೊಂಡಿತು. ಅಂತ:ಕರಣದ ಪ್ರಾರ್ಥನೆ ವ್ಯರ್ಥವಾಗುವುದುಂಟೆ?

ಪೂಜ್ಯ ಗುರುದೇವರ ಈ ರೀತಿಯ ಕಳಕಳಿಯನ್ನು ಕಂಡು ನನ್ನ ಹೃದಯ ಕೃತಜ್ಞತೆಯಿಂದ ಕರಗಿ ಹೋಗುತ್ತಿತ್ತು. "ಸಾಮಾನ್ಯಳಾದ ನನ್ನ ಬಗೆಗೆ ಅಷ್ಟು ಕಳವಳಪಟ್ಟು ತಮ್ಮ ಆರೋಗ್ಯ ಕೆಡಿಸಿಕೊಳ್ಳಬೇಡಿ ಗುರುದೇವ" ಎಂದೊಮ್ಮೆ ಬರೆದುದಕ್ಕೆ ಅವರ ವಿವರಣೆ ಅವರ ಮಾತುಗಳಲ್ಲೇ:

"ತಾವಾರು? ಇವರಾರು? ಅವರಾರು? ಎಂದು ಮೊದಲಾಗಿ ತಾವು ಸೋಜಿಗಪಡಬೇಕಾಗಿಲ್ಲ. ನೆನಪಿರಲಿ. ಈ ಸಂಸಾರವೆಂದರೆ ಒಂದು ಸತ್ರದಂತೆ ತಾನೆ. ಅಲ್ಲಿ ಎಲ್ಲರೂ ಸರಿಸಮಾನರು. ಎಲ್ಲೆಲ್ಲಿಂದ ಬಂದವರೆಲ್ಲ, ಧನಿಕರೂ, ಬಡವರೂ. ಅಲ್ಲಿ ಒಟ್ಟಿಗೆ ತಂಗಿಕೊಳ್ಳುತ್ತಾರೆ. ಒಟ್ಟಿನಲ್ಲಿ ಸಲ್ಲಪಿಸುತ್ತಾರೆ. ಅವರವರ ಬುತ್ತಿಯನ್ನೋ ಮಿಷ್ಟಾನ್ನವನ್ನೋ ಅವರವರು ಭುಂಜಿಸುತ್ತಾರೆ. ಬೆಳಗಾತ ಅವರವರು ಅವರವರ ದಾರಿ ಹಿಡಕೊಂಡು ಹೋಗುತ್ತಾರೆ. ಪರಸ್ಪರ ಆ ಕೆಲ ಗಳಿಗೆ ಪರಿಚಯವಾದುದುಂಟಲ್ಲ ಅದೇ ನಮ್ಮ ಜೀವಮಾನದಲ್ಲಿಯ ಸ್ವರ್ಣರೇಖೆ. ಆ ಸಲ್ಲಾಪದಲ್ಲಿ ಹಿರಿಯ ಕಿರಿಯರೆಂದಾಗಲಿ, ಬೇರೆ ಯಾವ ಬಗೆಯದಾಗಲಿ ಭೇದವಿಲ್ಲ. ಒಬ್ಬರೊಂದಿಗೆ ಒಬ್ಬರು ಪರಸ್ಪರ ಪ್ರಥಮ ದರ್ಶನದಲ್ಲೇ ಬಹಳ ಸಲುಗೆಯಿಂದ ಮಾತನಾಡಹತ್ತುವುದೆಂದರೆ ಅವರೊಳಗುಳ್ಳ ಪೂರ್ವಜನ್ಮದ ನಿಕಟವಾದ ಸಂಬಂಧದಿಂದ ತಾನೇ. ಅದಕ್ಕೆ ಇಂಗ್ಲೀಷಿನಿಂದ Elective affinity ಎನ್ನುತ್ತಾರೆ..............ಪ್ರಥಮ ದರ್ಶನದಲ್ಲೇ ಒಬ್ಬರಲ್ಲೊಬ್ಬರು ಒಳಕೆಯಾಗುವುದು ಪ್ರಕೃತಿಯ ಲಕ್ಷಣ. ಅದು ಕೆಲವರನ್ನು ಕಂಡರೆ ಮಾತ್ರ ಉಂಟು. ಮತ್ತೆ ಕೆಲವರನ್ನು ಕಂಡರೆ ಇಲ್ಲ. ಹಾಗೂ ಮತ್ತು ಕೆಲವರನ್ನು ಕಂಡರೆ ಒಲುಮೆಯ ಬದಲಾಗಿ ಹಗೆ !"

ನನ್ನ ಬಾಳಿನಲ್ಲಿ ಯಾವ ಸಮಸ್ಯೆಯೇ ಒದಗಲಿ ಅವರಲ್ಲಿ ಅರಿಕೆ ಮಾಡಿದರೆ ನನಗೆ ಸಮಾಧಾನವಾಗುತ್ತಿತ್ತು. ಅವರ ಆಶೀರ್ವಾದಯುಕ್ತ ಪತ್ರ ಬಂದಿತೆಂದರೆ ನನ್ನ ಸಮಸ್ಯೆಗಳೂ ಬಗೆಹರಿಯುತ್ತಿದ್ದವು. ಮುಂದೆ ದಿನೇ ದಿನೇ ಅವರ ಆರೋಗ್ಯ ಶಿಥಿಲಗೊಳ್ಳುವುದನ್ನರಿತು "ಇನ್ನು ಪದೇ ಪದೇ ಪತ್ರ ಬರೆದು ನನ್ನ ಗೋಳಿನಿಂದ ತಮ್ಮನ್ನು ಪೀಡಿಸಲಾರೆ" ಎಂದು ಬರೆದೆನೊಮ್ಮೆ. ಮರು ಟಪಾಲಿನಲ್ಲೇ ಉತ್ತರ ಬಂದಿತು. "ಬರೆಯುತ್ತಿರು. ನಿನ್ನ ಪತ್ರಗಳಿಂದ ನನಗೆ ಪೀಡೆಯಾಗುತ್ತಿಲ್ಲ. ಹಾಗೆ ತಿಳಿಯದಿರು. ಬದಲು ಹಬ್ಬದ ಸಂಭ್ರಮವಾಗುತ್ತಿದೆ."

ಬಹುಶ: ಅವರು ತಮ್ಮ ಸಂಬಂಧಿಕರಿಗಾದರೂ ನನಗೆ ಬರೆದಷ್ಟು ಪತ್ರಗಳನ್ನು ಬರೆದಿದ್ದರೋ ಸಂದೇಹ. ನಾನವರನ್ನು ನನ್ನ ರಕ್ಷಕ, ಮಾರ್ಗದರ್ಶಕರೆಂದು ತಿಳಿದಂತೆ ಅವರು ನನ್ನನ್ನು ತನ್ನ ತಾಯಿಯಂತೆ ತಿಳಿದಿರಬೇಕು. ನನ್ನ ದು:ಖ ಕಷ್ಟಗಳನ್ನು ತಾನೂ ಅನುಭವಿಸಿ ನನಗೆ ಪ್ರತಿ ಪತ್ರದಲ್ಲೂ ಸಾಂತ್ವನೆಯ ಸಂದೇಶಗಳನ್ನು ತುಂಬಿ, ಕಳುಹಿಸುತ್ತಿದ್ದರು. ಅವರ ಪ್ರತಿಪತ್ರವೂ ಉಪದೇಶದ ಅಮೃತದಿಂದ ಓತಪ್ರೋತವಾಗಿರುತ್ತಿತ್ತು. ಅನುಭವಗಳ ಕಟ್ಟೊಡೆದ ಸೆಲೆಯಾಗಿರುತ್ತಿತ್ತು. ಹಾಗಿದ್ದರೂ ತಮಗಾದ ನೆಗಡಿ, ಜ್ವರ, ನಿರ್ಬಲತೆ, ಹೆಚ್ಚು ನಡೆದರೆ ಉಬ್ಬಸ ಬಂದಂತಾಗುವ ಪರಿಸ್ಥಿತಿ, ಹೃದ್ರೋಗವೆಂದು ವೈದ್ಯರು ವಿಶ್ರಾಂತಿಯನ್ನು ನಿಯಮಿಸಿದ್ದರೂ ಅದನ್ನು ಆಚರಿಸಲು ಒಲ್ಲದ ತನ್ನ ಸ್ವಭಾವ, ತನಗುಂಟಾದ ಬಾಹುಪೀಡೆ, ಎಲ್ಲವನ್ನೂ ನನಗೆ ಬರೆಯದೆ ಅವರಿಗೆ ಸಮಾಧಾನವಿರಲಿಲ್ಲ. ಒಮ್ಮೆ ಬಚ್ಚಲು ಮನೆಯಲ್ಲಿ ಜಾರಿ ಬಿದ್ದವರು ಸ್ಮೃತಿ ತಪ್ಪಿದ್ದಿತಂತೆ. ಸ್ಮೃತಿ ಬಂದೊಡನೆ ಮಗು ತಾಯಿಯನ್ನು ಕೂಗಿ ಹೇಳುವಂತೆ ಅಂದೇ ನನಗೆ ಪತ್ರ ಬರೆದರಂತೆ. ನಾಲ್ಕು ದಿನದ ಮೇಲೆ ಅಂಚೆಗೆ ಹಾಕುತ್ತಿದ್ದೇನೆ. ಎಂದು ಕೊನೆಯಲ್ಲಿ ಬರೆದಿದ್ದರು. ಮೊದಲು ಅಂಚೆಗೆ ಹಾಕುವುದಿಲ್ಲವೆಂದಿದ್ದರಂತೆ. ಹಿರಿಯ, ಜೀರ್ಣ-ಶೀರ್ಣ ದೇಹದೊಳಗೆ ಹುದುಗಿದ್ದ ಮಗುವಿನ ಮನಸ್ಸಿಗೆ ಬೇರೆ ಉದಾಹರಣೆ ಬೇಕೆ? ಮಕ್ಕಳಂತಹ ವಿವರಣೆ: "ನೀನು ನಮ್ಮಲ್ಲಿಗೆ ಬಂದಿದ್ದಾಗ ಮಂಚದಲ್ಲಿ ಮಲಗಿದ್ದೆಯಲ್ಲ ಅದೇ ಕೋಣೆಯಲ್ಲಿ ನನ್ನನ್ನು ಎತ್ತಿ ತಂದು ಹಾಕಿದ್ದರು. ಉದ್ದ ಕಾಲಿನ ಕೆಲಸದವಳು ಮಾಡು ಹತ್ತಿ ಹಂಚುಕಿತ್ತು ಕೆಳಗಿಳಿದು ಬಾಗಿಲ ಕೀಳು ತಪ್ಪಿಸಿದ್ದಳಂತೆ. ಈಗ ಸುಧಾರಿಸಿಕೊಂಡಿದ್ದೇನೆ. ಗಾಬರಿ ಪಡುವ ಕಾರಣವಿಲ್ಲ"

ದೂರದೇಶದಲ್ಲಿದ್ದಾತ ತನ್ನ ತಾಯಿಗೆ ಇದಕ್ಕಿಂತ ಹೆಚ್ಚಿನ ವಿವರಣೆ ಕೊಡಬಲ್ಲನೆ? ಒಮ್ಮೆ ಮನಸ್ಸನ್ನು ನಿರಾಶೆಯ ಕತ್ತಲು ಕವಿದುಕೊಂಡಾಗ ನನ್ನ ಅವಸ್ಥೆಯನ್ನು ಅವರಿಗೆ ಬರೆದು ತಿಳಿಸಿದ್ದೆ. ಅದಕ್ಕುತ್ತರವಾಗಿ ತಮ್ಮ ಹೃದ್ಭಾವನೆಗಳನ್ನು ಮುಚ್ಚುಮರೆಯಿಲ್ಲದೆ ಬರೆದ ಬಗೆ:

"ತಮಗೇ ಅಲ್ಲ, ನನಗೂ ಕೆಲಕಾಲದಿಂದ ಅದೇ ಅವಸ್ಥೆಯಾಗಿದೆ. ಬಾಳಿನಲ್ಲಿ ಮಮತೆಯಿಲ್ಲ, ಉತ್ಸಾಹವಿಲ್ಲ: ತೀರ ಜುಗುಪ್ಸೆ. ತುಂಬ ಮಾತನಾಡಲೂ ಕೂಡದು. ಈ ದುರ್ದಶೆ ಇಂದಲ್ಲ ನಾಳೆ ಸುಧಾರಿಸೀತು, ಬೆಳಕು ತೋರೀತು ಎಂದು ಕಾದು ಕಾದು ಹೊತ್ತೇ ಹೋಗುತ್ತದಲ್ಲದೆ ಅವಸ್ಥೆ ಮಾರ್ಪಡುವುದಿಲ್ಲ. ಹೀಗಾಗಿ ನಾನು ಹಲಗಾಲದಿಂದ ಎಂಬಂತೆ ಏನೂ ಬರೆಯಲಿಲ್ಲ. ಆದರೂ ನಾನು ಈ ವರೆಗೆ ಮುಂದೆ ಸುಸ್ಥವಾದೀತು ಎಂಬ ನಂಬಿಕೆಯನ್ನು ತೀರ ಬಿಟ್ಟಿಲ್ಲ. ದಿನೇ ದಿನೇ ಮತ್ತೂ ಮತ್ತೂ ಕೋರುತ್ತಲಿದ್ದೇನೆ. ಈ ಕಾರಣ ತಮ್ಮ ಈವಂದಿನ ಮನೋವೃತ್ತಿಯಲ್ಲಿ (ತಮ್ಮ ದೋಣಿಯಲ್ಲೇ ಕುಳಿತಿರುವ) ನಾನು ಸಹಾನುಭವಿಸಲಾಪೆ. ನಾನು ನನಗೆ ಹೇಳಿಸಿಕೊಳ್ಳುವ ಮಾತುಗಳನ್ನೇ ತಮಗೂ ಹೇಳುವೆ–"Wait and hope; hope and pray" ಎಂದು. ಕೋರಿಕೆಯನ್ನು ಬಿಟ್ಟುಬಿಡದಿರಿ, ನಂಬುಗೆಯನ್ನು ತೊರೆದುಬಿಡದಿರಿ. ಕೋರಿ ತಾಳಿರಿ. ನಂಬಿ ಬಾಳಿರಿ. ಹಗಲು ಹಾಸಿಗೆಯಿಂದ ಏಳಬೇಕಾದರೆ, ಇರುಳು ಹಾಸಿಗೆಯಲ್ಲಿ ಕಣ್ಣುಮುಚ್ಚಬೇಕಾದರೆ ಪ್ರಾರ್ಥಿಸುತ್ತಿರಿ-ದೇವಾ, ನನ್ನ ಸುತ್ತಲು ಕವಿದಿರುವ ಈ ಕತ್ತಲನ್ನು ತೊಲಗಿಸು. ಇನ್ನಾದರೂ ಅದನ್ನು ಸಾಕುಮಾಡು. ನನ್ನ ಇಂದಿನಿಂದ ಮುಂದಣ ಬಾಳ್ವೆಯಲ್ಲಿನ ಕೊನೆಯನಕಾ ಬೆಳಕನ್ನು ಸುರಿಸು. ಹೃದಯದಲ್ಲಿ ಶಾಂತಿಯನ್ನು ಬರಿಸು.

ಎಂದು. ಕಡ್ಡಿ ಮುರಿದು ತಮಗೆ ಹೇಳುತ್ತೇನೆ-ಶ್ರೀ ದೇವರು ತಮ್ಮ ಅಂಗಲಾಚಿಕೆಯನ್ನು ಕೇಳೇ ಕೇಳುವನು. ತಮ್ಮ ಬೇಡಿಕೆಯನ್ನು ನೀಡೇ ನೀಡುವನು. ತಥಾಸ್ತು." ಅವರ ಹೃದ್ಭಾವನೆಗಳ ಪರಿಚಯಕ್ಕೆ ಈ ಪತ್ರವೇ ಸಾಕಾಗಿದೆ.

ಅವರನ್ನು ಕಂಡ ಆರು ವರ್ಷಗಳ ಅನಂತರ ಒಮ್ಮೆ ಕೆಲ ಸೋದರಿಯರೊಂದಿಗೆ ಅವರನ್ನು ಕಾಣಲೆಂದು ಮಂಜೇಶ್ವರಕ್ಕೆ ಹೋಗಿದ್ದೆ. ಮನೆ ತಲಪುವಾಗ ಸಾಯಂಕಾಲವಾಗಿತ್ತು. ಮೊಗಸಾಲೆಯನ್ನಡರಿದಾಗ ಗುರುದೇವರು ಒಳಮನೆಯಲ್ಲಿದ್ದರು. ಅಲ್ಲಿದ್ದ ಸದ್ಗೃಹಸ್ಥರೊಬ್ಬರು ಅಲ್ಲಿದ್ದ ಆಸನದಲ್ಲಿ ನಮ್ಮನ್ನು ಕೂಡುವಂತೆ ಹೇಳಿ, "ಈಗ ಬರುತ್ತಾರೆ" ಎಂದವರು ಒಳಕ್ಕೆ ಹೋಗಿ ನಮ್ಮ ಆಗಮನವನ್ನು ಸೂಚಿಸಿದರು. ಆ ಸದ್ಗೃಹಸ್ಥರು ಗುರುದೇವರ ತಮ್ಮಂದಿರೆಂದು ಆ ಮೇಲೆ ತಿಳಿಯಿತು.

ಮೊದಲಿಗೆ ತಿಳಿಸದೆ ಬಂದುದು ತಪ್ಪಾಯಿತೋ ಎಂಬ ಭಯದಿಂದ ಸಂಕೋಚಗೊಳ್ಳುತ್ತಿದ್ದ ನಮ್ಮನ್ನು, ಮಕ್ಕಳನ್ನು ಸ್ವಾಗತಿಸುವ ತಂದೆಯಂತೆ, ಅವರ ಆಗಮನವನ್ನು ಗೌರವಿಸುವುದಕ್ಕಾಗಿ ಎದ್ದುನಿಂತ ನಮ್ಮನ್ನು ನಿಷೇಧಿಸುತ್ತ ಕೂಡಲು ಹೇಳಿದರು. ಒಂದೆರಡು ಬಾರಿ ನನ್ನನ್ನು ಕಂಡಿದ್ದರೂ, ಅಷ್ಟೊಂದು ಆತ್ಮೀಯತೆ ಪತ್ರಮುಖೇನ ಬೆಳೆದುಬಂದಿದ್ದರೂ ನನ್ನ ಪರಿಚಯ ಒಮ್ಮೆಲೆ ಅವರಿಗೆ ಆಗಲಿಲ್ಲ. ನಾನು ಪಾದಮುಟ್ಟಿ ನಮಸ್ಕರಿಸಿದಾಗ ತಟ್ಟನೆ ನೆನಪಾಗಿ, "ಓ ನೀವು ! ಬಹಳ ಸಂತೋಷ. ನನಗೂ ನಿಮ್ಮನ್ನು ಕಾಣಬೇಕೆಂದು ಆಸೆಯಾಗಿತ್ತು" ಎಂದರು. ಸ್ವಯಂ ಬೃಹದಾತ್ಮ ಅವರದು. ಎಲ್ಲವನ್ನೂ ಮಹತ್ತಾಗಿಯೇ ಕಾಣುವ ಪ್ರಕೃತಿ ಮೈಗೂಡಿತ್ತು ಅವರಿಗೆ. ಎಷ್ಟೇ ಚಿಕ್ಕವರಿರಲಿ "ಬೇಡ, ಬಾರದು" ಎಂದರೂ ಬಹುವಚನ ಪ್ರಯೋಗಿಸುತ್ತಿದ್ದರವರು. ಎಷ್ಟೊಂದು ಬಾರಿ ಬೇಡಿಕೊಂಡ ಮೇಲೆ "ತಾವು" "ನೀವು" ಆಗಿತ್ತು. "ನೀನು" ಎಂಬ ಸರ್ವನಾಮವನ್ನೇ ಮರೆತಿದ್ದರೇನೋ ! ಅತಿಥಿಗಳನ್ನು ಕಂಡು ಅವರು ಪಡುವ ಸಂಭ್ರಮಕ್ಕೇನನ್ನೋಣ ! ನಮ್ಮೆಲ್ಲರ ಕ್ಷೇಮ ಸಮಾಚಾರ, ಪರಿಚಯ, ಕೆಲವರ ತಂದೆ, ಅಜ್ಜಂದಿರ ಗುರುತು ಎಲ್ಲ ವಿಚಾರಿಸುತ್ತ ನಡುವೆ ಎರಡು ಬಾರಿ ಒಳಕ್ಕೆ ಹೋಗಿ ಬಂದರು. ಸ್ವಲ್ಪ ಹೊತ್ತಿನಲ್ಲೇ ಎರಡು ದೊಡ್ಡ ದೊಡ್ಡ ತಾಟುಗಳಲ್ಲಿ ಬಗೆ ಬಗೆಯ ಪಕ್ವಾನ್ನಗಳೂ ಕಾಫಿಯೂ ಬಂತು. ಇಂತಹ ಅವೇಳೆಯಲ್ಲಿ ಬಂದು ಇಷ್ಟು ತೊಂದರೆ ಕೊಡುವಂತಾಯಿತೆ ! ಎಂದು ನನ್ನ ಮನಸ್ಸು ಬಲು ಬೇಗುದಿಗೊಂಡಿತು. ಆಗ ಸಂಧ್ಯಾದೀಪ ಹೊತ್ತಿಸುವ ಸಮಯವಾಗಿದ್ದುದರಿಂದ ಹರಿಕೇನ್ ಲ್ಯಾಂಪನ್ನು ಹಚ್ಚಿದ್ದರು. ನನಗೆ ಕೊಂಚ ಬಚ್ಚಲಿಗೆ ಹೋಗಬೇಕಾಗಿತ್ತು. ಪಕ್ಕದಲ್ಲಿದ್ದವರಲ್ಲಿ ಪ್ರಸ್ತಾಪಿಸುತ್ತಿದ್ದಾಗ "ಏನು, ಏನಾಗಬೇಕು" ಎಂದು ಕಳಕಳಿಯಿಂದ ವಿಚಾರಿಸಿ, ಬಚ್ಚಲಿಗೆ ಹೋಗಬೇಕಾಗಿದ್ದ ವಿಚಾರ ತಿಳಿದು ಸ್ವಯಂ ತಾನೇ ದೀಪವನ್ನು ಕೈಗೆತ್ತಿ "ನನ್ನ ಹಿಂದೆ ಬನ್ನಿ ನಾ ತೋರಿಸುವೆ" ಎಂದು ಕರೆದೊಯ್ಯಬೇಕೆ ಆ ಮಹಾತ್ಮ ! ರಾಷ್ಟ್ರ ಗೌರವಿಸುತ್ತಿರುವ ಈ ಮಹಾವ್ಯಕ್ತಿಯ ಇದೆಂತಹ ಮುಖ ! ಕೆಲಸದಾಳಿಗೆ ಹೇಳಿದ್ದರೂ ಸಾಗುತ್ತಿತ್ತು. ಆದರೆ, ಹಾಗಲ್ಲ, ಅತಿಥಿಗಳನ್ನು ಆದರಿಸುವ ಮಹಾತ್ಮರ ಬಗೆಯೇ ಅಂತಹುದು ! ನಾವೆಲ್ಲಾ ಕೈಕಾಲು ತೊಳೆದು ಬಂದೊಡನೆ ಹೆಗಲ ಮೇಲಣ ಚೌಕವನ್ನು ಕೈಗಿತ್ತು ಪುನ: ಮೊಗಸಾಲೆಯವರೆಗೆ ನಮ್ಮನ್ನು ಕರೆತಂದರು. "ಇಂತಹ ನಿರಾಡಂಬರವೃತ್ತಿ ಪ್ರಪಂಚದಲ್ಲಿ ಎಷ್ಟು ಮಂದಿಯಲ್ಲಿ ಮನೆಮಾಡಿಕೊಂಡಿರಬಹುದು?" ಎಂದು ನನ್ನನ್ನು ನಾನು ಪ್ರಶ್ನಿಸಿಕೊಂಡೆ ಅಷ್ಟಕ್ಕೇ ನಿಲ್ಲಲಿಲ್ಲ ಅವರ ಆದರ. ನಾವು ಹೊರಟಾಗ ಆಳುಗಳಿದ್ದರೂ ಗೇಟಿನವರೆಗೆ ಸ್ವತ: ದೀಪವನ್ನು ಹಿಡಿದು. ನಾನು "ಬೇಡ ಬೇಡ ದೀಪವಿಲ್ಲದೆ ಹೋಗಬಲ್ಲೆವು" ಎಂದರೂ ಕೇಳದೆ ನಮ್ಮನ್ನು ಗೇಟಿನವರೆಗೆ ಬಿಟ್ಟು ಪ್ರಯಾಣದಲ್ಲಿ ಜಾಗ್ರತೆ ಹೇಳಿ ನಮಗೆ ಬಿಡುವುಕೊಟ್ಟ .ಆ ಘಟನೆ ಇಂದೇ ನಡೆದಂತೆ ನನ್ನ ಹೃದಯದಲ್ಲಿ ಪಡಿಮೂಡಿದೆ.

ಅನಂತರ ಮರುವರುಷ ನಾನು ಬರೆದ "ಸಾರ್ಥಕ ಜೀವನ"ವೆಂಬ ನಾಟಕವನ್ನು ಅವರಿಂದ ತಿದ್ದಿಸಿಕೊಳ್ಳಲು ಮತ್ತು ಮುನ್ನುಡಿ ಬೇಡಲು ಗೆಳತಿಯೊಬ್ಬರೊಂದಿಗೆ ಒಂದು ಮುಂಜಾನೆ ಅವರು ಏಳುವುದಕ್ಕಿಂತ ಮುನ್ನ ಅವರ ಮನೆಯ ಮೊಗಸಾಲೆಯಲ್ಲಿ ಹೋಗಿ ಕುಳಿತೆ. ಎಷ್ಟೋ ಹೊತ್ತಿನ ಮೇಲೆ ಗುರುದೇವರು ಕಿಟಿಕಿಯ ಮೂಲಕ ನನ್ನನ್ನು ನೋಡಿ "ಯಾರವರು?" ಎಂದು ಅಚ್ಚರಿಯಿಂದ ಪ್ರಶ್ನಿಸಿದರು. ಅವರೆದ್ದು ಬರುತ್ತಿರುವಾಗ ಹೆಮ್ಮಕ್ಕಳ ಸ್ವರ ಕೇಳಿಸಿ ಅವರು ಗಾಬರಿಯೇ ಆದರಂತೆ. ನಮ್ಮ ಗುರುತು ಹತ್ತಿದೊಡನೆ "ಹೋ, ಲಕ್ಷ್ಮಿ ಸರಸ್ವತಿಯರು ಒಟ್ಟಿಗೆ ಪ್ರತ್ಯಕ್ಷರಾಗಿರುವಿರಿ. ಶುಭದಿನವಿದು. ಬಂದೆ" ಎಂದವರು ನಮ್ಮನ್ನು ಕೂಡಲು ಹೇಳಿ ಪ್ರಾತರ್ವಿಧಿಗಳನ್ನು ತೀರಿಸಿ ನಮ್ಮ ಬಳಿ ಬಂದು ಕುಳಿತು, ಬಂದ ಕಾರಣವನ್ನರಿತುಕೊಂಡರು. ಗುರುದೇವರದು ಹಾಸ್ಯ ಪ್ರಕೃತಿಯೂ ಹೌದು. ಯಾವುದೋ ಪೌರಾಣಿಕ ಕಥೆಯನ್ನು ಹೇಳಿ "ನಿಜವಾಗಿಯೂ ದೇವತೆಗಳೇ ಬಂದು ಮಸಕು ಮುಂಜಾನೆಯಲ್ಲಿ ಮೊಗಸಾಲೆಯಲ್ಲಿ ಕುಳಿತಿರುವರೋ ಎಂದು ಸಂಶಯ ಪಟ್ಟೆ" ಎಂದು ನಕ್ಕು ನಮ್ಮನ್ನು ನಾಚಿಸಿದರು. ಅನಂತರ ನನ್ನ ಕೃತಿಯನ್ನು ನಿಧಾನವಾಗಿ ಓದಿ ತಿದ್ದಿ ಮುನ್ನುಡಿಯನ್ನು ಅನುಗ್ರಹಿಸಬೇಕು ಎಂದಾಗ "ನಿಧಾನವಾಗಿ ಏಕೆ? ಇಂದೇ ನೀವು ಓದುತ್ತಾ ಹೋಗಿರಿ, ನಾನು ತಿದ್ದುತ್ತಾ ಹೋಗುವೆ. ಇಂದು ಇಲ್ಲೇ ನಿಮ್ಮ ಊಟ" ಎನ್ನುತ್ತಾ ಬೆಳಗಿನ ಉಪಾಹಾರ ಮುಗಿದೊಡನೆ ನಡುಹಗಲು ಊಟದ ಹೊತ್ತಿನವರೆಗೂ ಬೇಸರವಿಲ್ಲದೆ ತಮ್ಮ ಅಮೂಲ್ಯ ಹೊತ್ತನ್ನು ನನ್ನ ಕೃತಿಯನ್ನು ತಿದ್ದುವುದರಲ್ಲಿ ಕಳೆದು ಕೊಂಚವೂ ಬಳಲದೆ ನಗುನಗುತ್ತ "ಇನ್ನು ಊಟವಾದ ಮೇಲೆ" ಎಂದು ಎದ್ದು, ನಮಗೆ ತಮ್ಮ ಪಂಕ್ತಿಲಾಭವನ್ನು ದಯಪಾಲಿಸಿ. ಮಧ್ಯಾಹ್ನ ವಿಶ್ರಾಂತಿಯನ್ನು ಪಡೆಯದೆ ಸಾಯಂಕಾಲದೊಳಗೆ ತಿದ್ದುವಿಕೆಯನ್ನು ಮುಗಿಸಿ. ಸಾಯಂಕಾಲ ನಾವು ಹೊರಟು ನಿಂತಾಗ "ಮುನ್ನುಡಿ ಇತ್ತೀಚೆಗೆ ಬರೆಯುವುದನ್ನು ಬಿಟ್ಟಿದ್ದೇನೆ. ಆದರೂ ನಿಮಗೆ ಇಲ್ಲವೆನ್ನಲಾಗುವುದಿಲ್ಲ. ಹಸ್ತಪ್ರತಿಯನ್ನು ಇಲ್ಲೇ ಇಟ್ಟು ಹೋಗಿ. ಬರೆದು ತಿಳಿಸುತ್ತೇನೆ" ಅಂದವರು ಬಿಡುವು ಕೊಟ್ಟರು.

ನಾವು ಊರಿಗೆ ತಲುಪಿದ ಮರುದಿನವೇ "ಮುನ್ನುಡಿ ಬರೆದಾಗಿದೆ. ನಾಳೆ ಬಂದು ಕೊಂಡುಹೋಗಿ" ಎಂದು ಕಾರ್ಡು ಬಂದಿತು ಅದರಂತೆ ಹೋಗಿ ಪಡೆದು ಬಂದೆ. ಇದು 1959ರಲ್ಲಿ. ಇದೇ ಅವರ ನನ್ನ ಕೊನೆಯ ಭೇಟಿ. ಅನಂತರ ಅವರನ್ನು ಕಾಣಲು ನನಗೆ ಸಾಧ್ಯವಾಗಲಿಲ್ಲ. ಪದೇ ಪದೇ ಹೋಗಿ ಅವರ ಸಮಯವನ್ನು ಹಾಳುಮಾಡಬಾರದೆಂದೇ ಮನಸ್ಸು ಅವರನ್ನು ಕಾಣಲು ತವಕಿಸುತ್ತಿದ್ದರೂ ಹೋಗಲಿಲ್ಲ. ಆದರೆ ಒಮ್ಮೆ ನನ್ನನ್ನು ಕಾಣಬೇಕೆಂದು ಅವರು ಬಯಸಿದ್ದರು. ನನಗೆ ಹೋಗಲು ಅನುವಾಗಲಿಲ್ಲ. ಬರುವೆನೆಂದು ಮಾತು ಕೊಟ್ಟಿದ್ದೆ. ಆದರೆ ಇನ್ನದು ಸಾಧ್ಯವಾಗಲು ಎಷ್ಟು ಸಮಯವಿದೆಯೋ ದೇವನೆ ಬಲ್ಲ. ಇಲ್ಲಿಯ ಕಾಲೇಜೊಂದರಲ್ಲಿ ಅವರ ಭಾಷಣದ ಏರ್ಪಾಡು

ಒಮ್ಮೆ ಆಗಿತ್ತು. ಆದರವರು ನನಗೆ ಬರೆದರು: "ಆರೋಗ್ಯ ಚೆನ್ನಿಲ್ಲ. ಕೊಂಚ ಸುಧಾರಿಸಿಕೊಂಡರೆ ಬಂದೇ ಬರುವೆ. ಏಕೆ ಗೊತ್ತೇ? ಭಾಷಣ ಕೊಡುವ ಲವಲವಿಕೆಯಲ್ಲ ನಿಮ್ಮನ್ನು ಕಾಣುವ ಮುಖ್ಯ ಉದ್ದೇಶದಿಂದ" ಆದರೆ, ಅವರು ಬರಲಿಲ್ಲ. ಅನಂತರ ದಿನೇ ದಿನೇ ಅವರ ಆರೋಗ್ಯ ಕೆಡುತ್ತಲೇ ಹೋಯಿತು. ಒಂದಲ್ಲ ಒಂದು ಕುತ್ತ ತಪ್ಪಿರಲಿಲ್ಲ. ಇತ್ತ ನನ್ನ ಆರೋಗ್ಯವೂ ಕೆಡುತ್ತ ಬಂದಿತು. ಪತ್ರವ್ಯವಹಾರ ನಾನೇ ಕಡಿಮೆ ಮಾಡಿದೆ. ಅವರ ಬಾಹು ಪೀಡೆ ಸಂಪೂರ್ಣ ಗುಣವಾಗಿರಲಿಲ್ಲ. ಪತ್ರಕ್ಕೆ ಪ್ರತ್ಯುತ್ತರ ಯಾರಿಗೇ ಆಗಲಿ ಕೊಡುವುದು ಅವರ ಜನ್ಮಕ್ಕಂಟಿಕೊಂಡ ಸ್ವಭಾವವಾಗಿತ್ತು. ಅವರ ಆರೋಗ್ಯಕ್ಕಾಗಿ ನಾನು ಪ್ರಾರ್ಥಿಸುತ್ತಿದ್ದೆ. ನನ್ನ ಆರೋಗ್ಯಕ್ಕಾಗಿ, ತಾಯಿ, ತಂಗಿ, ಮಗಳು, ಬಂಧು ಎಲ್ಲವೂ ಆಗಿದ್ದ ಅವರು ಪ್ರಾರ್ಥಿಸುತ್ತಿದ್ದರು. ನಾವಿಬ್ಬರೂ ಜತೆಜತೆಗೇ ಎಂಬಂತೆ ಅವರು ವೆನ್‌ಲಾಕ್‌ನಲ್ಲಿ ನಾನು ಕದ್ರಿ ನರ್ಸಿಂಗ್ ಹೋಂನಲ್ಲಿ ಸೇರಿಸಲ್ಪಟ್ಟಿದ್ದೆವು. ಆದರೆ, ಅವರ ಪ್ರಾರ್ಥನೆ ಫಲಿಸಿತು. ನಾನು ಉಳಿದೆ. ತನ್ನ ಬಾಳಿನ ಕೊನೆಯ ತನಕ ತಂದೆಯಂತೆ ಹರಸುತ್ತ ಬಂಧುವಿನಂತೆ ಸಲಹೆ ನೀಡುತ್ತ, ಅಣ್ಣನಂತೆ ಬುದ್ಧಿವಾದಗಳನ್ನು ಹೇಳುತ್ತ, ಗುರುವಿನಂತೆ ಪಥ ಪ್ರದರ್ಶನ ಮಾಡುತ್ತ, ನನ್ನ ನಿರಾಧಾರ ಜೀವನದ ಬೆಂಗೋಲಾಗಿ ನನ್ನನ್ನು ರಕ್ಷಿಸುತ್ತ ಬಂದಿದ್ದ ನನ್ನ ಗುರುದೇವರ ಅಗಲಿಕೆಯ ನೆನಪಿನಿಂದ ಒಂದೊಮ್ಮೆ ಹೃದಯ ಬಡಿತದ ಸ್ಥಿಮಿತ ತಪ್ಪುತ್ತದೆ. ಅನಂತರ ಇಲ್ಲ. ಅವರು ಎಲ್ಲೂ ಹೋಗಿಲ್ಲ; ಅವರು ಮಂಜೇಶ್ವರದ ಗೋವಿಂದ ನಾಮವನ್ನು ತ್ಯಜಿಸಿ ವೈಕುಂಠದ ಅನಂತನಾಗಿದ್ದಾರೆ ಕೇಂದ್ರಿತ ಕಿರಣ ಪಸರಿಸಿಕೊಂಡಿದೆ. ಕನ್ನಡ ನಾಡು ಇರುವವರೆಗೂ ಅವರು ಸ್ಥಿರವಾಗಿ ಉಳಿಯಲಿದ್ದಾರೆ ಎಂದು ಸಮಾಧಾನಗೊಳ್ಳುವಂತಾಗುತ್ತದೆ. ಮನಸ್ಸು ತೀರ ಉದ್ವಿಗ್ನವಾದಾಗ ಅವರ ಪತ್ರಗಳನ್ನು ಓದುತ್ತಿದ್ದರೆ ಎಷ್ಟೇ ಹಳೆಯವಾಗಿರಲಿ, ಈಗ ತಾನೇ ಅಂಚೆಯಿಂದ ಬಂದವೆಂಬಂತೆ ಅದರಲ್ಲಿನ ವಿಷಯಗಳು ಅಷ್ಟು ನವ್ಯವೂ ಭವ್ಯವೂ ಆಗಿ ಕಾಣಿಸುತ್ತವೆ.

ಗುರುದೇವ ಗೋವಿಂದ ಪೈ ಅವರು ಅಖಿಲಕರ್ನಾಟಕದ ಸ್ವತ್ತು ನಿಜ. ನನ್ನ ಪಾಲಿಗೆ ಅವರು ಮಮತೆಯ ಮಳೆಗರೆಯುವ ಭಾಗ್ಯ ಸಂಪತ್ತಾಗಿದ್ದರು ಎಂಬುದನ್ನು ಯೋಚಿಸುವಾಗ, ನನ್ನ ಬಗೆಗೆ ನನಗೇ ಮತ್ಸರವಾಗುತ್ತದೆ. ಅಂತಿರುವಾಗ ಕಾಲಸೂರ್ಯನಿಗೆ ಆಗಲಾರದೆ? ಅದಕ್ಕೆಂದೇ ಈ ತೇಜೋಮೂರ್ತಿಯ ಮೇಲೆ ಧಾಳಿ ಮಾಡಿ ಅಸ್ತಿತ್ವವನ್ನು ಕೊನೆಗಾಣಿಸಿರಬೇಕು. ಆತನ ಈ ನಿಷ್ಠುರ ವರ್ತನೆಯನ್ನೆಣಿಸುವಾಗ ದು:ಖದಿಂದ ಎದೆಬಿರಿಯುತ್ತದೆ, ಮನ ಉರಿಯುತ್ತದೆ. ದಹಿಸುತ್ತಿರುವ ಈ ಉರಿಯನ್ನು ಅವರ ಅಗಲಿಕೆಯಿಂದ ನೊಂದ ಎಲ್ಲರೊಡನೆ ಸಹಿಸದೆ ಗತ್ಯಂತರವಿಲ್ಲ.

"ಬರೆಯಬೇಕು, ಬರೆಯಬೇಕು ಎಂಬ ಹಂಬಲದಿಂದ ದಿನಗಳು ಉರುಳುತ್ತಿವೆ. ಎಂದು ಬರೆಯುವೆನೋ ಬಗೆಹರಿಯದಾಗಿದೆ. ಈ ಜನ್ಮದಲ್ಲಿ ಸಾಧ್ಯವಾಗದಿದ್ದರೆ ಬರುವ ಜನ್ಮದಲ್ಲಾದರೂ ಸಾಧಿಸುವೆ" ಎನ್ನುತ್ತಿದ್ದರವರು. ಬಹುಶ: ಅದನ್ನು ಸಾಧಿಸಲು ಕ್ಷಿಪ್ರದಲ್ಲೇ ಜನ್ಮ ತಾಳುವರೆಂದು ನಂಬೋಣ. ಅವರ ಪುನರಾಗಮನವನ್ನು ಪ್ರತೀಕ್ಷಿಸೋಣ.





"ಸಾಗರದೊಲು ವಿಶಾಲ ವಕ್ಷವನಂತೆ
ಗಂಭೀರವಂತೆ"



ಶ್ರೀ ಎಚ್. ವಿ. ಕಾಮತ್‌ರೊಂದಿಗೆ



"ದಿವ್ಯ ಜ್ಞಾನದೇಕಾಂತದಾಡುಂಬೊಲವೊ"



"ನಿಮಿತ್ತ ಮಾತ್ರನೀರುಜೆಯದಕೆ
. . .ವಯಸೆನ್ನ ಪರಿಪಕ್ವವಾಯ್ತು"



ತೋಟದಲ್ಲಿ



ಎಡದಿಂದ ಬಲಕ್ಕೆ 2 ಶ್ರೀ ನಾರಾಯಣ ಪೈ, 3 ಶ್ರೀ ಸಯ್ಯದ ಅಹಮದ್, ಕಲೆಕ್ಟರ್,
4 ಶ್ರೀ ಜಿ. ಎಸ್. ನಗರ್‌ಕಾರ್, 5 ಶ್ರೀ ಮ. ಗೋವಿಂದ ಪೈ, 7 ಶ್ರೀ ವಿ. ಎನ್. ಕುಡ್ವಾ,
(ರೇವಿನ್ಯೂ ಬೋರ್ಡಿನ ಮೊದಲನೆ ಮೆಂಬರರು) 8 ಶ್ರೀ ಎಮ್. ಸುಬ್ರಾಯ ಪೈ,
9 ಶ್ರೀ ಎಮ್. ಅನಂತ ಪೈ.



ಪೈ ಅವರ ಸ್ವಗೃಹ

# ರಾಷ್ಟ್ರಕವಿಯವರ ಕುರಿತು ಕೆಲವು ಸವಿ ನೆನಪುಗಳು

ಶ್ರೀ. ನಂ. ಅಶ್ವತ್ಥ ನಾರಾಯಣ

ಸಜ್ಜನಸ್ಯ ಹೃದಯಂ ನವನೀತಂ ಯದ್ವದಂತಿ ಕವಯಃತದಲೀಕಂ।
ಅನ್ಯದೇಹ ವಿಲಸತ್ ಪರಿತಾಪಾತ್ ಸಜ್ಜನೋದ್ರವತಿನೋ ನವನೀತಂ॥

—ಸುಭಾಷಿತ

"ನಿಂದಾಸ್ತವಂ, ಯಶೋಪಯಶ, ಸುಖದುಃಖ, ಲಾ
ಭಾಲಾಭವೀ ಎಂಟು ಲೋಕಧರ್ಮದಿ ಸಿಲುಕಿ
ದೊಡಮಣಂ ಕಂಪಿಸದೆ ಶೋಕರಹಿತಂ ಸುಖಂ
ವಿರಜಮಿರೆ ಚಿತ್ತವದೆ ಉತ್ತಮಂ ಮಂಗಲಂ॥
.. .. .. .. .. ..ತಾಯ್ತಂದೆ
ಯರ ಸೇವಿಸುತ್ತಲಿರೆ, ಮಡದಿಯಂ ಮಕ್ಕಳಂ
ಬಳಗವಂ ದಾನದಿಂ, ಪ್ರಿಯವಚನದಿಂದರ್ಥ
ಚರ್ಯೆಯಿಂ ಸಮಭಾವದಿಂ ಸಂಗ್ರಹಿಸೆ, ವ್ಯವ
ಸ್ಥಿತಮಾಗಿ ಕಾರ್ಯವಂ ಗೈಯಲದೆ ಉತ್ತಮಂ ಮಂಗಲಂ

—ವೈಶಾಖಿ

## 1. ಮೈಸೂರಿನಿಂದ ಮಂಜೇಶ್ವರಕ್ಕೆ

ಹದಿನೈದು ವರ್ಷಗಳ ಹಿಂದಣ ಮಾತು. ಮೈಸೂರು ಜಿಲ್ಲೆಯ ಚಾಮರಾಜ ನಗರ ತಾಲ್ಲೂಕಿನ ಹಳ್ಳಿಯೊಂದರಿಂದ ನಾನು ಮೈಸೂರಿನ ಉಪಾಧ್ಯಾಯರ ಶಿಕ್ಷಣ ತರಬೇತಿ ಕೇಂದ್ರಕ್ಕೆ 3 ವರ್ಷಗಳ ತರಬೇತಿ ಪಡೆಯುವ ಸಲುವಾಗಿ ಚುನಾಯಿಸಲ್ಪಟ್ಟು ವ್ಯಾಸಂಗ ಮಾಡುತ್ತಿದ್ದೆನು. ಮೈಸೂರಿನ ವಿದ್ಯಾರಣ್ಯ ಪುರದ (ಆಗ ಅದಕ್ಕೆ ಸಿಮೆಂಟ್ ಹೌಸ್ ಬ್ಲಾಕ್ ಎನ್ನುತ್ತಿದ್ದರು) ಕೊನೆಯಲ್ಲಿ ಚಿಕ್ಕದೊಂದು ಮನೆಮಾಡಿ ಮಡದಿಯೊಂದಿಗೆ ವಿದ್ಯಾಭ್ಯಾಸ ಮಾಡುತ್ತಿದ್ದೆನು. ಚಿಕ್ಕಂದಿನಿಂದಲೂ ನನಗೆ ಸಾಹಿತ್ಯ ಮತ್ತು ಗಮಕಕಲೆಯ ಮೇಲೆ ತುಂಬಾ ಅಭಿರುಚಿಯಿತ್ತು. ನನ್ನ ತೀರ್ಥರೂಪರವರೂ ಆಗಿನ ಕಾಲದಲ್ಲಿ ಪ್ರಸಿದ್ಧ ಗಮಕಿಗಳಾಗಿದ್ದರಂತೆ. ಅವರು ಕೈಲಾಸವಾಸಿಗಳಾದಾಗ ನನಗೆ ಕೇವಲ 13–14 ವರ್ಷಗಳು ಮಾತ್ರ. ಅನಂತರ ನಾನು ನನ್ನ ಅಣ್ಣಂದಿರಲ್ಲಿ ಸ್ವಲ್ಪ ಮಟ್ಟಿಗೆ ಕಾವ್ಯಗಾಯನ ಕಲೆಯನ್ನು ಅಭ್ಯಸಿಸಿ ಸಭೆ ಸಮಾರಂಭಗಳಲ್ಲಿಯೂ, ದೇವಸ್ಥಾನ, ರಾಮಮಂದಿರಗಳಲ್ಲಿಯೂ ಅನುವು ದೊರೆತಾಗ ಕನ್ನಡ ಪದ್ಯಕಾವ್ಯಗಳನ್ನು ತಕ್ಕಮಟ್ಟಿಗೆ ವಾಚನಮಾಡುವ ಹವ್ಯಾಸವನ್ನು ಬೆಳೆಸಿಕೊಂಡಿದ್ದೆನು. 1947ರಲ್ಲಿ ಮೈಸೂರಿಗೆ ಟ್ರೈನಿಂಗಿಗೆ ಚುನಾಯಿಸಿದ ಬಳಿಕ ನನ್ನ ವಿದ್ಯಾಭ್ಯಾಸದ ಜೊತೆಗೆ ಗಮಕಕಲೆಯಲ್ಲಿಯೂ ಪರಿಣತನಾಗಬೇಕೆಂದು ಸಂಕಲ್ಪಿಸಿದೆನು. ಯೋಗ್ಯರಾದ ಗುರುಗಳನ್ನು ಕಂಡು ಅವರ ಶುಶ್ರೂಷೆ ಮಾಡಿ ಈ ಕಲೆಯನ್ನು ಸಾಧಿಸಬೇಕೆಂದು ಕುತೂಹಲಪಡುತ್ತಿರುವ ಕಾಲಕ್ಕೆ ಮೈಸೂರು ಕೃಷ್ಣಮೂರ್ತಿಪುರಂ ಬಡಾವಣೆಯಲ್ಲಿದ್ದ ಗಮಕ ವಿದ್ವಾನ್ ಕೃಷ್ಣಗಿರಿ ಕೃಷ್ಣರಾಯರ ಪರಿಚಯವಾಯಿತು. ಅವರು ನಡೆಸುತ್ತಿದ್ದ "ಕುಮಾರವ್ಯಾಸ ಗುರುಕುಲ"ದಲ್ಲಿ ಒಂದೆರಡು ವರ್ಷ ಕಾವ್ಯಗಾಯನ ಕಲೆಯನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿ 1948ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ಗಮಕ ಪ್ರವೇಶ ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆ ಹೊಂದಿದೆನು. ಗಮಕ ಕಲಾಭ್ಯಾಸಕ್ಕಾಗಿ ಗುರುಗಳ ಬಳಿಗೆ ಅನೇಕ ಮಂದಿ ಶಿಷ್ಯರು ಬರುತ್ತಿದ್ದರು. ಅವರಲ್ಲಿ ಹೆಚ್ಚು ಮಂದಿ ಹೆಣ್ಣು ಮಕ್ಕಳು. ದಕ್ಷಿಣ ಕನ್ನಡ ಜಿಲ್ಲೆಯ ಮಂಜೇಶ್ವರದ ರಾಷ್ಟ್ರಕವಿ ಗೋವಿಂದಪೈಗಳವರ ಸೋದರ ಸೊಸೆ ಶ್ರೀಮತಿ ಎಂ. ರಮಾಬಾಯಿ ಎಂಬ ನಾಲ್ವತ್ತು ವರ್ಷದ ಕನ್ನಡ ಸಾಹಿತ್ಯ ಪರಿಣತೆಯೊಬ್ಬರೂ ಈ ತರಗತಿಗೆ ತಪ್ಪದೆ ಬರುತ್ತಿದ್ದರು. ಅವರು ಗಮಕ ಕಲೆಯ ಅಭ್ಯಾಸಕ್ಕೆಂದೇ ದೂರದ ಮಂಜೇಶ್ವರದಿಂದ ಮೈಸೂರಿಗೆ ಬಂದಿದ್ದರು. ವಿದ್ಯಾರ್ಥಿವೃಂದದಲ್ಲಿ ಅವರೇ ಹಿರಿಯರು. ಅವರ ಶ್ರದ್ಧೆ, ಉತ್ಸಾಹ, ಗುರುಭಕ್ತಿಗಳು ನಮ್ಮ ಗುರುಗಳನ್ನು ಮೆಚ್ಚಿಸಿ ಮನಕರಗಿಸಿತು. ಹೆಂಗಸರಲ್ಲಿ ಶ್ರೀಮತಿ ಎಂ.ರಮಾಬಾಯಿಯವರು ಹೇಗೋ ಹಾಗೆ ಗಂಡಸರಲ್ಲಿ ನನ್ನ ಮೇಲೆ ಗುರುಗಳಿಗೆ ತುಂಬಾ ವಾತ್ಸಲ್ಯ, ಪ್ರೀತಿ. ಅಂತೂ ನಾವಿಬ್ಬರೂ ಗುರುಗಳಿಗೆ ಅಚ್ಚುಮೆಚ್ಚಿನ ಆಪ್ತಶಿಷ್ಯರಾಗಿದ್ದೆವು. ಮೈಸೂರಿನಲ್ಲಿ ಎಲ್ಲಿಯಾದರೂ ವಾಚನ ಕಾರ್ಯಕ್ರಮಕ್ಕೆ ಕರೆಬಂದರೆ ಗುರುಗಳು ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ವ್ಯಾಸಪೀಠದಲ್ಲಿ ಕೂರಿಸಿ ಕೆಲವು ಪದ್ಯಗಳನ್ನು ಹೇಳಿಸಿ "ಶಭಾಷ್‌ಗಿರಿ" ಕೊಟ್ಟು ಶ್ರೋತೃಗಳಿಗೆ "ತಮ್ಮ ಶಿಷ್ಯ"ನೆಂದು ಹೆಮ್ಮೆಯಿಂದ ಪರಿಚಯ ಮಾಡಿಸಿಕೊಡುತ್ತಿದ್ದರು.

ದಕ್ಷಿಣಕನ್ನಡ ಜಿಲ್ಲೆಯ ಮುಖ್ಯ ಪಟ್ಟಣವಾದ ಮಂಗಳೂರಿಗೆ ಹತ್ತು ಹನ್ನೆರಡು ಮೈಲುಗಳ ದೂರದಲ್ಲಿ ಕಡಲ ತಡಿಯು ಲ್ಲಿ ಮಂಜೇಶ್ವರವೆಂಬ ಅಗ್ರಹಾರವಿದೆ. ಆ ಕ್ಷೇತ್ರದಲ್ಲಿ ಪುರಾತನ ಕಾಲದಿಂದಲೂ ಪ್ರಸಿದ್ಧವಾದ ಶ್ರೀಮದನಂತೇಶ್ವರ ದೇವಾಲಯವುಂಟು. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನವತಿಯಿಂದ ಗಮಕಕಲಾ ಪ್ರಚಾರಕ್ಕಾಗಿ ನಮ್ಮ ಗುರುಗಳು ಒಮ್ಮೆ ಕುಮಾರಿ ಚಂದ್ರಾ, ಕುಮಾರಿ ಸತ್ಯವತಿಯರೊಂದಿಗೆ ದಕ್ಷಿಣಕನ್ನಡ ಜಿಲ್ಲೆಗೆ ಹೋಗಿದ್ದಾಗ ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯದಲ್ಲಿ ಒಂದೆರಡು ಕಾರ್ಯ ಕ್ರಮ ಕೊಟ್ಟಿದ್ದರಂತೆ. ಆಗ ಆ ದೇವಾಲಯದ ಕಚೇರಿಯ ಮುಖ್ಯ ಕಾರ್ಯಕರ್ತರಾಗಿದ್ದ (Chief Executive Officer) ಕಾರ್ಕಳದ ಶ್ರೀ ಸುಬ್ಬರಾಯ ಕಮ್ತಿಯವರ ಮಕ್ಕಳು ಶ್ರೀ ಪದ್ಮನಾಭ ಕಾಮತ್‌ರವರು. ಆ ಕಾರ್ಯಕ್ರಮಗಳನ್ನು ಕೇಳಿ ಸಂತಸಗೊಂಡು ದೇವ ಸ್ಥಾನದಲ್ಲಿ 45 ದಿವಸಗಳು "ಕನ್ನಡ ತೊರವೆಯ ರಾಮಾಯಣದ" ವಾಚನ ಕಾರ್ಯಕ್ರಮವಿಡಿಸಬೇಕೆಂದು ನಮ್ಮ ಗುರುಗಳನ್ನು ಬರಬೇ ಕೆಂದು ಆಹ್ವಾನಿಸಿದರು. ಮಂಜೇಶ್ವರದ ಈ ಸುದೀರ್ಘ ಕಾರ್ಯಕ್ರಮಕ್ಕೆ ಹೊರಡತಕ್ಕದ್ದೆಂತ ಗುರುಗಳು ನಿಶ್ಚಯಿಸಿ. ಈ ಸಂಗತಿಯನ್ನು ಶಿಷ್ಯ ವೃಂದಕ್ಕೆ ತಿಳಿಸಿ ದಕ್ಷಿಣಕನ್ನಡ ಜಿಲ್ಲೆಯ ಈ ಒಂದೂವರೆ ತಿಂಗಳ ಪ್ರವಾಸದಲ್ಲಿ ಅವರ ಸಹಾಯಕ್ಕಾಗಿ ನನ್ನನ್ನು ಜತೆಯಲ್ಲಿ ಬರತಕ್ಕದ್ದೆಂತ ಆಜ್ಞಾಪಿಸಿದರು. ಗುರುಸೇವೆ, ಸಾಹಿತ್ಯಸೇವೆ, ಪುಣ್ಯಕ್ಷೇತ್ರದ ದರ್ಶನ ಸೌಭಾಗ್ಯ ನನ್ನ ಪಾಲಿಗೆ ದೊರೆಯಿತೆಂದು ಸಂತಸಗೊಂಡೆನು. ಅದಕ್ಕೆ ತಕ್ಕ ಹಾಗೆ ನನಗೆ ಬೇಸಿಗೆಯ ರಜವೂ ಬಂದಿತ್ತು. ಮಡದಿಯನ್ನು ತೌರೂರಿಗೆ ಕಳುಹಿಸಿ ಗುರುಗಳೊಂದಿಗೆ ಮಂಜೇಶ್ವರಕ್ಕೆ ಹೊರಡಲು ಸಿದ್ಧ ನಾದೆನು.

ಕಾರ್ಯಗೌರವದ ನಿಮಿತ್ತವಾಗಿ ಶ್ರೀಮತಿ ರಮಾಬಾಯಿಯವರು ಮಂಜೇಶ್ವರಕ್ಕೆ ಬರುವಂತಿರಲಿಲ್ಲ. ಅವರಿಂದ ಪ್ರಯಾಣದ ಬಗ್ಗೆ ಬೇಕಾದ ಮಾಹಿತಿಗಳನ್ನೆಲ್ಲಾ ತಿಳಿದುಕೊಂಡು ವಿರೋಧಿ ಸಂವತ್ಸರದ ಚೈತ್ರ ಶುದ್ಧ ಬಿದಿಗೆ ಗುರುವಾರ (31–3–1949) ಮುಂಜಾನೆ ಮಂಜೇಶ್ವರಕ್ಕೆ ಹೊರಟು ಅಂದು ಮಧ್ಯಾಹ್ನ ಕೊಡಗಿನ ಮುಖ್ಯ ಸ್ಥಳವಾದ ಮಡಿಕೇರಿಯನ್ನು ತಲಪಿದೆವು.

ಮಡಿಕೇರಿಯಿಂದ 5–4–1949ರಂದು ಗುರುಗಳೊಂದಿಗೆ ಮಂಜೇಶ್ವರಕ್ಕೆ ಹೊರಟೆವು. ಮಡಿಕೇರಿಯನ್ನು ಬಿಡುತ್ತಿದ್ದ ಹಾಗೆ ಯೇ ಘಟ್ಟದ ಅಂಕುಡೊಂಕು ರಸ್ತೆಗಳೂ ಏರಿಳಿತಗಳೂ ಆರಂಭ. ಆ ಹಾದಿಯ ನಿಸರ್ಗಶ್ರೀಯ ರುದ್ರರಮಣೀಯತೆ ಕಣ್ಮನಗಳನ್ನು ತಣಿ ಸಿತು. ಕಾಡಿನ ಮಧ್ಯದ ಕಣಿವೆ ಹಾದಿಯಲ್ಲಿ ಬಸ್ಸು ರಭಸದಿಂದ ತಿರುಗುವಾಗ ನಮಗೆ ತಲೆ ಸುತ್ತುಬರುವಂತಾಯಿತು. ಆ ನಿಡು ಬೇಸಿಗೆಯ ಲ್ಲಿಯೂ ಗಿರಿಸಾನು ಪ್ರದೇಶಗಳ ಹವೆ ತಣ್ಣಗೆ ಆಹ್ಲಾದಮಯವಾಗಿತ್ತು. ಹೀಗೆ ತಾಸೆರಡು ಪ್ರಯಾಣ ಮಾಡಿ ಪುತ್ತೂರನ್ನು ತಲಪಿದೆವು. ಅಲ್ಲಿ ಬಸ್ಸು ಬದಲಿಸಿ "ವಿಠ್ಠಲ" ಮಾರ್ಗವಾಗಿ ಮಂಜೇಶ್ವರಕ್ಕೆ ಹೋಗುವ ಬಸ್ಸಿನಲ್ಲಿ ಕುಳಿತೆವು. ಕೆಟ್ಟರಸ್ತೆ–ಹಳೆಯ ಬಸ್ಸು-ಧೂಳಿನ ಅಭಿಷೇ ಕವೇ ಆಯಿತು ನಮಗೆ. ದಕ್ಷಿಣ ಕನ್ನಡ ಜಿಲ್ಲೆಯ ಕೊಂಕಣಿ–ತುಳು ಭಾಷೆಗಳು ಅರ್ಥವಾಗುತ್ತಿರಲಿಲ್ಲ. ಕನ್ನಡವೂ ಅಷ್ಟೆ : ಏನೋ ಒಂದು ಬಗೆ ಯ ರಾಗ-ಗಡಸು-ಗಮ್ಮತ್ತು. ಅಂತೂ ಅಂದು ಸಾಯಂಕಾಲದ ಹೊತ್ತಿಗೆ ಮಂಜೇಶ್ವರವನ್ನು ತಲಪಿ ಶ್ರೀಮದನಂತೇಶ್ವರ ದೇವಾಲಯದ ಮುಖ್ಯ ಅಧಿಕಾರಿಗಳಾದ ಶ್ರೀ ಕಾಮತರ ಮನೆಯಲ್ಲಿ ಇಳಿದುಕೊಂಡೆವು. ಸ್ನಾನ ಮಾಡಿ. ಊಟಮಾಡಿ ಮಲಗಿದೆವು. ದಣಿದು ಪ್ರಯಾಣ ಮಾಡಿ ಬಂದಿದ್ದುದರಿಂದ ಚನ್ನಾಗಿ ನಿದ್ರೆ ಹತ್ತಿತ್ತು. ಮುಂಜಾನೆ ಶ್ರೀ ಕಾಮತರು ಸ್ನಾನಕ್ಕಾಗಿ ನಮ್ಮನ್ನು ಎಬ್ಬಿಸಿದಾಗಲೇ ನಮಗೆ ಎಚ್ಚರ. 6–4–1949ರ ಬೆಳಿಗ್ಗೆ ಉಪಾಹಾರದನಂತರ ಶ್ರೀ ಕಾಮತರೂ, ಗುರುಗಳೂ ನಾನೂ ಕಲೆತು ದೇವಾಲಯದಲ್ಲಿ ಆರಂಭಿಸಬೇಕಿದ್ದ "ರಾಮಾ ಯಣ ವಾಚನ"ದ ಬಗ್ಗೆ ಚರ್ಚಿಸಿದೆವು. 7–4–49 ಗುರುವಾರದಿಂದ ವಾಚನ ಕಾರ್ಯಕ್ರಮ ಆರಂಭವಾಗತಕ್ಕದ್ದು. ಪ್ರತಿದಿನ ಸಾಯಂಕಾಲ (ಶನಿವಾರ ಬಿಟ್ಟು) 4–30ರಿಂದ 6ಗಂಟೆಯ ವರೆಗೆ ಶ್ರೀಮದನಂತೇಶ್ವರ ದೇವಾಲಯದ ಹೊರಪ್ರಾಕಾರದಲ್ಲಿ ನಿರ್ಮಿಸಿರುವ ಹಂದರದಲ್ಲಿ ವಾಚನ ನಡೆಸತಕ್ಕದ್ದೆಂತ ಶ್ರೀ ಕಾಮತ್‌ರವರು ಹೇಳಿದರು. ಈ ಎಲ್ಲ ಕಾರ್ಯಕ್ರಮಗಳ ಅಂತಿಮ ನಿರ್ಧಾರಕ್ಕಾಗಿ ರಾಷ್ಟ್ರಕವಿ ಪೂಜ್ಯ ಗೋ ವಿಂದ ಪೈಗಳವರನ್ನು ಅದೇ ದಿನ ಸಾಯಂಕಾಲ 5 ಗಂಟೆಗೆ ಹೋಗಿ ಸಂದರ್ಶಿಸಬೇಕೆಂದು ಅಂದುಕೊಂಡೆವು. ಮಂಜೇಶ್ವರದಲ್ಲಿರುವಷ್ಟು ದಿನ ನಾವು ಶ್ರೀಮದನಂತೇಶ್ವರ ದೇವಾಲಯಕ್ಕೆ ಮುಕ್ಕಾಲು ಮೈಲು ದೂರದಲ್ಲಿದ್ದ "ಶ್ರೀಮದನಂತಾಶ್ರಮ"ವೆಂಬ ಕಟ್ಟಡದಲ್ಲಿ ಇಳಿದುಕೊ ಳ್ಳಲು ಏರ್ಪಾಡಾಗಿತ್ತು. ಅದರಂತೆ ಅಂದು ಮಧ್ಯಾಹ್ನ ನಾನೂ ಗುರುಗಳೂ ನಮ್ಮ ಹಾಸಿಗೆ, ಸಾಮಾನುಗಳೊಂದಿಗೆ "ಅನಂತಾಶ್ರಮ" ದಲ್ಲಿ ಬೀಡಾರ ಮಾಡಿದೆವು. ನಮ್ಮ ಸಹಾಯಕ್ಕಾಗಿ ಶ್ರೀ ವೆಂಕಟರಮಣ ಮಲ್ಯ ಎಂಬವರೊಬ್ಬರನ್ನು ನೇಮಿಸಲಾಗಿತ್ತು. ಅವರು ಆಗಾಗ ಬಂದು ನಮ್ಮ "ಬೇಕು ಬೇಡ"ಗಳನ್ನು ವಿಚಾರಿಸಿ ಹೋಗುತ್ತಿದ್ದರು. ನಮಗೆ ಊಟ ತಿಂಡಿಗಳಿಗಾಗಿ ಆಶ್ರಮದಿಂದ 2–3 ಫರ್ಲಾಂಗು ದೂರ ದಲ್ಲಿದ್ದ ಹವ್ಯಕ ಬ್ರಾಹ್ಮಣರ ಶ್ರೀ ನಾರಾಯಣ ಭಟ್ಟರ ಹೋಟೇಲಿನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಊಟ ತಿಂಡಿಗಳಿಗಾಗಿ ಹೋಟೇಲಿಗೆ 3 ಬಾರಿಯಾದರೂ ಹೋಗಿ ಬರಬೇಕಾಗಿತ್ತು. ಸಂಜೆಯ ಹೊತ್ತು ದೇವಸ್ಥಾನಕ್ಕೆ ವಾಚನಕ್ಕಾಗಿ ಹೋಗಲೇಬೇಕಾಗಿತ್ತು. ಅಂತೂ ಆ ಬಿರುಬಿಸಿ ಲಿನ ದಿನಗಳಲ್ಲಿ ಈ ಸುತ್ತಾಟ ಬಳಲಿಕೆಯನ್ನು ತರುತ್ತಿತ್ತು.

## 2. ರಾಷ್ಟ್ರಕವಿಗಳ ಪ್ರಥಮ ದರ್ಶನ

ನಮ್ಮ ನಿರ್ಧಾರದಂತೆ ಅಂದು ಸಂಜೆ 4 ಗಂಟೆಯ ಹೊತ್ತಿಗೆ ಶ್ರೀ ಕಾಮತ್‌ರವರು ಅನಂತಾಶ್ರಮಕ್ಕೆ ಬಂದರು. ಗುರುಗಳೂ ನಾನೂ ಸಿದ್ಧರಾಗಿದ್ದೆವು, ಕವಿಗಳ ದರ್ಶನೋತ್ಸವಕ್ಕೆ. ಆಶ್ರಮದಿಂದ ಗೋವಿಂದ ಪೈಗಳವರ ಮನೆ ದೂರವಿರಲಿಲ್ಲ. ರಸ್ತೆಯಲ್ಲಿ ಹೋಗಿದ್ದರೆ ದೂರವಾಗುತ್ತಿತ್ತೋ ಹೇಗೋ. ಕಾಲುದಾರಿಯಲ್ಲಿ ಹೊರಟು 5–10 ನಿಮಿಷಗಳಲ್ಲಿ ದೊಡ್ಡ ರಸ್ತೆಗೆ ಬಂದು ಬಲಕ್ಕೆ ತಿರುಗಿದೆವು. ನಮ್ಮ ಎಡಕ್ಕೆ ಒಂದು ಚರ್ಚ್. ಸ್ವಲ್ಪ ಮುಂದೆ ಹೋದರೆ ರಸ್ತೆಯ ಬಲಭಾಗದಲ್ಲಿ ಆಲದ ಮರ-ಅದರ ಪಕ್ಕದಲ್ಲಿಯೇ ಒಂದು ದೊಡ್ಡ ಗೇಟು. ಗೇಟಿನ ಪಕ್ಕದಲ್ಲಿ ಜನರ ತಿರುಗಾಟಕ್ಕೆಂದೇ ನಿರ್ಮಿಸಿದ ಸಣ್ಣ ವಿಕೆಟ್‌ಗೇಟು. ಅದರಲ್ಲಿ ನುಸುಳಿ ಒಳಗೆ ಹೋದೆವು. ಬಲಭಾಗದಲ್ಲಿ ವಿಶಾಲ ವಾದ ತೋಟ. ನಾನಾ ಜಾತಿಯ ವೃಕ್ಷಗಳು ಬೆಳೆದು ಸಣ್ಣ ತೋಪಿನಂತಿತ್ತು. ಎಡಗಡೆಯ ಕೊನೆಯಲ್ಲಿ ಶ್ರೀ ಗೋವಿಂದ ಪೈಗಳವರ ಮಾಳಿಗೆ

ಮನೆ. ಮನೆಯ ಮುಂಭಾಗದ ಚೌಕಿಯ ಬಳಿಗೆ ನಾವು ಹೋಗುವುದೇ ತಡ, ಗಂಭೀರವಾಣಿಯೊಂದು "ಓಹೋ" ಕೃಷ್ಣರಾಯರು ! ಯಾವಾಗ ಮೈಸೂರಿಂದ ಬಂದದ್ದು? ಎಲ್ಲರೂ ಕ್ಷೇಮವಷ್ಟೆ ! ಬನ್ನಿರಿ. ಕುಳಿತುಕೊಳ್ಳಿ" ಎಂದು ಸ್ವಾಗತಿಸಿತು. ನಾವು ಮೂವರೂ ಚೌಕಿಯಲ್ಲಿದ್ದ ಆಸನಗಳಲ್ಲಿ ಕುಳಿತುಕೊಂಡೆವು. ಸಂಜೆಯ ಇಳಿಹೊತ್ತು. ಕಡಲಮೊರೆತ ಶೃತಿ ಮಾಡಿದ ತಂಬೂರಿಯಂತೆ ಒಂದೇ ಸವನೆ ಕೇಳಿಬರುತ್ತಿತ್ತು. ಖದ್ದರಿನ ಅಡ್ಡ ಮುಂಡು. ಖದ್ದರಿನ ಮಡಚಿದ ಅರ್ಧತೋಳಿನ ಬಿಳಿಯ ಶರಟು. ಬೆಳ್ಳಿಗೂದಲು, ಹುಲುಸಾಗಿ ಬೆಳೆದ ನರೆತ ತುಂಬು ಮೀಸೆಯ ತೇಜಃಪುಂಜವಾದ ಮುಖದ ವ್ಯಕ್ತಿ ಮಂಚದ ಮೇಲೆ ಕುಳಿತು ಮಾತಿಗಾರಂಭಿಸಿತು. ನಗುಮುಖ. ಸಹಜಸ್ವರ. ನಮ್ರವಾತು, ಸಾದಾ ಉಡುಪು. ಸರಳ ವ್ಯಕ್ತಿ ಗೋವಿಂದ ಪೈಗಳು ಮೈಸೂರು ಕಡೆಯ ಸಾಹಿತಿಗಳ, ವಿದ್ವಾಂಸರ, ಲೇಖಕರ, ತರುಣ ಕವಿಗಳ ಬಗ್ಗೆ ಹತ್ತಲ್ಲ ಹಲವಾರು ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದು ಸುಪ್ರೀತರಾದರು. ಅನೇಕ ವ್ಯಕ್ತಿಗಳ ಬಗ್ಗೆ ಕಂಡು ಕೇಳಿದ ವಿಷಯ ಪರಂಪರೆಗಳ ಮಳೆಯನ್ನೇ ಕರೆದರು. ಅವರ ಅಸಾಧಾರಣ ನೆನಪು ಎಂಥವರನ್ನೂ ಬೆರಗುಗೊಳಿಸುತ್ತಿತ್ತು. ಗುರುಗಳಾದ ಕೃಷ್ಣರಾಯರು "ಇವರೇ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳು" ಎಂದು ನನಗೆ ಹೇಳಿದರು. ನಾನು ಭಕ್ತಿಯಿಂದ ನಮಸ್ಕರಿಸಿದೆನು. ಮತ್ತೆ ಗುರುಗಳು "ಈತ ನನ್ನ ಶಿಷ್ಯ-ಅಶ್ವತ್ಥನಾರಾಯಣ, ಈ ದೀರ್ಘ ಪ್ರವಾಸ ಕಾಲದಲ್ಲಿ ನನ್ನ ಸಹಾಯಕ್ಕಾಗಿ ಜೊತೆಯಲ್ಲಿ ಕರೆದುಕೊಂಡು ಬಂದಿರುವೆನು. ಸಾಹಿತ್ಯದಲ್ಲಿ ತುಂಬಾ ಆಸಕ್ತಿ. ಚೆನ್ನಾಗಿ ಪದ್ಯಗಳನ್ನು ಓದುತ್ತಾನೆ. ನಾಳೆಯಿಂದ ವಾಚನ ಆರಂಭವಾಗುತ್ತದಲ್ಲ. ಈತ ಓದುವುದನ್ನು ಕೇಳಿ ಆಶೀರ್ವದಿಸಬೇಕು" ಎಂದರು. ಕವಿವರ್ಯರು ನನ್ನ ಕಡೆಗೆ ವಾತ್ಸಲ್ಯದಿಂದ ನೋಡಿದರು. ಮತ್ತೆ ಗುರುಗಳ ಕಡೆಗೆ ಮೊಗಮಾಡಿ "ಕಳೆದ ಬಾರಿ ನೀವು ಚಂದ್ರಾ ಮತ್ತು ಸತ್ಯವತಿ ಎಂಬಿಬ್ಬರು ಶಿಷ್ಯರನ್ನು ಕರೆದುಕೊಂಡು ಬಂದಿದ್ದಿರಿ ಅಲ್ಲವೇ ! ಅವರು ಈಗ ಎಲ್ಲಿದ್ದಾರೆ? ಎಂತಿದ್ದಾರೆ? ಮದುವೆಯಾಯಿತೋ ! ಚನ್ನಾಗಿದ್ದಾರೋ? ಈ ಬಾರಿ ನೀವು ಇವರನ್ನು ಕರೆತಂದುದು ಒಳಿತಾಯಿತು. ಇವರ ವಾಚನವನ್ನೂ ಕೇಳುವಾ" ಎಂದರು. ಹೀಗೆ ಗುರುಗಳ ಜೊತೆಯಲ್ಲಿ ಮೊದಲ ಬಾರಿಗೆ ಮಂಜೇಶ್ವರದ ಮನೆಯಲ್ಲಿ ರಾಷ್ಟ್ರಕವಿ ಗೋವಿಂದ ಪೈಗಳವರನ್ನು ಸಂದರ್ಶಿಸುವ ಸುಯೋಗವು ನನಗೆ ಲಭಿಸಿತು. ಶ್ರೀ ಕಾಮತರು ಆಫೀಸಿನ ಕಾರ್ಯ ಗೌರವದ ಸಲುವಾಗಿ ಪೈಗಳವರ ಅನುಮತಿ ಪಡೆದು ಹೊರಟರು. ಹೊರಡುವ ಮೊದಲು ಕೊಂಕಣಿ ಭಾಷೆಯಲ್ಲಿ ನಾಳೆ ದಿವಸ ರಾಮಾಯಣ ವಾಚನದ ಆರಂಭ. 4–30ಕ್ಕೆ ಸರಿಯಾಗಿ ದಯಮಾಡಿಸಿ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಬೇಕೆಂದು ಪ್ರಾರ್ಥಿಸಿದರು. ರಾಷ್ಟ್ರಕವಿಗಳು ಸಂತಸದಿಂದ ಒಪ್ಪಿ ಬರುವುದಾಗಿ ಹೇಳಿದರು. ಅವರು ಹೊರಟು ಹೋದ ಬಳಿಕ 7 ಗಂಟೆಯವರೆಗೆ ನಾವು ಕವಿಸಾನ್ನಿಧ್ಯದಲ್ಲಿಯೇ ಇದ್ದೆವು. ಅವರ ಮಾತಿನ ಗಾಡಿ-ಗಮ್ಮತ್ತು-ವೈಖರಿ ಸವಿದಷ್ಟೂ ಸವಿ ! ಯಕ್ಷಗಾನದ ಹುಟ್ಟು ಬೆಳವಣಿಗೆಗಳು-ಪಾರ್ತಿಸುಬ್ಬ ಕವಿ, ನಂದಳಿಕೆಯ ಮುದ್ದಣ ಕವಿ ಹೀಗೆ ಅನೇಕ ವಿಷಯಗಳ ಬಗ್ಗೆ ನಿರ್ಧಾರ ಧ್ವನಿಯಲ್ಲಿ ಅಂಕೆ ಅಂಶಗಳೊಡನೆ ಮಾತನಾಡಿದರು. ಹೀಗೆ ಚೌಕಿಯಲ್ಲಿ ಮಾತುಕತೆಗಳು ನಡೆಯುತ್ತಿದ್ದಂತೆಯೇ ರಾಷ್ಟ್ರಕವಿಗಳ ತಮ್ಮಂದಿರು ಶ್ರೀ ಸುಬ್ಬರಾಯ ಪೈಗಳು ಒಳಗಿನಿಂದ ಉಪಾಹಾರವನ್ನು ತಟ್ಟೆಗಳಲ್ಲಿ ಹೊತ್ತುತಂದರು. ನಾಲ್ಕಾರು ಖಾಲಿ ಲೋಟಗಳು ಗ್ಲಾಸುಗಳು-ಒಂದು ತಂಬಿಗೆ ತುಂಬಾ ಕಾಫಿ ಬಂದವು. ರಾಷ್ಟ್ರಕವಿಗಳ ಆತ್ಮೀಯ ಉಪಚಾರ-ರಸಾನುಭವದ ಮಾತುಕತೆಗಳ ಎಡೆಯಲ್ಲಿ ತಟ್ಟೆಗಳೆಲ್ಲ ಖಾಲಿಯಾದುವು. ಒಂದು ಲೋಟ ಕಾಫಿ ಕುಡಿದು ತಟಸ್ಥರಾದ ನಮಗೆ ಸ್ವತಃ ಶ್ರೀ ಕವಿಗಳೇ ತಂಬಿಗೆಯಿಂದ ಕಾಫಿ ಸುರಿದು ತೆಗೆದುಕೊಳ್ಳಬೇಕೆಂತ ಒತ್ತಾಯಮಾಡಿ 2–3 ಲೋಟಗಳಷ್ಟು ಕಾಫಿ ಕುಡಿಸಿದರು. ನಾಳಿನ ದಿನದ ದೇವಸ್ಥಾನದ ಕಾರ್ಯಕ್ರಮ ತಿಳಿಸಿ ಹೊರಡಲು ಅನುಮತಿ ಬೇಡಿದೆವು. ಶ್ರೀ ಕಾಮತರು ಉದ್ಘಾಟನಾ ಸಮಾರಂಭಕ್ಕೆ ಆಹ್ವಾನಿಸಿರುವ ವಿಷಯ ನಮಗೆ ತಿಳಿಸಿ ಸಕಾಲಕ್ಕೆ ಬರುವುದಾಗಿ ತಿಳಿಸಿ ಹೊರಬಾಗಿಲಿನವರೆಗೂ ಬಂದು ಅನಂತಾಶ್ರಮಕ್ಕೆ ದಾರಿ ತೋರಿಸಲು ಸೇವಕನನ್ನು ಕಳುಹಿಸಿ ಮನೆಗೆ ಮರಳಿದರು. ನಾವೂ ಆಶ್ರಮವನ್ನು ಸೇರಿದೆವು.

## 3. ತೊರವೆ ರಾಮಾಯಣ ವಾಚನ

ವಿರೋಧಿ ಸಂವತ್ಸರದ ಚೈತ್ರ ಶುದ್ಧ ನವಮಿ (7–4–1949) ಗುರುವಾರ ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯದ ಹೊರ ಪ್ರಾಕಾರದ ಚಪ್ಪರದಲ್ಲಿ ಸಾಯಂಕಾಲ 4–30ಕ್ಕೆ ರಾಮಾಯಣ ವಾಚನ ಕಾರ್ಯಕ್ರಮದ ಆರಂಭೋತ್ಸವ. ಅಂದು ಶ್ರೀ ರಾಮನವಮಿ ಪ್ರಯುಕ್ತ ವಿಶೇಷ ಪೂಜಾದಿಗಳೂ ಅಭಿಷೇಕವೂ ನಡೆಯಲು ಏರ್ಪಡಾಗಿತ್ತು. ಸಾಯಂಕಾಲ 4 ಗಂಟೆಗೆ ನಮ್ಮನ್ನು ದೇವಸ್ಥಾನಕ್ಕೆ ಮರ್ಯಾದೆಯಿಂದ ಕರೆದೊಯ್ಯಲಾಯಿತು. ಮಂಗಲಾರತಿ-ತೀರ್ಥಪ್ರಸಾದ-ಗಂಧವಿನಿಯೋಗವಾದ ಬಳಿಕ ರಾಷ್ಟ್ರಕವಿ ಗೋವಿಂದ ಪೈಗಳವರು ಆದಿ ಕಾವ್ಯವಾದ ರಾಮಾಯಣ, ಆದಿಕವಿ ವಾಲ್ಮೀಕಿ, ಕನ್ನಡ ತೊರವೆರಾಮಾಯಣ. ಇದರ ಕರ್ತೃ-ಅದರ ಯೋಗ್ಯತೆ. ಗಮಕ ಕಲೆಯ ವೈಶಿಷ್ಟ್ಯ. ನಮ್ಮ ಗುರುಗಳ ಕಲಾಪರಿಣತೆ. ಕಾವ್ಯಶ್ರವಣದಿಂದ ಆಗುವ ಲಾಭ ಇತ್ಯಾದಿಗಳನ್ನು ಶ್ರೋತೃಗಳ ಮನಮುಟ್ಟುವಂತೆ ವಿವರಿಸಿ ವಾಚನ ಆರಂಭಿಸಲು ಅನುಜ್ಞೆ ಕೊಟ್ಟರು. ಗುರುಗಳು ಮಂಗಲಾಚರಣೆಯ ಶ್ಲೋಕಗಳನ್ನು ಹಾಡಿದರು. "ಶ್ರೀ ಜನಕಜಾರಮಣ" ಮಂಗಲಾಚರಣೆಯ ಪದ್ಯವನ್ನು ನಾನು ಪ್ರಾರಂಭಿಸಿದೆನು. ಅಂದು ಸುಂದರ ಕಾಂಡದ ಮೊದಲನೆ ಸಂಧಿಯ ಕಥಾಭಾಗದ ವಾಚನವಾಯಿತು. ಮೊದಲ ದಿವಸದ ವಾಚನವೇ ಶ್ರೋತೃಗಳ ಮನ ಮೆಚ್ಚಿಸಿತು.

ತೊರವೆಯ ರಾಮಾಯಣ ದೊಡ್ಡ ಕಾವ್ಯ. ಅದನ್ನು ಪೂರ್ತಿಯಾಗಿ ಕೇವಲ 45 ದಿವಸಗಳ ಅವಧಿಯಲ್ಲಿ ವಾಚನ ಮಾಡಿ ಮುಗಿಸಲು ಸಾಧ್ಯವಿರಲಿಲ್ಲ. ಇದಕ್ಕಾಗಿ ಗುರುಗಳೂ ನಾನು ಕಲೆತು ಬೆಳಗಿನ ವೇಳೆ ಅಂದಂದು ವಾಚನ ಮಾಡಬೇಕಾದ ಭಾಗವನ್ನು ಸಂಗ್ರಹಿಸಬೇಕಾಗಿತ್ತು. ಸಂಗ್ರಹ ಕಾರ್ಯ ಸುಲಭವಾಗಿರಲಿಲ್ಲ. ನಾವಿಬ್ಬರೂ ಕುಳಿತು ಮೂಲಪ್ರತಿಯ ಪ್ರತಿ ಪದ್ಯವನ್ನೂ ಓದಿ, ಅವರಲ್ಲಿ ಕಥೆಯ ಓಟ ಕೆಡದಂತೆ ಸ್ವಾರಸ್ಯವಾದ ಪದ್ಯಗಳು ಬಿಟ್ಟುಹೋಗದಂತೆ ಸಂಗ್ರಹಿಸಿ-ಇಬ್ಬರಿಗೂ ಸಮ್ಮತವಾದ ಬಳಿಕ ಅಂತಹ ಪದ್ಯಗಳನ್ನು ಮೂಲ ಪ್ರತಿಯಲ್ಲಿ ಗುರುತು ಹಾಕಿ ಕೊಳ್ಳುತ್ತಿದ್ದೆವು. ಹಾಗೆ ಗುರುತು ಮಾಡಿದ ಪದ್ಯಗಳನ್ನು ನಾನು ಸಾಯಂಕಾಲ ವಾಚನದ ಹೊತ್ತಿಗೆ ದಪ್ಪನೆಯ ಕಾಗದದ ಎಕ್ಸರ್‌ಸೈಜ್ ನೋಟು ಪುಸ್ತಕದಲ್ಲಿ ದುಂಡಾಗಿ, ಸ್ಪಷ್ಟವಾಗಿ, ತಪ್ಪಿಲ್ಲದೆ ಬರೆದು ಸಿದ್ಧಗೊಳಿಸುತ್ತಿದ್ದೆನು. ಅನಂತರ ಗುರುಗಳು

ಮತ್ತೊಮ್ಮೆ ಪರಿಶೀಲಿಸಿ ವಾಚನಕ್ಕೆ ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದರು. ಇದರಿಂದ ಸಂಗ್ರಹ ಕಾರ್ಯವೂ ಯಶಸ್ವಿಯಾಗಿ ನಡೆಯುತ್ತಿದ್ದಿತಲ್ಲದೆ-ವಾಚನ ಕಾಲದಲ್ಲಿ ಗುರುಗಳಿಗೂ ಸಹಾಯಕವಾಗುತ್ತಿತ್ತು. ಪ್ರಾತ:ಕಾಲದಲ್ಲಿ ನಾವು ಮಾಡುತ್ತಿದ್ದ ಸಂಗ್ರಹ ಕಾರ್ಯ ಸಮಯದಲ್ಲಿ ಒಂದೊಂದು ದಿನ ರಾಷ್ಟ್ರಕವಿಗಳೂ (ಆಶ್ರಮದ ಕಡೆಗೆ ತಿರುಗಾಡಲು ಬಂದ ದಿವಸಗಳಲ್ಲಿ ) ಇರುತ್ತಿದ್ದು ಸೂಕ್ತ ಸಲಹೆ ಕೊಟ್ಟು ನಮ್ಮ ಕ್ಷೇಮ ಸಮಾಚಾರ -ಊಟೋಪಚಾರ-ಪ್ರಚಲಿತ ವಿಷಯಗಳ ಮೇಲೆ ಕೆಲಹೊತ್ತು ಮಾತನಾಡುತ್ತಿದ್ದು ಹೋಗುವರು. ವಾಚನದ ವೇಳೆಯಲ್ಲಿ ಸಂಗ್ರಹಿಸಿ ಸಿದ್ಧಪಡಿಸಿದ ಪುಸ್ತಕವನ್ನು ಗುರುಗಳು ಇಟ್ಟುಕೊಳ್ಳುವರು. ಗುರುತಿಸಿದ ಮೂಲಪ್ರತಿಯನ್ನು ನಾನು ಇಟ್ಟುಕೊಳ್ಳುವೆನು. ಪದ್ಯಗಳನ್ನು ನಾನು ಓದುವುದು. ಗುರುಗಳು ಸ್ವಾರಸ್ಯವಾಗಿ ಅನುವಾದ ಮಾಡಿ ಶ್ರೋತೃಗಳಿಗೆ ಕತೆಯ-ಕವಿತೆಯ ತಿರುಳನ್ನು ತಿಳಿಸುವರು. ಕೆಲವು ಪದ್ಯಗಳನ್ನು ಗುರುಗಳೇ ಗಮಕದ ಗಂಡು ಶೈಲಿಯಲ್ಲಿ ಅಂದು ತೋರಿಸಿ ಶ್ರೋತೃಗಳ ತಲೆದೂಗಿಸುವರು. ಪ್ರಶ್ನೋತ್ತರಗಳು-ವರ್ಣನಾಭಾವಗಳು-ವೀರಾಲಾಪ-ಯುದ್ಧರಂಗದ ಚಿತ್ರಗಳು ಬಂದಾಗ ಗುರುಶಿಷ್ಯರಿಬ್ಬರೂ ನಾಟಕೀಯವಾಗಿ ಒಂದೊಂದು ಪಾತ್ರದ ಮಾತುಗಾರಿಕೆಯನ್ನು. ಗಮಕದ ಗತ್ತು-ಗಾಡಿ-ಮೋಡಿಗಳನ್ನು ಮೋಜಿನಿಂದ ಪ್ರದರ್ಶಿಸುತ್ತಿದ್ದುದೂ ಉಂಟು. ಹೀಗೆ ನಿಯತವಾಗಿ ವಾಚನದ ಕಾರ್ಯಕ್ರಮ ಪ್ರತಿದಿನ ಸಾಯಂಕಾಲ ನಡೆಯುತ್ತಿತ್ತು.

ದೇವಾಲಯದಲ್ಲಿ ನಡೆಯುತ್ತಿದ್ದ ವಾಚನ ಕಾರ್ಯಕ್ರಮ ಜನಜನಿತವಾಗಿ ಶ್ರೋತೃಗಳ ಸಂಖ್ಯೆ ದಿನದಿನಕ್ಕೆ ಸಂವರ್ಧಿಸಿತು. ಎಲ್ಲರಿಗಿಂತ ಮೊದಲು ಬರುತ್ತಿದ್ದವರೆಂದರೆ ರಾಷ್ಟ್ರಕವಿ ಗೋವಿಂದ ಪೈಗಳವರು. ಹಾಗೂ ದೇವಳದ ಮುಖ್ಯಾಧಿಕಾರಿ ಶ್ರೀ ಕೆ. ಪಿ. ಕಾಮತರು. ವಾಚನ ನಡೆಯುವ ಕಾಲದಲ್ಲಿ ಕವಿವರ್ಯರು ಮೌನದಿಂದ ಕುಳಿತು ಕಣ್ಣು ಮುಚ್ಚಿ ರಸಾಸ್ವಾದನೆ ಮಾಡುವರು. ಕಾವ್ಯದಲ್ಲಿ ಬರುವ ರಸಗಳಿಗೆ ತಕ್ಕಂತೆ ಅವರ ಮುಖಭಂಗಿಯೂ ಬದಲಾಗುವುದು. ವಾಚನ ಮುಗಿದು ಎಲ್ಲರೂ ತೆರಳಿದ ಬಳಿಕ ರಾಷ್ಟ್ರಕವಿಗಳೂ. ಕಾಮತರೂ ಗುರುಗಳೂ ನಾನೂ ಹೊರಡುವೆವು. ದಾರಿಯಲ್ಲಿ ರಾಷ್ಟ್ರಕವಿಗಳು ಅಂದಿನ ಕಥಾಭಾಗದ -ಸ್ವಾರಸ್ಯವಾದ ಪದ್ಯಗಳ ಬಗ್ಗೆ ಗಮಕ ಕಲೆಯ ಬಗ್ಗೆ ಮೆಚ್ಚುಗೆಯ ಮಾತುಗಳನ್ನು ಆಡುತ್ತಿದ್ದರು; ಕೆಲವು ವಿಷಯಗಳನ್ನು ರಚನಾತ್ಮಕವಾಗಿ ಟೀಕಿಸಿ ಅದಕ್ಕೆ ಒಪ್ಪುವ ಸಮಾಧಾನವನ್ನು ಕೊಡುತ್ತಿದ್ದರು. ಗುಣಗ್ರಾಹಿಗಳಾದ ಅವರು ಶಿಷ್ಯನಾದ ನನ್ನ ವಾಚನದ ಬಗೆಗೂ ಮೆಚ್ಚುಗೆಯ ಮಾತುಗಳನ್ನು ಆಡದೆ ಇರುತ್ತಿರಲಿಲ್ಲ. ಹಾಗೆಯೇ ನನ್ನಲ್ಲಿದ್ದ ಸಾಹಿತ್ಯ ತೃಷೆ. ಗುರುಭಕ್ತಿ. ವಿಧೇಯತೆ, ಉತ್ಸಾಹ ವ್ಯವಸ್ಥಿತವಾಗಿ ಶ್ರದ್ಧೆಯಿಂದ ಮಾಡುವ ಕಾಯಕಗಳನ್ನು ಪ್ರಶಂಸಿಸಿ ಬಿಡುವಾದಾಗ ತಮ್ಮ ಮನೆಗೆ ಬರುವಂತೆ ಅನುಗ್ರಹಿಸಿದರು. ನಾನೂ ಅನುವಾದಾಗ ಆಶ್ರಮದ ಹತ್ತಿರವೇ ಇದ್ದ ಕವಿವರ್ಯರ ಮನೆಗೆ ಹೋಗಿ ಅವರೊಂದಿಗೆ ಸಾಹಿತ್ಯದ ಬಗ್ಗೆ ತಿಳಿದುಕೊಳ್ಳುವ ವಿಷಯಗಳನ್ನು ಚರ್ಚಿಸುವ ಹವ್ಯಾಸವನ್ನು ಬೆಳೆಸಿಕೊಂಡೆನು.

## 4. ಗುರುಕೃಪೆಯಿಂದ ಕವಿಕೃಪೆ

ರಾಷ್ಟ್ರಕವಿಗಳ ಮನೆಗೆ ನಾನು ಹೋದ ಮೊದಲ ದಿನ ಅವರು ನನ್ನ ಮನೆತನ. ವಯಸ್ಸು. ವೃತ್ತಿ. ವಿದ್ಯಾರ್ಹತೆಗಳ ಬಗ್ಗೆ ಪ್ರಶ್ನಿಸಿ ಕನ್ನಡ ಭಾಷಾ ಶಾಸ್ತ್ರವನ್ನು ಯುವಕರು ಶ್ರದ್ಧೆಯಿಂದ ಅಭ್ಯಾಸ ಮಾಡಬೇಕು ಹಾಗೂ ಅದಕ್ಕೆ ಒಂದು ಹೊಸತನವನ್ನು ಕೊಡಬೇಕು ಎಂದು ಕಳಕಳಿಯಿಂದ ಹೇಳಿದರು. ಸಾಹಿತ್ಯದ ಸ್ವಾರಸ್ಯವಾದ ವಿಷಯವನ್ನು ವಿವರಿಸುವರು. ಪ್ರಾಸದಿಂದ ಆಗಿರುವ ತೊಡಕು ತೊಂದರೆಗಳನ್ನು ಸೋದಾಹರಣವಾಗಿ ತರ್ಕಿಸುವರು. ಅಟ್ಟದ ಮೇಲೆ ಸಂಗ್ರಹಿಸಿದ ಪುಸ್ತಕ ಭಂಡಾರಕ್ಕೆ ಕರೆದೊಯ್ದು ತೋರಿಸುವರು. ಗೊಲ್ಗೊಥಾ. ವೈಶಾಖಿ. ಹೆಬ್ಬೆರಳು. ಧರ್ಮಸ್ಥಳದ ಲಿಂಗಕ್ಕೆ ಮಂಜುನಾಥ ಎಂಬ ಹೆಸರು ಹೇಗೆ ಬಂದಿತು. ಈ ಮೊದಲಾದ ಹೊತ್ತಗೆಗಳ ಒಂದೊಂದು ಪ್ರತಿಯನ್ನು "ಆಶೀರ್ವಾದ ಪೂರ್ವಕವಾಗಿ" ಎಂದು ಬರೆದು ಸಹಿಹಾಕಿ ಕೊಟ್ಟರು. ನಾನು ಕೇಳುವ ಎಷ್ಟೋ ಪ್ರಶ್ನೆಗಳಿಗೆ ಬೇಸರಿಸದೆ ಉತ್ತರಿಸುವರು. ಒಂದೊಂದು ದಿನ ಕಡಲತಡಿಗುಂಟ ಕರೆದುಕೊಂಡು ಹೋಗುವರು. ಅಲ್ಲಿನ ನಿಸರ್ಗಶ್ರೀಯನ್ನು ಬಣ್ಣಿಸುವರು. ಮಂಜೇಶ್ವರದ ಕಡಲ ಸೊಬಗು ಬೇರಾವ ಕಡೆಯೂ ಬಾರದೆಂದು ಅಭಿಮಾನದಿಂದ ಹೇಳುವರು. ತಮ್ಮ ಬಾಳಿನ ಕಹಿ-ಸಿಹಿಗಳ ವಿಚಾರವಾಗಿಯೂ ಮನೆತನದ-ಬಂಧುಗಳ ಬಗ್ಗೆಯೂ ಬಿಚ್ಚು ಮನಸ್ಸಿನಿಂದ ಚಿತ್ರಿಸುವರು. ಹೀಗೆ ಅವರ ಪರಿಚಯ ಬೆಳೆಯಿತು. ಅವರು ನನ್ನ ಬಗೆಗೆ ತೋರಿಸುತ್ತಿದ್ದುದು ಪಿತೃವಾತ್ಸಲ್ಯಕ್ಕಿಂತಲೂ ಹಿರಿದಾದುದು. ಎಳೆಯೆಯಲ್ಲಿಯೇ ತಂದೆಯನ್ನು ಕಳೆದುಕೊಂಡ ನಾನು ಅವರಲ್ಲಿ ಪಿತೃಪ್ರೇಮದ ವಿಶ್ವರೂಪವನ್ನು ಕಂಡೆನು. ಹೀಗೆ ಅವರು ನನಗೆ ಪರಮಪೂಜ್ಯರಾದರು.

ಸಭೆ ಸಮಾರಂಭಗಳಿಗೆ ಅಧ್ಯಕ್ಷತೆ ವಹಿಸಲೆಂದೋ. ಭಾಷಣ ಮಾಡಲೆಂದೋ. ಉದ್ಘಾಟನೆಗೆಂದೋ. ಹಿತವಚನ ಕೇಳಲೆಂದೋ ಅವರನ್ನು ಜನರು ಬಂದು ಪೀಡಿಸುವರು. ಆಗ ಪೈಗಳು ಕೆರಳಿ "ಈಗ ನಾನು ತುಂಬಾ ಜೋಬನಾಗಿದ್ದೇನೆ. ಮಾಡಬೇಕಾಗಿದ್ದ ಕೆಲಸ ಎಷ್ಟೋ ಮಾಡದೆ ಹೋಯಿತು. ಮೋಸವಾಯಿತು. ಆದರೆ ಅಂದಿನ ಪಶ್ಚಾತ್ತಾಪ ನನಗೆ ಇಂದಿಲ್ಲ. ಏಕೆನ್ನುವಿರೋ. ನಾನು ಜನ್ಮಾಂತರದಲ್ಲಿ ತುಂಬು ನಂಬುಗೆಯುಳ್ಳವನು: ಆ ನಂಬುಗೆ ದಿನಕಳೆದಂತೆ ಹೆಚ್ಚುತ್ತಲಿದೆ. ಹಿಂದಣ ಜನ್ಮದಲ್ಲಿ ಹಾಡಿ ನಿಲ್ಲಿಸಿದ ಹಾಡು ಅಲ್ಲಿಂದ ಸಾಗಿ ಈ ಜನ್ಮದಲ್ಲಿ ಹಾಡಿಸುತ್ತದೆ. ಇಲ್ಲಿಂದ ಮುಂದಣ ಹುಟ್ಟಿನಲ್ಲಿಯೂ ಹಾಡಿಸಿ. ಹೀಗೆಯೇ ಸಾಗಿ ಯಾವುದೋ ಒಂದು ಜನ್ಮದಲ್ಲಿ ಅದು ಪೂರ್ಣವಾಗಬೇಕು. ಅದು ತನಕ ಜಂಪುಹತ್ತಿದವನು ಬಾಜಿಸುವ ವೀಣೆಯಂತೆ ಬಿಟ್ಟಾಡುತ್ತ ನನ್ನನ್ನು ನುಡಿಸುತ್ತಿರಬೇಕು ಎಂಬುದೇ ನನ್ನ ನಂಬುಗೆ"ಎಂದು ಹೇಳಿ ತಮ್ಮ ಕೆಲಸದ ಮಹತ್ವದ ಅರಿವು ಮಾಡಿಕೊಡುವರು. "ತಮ್ಮ ಭಾಷಣ ತುಂಬಾ ಚೆನ್ನಾಗಿತ್ತು" ಎಂದು ಯಾರಾದರೂ ಹೇಳಿದರೆ ನಗುತ್ತಾ "ನನ್ನ ಭಾಷಣ ಕೇಳಬೇಕಾದರೆ ಕೇಳುವವರು ತುಂಬಾ ತಾಳ್ಮೆಯುಳ್ಳವರಾಗಿರಬೇಕು. ಇಲ್ಲವೇ ಅಮೃತಾಂಜನದ ಡಬ್ಬಿ ಜೊತೆಗೆ ತರಬೇಕು" ಎಂದು ಹಾಸ್ಯದ ಪಟಾಕಿ ಹಾರಿಸಿಬಿಡುವರು.

ಎಳವೆಯಿಂದ ಎಡೆಬಿಡದೆ ದುಡಿದು ಮುಪ್ಪಿನಲ್ಲಿಯೂ ಬಿಡುವಿಲ್ಲದೆ "ಕಾಯಕವೇ ಕೈಲಾಸ"ವೆಂದು ಸ್ಥಿತಪ್ರಜ್ಞನಂತೆ ಬಾಳುತ್ತಿದ್ದ ಅವರ ಹುರುಪು ನಮ್ಮಂಥ ಯುವಕರನ್ನು ನಾಚಿಸುವಂತಿತ್ತು. ತಲೆನರೆತು ಬೆಳ್ಳಗಾಗಿದ್ದರೂ ಅವರ ಎಳನೆತ್ತರ ಬಿಸಿ ನಾಡ ಮಕ್ಕಳನ್ನು

ಎಂದೆಂದೂ ಕಾವೇರಿಸುವಂತಹುದು. ಅವರಲ್ಲಿದ್ದ ಆಳವಾದ ಅರಿವು–ತಿಳಿಯಾದ ತಿಳಿವು–ಬಿತ್ತರದ ಓದು-ಪಳಗಿದ ಬರೆಹ-ಅತ್ಯಧಿಕವಾದ ಅನುಕಂಪ-ಅಗಾಧವಾದ ನೆನಪು-ಸರಳ ಜೀವನ-ಹಿರಿಯ ಬಾಳು ಬಾಳಬೇಕೆಂಬವರಿಗೆ ಅನುಕರಣೀಯವಾಗಿದ್ದುವು. ಇವೆಲ್ಲ ಹೊಗಳಿಕೆಯ ನುಡಿಗಡಣದ ಅಬ್ಬರಣೆಯಲ್ಲ ! ಕವಿಯಕೊರಳಿಗೆ ಕಟ್ಟಿಹಾಕುತ್ತಿರುವ ಉತ್ಪ್ರೇಕ್ಷೆಯ ಹೂಮಾಲೆಯಲ್ಲ ! ! ಸತ್ಯಸ್ಯ ಸತ್ಯ ಸಂಗತಿಗಳು; ಇಂಥ ಮಹಾನುಭಾವರನ್ನು ಕಾಣುವುದೇ ಒಂದು ಕಾಣ್ಕೆ. ಅವರೊಂದಿಗೆ ಏನನ್ನೇ ಕುರಿತು ಮಾತನಾಡುವುದೇ ಒಂದು ಕಲ್ಕೆ. ಈ ಕಾಣ್ಕೆ ಕಲ್ಕೆಗಳು ಅನುದಿನ ದೊರೆತು ನನ್ನಲ್ಲಿ ಸುಪ್ತವಾಗಿದ್ದ ಸಾಹಿತ್ಯಾಭಿರುಚಿ ಅಂಕುರಿಸಲು ಅವಕಾಶವಾಯಿತು. ಅಂತೂ ಶ್ರೀ ದೇವರ ದಯೆಯಿಂದ ಗುರು ಕೃಪೆಯಿಂದ ಪಡುಗಡಲು ನೆಲವೇರಿ ತೆರೆಯುರುಳಿ ತಂಪೆರೆದು ಕಳಕಳಿಕೆ ಬೀರುವ ಮಂಜೇಶ್ವರದಲ್ಲಿ ಎರಡು ಕಡಲಕೂಟವನ್ನು ಕಂಡು ಧನ್ಯನಾದೆನು ನಾನು. ಮೇರೆಗಾಣದ ಉಪ್ಪು ನೀರಿನ ಕಡಲೊಂದು ! ಆಳಗಾಣದ ಅರಿವಿನ ಇಂಗಡಲೊಂದು ! ! ಈ ಮಹಾಸಾಗರಗಳೆರಡರ ದರ್ಶನದಿಂದ ಪುಳಕಿತವಾದ ನನ್ನ ಮನಸ್ಸು ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಬೇಕೆಂತ ಸಂಕಲ್ಪಿಸಿತು.

ದೇವಾಲಯದಲ್ಲಿ ವಾಚನ ಕಾರ್ಯಕ್ರಮ ಅವ್ಯಾಹತವಾಗಿ ಸಾಗುತ್ತಿತ್ತು. ಪ್ರತಿ ಶನಿವಾರ ಮಂಗಳೂರಿನ ರಾಮಕೃಷ್ಣಾಶ್ರಮದ ಸ್ವಾಮೀಜಿ ಬಂದು ಭಗವದ್ಗೀತೆಯ ಮೇಲೆ ಉಪನ್ಯಾಸ ಕೊಡುತ್ತಿದ್ದುದರಿಂದ ಅಂದು ವಾಚನವಿರುತ್ತಿರಲಿಲ್ಲ. ಉಳಿದ ದಿವಸಗಳಲ್ಲಿ ರಾಷ್ಟ್ರ ಕವಿಗಳೇ ಮೊದಲಾದ ಗಣ್ಯ ವ್ಯಕ್ತಿಗಳು ತಪ್ಪದೆ ಸಭೆಗೆ ಬರುತ್ತಿದ್ದರು. "ಯದ್ಯದಾಚರತಿ ಶ್ರೇಷ್ಠ: ತತ್ತದೇವೇತರೋಜನ:" ಎಂಬಂತೆ ಊರಿನ ಪರವೂರಿನ ಅನೇಕ ಮಂದಿ ರಾಮಾಯಣ ಕಥಾ ಶ್ರವಣಕ್ಕೆ ಬರುವಂತಾಯಿತು. ಕಿಷ್ಕಿಂಧಾಕಾಂಡದ ಕತೆ ಸಾಗುತ್ತಿತ್ತು. ಶ್ರೀ ರಾಮಚಂದ್ರನು ಸುಗ್ರೀವ ಸಖ್ಯ ಮಾಡಿಕೊಂಡು ವಾಲಿಯನ್ನು ಮರೆಯಲ್ಲಿ ನಿಂತು ಕೊಂದುದು ಸರಿಯೆ? ಎಂಬ ಜಿಜ್ಞಾಸೆ ಹುಟ್ಟಿತು; ವಾಚನ ಕಾರ್ಯಕ್ರಮ ಮುಗಿದ ಬಳಿಕ ನಮ್ಮ ಗುರುಗಳೂ ಶ್ರೀ ಗೋವಿಂದ ಪೈಗಳವರೂ ಸೇರಿ ವಿಷಯವನ್ನು ಮಥಿಸತೊಡಗಿದರು. ಮಧ್ಯೆ ಶ್ರೀ ಕಾಮತರೂ ಒಂದೊಂದು ಮಾತನಾಡುವರು. ರಾಷ್ಟ್ರಕವಿಗಳು ಶ್ರೀ ರಾಮನು ವಾಲಿಯನ್ನು ಕೊಂದುದು ಸರಿ. ಅವನು ವೀರನೇನೋ ಅಹುದು. ಆದರೆ ಅವನಲ್ಲಿದ್ದ ಗರ್ವ ಒಪ್ಪತಕ್ಕದ್ದಲ್ಲ. ತಮ್ಮನಾದ ಸುಗ್ರೀವನ ಸ್ವಾತಂತ್ರ್ಯವನ್ನು ಕಸಿದುಕೊಂಡವ, ಅವನ ಮಡದಿಗೆ ಉಪದ್ರವ ಕೊಟ್ಟವನವನಲ್ಲವೊ ! ಧರ್ಮ ಸಂಸ್ಥಾಪನೆಯ ಸಲುವಾಗಿ ಅಧರ್ಮಿಯಾದ ವಾಲಿಯನ್ನು ಶ್ರೀ ರಾಮನು ಕೊಂದುದು ಸರಿ. "ಯಾರನ್ಯಧರ್ಮವನ್ನನ್ಯರ ಸ್ವಾತಂತ್ರ್ಯ ಕೆಡಿಸುವರೊ ಅವರ ಧರ್ಮಂ ಜನಂ ಸ್ವಾತಂತ್ರ್ಯವೆದ್ದ ತೆರೆಯಂತೆ ಕುಸಿದಳಿಯುತಿದೆ-ತಾನನ್ಯಗೆಸಗಿದಾ ಕೆಡುಕೆ ತನ್ನಯ ಕೆಡುಕು-ಒಳಿತೆ ತನ್ನಯ ಒಳಿತು" ಎಂಬ "ವೈಶಾಖಿ"ಯೊಳಗಣ ಕೆಲವು ಪಂಕ್ತಿಗಳನ್ನು ಉದಹರಿಸಿ ವಿಷಯವನ್ನು ಸಮರ್ಥಿಸಿದುದು ಇಂದಿಗೂ ನನಗೆ ನೆನಪಿದೆ. ಅಂತೆಯೇ ಮತ್ತೊಮ್ಮೆ ಮಹಿಳೆಯರ ಬಗ್ಗೆ ಮಾತು ಬಂದಾಗ ಬುದ್ಧ ಆನಂದರ ಸಂವಾದವನ್ನು ಉದ್ಧರಿಸಿ ಕೊನೆಯಲ್ಲಿ (Man or Woman which is better? Each is useless than the Other!) ಎಂಬ ಆಂಗ್ಲ ಕವಿಯ ಮಾತುಗಳನ್ನು ವಿವರಿಸಿ ಹೇಳಿದರು. ಇಂತಹ ಅನೇಕ ಸಂದರ್ಭಗಳಲ್ಲಿ ಕವಿಗಳ ಅನುಭವ ಪೂರ್ಣವಾದ ಮಾತುಗಳು ನಮ್ಮನ್ನು ಒಮ್ಮೆಗೆ ಬೆಳಕಿನ ಕಡೆಗೆ ಕರೆದೊಯ್ಯುತ್ತಿದ್ದವು.

ಮಂಜೇಶ್ವರಕ್ಕೆ ಬಂದು ತಿಂಗಳಾದರೂ, ಜಿಲ್ಲೆಯ ಮುಖ್ಯಸ್ಥಳವಾದ ಮಂಗಳೂರನ್ನು ನೋಡಿರಲಿಲ್ಲ. ನಮ್ಮ ಗುರುಗಳು "ನಾವು ಬಂದಿರುವ ಕಾರ್ಯಗೌರವ ಮುಖ್ಯ. ಮಂಗಳೂರನ್ನು ನಿಧಾನವಾಗಿ ನೋಡಿದರಾಯಿತು" ಎನ್ನುವರು. ಯುವಕನಾದ ನನಗೆ ಮಂಗಳೂರಿಗೆ ಹೋಗಿಬರಬೇಕೆಂಬ ಹೆಬ್ಬಯಕೆ. ದೇವಸ್ಥಾನದಲ್ಲಿ ಅವುದೋ ಉತ್ಸವದ ನಿಮಿತ್ತವಾಗಿ ಒಂದೆರಡು ದಿನ ವಾಚನವಿರಲಿಲ್ಲ. ಎರಡು ಮೂರು ದಿನದ ಸಂಗ್ರಹಕಾರ್ಯ ಮುಗಿದಿತ್ತು. ನನ್ನ ಪರದಾಟವನ್ನು ನೋಡಲಾರದೆ ಗುರುಗಳೂ ಮಂಗಳೂರಿಗೆ ಹೋಗಲು ಅಪ್ಪಣೆ ಕೊಟ್ಟರು. 8–5–1949ರಂದು ಬೆಳಗಿನ ರೈಲಿನಲ್ಲಿ ಮಂಗಳೂರಿಗೆ ಹೋದೆನು. ಅಲ್ಲಿ ನನ್ನ ಬಂಧುಗಳೂ ಹಿತಚಿಂತಕ ಮಿತ್ರರೂ ಆದ ನಮ್ಮ ಕಡೆಯ ಶ್ರೀ ಕೆ.ಎಲ್.ಸೂರ್ಯನಾರಾಯಣರಾವ್ ಬಿ.ಎ.ಬಿ.ಎಲ್ ಎಂಬವರು ಟೆಕ್ಸ್‌ಟೈಲ್ ಕಂಟ್ರೋಲ್ ಆಫೀಸರಾಗಿದ್ದರು. ಅವರ ವಿಳಾಸ ನನ್ನಲ್ಲಿತ್ತು. ಅವರನ್ನು ನಾನು ಸಂದರ್ಶಿಸಬೇಕಾಗಿತ್ತು. ಅವರ ಮನೆ ಮಂಗಳೂರಿನ ಮಣ್ಣಗುಡ್ಡೆಯ ಹರವಿನಲ್ಲಿ ಶ್ರೀ ರಾಮಕೃಷ್ಣಾಶ್ರಮದ ಬಳಿಯಲ್ಲೆಲ್ಲಿಯೋ ಇದ್ದಿತು. ಅಲ್ಲಿಗೆ ಹೋಗುವ ಸಿಟಿಬಸ್ಸನ್ನು ಹಿಡಿಯಬೇಕಾಗಿತ್ತು. ಅಷ್ಟರಲ್ಲಿ ನಮ್ಮ ಗುರುಗಳು ಮೈಸೂರಿಗೆ ಕಾಗದ ಬರೆಯುವಂತೆ ಹೇಳಿದ ವಿಷಯ ನೆನಪಾಗಿ ಎದುರಿಗೆ ಸಿಕ್ಕಿದ ಮಹನೀಯರೊಬ್ಬರನ್ನು "ಸಾರ್, ಪೋಸ್ಟ್ ಆಫೀಸು ಯಾವ ಕಡೆ ಇದೆ?" ಎಂದು ಕೇಳಿದೆನು. ಅದಕ್ಕೆ ಆ ಅಪರಿಚಿತ ವ್ಯಕ್ತಿ "ಅಂಚೆ ಕಚೇರಿಯೋ ಇಲ್ಲಿಂದ ನೇರ ಹೋದರೆ ಒಂದು ಸಂಕ ಉಂಟು. ಅಲ್ಲಿಂದ ಮುಂದೆ ಪಂಚಾಂಗವುಂಟು. ಅಲ್ಲಿಂದ ಮುಂದೆ ಒಂದು ದೊಡ್ಡ ಕಟ್ಲೋಣ ಉಂಟು. ಅಲ್ಲೆ ತಾನೇ ಅಂಚೆ ಕಚೇರಿ ಉಂಟು" ಎಂದು ಉತ್ತರಿಸಿ ಸ್ವಲ್ಪವೂ ನಿಲ್ಲದೆ ದಾರಿಹಿಡಿದು ಧಾವಿಸಿತು. ಮೈಸೂರಿನವನಾದ ನನಗೆ ಆ ಕನ್ನಡ ಸ್ವಲ್ಪವೂ ಅರ್ಥವಾಗಲಿಲ್ಲ. ಅಂಚೆಯ ಕಚೇರಿಗೆ ಹೋಗುವ ಆಲೋಚನೆಯನ್ನೇ ಮರೆತೆನು. ಸಂಕ-ಪಂಚಾಂಗ-ಕಟ್ಲೋಣ ಈ ಪದಗಳ ಅರ್ಥವೇನೆಂದು ತುಮುಲವಾರಂಭವಾಯಿತು. ಬಸ್‌ಹತ್ತಿ ಮಣ್ಣಗುಡ್ಡೆಯಲ್ಲಿದ್ದ ಸಹೃದಯ ಶ್ರೀ ಸೂರ್ಯನಾರಾಯಣ ರಾಯರನ್ನು ಕಂಡು ಮಾತನಾಡಿದೆನು. ಒತ್ತಾಯಪೂರ್ವಕವಾಗಿ ಅವರು ಆ ರಾತ್ರಿ ನನ್ನನ್ನು ಮಂಗಳೂರಿನಲ್ಲಿ ತಡೆದರು-ಕುಮಾರ ವ್ಯಾಸ ಭಾರತದಿಂದ ಕಾವ್ಯವಾಚನ ಮಾಡಿಸಿದರು. ಬೆಳಗ್ಗೆ ಮಂಜೇಶ್ವರದ ರೈಲು ಹತ್ತಿಸಿದರು. 11 ಗಂಟೆಯ ಹೊತ್ತಿಗೆ ಮಂಜೇಶ್ವರ ತಲುಪಿದ ನಾನು ರೈಲ್ವೆ ನಿಲ್ದಾಣದಿಂದ ನೇರ ರಾಷ್ಟ್ರಕವಿಗಳ ಮನೆಗೆ ಧಾವಿಸಿದೆನು. ಮನೆಯ ಮುಂಭಾಗದಲ್ಲಿ ಚೌಕಿಯಲ್ಲಿ ಪತ್ರಗಳಿಗೆ ಉತ್ತರ ಬರೆಯುತ್ತಿದ್ದ ಶ್ರೀ ಗೋವಿಂದ ಪೈಗಳನ್ನು "ಸಂಕ. ಪಂಚಾಂಗ. ಕಟ್ಲೋಣ" ಎಂದರೇನೊ ಅರ್ಥವಾಗಲಿಲ್ಲ. ತಾವು ತಿಳಿಸಬೇಕು ಎಂದು ಕೇಳಲು ಅವರು ಗಹಗಹಿಸಿ ಗಟ್ಟಿಯಾಗಿ ನಗುತ್ತಾ "ಮಾರಾಯರಾ ! ನೀವು ರಾಮಾಯಣ ಭಾರತ ರಾಗವಾಗಿ ವಾಚನ ಮಾಡಬಲ್ಲಿರಿ ಅಷ್ಟೆ ! ! ನಮ್ಮ ಕನ್ನಡ ಭಾಷೆ ನಿಮಗೆ ಅರ್ಥವಾಗಲಿಲ್ಲವೋ? ಸಂಕ ಅಂದರೆ ಸೇತುವೆ. ಪಂಚಾಂಗ ಎಂದರೆ ತಿಥಿ.ವಾರ.ನಕ್ಷತ್ರ ನೋಡುವ ಪಂಚಾಂಗವಲ್ಲ ! ಪಂಚಾಂಗವೆಂದರೆ ಮನೆಕಟ್ಟಲು ಸಿದ್ಧಮಾಡಿರುವ ನೆಲೆಗಟ್ಟು. (foundation) ಕಟ್ಲೋಣ ಎಂದರೆ ನೀವು ಹೇಳುವ ಕಟ್ಟಡ. ತಿಳಿಯಿತೋ-ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಎಷ್ಟೋ ಕನ್ನಡ ಶಬ್ದಗಳು ನಿಮಗೆ ಅರ್ಥವಾಗ

ಲ್ಲೊಲ್ಲವು. ಮೇಲಾಗಿ ತುಳು, ಕೊಂಕಣಿ, ಹಳೆಗನ್ನಡ ಪದಗಳು ಜನರ ಆಡುಭಾಷೆಯಲ್ಲಿ ಬೆರೆತುಹೋಗಿವೆ. ಅವನ್ನೆಲ್ಲ ಕುರಿತು ಹೇಳತೊಡಗಿ ಪರೆ ನಿಮ್ಮ ರಾಮಾಯಣಕ್ಕಿಂತ ದೊಡ್ಡ ರಾಮಾಯಣ ! ಎಂದು ಮುಂದುವರಿದು ಕಂಡಿತ-ಖಂಡಿತ; ಅಪೂರ್ವ-ಅಪರೂಪ; ಬೇಡ-ಬೇಡಿ ಜೋಡೆ ಮೊದಲಾದ ಶಬ್ದಗಳ ಉತ್ಪತ್ತಿ-ಅರ್ಥ ಆಭಾಸಾದಿಗಳನ್ನು ವಿವರಿಸಿದರು.

"ಇನ್ನೇನು ನಾನು ಬರೆಯಬೇಕಾದ ಪತ್ರಗಳು ಮುಗಿದುವು. ಅವುಗಳನ್ನು ಅಂಚೆಯ ಪೆಟ್ಟಿಗೆಗೆ ಹಾಕಲು ಬರಬೇಕಾಗಿದೆ. ನಿಮ್ಮ ಜೊತೆಗೇ ಬರುತ್ತೇನೆ ಸ್ವಲ್ಪ ಕುಳಿತುಕೊಳ್ಳಿ" ಎಂದರು. ನಾನು "ಆಶ್ರಮಕ್ಕೆ ಹೋಗುವ ದಾರಿಯಲ್ಲಿಯೇ ಅಂಚೆ ಕಚೇರಿ ಇದೆ. ನಾನು ನಿಮ್ಮ ಕಾಗದಗಳನ್ನು ಪೋಸ್ಟ್ ಮಾಡುತ್ತೇನೆ. ತಾವು ಏಕೆ ಶ್ರಮಪಡಬೇಕು? ವಿಶ್ರಮಿಸಿಕೊಳ್ಳೋಣವಾಗಲಿ" ಎಂದೆನು. ಆ ಮಾತಿಗೆ ಗೋವಿಂದ ಪೈಗಳು "ನಿಮಗೆ ನನ್ನ ವ್ರತ ತಿಳಿಯದು. ನನಗೆ ಪತ್ರ ಬರೆದವರಿಗೆ ಕೂಡಲೇ ಉತ್ತರಿಸುವುದು-ಬರವಣಿಗೆಗೆ ನೇರಿಲು ಬಣ್ಣದ ಶಾಯಿಯನ್ನೇ ಉಪಯೋಗಿಸುವುದು. ಅಂತೆಯೇ ನಾನು ಬರೆದ ಕಾಗದಗಳನ್ನು ಸ್ವಲ್ಪವೂ ಪಾಲುವಾರಿಕೆ ಮಾಡದೇ ನಾನೇ ಅಂಚೆಯ ಕಚೇರಿಯವರೆಗೆ ಹೋಗಿ ಅಂಚೆಯ ಡಬ್ಬಿಗೆ ಹಾಕುವುದು. ಈ ವ್ರತವನ್ನು ಬಹಳ ಕಾಲದಿಂದ ಅನುಸರಿಸುತ್ತಿರುವೆನುಅದು ಸರಿಯೋ ಅಲ್ಲವೋ. ಹೆರವರ ಕೈಗೆ ಕೊಟ್ಟು ಅಂಚೆ ಡಬ್ಬಿಗೆ ಹಾಕೆಂದರೆ "ಕುತೂಹಲದಿಂದ ಅವರು ಬರೆದಿರುವ ಸಂಗತಿ ಓದಬಹುದು. ಅಂಚೆಯ ಡಬ್ಬಿಗೆ ಹಾಕುವುದನ್ನು ಮರೆಯ ಬಹುದು. ಒಂದೆರಡು ದಿನಗಳಾದ ಬಳಿಕ ಹಾಕಬಹುದು. ಇದರಿಂದ ನನ್ನ ಉತ್ತರವನ್ನು ಕಾಯುತ್ತಿರುವವರಿಗೆ ವೃಥಾ ತೊಂದರೆ--ನನ್ನ ವಿಷಯದಲ್ಲಿ ಅಗೌರವ ಮೂಡುತ್ತದೆ. ಸರ್ವಥಾ ಹಾಗಾಗಬಾರದು. ಅಲ್ಲವೋ. ಆದುದರಿಂದ ಈ ಕೆಲಸ ನನಗೆ ಪ್ರಿಯವಾದುದು ನಾನೇ ಮಾಡುತ್ತೇನೆ" ಎಂದು ಹೇಳಿ ಪಾದರಕ್ಷೆಗಳನ್ನು ಹಾಕಿಕೊಂಡು ಛತ್ರಿಯನ್ನು ಬಿಚ್ಚಿ ಹಿಡಿದು ಹೊರಟರು. ನಾನೂ ಅವರನ್ನು ಅನುಸರಿಸಿ ನಡೆದೆನು. ಅಂಚೆಯ ಡಬ್ಬಿಗೆ ಕಾಗದಗಳನ್ನು ಹಾಕುವಾಗಲೂ ಶ್ರೀ ಪೈಗಳವರು ವಿಳಾಸವನ್ನು ಪರಿಶೀಲಿಸಿ ಒಂದೊಂದಾಗಿ ಡಬ್ಬಿಯೊಳಗೆ ಇಳಿಯ ಬಿಟ್ಟರು. ಕಾಗದಗಳಿಗೆ ಉತ್ತರ ಬರೆಯುವುದರಲ್ಲಿ ಅವರಿಗೆ ಅಷ್ಟು ಶ್ರದ್ಧೆ ! ಅವುಗಳನ್ನು ಅಂಚೆಯ ಡಬ್ಬಿಗೆ ಹಾಕುವುದು ಅಷ್ಟು ನಿಖರ !

ಮಂಜೇಶ್ವರದ ದೇವಾಲಯದಲ್ಲಿ ರಾಮಾಯಣ ವಾಚನದ ಕಾರ್ಯಕ್ರಮ 20–5–49ರಂದು ಬೆಳಗ್ಗೆ 10–30ಕ್ಕೆ "ಪಟ್ಟಾಭಿಷೇಕ" ಸರ್ಗವನ್ನು ವಾಚನ ಮಾಡುವುದರ ಮೂಲಕ ಮುಗಿಯಿತು. ಶ್ರೀಮಾನ್ ಗೋವಿಂದ ಪೈಗಳು ದೇವಾಲಯದ ಮುಖ್ಯಾಧಿಕಾರಿಗಳು ಇಂಥ ಪವಿತ್ರ–ಉಪಯುಕ್ತ–ಪುಣ್ಯಪ್ರದ ಸಾಂಸ್ಕೃತಿಕ ಕಾರ್ಯಕ್ರಮವನ್ನು 45 ದಿವಸಗಳ ಕಾಲ ಏರ್ಪಡಿಸಿದ ವಿಚಕ್ಷಣತೆಯನ್ನು ಗುರುಶಿಷ್ಯರು ಕೂಡಿ ಶ್ರದ್ಧೆಯಿಂದಲೂ ಭಕ್ತಿಯಿಂದಲೂ ನೆರವೇರಿಸಿಕೊಟ್ಟ ವಾಚನ ಕಾರ್ಯಕ್ರಮಗಳ ವೈಖರಿಯನ್ನೂ ರಾಮಾಯಣ ಮಹಾ ಕಾವ್ಯದ ಮೆಂಪನ್ನೂ, ಶ್ರೋತೃಗಳ ಸಹಕಾರವನ್ನೂ ಕುರಿತು ಬೋಧಪ್ರದವಾದ ಭಾಷಣ ಕೊಟ್ಟರು. ಮುಖ್ಯಾಧಿಕಾರಿ ಶ್ರೀ ಕಾಮತ್‌ರವರು ವಂದನಾರ್ಪಣೆ ಮಾಡಿ ಗುರುಗಳಿಗೆ ಸನ್ಮಾನ ಮಾಡಿದರು. ಶ್ರೋತೃವೃಂದ ತೆರಳಿತು. ನಾವೂ ಶ್ರೀ ಕಾಮತ್ ಮತ್ತು ರಾಷ್ಟ್ರಕವಿಗಳೊಂದಿಗೆ ಆಶ್ರಮದ ಕಡೆಗೆ ಹೊರಟೆವು. ದಾರಿಯಲ್ಲಿ ಕವಿಗಳು ನಮ್ಮ ಗುರುಗಳನ್ನು ಕುರಿತು "ನೀವು ಶ್ರೀ ರಾಮಇದ್ದ ಹಾಗೆ ! ನಿಮ್ಮ ಶಿಷ್ಯ ಆಂಜನೇಯ ಇದ್ದ ಹಾಗೆ ! ಆಂಜನೇಯ ಚನ್ನಾಗಿ ಶ್ರೀ ರಾಮರ ಸೇವೆ ಮಾಡಿವ್ವಾನೆ" ಎಂದು ನನ್ನ ಬೆನ್ನು ತಟ್ಟಿ ಸಾಯಂಕಾಲ ಮನೆಗೆ ಬಂದು ಹೋಗೆಂದು ಪ್ರೇಮಪೂರಿತ ದೃಷ್ಟಿಯಿಂದ ನೋಡಿ ತಮ್ಮ ಮನೆಯತ್ತ ತೆರಳಿದರು. ನಾವೂ ಕಾಮತರನ್ನು ಕಳುಹಿಸಿ ಆಶ್ರಮವನ್ನು ಸೇರಿದೆವು.

ಮಂಜೇಶ್ವರಕ್ಕೆ ಹೋದ ಉದ್ದೇಶ ಮುಗಿದನಂತರವೂ ಒಂದೆರಡು ದಿವಸ ಅಲ್ಲಿ ನಿಲ್ಲಬೇಕಾಯಿತು. ಆ ಎರಡು ದಿವಸಗಳಲ್ಲಿ ಮತ್ತೆ ಸಮುದ್ರ ದರ್ಶನ-ಸಮುದ್ರಸ್ನಾನಗಳಾದುವು. ಹತ್ತಿರದಲ್ಲಿದ್ದ ಕಣಿಲು ಗುಡ್ಡೆ-ಬಂಗರು ಮಂಜೇಶ್ವರಗಳಿಗೆ ಹೋಗಿಬಂದೆವು-ಆ ಚೈತ್ರ ವೈಶಾಖ ಮಾಸದ ಬಿರು ಬೇಸಗೆಯ ದಿನಗಳಲ್ಲಿ ನಾವು ಅಲ್ಲಿನ ಹೆಚ್ಚು ಸೆಖೆಯನ್ನು ತಾಳಲಾರದೆ ತತ್ತರಿಸಿ ಹೋದೆವು. ಹಗಲು-ರಾತ್ರಿ ಶರೀರದಿಂದ ಬೆವರು ಧಾರಾಕಾರವಾಗಿ ಸುರಿದು ಧರಿಸಿದ್ದ ಉಡುಪೆಲ್ಲ ತೊಯ್ದು ಹೋಗುತ್ತಿತ್ತು. ನಮ್ಮ ಈ ಅವಸ್ಥೆಯನ್ನು ಕಂಡು ರಾಷ್ಟ್ರಕವಿಗಳೊಮ್ಮೆ "ಉರಿಯುತ್ತಿರುವ ಒಲೆಯೊಳಗೆ ಹಾಕಿದಂತೆ ನಿಮ್ಮ ಅವಸ್ಥೆ. ನಮಗೇನೋ ಇಲ್ಲಿನ ಹವೆ ಒಗ್ಗಿಹೋಗಿದೆ. ಇಲ್ಲಿನ ಭಯಂಕರ ಬಿಸಿಲು ಮೈಸೂರಿನವರಿಗೆ ಸಹಿಸಲು ದುಸ್ಸಾಧ್ಯ. ಇನ್ನೊಮ್ಮೆ ನೀವು ಈ ಪ್ರಾಂತ್ಯಕ್ಕೆ ಬರುವ ಹಾಗಿದ್ದರೆ ಡಿಸೆಂಬರ್-ಜನವರಿ ತಿಂಗಳಲ್ಲಿ ಬರುವುದು ಒಳಿತು" ಎಂದು ಎಚ್ಚರಿಕೆ ಕೊಟ್ಟರು.

ನಾವು 23–5–49ರಂದು ಉಡುಪಿಗೆ ಹೊರಡುವುದೆಂದು ತೀರ್ಮಾನವಾಯಿತು. ಹೊರಡುವ ಹಿಂದಣದಿನ ಸಾಯಂಕಾಲ ರಾಷ್ಟ್ರಕವಿಗಳನ್ನು ಕಂಡು ನಮಸ್ಕಾರ ಹೇಳಿ ಬರಬೇಕೆಂದು ಅವರ ಮನೆಗೆ ಹೋದೆನು. ಶ್ರೀ ಗೋವಿಂದ ಪೈಗಳು ನನ್ನನ್ನು ಎಂದಿಗಿಂತ ಹೆಚ್ಚು ಆದರಿಸಿದರು. ಮಂಜೇಶ್ವರವನ್ನೂ ತಮ್ಮನ್ನೂ ಮರೆಯಬಾರದೆಂದು ಕಂಬನಿದುಂಬಿಸಿದರು. ಕನ್ನಡ ಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡೆಂದು ಒತ್ತಿ ಹೇಳಿದರು. ನನ್ನಲ್ಲಿ ಕಂಡ ಶ್ರದ್ಧೆ, ವಿನಯ, ಗುರುಸೇವೆ, ಸಾಹಿತ್ಯದಾಹ, ಉತ್ಸಾಹ ಮೊದಲಾದುವನ್ನು ಬಹಳವಾಗಿ ಕೊಂಡಾಡಿದರು. ಅಟ್ಟದ ಮೇಲೇರಿ ಹೋಗಿ 25 ರೂಪಾಯಿಗಳನ್ನು ತಂದು ನನ್ನ ಕೈಯಲ್ಲಿಟ್ಟು "ನಿಮ್ಮ ಗುರುಗಳಿಗೆ ಮರ್ಯಾದೆ ಮಾಡುವ ಶಕ್ತಿ ಇಲ್ಲ. ಅವರು ದೊಡ್ಡ ವಿದ್ವಾಂಸರು. ನಿನ್ನ ವಾಚನವನ್ನು ನಾನು ಮೆಚ್ಚಿ ಆಶೀರ್ವಾದ ರೂಪವಾಗಿ ಯತ್ಕಿಂಚಿತ್ ಸಹಾಯ ನೀಡುತ್ತಿದ್ದೇನೆ. ನಾನು ಈ ರೀತಿ ಕೊಟ್ಟುದನ್ನು ಯಾರಿಗೂ-ನಿಮ್ಮ ಗುರುಗಳಿಗೂ ಸಹ ತಿಳಿಸಬಾರದು. ಈ ವಿಷಯ ಯಾರಿಗೂ ಖಂಡಿತ ಗೊತ್ತಾಗಬಾರದು. ಒಳ್ಳೆಯದು-ಹೋಗಿಬನ್ನಿ" ಎಂದು ಮೈದಡವಿದರು. ಕವಿಗಳ ಅನುಕಂಪೆಯ ಮನೋಭಾವ ನನ್ನನ್ನು ಮೂಕನನ್ನಾಗಿಸಿತು. ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯಿತು. ದೊಪ್ಪನೆ ಅವರ ಕಾಲ ಮೇಲೆ ಬಿದ್ದು ನಮಸ್ಕರಿಸಿದೆನು. ತುಂಬಿ ಬಂದ ಧ್ವನಿಯಲ್ಲಿ ಆಶೀರ್ವಾದಗೈದರು. ಬಾಗಿಲವರೆಗೆ -ರಸ್ತೆಯತನಕ ಬಂದು ಕಳುಹಿಸಿಕೊಟ್ಟರು. ಆ ಮಾರನೆಯ ದಿನವೇ ಗುರುಗಳೂ, ನಾನು ಮತ್ತೆ ಕಾಮತರನ್ನು ಶ್ರೀ ರಾಷ್ಟ್ರಕವಿಗಳನ್ನು ಕಂಡು ಅವರಿಂದ ಬೀಳ್ಕೊಂಡು ಉಡುಪಿಗೆ ಪ್ರಯಾಣ ಮಾಡಿದೆವು. ಅಲ್ಲಿ ಒಂದೆರಡು ದಿನವಿದ್ದು, ಶ್ರೀ ಕೃಷ್ಣದರ್ಶನಾದಿ

ಗಳನ್ನು ತೀರಿಸಿಕೊಂಡು ಮಂಗಳೂರು ಮಡಿಕೇರಿಯ ಮಾರ್ಗವಾಗಿ 27–5–49ರ ಸಂಜೆ ಸುಖವಾಗಿ ಮೈಸೂರು ತಲಪಿದೆವು. ಹೀಗೆ ಗುರು ಕೃಪೆಯಿಂದ ಕವಿಕೃಪೆಯೊದಗಿ ನನ್ನ ಜೀವನದ ಹಾದಿಯೇ ಮಾರ್ಪಾಟಾಯಿತು.

## 5. ಮತ್ತೆ ಮಂಜೇಶ್ವರಕ್ಕೆ

ಮಂಜೇಶ್ವರದಿಂದ ಬಂದ ಬಳಿಕ ಪೂಜ್ಯ ಗೋವಿಂದ ಪೈಗಳವರೊಡನೆ ಪತ್ರವ್ಯವಹಾರ ಆರಂಭವಾಯಿತು. ಆಗಾಗ ಅವರಿಗೆ ಪತ್ರ ಬರೆಯುವ ಹವ್ಯಾಸವಿಟ್ಟುಕೊಂಡೆ. ನನ್ನ ಕಾಗದ ತಲುಪಿದೊಡನೆಯೇ ಅವರು ತಪ್ಪದೆ ಉತ್ತರಿಸುತ್ತಿದ್ದರು. ಒಮ್ಮೆ ಹೀಗಾಯಿತು: ಅವರಿಗೆ ಬರೆದ ಕಾಗದವನ್ನು ಅಂಚೆಗೆ ಹಾಕಲು ನನಗೆ 2 ದಿವಸ ತಡವಾಯಿತು. ಆ ಕಾಗದಕ್ಕೆ ಉತ್ತರಿಸುತ್ತಾ ಶ್ರೀ ಪೈಗಳು "ನಿಮ್ಮ ಇಂತಿಷ್ಟನೆಯ ತಾರೀಕಿನ-ಪತ್ರ ಇಂತಿಷ್ಟನೆಯ ತಾರೀಕಿನ ಅಂಚೆಯ ಮುದ್ರೆ ಬಿದ್ದು ಈಗ ತಾನೇ ನನಗೆ ತಲಪಿತು. ಸಂತೋಷ. ನೀವು ನನಗೆ ಬರೆದ ಕಾಗದವನ್ನು ಅಂಚೆ ಡಬ್ಬಿಗೆ ಹಾಕುವುದು ತಡವಾಗಿಯೇ ಪರಂತು ನಾನು ತಡಮಾಡಿ ಉತ್ತರಿಸುತ್ತಿರುವೆನೆಂದು ಸರ್ವಥಾ ಭಾವಿಸಲಾಗದು. ಅಥವಾ ಇನ್ನು ಮುಂದೆ ಬರೆದ ಕಾಗದವನ್ನು ಅಂಚೆಗೆ ಹಾಕಲು ತಡಮಾಡಬಾರದು" ಎಂದು ಬರೆದು ಬುದ್ಧಿ ಕಲಿಸಿದರು. ಅವರು ಬರೆಯುತ್ತಿದ್ದ ಪ್ರತಿ ಕಾಗದದಲ್ಲಿಯೂ ನನ್ನನ್ನು ಆಶೀರ್ವದಿಸಿ "ನಿಮ್ಮ ಗಮಕಕಲೆ ಸಂವರ್ಧಿಸಲಿ. ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ. ನಿಮ್ಮ ಕೀರ್ತಿ ನಾಡಿನ ಉದ್ದಗಲಕ್ಕೂ ಪರಡಲಿ" ಎಂದು ಮುಂತಾಗಿ ಬರೆದಿರುವರು. ಅವರ ಪ್ರೇರಣೆಯಿಂದ ನಾನು ಕನ್ನಡ ಸಾಹಿತ್ಯಾಭ್ಯಾಸ ಮಾಡಲು ತೊಡಗಿದೆನು.

1949ನೇ ಡಿಸೆಂಬರದಲ್ಲಿ ಮತ್ತೆ ಮಂಜೇಶ್ವರದ ದೇವಸ್ಥಾನದ ಮುಖ್ಯಾಧಿಕಾರಿಗಳಿಂದ ನಮ್ಮ ಗುರುಗಳಾದ ಗಮಕ ವಿದ್ವಾನ್ ಶ್ರೀ ಕೃಷ್ಣಗಿರಿ ಕೃಷ್ಣರಾಯರಿಗೆ "ಭಾರತ ವಾಚನ"ಕ್ಕಾಗಿ ಕರೆ ಬಂದಿತು. ಕ್ರಿಸ್‌ಮಸ್ ರಜಾ ಆರಂಭವಾಗಲು ಇನ್ನೂ ಒಂದು ವಾರವಿತ್ತು. ರಜಾ ಆರಂಭವಾದೊಡನೆಯೇ ಮಂಜೇಶ್ವರಕ್ಕೆ ಬರಬೇಕೆಂತ ತಿಳಿಸಿ ಗುರುಗಳು ಒಂದುವಾರ ಮುನ್ನಾ ಮಂಜೇಶ್ವರಕ್ಕೆ ಪ್ರಯಾಣ ಮಾಡಿದರು. ಅಲ್ಲಿನ ತನಕ ಗುರುಗಳ ಶುಶ್ರೂಷೆಗೆ ಶ್ರೀಮತಿ ರಮಾಬಾಯಿಯವರೇ ಮಂಜೇಶ್ವರದ ಎಸ್.ವಿ.ಟಿ.ಪ್ರೌಢಶಾಲೆಯ ಕನ್ನಡ ಬೋಧಕರಾಗಿ ಮಂಜೇಶ್ವರದಲ್ಲಿದ್ದುದರಿಂದ ಯೋಚನೆ ಇರಲಿಲ್ಲ. ನಾನು 25–12–49ನೇ ತಾರೀಕು ಮೈಸೂರಿನಿಂದ ಹೊರಟು, ಬಸ್ಸು ಮಂಗಳೂರು ತಲಪುವುದು ತಡವಾದುದರಿಂದ ಮಾರನೇ ದಿನ ಅಂದರೆ 26–12–49ರಂದು ಬೆಳಿಗ್ಗೆ ಮಂಜೇಶ್ವರವನ್ನು ತಲಪಿ ಗುರುಗಳ ಕಾರ್ಯಗೌರವದಲ್ಲಿ ನೆರವಾದೆನು. ಈಬಾರಿ ಶ್ರೀಮತಿ ರಮಾಬಾಯಿಯವರು ಅಲ್ಲಿಯೇ ಇದ್ದುದರಿಂದ ನನಗೂ ಗುರುಗಳಿಗೂ ತುಂಬಾ ಸಹಾಯವಾಯಿತು. ಆಕೆ ಒಳ್ಳೆಯ ಸಾಹಿತಿ. ನಿಗರ್ವಿ ಪರೋಪಕಾರಪ್ರಿಯರು ಹಾಗೂ ಸಹೃದಯಿ. ರಾಷ್ಟ್ರಕವಿಗಳಿಗೆ ಹತ್ತಿರದ ಬಂಧುಗಳಾಗಿದ್ದುದರಲ್ಲದೆ ಅವರಿಗೆ ಆತ್ಮೀಯರಾಗಿದ್ದರು. ಈ ಬಾರಿ ನಾನು ಮಂಜೇಶ್ವರದಲ್ಲಿದ್ದುದು ಕೇವಲ 15 ದಿವಸಗಳು ಮಾತ್ರ. ದೇವಸ್ಥಾನವಲ್ಲಿ ಸಾಯಂಕಾಲದ ವೇಳೆ ಎಂದಿನಂತೆ "ಕುಮಾರವ್ಯಾಸ" ಭಾರತ ವಾಚನ ಕಾರ್ಯಕ್ರಮ ಸಾಗುತ್ತಿತ್ತು. ಈಬಾರಿ ಬೆಳಗಿನ ಹೊತ್ತು ಆಶ್ರಮದಲ್ಲಿ "ಸಂಗ್ರಹ" ಕಾರ್ಯ ಮಾಡಬೇಕಾದ ಅಗತ್ಯವಿರಲಿಲ್ಲ. ಗುರುಗಳ ಶುಶ್ರೂಷೆ ಮುಗಿಯಿತೆಂದರೆ ಸಂಜೆಯ ವಾಚನ ಕಾರ್ಯಕ್ರಮದವರೆಗೆ ಬೇಕಾದ ಹಾಗೆ ಬಿಡುವಿರುತ್ತಿತ್ತು. ಈ ವೇಳೆಯಲ್ಲಿ ನಾನೂ ಶ್ರೀಮತಿ ರಮಾಬಾಯಿಯವರೂ ಒಟ್ಟಿಗೆ ರಾಷ್ಟ್ರಕವಿಗಳ ಮನೆಗೆ ಹೋಗಿ ಅವರೊಡನೆ ಮಾತಾಡಿ ಬರುತ್ತಿದ್ದೆವು. ಈ ಸಮಯದಲ್ಲಿ ಕವಿಗಳು ಕಟ್ಟಿರುವ ಅನೇಕ ಬಿಡಿಕವಿತೆಗಳ, ಬರೆದಿರುವ ಭಾಷಣಗಳ ವಿಷಯ ಅಲ್ಪ ಸ್ವಲ್ಪ ತಿಳಿಯಿತು. ಎಲ್ಲ ಶ್ರೀಮತಿ ರಮಾಬಾಯಿಯವರ ಹೇಳಿಕೆ. ರಾಷ್ಟ್ರಕವಿಗಳೆಂದೂ ಪದವಿ ಮತ್ತು ಪ್ರಚಾರಪ್ರಿಯರಲ್ಲವೆಂಬ ಅರಿವಾಯಿತು. ರಾಷ್ಟ್ರಕವಿಗಳ ಕೃತಿರಚನೆಯ ಬಗ್ಗೆ ಶ್ರೀಮತಿ ರಮಾಬಾಯಿಯವರು ನನ್ನೊಂದಿಗೆ ಸಾಕಷ್ಟು ಹೇಳಿದ ನೆನಪಿದೆ. ಶ್ರೀ ಗೊಮ್ಮಟ ಜಿನಸ್ತುತಿ. ಗಿಳಿವಿಂಡು, , ಗೊಲ್ಗೊಥಾ, ವೈಶಾಖಿ ಮೊದಲಾದುವು ಶ್ರೀ ಗೋವಿಂದ ಪೈಗಳಿಂದ ಪ್ರಣೀತವಾದ ಕೃತಿರತ್ನಗಳು. ಶ್ರೀ ಕೃಷ್ಣಚರಿತೆ. ಚಿತ್ರಭಾನು, ಪ್ರಭಾಸ, ಕವನದೇಹಲಿ, ಇವುಗಳಲ್ಲಿ ಕೆಲವು ಪೂರ್ಣವಾಗಿದ್ದು ಮತ್ತೆ ಕೆಲವನ್ನು ಅವರು ಪೂರ್ಣಗೊಳಿಸಲು ಸಂಕಲ್ಪಿಸಿ ಯೋಜನೆಯೊಂದನ್ನು ಹಾಕಿಕೊಂಡಿದ್ದರಂತೆ. ಇದಲ್ಲದೆ ಅವರ ಬಿಡಿ ಕವನಗಳೆಷ್ಟೋ "ಸುವಾಸಿನಿ" ಮೊದಲಾದ ಪತ್ರಿಕೆಗಳಲ್ಲಿ ಅಚ್ಚಾಗಿವೆಯಂತೆ. ಮನಸ್ಸು ತುಂಬಾ ನೊಂದಾಗ ಅವರು ಕೃತಿ ರಚನೆ ಮಾಡುವರು. ಯಾರ ಒತ್ತಾಯಕ್ಕಾಗಲೀ ಯಾವ ನಿರ್ಬಂಧಕ್ಕಾಗಲೀ ಅವರು ಬರೆಯುತ್ತಿರಲಿಲ್ಲ. ಗೋವಿಂದ ಪೈಗಳವರು ಮಂಗಳೂರಿನ ಹೆಸರಾಂತ ಬಾಪ್ಪೈ ಮನೆತನದವರು. ತಮ್ಮ ತಾಯಿಯ ತವರೂರಾದ ಮಂಜೇಶ್ವರದಲ್ಲಿ ಅವರು ಹುಟ್ಟಿದ್ದು, ಬೆಳೆದದ್ದು, ಇದ್ದುದು; ಮೆಚ್ಚಿದ್ದು-ಕೂಡ ಮಂಜೇಶ್ವರವನ್ನೇ. ಹೀಗಾಗಿ ಅವರಿಗೆ ಮಂಗಳೂರಿಗಿಂತ ಮಂಜೇಶ್ವರವೇ ಅತ್ಯಂತ ಪ್ರಿಯವಾಗಿತ್ತು. ಕವಿವರ್ಯರಿಗೆ ಕನ್ನಡ. ಕೊಂಕಣಿ, ತುಳು. ಬಂಗಾಳಿ. ಸಂಸ್ಕೃತ, ಮರಾಠಿ. ಹಿಂದಿ. ಪಾರಸಿ. ಗ್ರೀಕ್, ಜರ್ಮನ್, ಲ್ಯಾಟಿನ್ ಮೊದಲಾದ ಅನೇಕ ಭಾಷೆಗಳಲ್ಲಿ ಪರಿಶ್ರಮ ಪಾಂಡಿತ್ಯಗಳಿರುವುದು ತಿಳಿಯಿತು. ಕನ್ನಡಿಗರಿಗಷ್ಟೇ ಅಲ್ಲ. ಭಾರತೀಯರಿಗೆ, ಭಾರತೀಯರಿಗಷ್ಟೇ ಅಲ್ಲ ದೂರದ ವಿದೇಶಗಳವರಿಗೂ ಅವರ ಬರಹಗಳು ಬೆಳಕು ನೀಡಿವೆ. ನೀಡುತ್ತಿವೆ ಎಂಬ ಅರಿವಾಯಿತು. ಬಾಳ ಬಿಸಿಲು ಬೆಳದಿಂಗಳ ಬೇಗೆ ತಣ್ಪುಗಳನ್ನು "ಈಶ್ವರ ಪ್ರಸಾದ"ವೆಂದು ಬಂದಂತೆ ಕೊಂಡುಂಡು ಪರಿಪಕ್ವವಾದ ಹಿರಿಯ ಚೇತನ-ಅವರದು. ತಮ್ಮ ನಿಡುಬಾಳಿನಲ್ಲಿ-ಬಂದಂತಹ ನೋವನ್ನು ಪಿನಾಕಿಯಂತೆ ನುಂಗಿ ಅರಗಿಸಿಕೊಂಡು ತನ್ನವರಿಗೆ ಒಲವಿನ ಸವಿಯೆರೆಯುವ ಹಿರಿಯ ಬದುಕು ಅವರದು. ಹೆಚ್ಚೇನು ! ಅವರ ನಡೆ, ನುಡಿ, ಬಗೆ ಎಲ್ಲವೂ ಚೊಕ್ಕ ಬಂಗಾರ. ಓದಿಗಿಂತ ಬಾಳು ಹಿರಿದು. ಬಾಳಿಗಿಂತ ಆಳು ಹಿರಿಯ ಎಂಬ ನನ್ನಿಯ ಸಂಗತಿಯನ್ನು ನನ್ನ ಬಗೆಯಲ್ಲಿ ಅರಳಿಸಿದರು ಅವರು.

1950ನೇ ಜನವರಿ 8ನೇ ತಾರೀಕು ಮಂಜೇಶ್ವರದಿಂದ ಹೊರಟು ಅದೇದಿನ ಸಾಯಂಕಾಲ ಮೈಸೂರಿಗೆ ತಲಪಿದೆನು. ಹೊರಡುವ ಮುನ್ನ ಕವಿವರ್ಯರನ್ನು ಹೋಗಿ ಕಂಡೆನು. ಅದೇ ಅನುಕಂಪೆ, ಅದೇ ವಾತ್ಸಲ್ಯ-ಪ್ರೀತಿ. ಈ ಬಾರಿಯೂ ಅಟ್ಟದ ಮೇಲೇರಿ ಹೋಗಿ ಸ್ವಲ್ಪ ಹಣ ತಂದುಕೊಟ್ಟು "ತೆಗೆದುಕೊಳ್ಳತಕ್ಕದ್ದು, ಯಾರಿಗೂ ತಿಳಿಸಬಾರದು" ಎಂದು ಮೃದು ಕಠಿಶಾಕ್ಷೇಪಗರ್ಭಿತ ವಚೋವಿಲಾಸದಿಂದ

ಮುಂದಸ್ಮಿತವದನರಾಗಿ ಕಳುಹಿಸಿಕೊಟ್ಟರು. ಕಳುಹಲು ಮನೆಯಿಂದ ಅನತಿದೂರ ಬಂದಾಗ "ನಾನು ಕನ್ನಡ ಪಂಡಿತ ಪರೀಕ್ಷೆಗೆ ಓದಬೇಕೆಂದಿರುತ್ತೇನೆ. ನನಗೆ ಬೇಕಾದ ಪುಸ್ತಕ, ಸಾಹಿತ್ಯಗಳನ್ನು ಕಳುಹಿಸಿಕೊಟ್ಟು ಉಪಕರಿಸಬೇಕೆಂತ " ಪ್ರಾರ್ಥಿಸಿದೆನು. "ಅಗತ್ಯವಾಗಿ ಓದಬೇಕು. ಓದಿರಿ ನನ್ನಿಂದೇನು ಸಹಾಯಬೇಕಾದರೂ ಬರೆಯಿರಿ. ಕೈಲಾದುದನ್ನೆಲ್ಲಾ ಮಾಡುವ" ಎಂದು ಆಶ್ವಾಸನೆ ನೀಡಿದರು. ರೈಲು ನಿಲ್ದಾಣದ ತನಕ ಶ್ರೀಮತಿ ರಮಾಬಾಯಿಯವರೂ ಬಂದರು. ನಾನು ರೈಲು ಹತ್ತಿದ ಬಳಿಕ ಅವರು ಮರೆಯಾಗುವವರೆಗೂ ನೋಡುತ್ತಿದ್ದು ಹಿಂತಿರುಗಿದರು. ಮಂಗಳೂರಿಗೆ ಬಂದು ಬಸ್ಸು ಹತ್ತಿ ಅಂದು ಸಾಯಂಕಾಲ ಮೈಸೂರು ತಲಪಿದೆನು. ಗುರುಗಳು ಆ ಮೇಲೆ 8-10ದಿವಸ ಮಂಜೇಶ್ವರದಲ್ಲಿಯೇ ಇದ್ದು "ಭಾರತವಾಚನ" ಕಾರ್ಯಕ್ರಮ ಮುಗಿಸಿ ಮೈಸೂರಿಗೆ ಬಂದರು.

## 6. ಮೈಸೂರಿಗೆ ಬಂದರು ರಾಷ್ಟ್ರಕವಿಗಳು

ಮಂಜೇಶ್ವರದ ಮನೆಯನ್ನು ಬಿಟ್ಟು ರಾಷ್ಟ್ರಕವಿಗಳು ಎಲ್ಲಿಯೂ ಹೋಗಲು ಇಚ್ಛಿಸುತ್ತಿರಲಿಲ್ಲ. ಮಂಗಳೂರಿಗೋ, ಬಂಟವಾಳಕ್ಕೋ, ಮೂಲ್ಕಿಗೋ ಹೋದರೆ ಕಾರ್ಯಗೌರವವನ್ನು ಮುಗಿಸಿಕೊಂಡು ಸಂಜೆಯ ಹೊತ್ತಿಗೆ ಮನೆಗೆ ಬಂದು ಬಿಡುವ ಸ್ವಭಾವ ಅವರದು. ದೂರದ ಊರುಗಳಿಗಂತೂ ಅವರು ಬರಲು ಒಪ್ಪಿಗೆಯನ್ನೇ ಕೊಡುತ್ತಿರಲಿಲ್ಲ. ಇದಕ್ಕೆ ಅವರ ಏಕಾಂತ ಪ್ರಿಯತೆಯೇ ಕಾರಣವೆನ್ನಬಹುದು. ಆದರೂ ಮೈಸೂರಿನ ಮಿತ್ರರ ಒತ್ತಾಯದ ಕರೆಗೆ ಓಗೊಟ್ಟು 1950ನೇ ಎಪ್ರಿಲ್ ತಿಂಗಳಿನಲ್ಲಿ ರಾಷ್ಟ್ರಕವಿಗಳು ಬಂದರು ಮೈಸೂರಿಗೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾದ ಶ್ರೀ ಕೆ.ವಿ. ರಾಘವಾಚಾರ್ಯರ ಮನೆಯಲ್ಲಿ ಕವಿಗಳು ಇಳಿದುಕೊಂಡಿದ್ದರು. ರಾಷ್ಟ್ರಕವಿಗಳು ಬಂದಿರುವ ಸಮಾಚಾರ ತಿಳಿದು 27-4-1950ರಂದು ನಾನೂ ನನ್ನ ಮಿತ್ರರಾದ ತ.ಲಿ.ವೈದ್ಯನಾಥನ್ ಎಂಬವರೂ ಅವರನ್ನು ಕಾಣಲು ಶ್ರೀ ರಾಘವಾಚಾರ್ಯರ ಮನೆಗೆ ಹೋದೆವು. ನನ್ನನ್ನು ಕಂಡೊಡನೆಯೇ ಕವಿಗಳು ತುಂಬ ಆತ್ಮೀಯತೆಯಿಂದ ಯೋಗಕ್ಷೇಮ ವಿಚಾರಿಸಿ, ನಮ್ಮ ಗುರುಗಳ ಆರೋಗ್ಯ ವಿಚಾರಿಸಿ, ವಾತ್ಸಲ್ಯವನ್ನು ಪ್ರಕಟಿಸಿದರು. "ತಾನು ರಾಷ್ಟ್ರಕವಿ. ಸಂಶೋಧಕಾಗ್ರಣಿ ಹಲವು ಭಾಷೆಗಳನ್ನರಿತ ರಾಜೀವಪೀಠ" ಎಂಬ ಅಹಂಭಾವದ ನಡೆ ಇಲ್ಲವೇ ನುಡಿಯನ್ನು ಯಾರೂ ಎಂದೂ ಅವರಲ್ಲಿ ಕಾಣಲಾಗುತ್ತಿರಲಿಲ್ಲ. ನಿಗರ್ವ-ನಿರಹಂಭಾವದ ಸರಳತೆಯನ್ನು ಎಲ್ಲರೂ ಕಾಣಬಹುದಾಗಿತ್ತು. ನಿಸ್ವಾರ್ಥ ಪ್ರವೃತ್ತಿ ಹಾಗೂ ಪರಮದಾಕ್ಷಿಣ್ಯ ಪ್ರಕೃತಿ ಅವರದು. ಯಾರ ಮನವನ್ನೂ ನೋಯಿಸಲು ಇಷ್ಟ ಪಡುತ್ತಿರಲಿಲ್ಲ. ಸಂದರ್ಭ ಸನ್ನಿವೇಶದ ಹಿಡಿತಕ್ಕೆ ಸಿಕ್ಕಿ ಪರರ ಮನ ನೋಯಿಸುವ ಸಂದರ್ಭ ಬಂದಾಗ ಕ್ಷಮೆ ಕೇಳಲೂ ಹಿಂಜರಿಯುತ್ತಿರಲಿಲ್ಲ. ಅವರು ಮನಬಿಚ್ಚಿ ಆತ್ಮೀಯತೆಯಿಂದ-ಸಮಾನಸ್ಕಂಧರಂತೆ ಎಲ್ಲರಲ್ಲಿಯೂ ವ್ಯವಹರಿಸುವ ಪುರುಷ ಜೀವನ ಅವರದು.

ಪ್ರಾಸ್ತಾವಿಕ ಮಾತುಕತೆಗಳಾದ ಬಳಿಕ ನಾನು ಒಂದು ದಿವಸ ನನ್ನ ಮನೆಗೆ ಉಪಾಹಾರಕ್ಕೆ ದಯವಿಟ್ಟು ಬರಬೇಕೆಂದು ರಾಷ್ಟ್ರಕವಿಗಳನ್ನು ಪ್ರಾರ್ಥಿಸಲು ಅವರು ಶ್ರೀ ಕೆ.ವಿ.ರಾಘವಾಚಾರ್ಯರೊಡನೆ ಸಮಾಲೋಚನೆ ಮಾಡಿ ನಾಳೆ ಬೆಳಗಿನ 8 ಗಂಟೆಗೆ (28-4-50) ಬರುವುದಾಗಿ ಒಪ್ಪಿಗೆ ಕೊಟ್ಟರು. ಸಂತೋಷದಿಂದ ನಾನೂ ಗೆಳೆಯರೂ ಬಂಧು ಮಿತ್ರರಿಗೆಲ್ಲ ವಿಷಯ ತಿಳಿಸಿ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡೆವು. ನಾವು ಶ್ರೀ ಗೋವಿಂದ ಪೈಗಳೊಡನೆ ಮಾತನಾಡಿ ಬಂದ ದಿವಸ ರಾತ್ರಿಯೇ ಬೆಂಗಳೂರಿನ ಗಣ್ಯ ಸಾಹಿತಿಗಳಿಂದ ಕರೆ ಬಂದು ಅವರು ಶ್ರೀ.ಕೆ.ವಿ. ರಾಘವಾಚಾರ್ಯರೊಂದಿಗೆ ಅನಿರೀಕ್ಷಿತವಾಗಿ ಕಾರಿನಲ್ಲಿ ಬೆಂಗಳೂರಿಗೆ ಹೊರಟು ಹೋಗಬೇಕಾಯಿತು. ಈ ರೀತಿ ಪಯಣಿಸಿದ ವಿಷಯವನ್ನು ಶ್ರೀ ಪೈಗಳು ನನಗೆ ತಿಳಿಸಲಾಗಲಿಲ್ಲ. ನಾನು ಕವಿಪುಂಗವರು ಬಡವನ ಕುಟೀರಕ್ಕೆ ಆಗಮಿಸುವರೆಂದು ಸಂಭ್ರಮಿಸಿ ಉಪಾಹಾರಕ್ಕೆ ಸಿದ್ಧಪಡಿಸಿ ಬಂಧುಮಿತ್ರರೊಡನೆ ಅವರ ಶುಭಾಗಮನವನ್ನು ನಿರೀಕ್ಷಿಸಿದೆನು. ಕಾಲವನ್ನು ಹಣಕ್ಕಿಂತ ಹೆಚ್ಚಾಗಿ ಪರಿಗಣಿಸುವ ಶ್ರೀ ಪೈಗಳು ಬರಲೇ ಇಲ್ಲ. ಕರೆದುಕೊಂಡು ಬರಲು ಹೋಗಿದ್ದ ನನ್ನ ಮಿತ್ರರು ಎಷ್ಟೋ ಹೊತ್ತಾದ ಬಳಿಕ ಬಂದರು. ನಿರಾಶಾದಾಯಕ ದನಿಯಿಂದ "ಪೂಜ್ಯಪೈಗಳು ಬೆಂಗಳೂರಿಗೆ ಹೊರಟು ಹೋದ ಸಂಗತಿ" ತಿಳಿಸಿದರು. ನಾನೂ ಹತಾಶನಾಗಿ ಬಂದಿದ್ದ ಬಂಧುಮಿತ್ರರಿಗೆ ವಿಷಯ ತಿಳಿಸಿ ಅವರನ್ನೆಲ್ಲ ಉಪಚರಿಸಿ ಕಳುಹಿಸಿಕೊಟ್ಟೆನು. ಮಂಜೇಶ್ವರದಲ್ಲಿ ಕವಿಸಾನ್ನಿಧ್ಯದಲ್ಲಿದ್ದು ಕವಿಗಳ ಬಗೆಯನ್ನರಿತಿದ್ದ ನನಗೆ ಈ ಪ್ರಕರಣ ಅರ್ಥವಾಗಲಿಲ್ಲ.

## 7. ವಿದುರನ ಮನೆಗೆ ಶ್ರೀಕೃಷ್ಣನು ಬಂದಂತೆ ನನ್ನ ಮನೆಗೆ ಬಂದರು ಕವಿಗಳು

3-5-50ರಂದು ನಾನು ಆವುದೋ ಕಾರ್ಯಗೌರವದ ಸಲುವಾಗಿ ಬೆಂಗಳೂರಿಗೆ ಹೋದೆನು. ನನ್ನ ಮಿತ್ರರಾದ ಶ್ರೀ ರಾ. ಭೀಮು ಅವರ ಮನೆಯಲ್ಲಿ ಕೈಚೀಲವಿರಿಸಿ ಕೈಕಾಲು ತೊಳೆಯುತ್ತಿರುವಾಗಲೇ ಅಂದು ಸಾಯಂಕಾಲ ಬಸವನಗುಡಿ ಹರವಿನ ಶ್ರೀ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ರಾಷ್ಟ್ರಕವಿಗಳ ಭಾಷಣದ ಕಾರ್ಯಕ್ರಮವಿರುವುದು ತಿಳಿಯಿತು. ಅವರ ಭಾಷಣವನ್ನು ಕೇಳುವ, ಮಿಗಿಲಾಗಿ ಅವರನ್ನು ಸಂದರ್ಶಿಸುವ ಕುತೂಹಲದಿಂದ ಕೆಳೆಯ ಭೀಮುರವರೊಂದಿಗೆ ಚಾಮರಾಜ ಪೇಟೆಯಿಂದ ಬಸವನಗುಡಿಯಲ್ಲಿದ್ದ ಗೋಖಲೆ ಸಾರ್ವಜನಿಕ ಸಂಸ್ಥೆಗೆ ಹೋದೆನು. ಪೈಗಳವರ ಭಾಷಣ ಆಗಲೇ ಪ್ರಾರಂಭವಾಗಿತ್ತು. ಸಹೃದಯ ರಸಿಕ ಶ್ರೋತೃಗಳಿಂದ ಸಭಾಂಗಣವು ತುಂಬಿಹೋಗಿತ್ತು. ಧ್ವನಿವರ್ಧಕದ ಏರ್ಪಾಡು ಮಾಡಿದ್ದುದರಿಂದ ಹೊರಗಡೆಯೂ ಅಸಂಖ್ಯಾತ ಜನರು ಕವಿಕೇಸರಿಯ ಸಿಂಹವಾಣಿಯನ್ನು ಕೇಳುತ್ತ ನಿಂತಿದ್ದರು. ನಾನು ಎಡೆಮಾಡಿಕೊಂಡು ಬಾಗಿಲವರೆಗೆ ಹೋಗಿ ಅಲ್ಲಿ ನಿಂತುಕೊಂಡೆನು. ಭಾಷಣ ಕೊಡುತ್ತಿದ್ದ ಕವಿಗಳು ಒಮ್ಮೆ ಬಾಗಿಲ ಕಡೆ ನೋಡಿದಾಗ ನಾನು ಅವರ ದೃಷ್ಟಿಗೆ ಬಿದ್ದೆನು. ಒಡನೆಯೇ ಅವರು ಮಾಡುತ್ತಿದ್ದ ಭಾಷಣವನ್ನು ಅಲ್ಲಿಗೇ ನಿಲ್ಲಿಸಿ ನನ್ನನ್ನು ನಗುಮೊಗದಿಂದ ಒಳಕ್ಕೆ ಕರೆದು ಶ್ರೋತೃಗಳೆಲ್ಲರ ಮುಂದೆ "28ರಂದು ಬೆಳಗಿನ ಉಪಾಹಾರಕ್ಕೆ ಬರುವುದಾಗಿ ಮಾತುಕೊಟ್ಟಿದ್ದೆನು. ಅನಿರೀಕ್ಷಿತವಾಗಿ ಬೆಂಗಳೂರಿಗೆ ಹೊರಟು ಬರಬೇಕಾದ್ದರಿಂದ ಬರಲಾಗಲಿಲ್ಲ. ದಯವಿಟ್ಟು ಕ್ಷಮಿಸಿ. ಈ ಬಗ್ಗೆ ಆ ಮೇಲೆ ಮಾತನಾಡುವಾ" ಎಂದು ಹೇಳಿ ತಮ್ಮ

ಭಾಷಣ ಮುಂದುವರಿಸಿದರು. ಎಷ್ಟು ಸಹಜ! ಎಷ್ಟು ವಿನಯ!! ಎಂಥ ವಿವೇಕ!!! ಅಲ್ಲಿ ನೆರೆದಿದ್ದವರಿಗೆಲ್ಲ ಕವಿಗಳ ವರ್ತನೆ "ವಿಚಿತ್ರ" ವೆನಿಸಿರಬಹುದಾದರೂ ನನಗೆ ಮಾತ್ರ ಅವರ ವಿಷಯದಲ್ಲಿದ್ದ ಪೂಜ್ಯ ಭಾವನೆ ಇನ್ನೂ ಹೆಚ್ಚಿತು. ಭಾಷಣ ಮುಗಿದ ಬಳಿಕ ಶ್ರೀ ಪೈಗಳು "ನಾನು ನಿಮ್ಮ ಮನೆಗೆ ಬಾರದೆ ನಿಮ್ಮ ಮನ ನೋಯಿಸಿದ್ದಕ್ಕಾಗಿ ಕ್ಷಮಿಸಿ. ಮೈಸೂರಿಗೆ ಮತ್ತೆ ಬರುತ್ತೇನೆ ನಾಲ್ಕಾರು ದಿನಗಳಲ್ಲಿ. ಆಗ ತಪ್ಪದೆ ನಿಮ್ಮ ಮನೆಗೆ ಬಂದುಹೋಗುತ್ತೇನೆ" ಎಂದು ಭರವಸೆ ಕೊಟ್ಟರು.

9–5–50ರಂದು ಸಾಯಂಕಾಲ ಮೈಸೂರಿನ ನೂರಡಿರಸ್ತೆಯಲ್ಲಿರುವ ಸಹಕಾರ ಭವನವಲ್ಲಿ ಮೈಸೂರ ಕೆಳೆಯರು ರಾಷ್ಟ್ರ ಕವಿಗಳಿಗೆ "ಮೆಚ್ಚೋಲೆ" ಒಪ್ಪಿಸುವ ಕಾರ್ಯಕ್ರಮವನ್ನು ಇಟ್ಟುಕೊಂಡಿದ್ದರು. ಆ ಸುಂದರ್ಭದಲ್ಲಿ ಕವಿಗಳಿಂದ ರಚಿತವಾದ "ವೈಶಾಖಿ" ಯಿಂದ ಕೆಲವು ಪಂಕ್ತಿಗಳನ್ನು ಓದಲು ನನಗೆ ಕಾರ್ಯಕರ್ತರು ಅವಕಾಶ ಕಲ್ಪಿಸಿದ್ದರು. ಸಮಾರಂಭ ಮುಗಿದ ಬಳಿಕ ಶ್ರೀ ಪೈಗಳು ನನ್ನನ್ನು ಹತ್ತಿರ ಕರೆದು "ವಾಚನ ಚನ್ನಾಗಿತ್ತು: ನಿಮ್ಮ ಮನೆಗೆ 11ನೇ ತಾರೀಕು ಬೆಳಿಗ್ಗೆ ಬರುತ್ತೇನೆ" ಎಂದು ತಿಳಿಸಿದರು.

ರಾಷ್ಟ್ರ ಕವಿಗಳಿಗೆ ಮೈಸೂರಿನಲ್ಲಿ ಬಿಡುವಿಲ್ಲದ ಕಾರ್ಯಕ್ರಮ. ಕವಿಗಳು, ಸಾಹಿತಿಗಳು, ಮಿತ್ರರು ಅನೇಕರು ಅವರನ್ನು ತಮ್ಮ ತಮ್ಮ ಮನೆಗಳಿಗೆ ಉಪಾಹಾರಕ್ಕೋ, ಊಟಕ್ಕೋ, ಕಾಫಿಗೋ ಕರೆಯುವರು. ದಕ್ಷಿಣಕನ್ನಡ ಜಿಲ್ಲೆಯವರಾಗಿ ಮೈಸೂರಿನಲ್ಲಿ ನೆಲಸಿದ್ದ ಅನೇಕ ಗಣ್ಯವ್ಯಕ್ತಿಗಳು ರಾಷ್ಟ್ರಕವಿಗಳನ್ನು ಭೋಜನ ಕೂಟಕ್ಕೆ ಆಮಂತ್ರಿಸಿದ್ದರು. ಈ ಮೇಲಾಟದಲ್ಲಿ ಈ ಬಾರಿಯೂ ಕವಿಗಳು ನನ್ನ ಮನೆಗೆ ಬರಲಾರರೆಂದೇ ಭಾವಿಸಿದ್ದೆನು. ಆದರೆ ಕವಿಕರುಣೆಯನ್ನೇನು ಹೇಳಲಿ. 11ನೇ ತಾರೀಕು ಬೆಳಿಗ್ಗೆ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು ಮತ್ತೆ ಬಂಧುಮಿತ್ರರನ್ನೆಲ್ಲಾ ಬರಮಾಡಿಕೊಂಡು ಕವಿಗಳನ್ನು ಕರೆದುಕೊಂಡು ಬರಲು ಶ್ರೀ ಕೆ.ವಿ. ರಾಘವಾಚಾರ್ಯರ ಮನೆಗೆ ಹೋದೆನು. ಕವಿಗಳಿಗೆ ಮೊದಲಬಾರಿ ನನ್ನ ಮನೆಗೆ ಬಾರದಿದ್ದುದಕ್ಕಾಗಿ ತುಂಬಾ ವ್ಯಥೆಯಾಗಿತ್ತು. ಅವರು ಒಡನೆಯೇ ಎದ್ದು ಶ್ರೀ ರಾಘವಾಚಾರ್ಯರೊಂದಿಗೆ ನಮ್ಮ ಮನೆಗೆ ಬಂದರು. ನನ್ನ ಮನೆಯಲ್ಲಿ ಬಂಧುಮಿತ್ರರೆಲ್ಲ ಕವಿದರ್ಶನಮಾಡಿದರು. ಅವರಿಗೆಲ್ಲ ಅವರೊಂದಿಗೆ ಮಾತನಾಡುವ ಸುಯೋಗ ದೊರಕಿತು. ಭಕ್ತಿಯಿಂದ ಅರ್ಪಿಸಿದ ಅಲ್ಪೋಪಹಾರವನ್ನು ತೃಪ್ತಿಯಿಂದ ಸ್ವೀಕರಿಸಿದರು. ನಾನು ಮಂಜೇಶ್ವರಕ್ಕೆ ಕಾವ್ಯ ವಾಚನಕ್ಕಾಗಿ ಬಂದಿದ್ದ ಸಂಗತಿಯನ್ನು ಶ್ರೀ ಕೆ.ವಿ. ರಾಘವಾಚಾರ್ಯರೊಂದಿಗೆ ಸಲ್ಲಾಪಿಸಿದರು. ಅಂದು ನಾನು ಏರ್ಪಡಿಸಿದ್ದ ಕನ್ನಡ ದೇವರನಾಮಗಳ ಸಂಗೀತ ಕಾರ್ಯಕ್ರಮವನ್ನು ಮೆಚ್ಚಿಕೊಂಡರು. ನಾನೂ ಗೆಳೆಯರೂ ಕನ್ನಡನಾಡು-ನುಡಿಗಳ ಬಗ್ಗೆ ಕೇಳಿದ ಪ್ರಶ್ನೆಗಳಿಗೆಲ್ಲಾ ಸಾವಧಾನದಿಂದ ಉತ್ತರಿಸಿದರು. ಅನೇಕ ಮಂದಿ ವಿದ್ವಾಂಸರೂ, ಕವಿಗಳೂ, ಸಾಹಿತಿಗಳೂ, ಶ್ರೀಮಂತರೂ, ಸ್ವಜನರೂ ರಾಷ್ಟ್ರಕವಿಗಳ ಶುಭಾಗಮನಕ್ಕಾಗಿ ಕಾಯ್ದು ಸೇವೆಗೆ ಸಿದ್ಧರಾಗಿದ್ದರೂ ಕನ್ನಡ ಸಾಹಿತ್ಯದಲ್ಲಿ ಅಂದು ಏನೂ ಅರಿಯದ ಪ್ರಾಥಮಿಕ ಶಿಕ್ಷಕನ ಕರೆಗೆ "ಓ"ಗೊಟ್ಟು ತಡವಾದರೂ ಆತನ ಬಡಕುಟೀರಕ್ಕೆ ಆಗಮಿಸಿ ಆಶೀರ್ವದಿಸಿದ ರಾಷ್ಟ್ರಕವಿಗಳ "ಒಲವರ"ವು ಕೌತುಕವಲ್ಲದೆ ಮತ್ತೇನು! ವಿದುರನ ಮನೆಗೆ ಶ್ರೀ ಕೃಷ್ಣನು ಹೋದಾಗ ಭಕ್ತಿಯ ಆಧಿಕ್ಯದಿಂದ ಮೈಮರೆತು ಕುಣಿಯುತ್ತಿದ್ದ ಆತನನ್ನು ಕುರಿತು "ವಸುಮತಿಯ ವಲ್ಲಭರು ಮಿಗೆ ಪ್ರಾರ್ಥಿಸಿದೊಡೆ ಒಲ್ಲದೆ ಬಂದೆನ್ನೈ, ಬಾ ವಿದುರಯೆನುತೊಳಹೊಕ್ಕನಸುರಾರಿ" ಎಂಬ ಕುಮಾರವ್ಯಾಸ ಭಾರತದ ಪದ್ಯ ನೆನಪಾಗಿ ನನಗೆ ಕಣ್ಣುಗಳು ಹನಿಗೂಡಿದವು. ಎರಡು ದಿನಗಳ ಬಳಿಕ ರಾಷ್ಟ್ರಕವಿಗಳು ಮೈಸೂರಿನಿಂದ ಮಂಜೇಶ್ವರಕ್ಕೆ ಪ್ರಯಾಣ ಮಾಡಿದರು.

## 8. ರಾಷ್ಟ್ರಕವಿಗಳು ತೋರಿಸಿದ ಹಾದಿಯಲ್ಲಿ

1950ನೇ ಏಪ್ರಿಲ್ 7ಕ್ಕೆ ನನ್ನ ಟ್ರೈನಿಂಗ್ ಮುಗಿಯಿತು. ದೂರದ ಹಳ್ಳಿಗೆ ಮತ್ತೆ ಕೆಲಸಕ್ಕೆ ಹಿಂತಿರುಗಬೇಕಾಗಿತ್ತು. ಹಳ್ಳಿಗೆ ಹೋದರೆ ಕನ್ನಡ ಸಾಹಿತ್ಯಾಭ್ಯಾಸವನ್ನು ಮುಂದುವರಿಸುವುದೆಂತು? ಮೈಸೂರಿಗೆ ವರ್ಗವಾದರೆ ಮಾತ್ರ ನನ್ನ ಅಭಿಲಾಷೆ ಕೈಗೂಡಬಹುದಾಗಿತ್ತು. ಮೇಲ್ಪಟ್ಟ ಇಲಾಖೆಯ ಅಧಿಕಾರಿಗಳನ್ನು ಕಂಡು ನನ್ನ ಹಿರಿಯಾಸೆಯನ್ನು ಈಡೇರಿಸಿಕೊಡಲು ಪ್ರಾರ್ಥಿಸಿದೆ. ಅವರ ಮನ ಕರಗಿತು. ಶ್ರೀ ದೇವರ ದಯೆಯಿಂದ ಮೈಸೂರಿಗೇ ವರ್ಗವಾಯಿತು. ಮೂರು ವರ್ಷಗಳ ವಿ.ಟಿ.ಸಿ. ಟ್ರೈನಿಂಗ್ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣನಾದ ಫಲಿತಾಂಶ ನನ್ನ ಉತ್ಸಾಹವನ್ನು ಸಂವರ್ಧಿಸಿತು. ಶಾಲೆಯ ಕೆಲಸದ ಜೊತೆಗೆ ಕನ್ನಡ-ಸಂಸ್ಕೃತ ಸಾಹಿತ್ಯಗಳ ಅಭ್ಯಾಸ ಮುಂದುವರಿಸಿ ನಾಲ್ಕು ವರ್ಷಗಳ ಅವಧಿಯ ಮೈಸೂರು ಕನ್ನಡ ಪಂಡಿತ ಪರೀಕ್ಷೆಯನ್ನು ಸ್ವಂತ ವ್ಯಾಸಂಗದಿಂದ ಮುಗಿಸಿ ತೇರ್ಗಡೆಹೊಂದಿದೆನು. ಸ್ವಂತ ವ್ಯಾಸಂಗದಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣನಾದೆನು. ಕನ್ನಡ ಸಾಹಿತ್ಯ ಪರಿಷತ್ತಿನ "ಕನ್ನಡಜಾಣ" ಪ್ರಶಸ್ತಿಯನ್ನು ಗಳಿಸಿದೆನು. ಆರು ತಿಂಗಳ ರಜಾ ಪಡೆದು ಬೆಂಗಳೂರಿಗೆ ಹೋಗಿ ಸಾಹಿತ್ಯ ಪರಿಷತ್ತಿನಲ್ಲಿ ನಡೆದ "ಗಮಕ ಪ್ರೌಢ" ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೆನು. ಲೋಯರ್ ಸೆಕೆಂಡರಿ ಪರೀಕ್ಷೆ ಮಾಡಿ ಪ್ರಾಥಮಿಕ ಶಾಲಾ ಮಾಸ್ತರನಾಗಿದ್ದ ನಾನು ಪ್ರೌಢ ಶಾಲೆಯ ಕನ್ನಡ ಅಧ್ಯಾಪಕನಾಗಲು ಬೇಕಾದ ಅರ್ಹತೆಯನ್ನು ಸಂಪಾದಿಸಿದೆನು. ಕೇವಲ 3–4 ವರ್ಷಗಳ ಸತತ ಸಾಧನೆಯಿಂದ ಈ ಎಲ್ಲ ಪ್ರಗತಿಗೂ ರಾಷ್ಟ್ರ ಕವಿಗಳ ಬೆಂಬಲ. ಸಹಾಯ, ಸಹಾನುಭೂತಿ ಮೇಲಾಗಿ ಆಶೀರ್ವಾದ ನನಗೆ ಕೂಡಿಬಂತು. ಕನ್ನಡ ಪಂಡಿತ ಪರೀಕ್ಷೆಗೆ ಬೇಕಾದ ಹಲವು ಪುಸ್ತಕಗಳನ್ನು ಕವಿಗಳು ಮಂಜೇಶ್ವರದಿಂದ ಶ್ರೀಮತಿ ರಮಾಬಾಯಿಯವರ ಸಂಗಡ ಕಳುಹಿಸಿಕೊಟ್ಟಿದ್ದರು. ಪ್ರಾಚೀನ ಕವಿಗಳ ಬಗ್ಗೆ ನನಗೆ ತೊಡಕುಂಟಾದರೆ ಕವಿವರ್ಯರು ಪರಿಹರಿಸಿಕೊಡುವರು. ಹೀಗೆ ಅವರಿಂದ ನನ್ನ ವಿದ್ಯಾಭ್ಯಾಸಕ್ಕೆ ಅನೇಕ ಬಗೆಯಲ್ಲಿ ಸಹಾಯವಾಯಿತು. ನನ್ನ ಸಹಜ ಹಿತಚಿಂತಕರಾಗಿ ನನ್ನ ಅಭ್ಯುದಯವನ್ನು ನೋಡಿ ಸಂತಸಪಡುತ್ತಿದ್ದರು ಅವರು. ಇಂದಿಗೂ ಅವರು ನನಗೆ ಪ್ರಾತ:ಸ್ಮರಣೀಯರು.

1955ರಲ್ಲಿ ನನಗೆ ಪ್ರಾಥಮಿಕ ಶಾಲೆಯಿಂದ ಪ್ರೌಢ ಶಾಲೆಗೆ ಬಡ್ತಿ ದೊರಕಿದ ವಿಷಯ ತಿಳಿದು ಕವಿಗಳು ತುಂಬ ಸಂತಸಪಟ್ಟರು. ಮೈಸೂರಿನಿಂದ ಹಾಸನಕ್ಕೆ ವರ್ಗವಾಗಿ ಅಲ್ಲಿನ ಪ್ರೌಢ ಶಾಲೆಯಲ್ಲಿ ಏಳು ವರ್ಷವಿದ್ದೆನು. ಈಗ ಒಂದು ವರ್ಷವಾಯಿತು. ದಾವಣಗೆರೆಯ ಜೀವನ ಶಿಕ್ಷಣ ತರಬೇತಿ ಕೇಂದ್ರಕ್ಕೆ ವರ್ಗವಾಗಿ, ಹತ್ತು ವರ್ಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಗಮಕ ತರಗತಿ

ಗಳನ್ನೂ ನಡೆಸುತ್ತಾ ಬಂದಿರುವೆನು. ಈ ಎಲ್ಲ ವಿಷಯಗಳನ್ನೂ ನಾನು ಶ್ರೀಮತಿ ರಮಾಬಾಯಿಯವರ ಮೂಲಕವಾಗಿ ರಾಷ್ಟ ಕವಿಗಳಿಗೆ ತಿಳಿಸುತ್ತ ಬಂದಿದ್ದೇನೆ. ಶ್ರೀಮತಿ ರಮಾಬಾಯಿಯವರಿಗೆ ಪತ್ರ ಬರೆಯುವಾಗಲೆಲ್ಲ "ಪೂಜ್ಯ ಗೋವಿಂದ ಪೈಗಳವರಿಗೆ ನನ್ನ ನಮಸ್ಕಾರ ತಿಳಿಸಿ " ಎಂದು ಬರೆಯುತ್ತಿದ್ದೆ. ಅವರು ಗೋವಿಂದ ಪೈಗಳ ಮನೆಗೆ ಹೋಗಿ ನನ್ನ ಕಾಗದ ಓದಿಹೇಳುವರು. ಇದನ್ನು ಕೇಳಿದ ಕವಿಗಳು "ಪೂಜ್ಯ" ಎಂದರೆ ಏನು ಗೊತ್ತುಂಟೋ "ಸೊನ್ನೆ" ಎಂದರ್ಥ. ಅಂದರೆ ಏನೇನೂ ತಿಳಿಯದವ ಎಂದು ನಕ್ಕು ಬಿಡುವರಂತೆ. ಹಾಗೆಯೇ ರಮಾಬಾಯಿಯವರೊಂದಿಗೆ "ಎಲ್ಲಾದರೇನು, ಚೆನ್ನಾಗಿದ್ದಾರಲ್ಲಾ; ಅವರಿಗೂ ಅವರ ಕುಟುಂಬಕ್ಕೂ ಮಕ್ಕಳಿಗೂ ನನ್ನ ಆಶೀರ್ವಾದ ತಿಳಿಸಿ. ಶ್ರೀ ದೇವರು ಒಳ್ಳೆಯದು ಮಾಡಲಿ" ಎಂದು ಆಶೀರ್ವದಿಸುವರು.

## 9. ಮತ್ತೆ ಕೆಲವು ಬಾರಿ ಕವಿಕೇಸರಿಯ ಗುಹೆಗೆ

1950ರ ತರುವಾಯ 1958ರಲ್ಲಿ ನಾನು ಕಾರ್ಕಳದ ಶ್ರೀ ವೆಂಕಟರಮಣ ದೇವಾಲಯಕ್ಕೆ ಭಾರತ ವಾಚನಕ್ಕಾಗಿ ಹೋಗಿದ್ದಾಗ, 1955ರಲ್ಲಿ ಮಂಜೇಶ್ವರ-ಉಡುಪಿ ಪ್ರವಾಸಕ್ಕೆ ತೆರಳಿದ್ದಾಗ, 1956ರಲ್ಲಿ ಮದರಾಸ್ ಸರ್ಕಾರದ ಸಮಾಜ ವಿಕಾಸ ಯೋಜನೆಯ ಅಧಿಕಾರಿಗಳ ಕರೆಗೆ ಓಗೊಟ್ಟು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಕೇಂದ್ರಗಳಲ್ಲಿ "ಗಮಕಕಲೆಯ ಪ್ರಚಾರ" ಕಾರ್ಯವನ್ನು ನೆರವೇರಿಸುವಾಗ ಧರ್ಮಸ್ಥಳಕ್ಕೆ ಒಮ್ಮೆ ದೇವರ ದರ್ಶನಕ್ಕೆ ಹೋಗಿದ್ದು ಮಂಜೇಶ್ವರಕ್ಕೆ ಹೋದಾಗ ಮಂಗಳೂರಿಗೆ ಹೋಗಿದ್ದಾಗೊಮ್ಮೆ ಪೂಜ್ಯ ರಾಷ್ಟ್ರ ಕವಿಗಳ ದರ್ಶನ ಪಡೆದು ಅವರೊಡನೆ ಮಾತಾಡಿ ಆಶೀರ್ವಾದ ಪಡೆದು ಬಂದಿರುವೆನು. 1961ರಲ್ಲಿ "ವಿಠ್ಠಲ" ಎಂಬ ಊರಿನಲ್ಲಿ ಸಂಗೀತ ಶಾಲೆಯೊಂದರ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆ ವಹಿಸಿ-ಮಹಾಭಾರತ ವಾಚನದ ಕಾರ್ಯಕ್ರಮ ಕೊಟ್ಟು ಮಂಜೇಶ್ವರಕ್ಕೆ ಕವಿಗಳ ದರ್ಶನ ಮಾಡಿಬರಲು ಹೋಗಿದ್ದೆನು. ಆಗ ಅಲ್ಲಿ ಒಂದು ದಿನವಿದ್ದೆನು. ಕವಿಗಳು ನನ್ನ ಅಭ್ಯುದಯವನ್ನೂ ಮಡದಿ ಮಕ್ಕಳ ಆರೋಗ್ಯವನ್ನೂ ಕೇಳಿ ಹರ್ಷಿಸಿದರು. ನಮ್ಮ ಗುರುಗಳ ಬಗ್ಗೆ ವಿಚಾರಿಸಿದರು. ಹಾಸನದ ಡಾ॥ಬಿ.ಎಸ್. ಜಗನ್ನಾಥನ್‌ರವರನ್ನು ಸ್ಮರಿಸಿ ಅವರಿಗೆ ನಮಸ್ಕಾರ ತಿಳಿಸಬೇಕೆಂತ ಕೋರಿದರು. ಅಲ್ಲಿಂದೀಚೆಗೆ ಅವರನ್ನು ಕಾಣುವ ಸಂದರ್ಭವೊದಗಿ ಬರಲಿಲ್ಲ.

## 10. ಶ್ರದ್ಧಾಂಜಲಿ

ಪರಮಪೂಜ್ಯ ರಾಷ್ಟ್ರಕವಿ ಗೋವಿಂದ ಪೈಗಳು 9–9–1963ರಂದು ಬೆಳಗಿನ 9–15ಕ್ಕೆ ಮಂಗಳೂರಿನಲ್ಲಿ ಪಾರ್ಥಿವ ಶರೀರವನ್ನು ತ್ಯಜಿಸಿ ದಿವಂಗತರಾದ ದಾರುಣ ವಾರ್ತೆಯನ್ನು ವೃತ್ತ ಪತ್ರಿಕೆಗಳಲ್ಲಿ ಓದಿ ಅತ್ಯಂತ ವ್ಯಸನವಾಯಿತು. ಕನ್ನಡ ನಾಡು-ನುಡಿಗಳ ಅಭಿಮಾನಿಗಳಾಗಿದ್ದ-ಹಿರಿಯ ಸಾಹಿತಿಗಳಾಗಿದ್ದ ರಾಷ್ಟ್ರಕವಿಗಳು ಇನ್ನಿನಿತು ದಿನ ಬದುಕಿರಬೇಕಾಗಿತ್ತು. ಆದರೆ ಕಾಲಪುರುಷಂಗೆ ಗುಣಮಣಮಿಲ್ಲಂಗಡಾ ! ಅವರ ಕಾವ್ಯಮಯ, ದಯಾಮಯ, ಋಷಿ ಜೀವನದ ಆದರ್ಶಗಳು ನಮ್ಮೆಲ್ಲರ ಬಾಳನ್ನು ಹಸನಾಗಿಸಲಿ. ಹಸುರಾಗಿಟ್ಟಿರಲಿ.

ಸಂಸಾರದ 'ವಿಷವೃಕ್ಷದಿ ಹಣ್ಣೆರಡಿವೆ ಅಮೃತೋಪಮ !
ಕಾವ್ಯರಸಾಸ್ವಾದನ ಮೇಣ್ ಸಲ್ಲಾಪಂ॥

ಎಂಬ ಉಕ್ತಿಯಂತೆ ನನ್ನ ಈ ಜೀವನದ ಹಾದಿಯಲ್ಲಿ ಪೂಜ್ಯ ಗೋವಿಂದ ಪೈಗಳಂತಹ ಸಾಹಿತಿ ತಪಸ್ವಿಯ ದರ್ಶನಭಾಗ್ಯವೊದಗಿಬಂತು. ಅವರೊಡನೆ ಶ್ರವಣಸುಧಾವಿನೂತನವಾದ ಸಂಭಾಷಣೆಗೆ ಶ್ರೀ ದೇವರು ಅವಕಾಶ ಕಲ್ಪಿಸಿಕೊಟ್ಟಿದ್ದನು. ಕಾವ್ಯರಸಾಸ್ವಾದನೆ ಮಾಡಲು ಬೇಕಾದ ಸಾಹಿತ್ಯ ಶಕ್ತಿಯನ್ನು ಪಡೆದುಕೊಳ್ಳಲು ಕನ್ನಡನಾಡ-ನುಡಿಗಳ ಸೇವೆಗೈಯಲು ನನ್ನಂತಹ ಅನೇಕರಿಗೆ ಕವಿ ಪುಂಗವರ ವ್ಯಕ್ತಿತ್ವ ಮಾರ್ಗದರ್ಶಕವಾಯಿತು. ಅಂಥ ಪವಿತ್ರಾತ್ಮರ ಬಗ್ಗೆ ತಿಳಿದುದನ್ನು ಬರೆದು ಕಳುಹಿಸಲು ಅವಕಾಶ ಮಾಡಿಕೊಟ್ಟ ಕುಂದಾಪುರ ಕಾಲೇಜಿನ ಕಾರ್ಯಕರ್ತರಿಗೆ ವಂದಿಸಿ ರಾಷ್ಟ್ರಕವಿ ಮಂಜೇಶ್ವರದ ಗೋವಿಂದ ಪೈಗಳವರ ಜಯಂತಿಯ ಅಂಗವಾಗಿ ಹೊರಡಿಸುತ್ತಲಿರುವ ಸ್ಮಾರಕ ಗ್ರಂಥಕ್ಕೆ ಶ್ರದ್ಧಾಂಜಲಿ ರೂಪವಾದ ಈ ಲೇಖನವನ್ನು ಭಕ್ತಿಯಿಂದ ಅರ್ಪಿಸುತ್ತಲಿರುವೆ.

# ಮಂಜೇಶ್ವರ ಗೋವಿಂದ ಪೈಗಳವರೊಡನೆ

ಶ್ರೀ ಮ. ವಿ. ನಾಯಕ, ಮುಂಬೈ

ಕರ್ನಾಟಕದಲ್ಲಿ ಗೋವಿಂದ ಪೈಗಳವರ ಹೆಸರನ್ನರಿಯದವರಾರೂ ಇಲ್ಲದಿದ್ದರೂ, ಅವರನ್ನು ಕಂಡು ಮಾತಾಡಿಸಿದವರ ಸಂಖ್ಯೆ ಸಣ್ಣದು. ಅವರು ಮುಂಬೈಗೆ ಬಂದಿದ್ದಾಗ ನನಗೆ ಅನಾಯಾಸವಾಗಿ ಅವರ ಅನಿರೀಕ್ಷಿತ ಭೇಟಿಯಾಯಿತು, ಮಾತುಕತೆಗಳು ನಡೆದುವು. ಆತ್ಮೀಯತೆ, ಗೌರವಗಳು ನನಗರಿಯದಂತೆ ಬೆಳೆದುವು. ನನಗಿಂತ ಎಷ್ಟೋ ಪಾಲಿಗೆ ವಯಸ್ಸಿನಲ್ಲೂ ಜ್ಞಾನದಲ್ಲೂ ಅನುಭವದಲ್ಲೂ ಹಿರಿಯರಾದ ಅವರು ನನ್ನೊಡನೆ ಸರಳವಾಗಿ ಸಮವಯಸ್ಕರಂತೆ ಚರ್ಚಿಸುತ್ತಿರುವುದನ್ನು ಕಂಡು ನನಗೆ ಆಶ್ಚರ್ಯವೂ ಆನಂದವೂ ಆಯಿತಲ್ಲದೆ, ಅವರ ಬಗ್ಗೆ ಆಸಕ್ತಿಯನ್ನೂ ಕೆರಳಿಸಿತು. ಇದಾಗಿ ಕೆಲವೇ ತಿಂಗಳುಗಳುರುಳಿರಬಹುದು. ಮೊನ್ನೆ ತಾನೇ ನಾನು ಒಂದು ತಿಂಗಳ ರಜೆ ಕಳೆಯಲೆಂದು ಊರಿಗೆ ಹೋಗಿದ್ದೆ. ನಮ್ಮೂರಿನಿಂದ ಹನ್ನೆರಡು ಮೈಲುಗಳಂತರದಲ್ಲಿರುವ ಮಂಜೇಶ್ವರಕ್ಕೆ ಹೋಗಿ ಅವರನ್ನು ಕಂಡು ಮಾತನಾಡಿಸದೆ ಇಲ್ಲಿಗೆ ಮರಳುವುದು ಉಚಿತವೆ? ನನ್ನ ಮನಸ್ಸದಕ್ಕೆ ಒಪ್ಪಲಿಲ್ಲ; ಅವರಲ್ಲಿಗೆ ಹೋಗಿ ಒಂದು ದಿನ ನಿಂತೇ ಬರಬೇಕೆಂದು ನಿರ್ಧರಿಸಿದೆ. ಆದರೆ ಪೈಗಳವರಿಗೆ ನನ್ನೊಡನೆ ಚರ್ಚಿಸುವ ಸಮಯವಿರಬಹುದೇ? ಇಲ್ಲವೆ ಯಾವುದಾದರೊಂದು ಸಂಶೋಧನೆಯಲ್ಲಿ ಮಗ್ನರಾಗಿರುವರೇ? ಅಲ್ಲದೆ ಅದು ಜಾತ್ರೆಯ ಸಮಯ. ಸಂಬಂಧಿಕರೆಲ್ಲರೂ ಅವರಲ್ಲಿಗೆ ಬಂದು ಇಳಕೊಂಡಿರಲೂ ಬಹುದು. ಅದರಲ್ಲೂ ನಾನೊಬ್ಬನು ಸೇರಿ ಸ್ವಲ್ಪ ಕಷ್ಟವನ್ನೀಯುವುದು ಸರಿಯೆ? ಯಾವುದಕ್ಕೂ ಅವರನ್ನೇ ವಿಚಾರಿಸುವುದೊಳಿತೆಂದು ನೆನಸಿ, ಒಂದು ಜೋಡು ಕಾರ್ಡನ್ನು ಬರೆದೆ. ಮರುದಿನವೇ ಅವರಿಂದ "ಬನ್ನಿರಿ, ಮುಂಬಯಿಗೆ ಹೋಗಬೇಕಾದರೊಮ್ಮೆ ಬಂದು ಹೋಗಿರಿ." ಎಂಬ ಪತ್ರ ಬಂತು. ಬಳಿಕ ನಾನವರಲ್ಲಿಗೆ ಹೋಗಲು ಶಂಕಿಸುವುದೇಕೆ? ತಡವೇಕೆ? ಎಂದು ಅದೇ ವಾರಾಂತ್ಯದಲ್ಲಿ ಹೊರಟೆ.

ಪೈಗಳವರ ಮನೆಗೆ ಹೋದಾಗ, ಎದುರು ಅವರಿರಲಿಲ್ಲ. ಅವರ ತಮ್ಮಂದಿರು ಸುಬ್ರಾಯ ಪೈಗಳವರಿದ್ದರು. ಅಣ್ಣಯ್ಯನವರನ್ನು ಕೇಳಿಕೊಂಡು ಯಾರೋ ಬಂದಿದ್ದಾರೆಂದು ಅವರು ಅಟ್ಟದ ಮೇಲೆ ಬರೆಯುತ್ತಾ ಕುಳಿತಿದ್ದ ಗೋವಿಂದ ಪೈಗಳವರಿಗೆ ಹೇಳಿ ಕಳುಹಿಸಿದರು. ಎರಡು ನಿಮಿಷಗಳು ಕಳೆಯಲಿಲ್ಲ, ಅವರು ಕೆಳಗೆ ಬಂದೇಬಿಟ್ಟರು. ಅವರ ಆ ನಗೆಮೋರೆಯನ್ನು ಕಂಡೇ ನನ್ನ ಮನಸ್ಸು ಉಲ್ಲಾಸದಿಂದ ಕುಣಿಯಿತು. ಮೊನ್ನಿನ ಬಿರುಗಾಳಿಯ ವಿಷಯ ಕೇಳಿದ ಬಳಿಕ ಒಳಗಿನಿಂದ ಚಾ ಬಂತು. ನನ್ನ ಹೊಟ್ಟೆ ತುಂಬಿತು. ಅನಂತರ ನಮ್ಮ ಮಾತಿಗೆ ಮೊದಲಾಯಿತು.

"ನೀವು ಬರಿಯಲಾರಂಭಿಸಿದುದು ಯಾವಾಗ?"

"ನನ್ನ ಹನ್ನೆರಡನೇ ವರ್ಷ ವಯಸ್ಸಿನಲ್ಲಿ, ಪ್ರಕಟವಾದ ಪ್ರಥಮ ಪದ್ಯವೆಂದರೆ "ಸುವಾಸಿನಿ"ಯ ಕುರಿತು ಬರೆದುದು. ಅದು ಆ ಪತ್ರಿಕೆಯ 1900ನೆಯ ಅಗೋಸ್ತು ತಿಂಗಳ ಸಂಚಿಕೆಯಲ್ಲಿ. ಹೆಚ್ಚಿನ ವಿವರಗಳನ್ನು ನೀವು ಸಾಹಿತ್ಯಜ್ಞರ ಆತ್ಮಕಥನದಲ್ಲಿ ನೋಡಬಹುದು"

"ಪ್ರಕಟವಾದ ನಿಮ್ಮ ಮೊತ್ತಮೊದಲಿನ ಕೃತಿ ಯಾವುದು?"

"ಶ್ರೀ ಗೊಮ್ಮಟ ಜಿನಸ್ತುತಿ, 1928ನೆಯ ಜನವರಿಯಲ್ಲಿ".

"ಇದುವರೆಗೆ ಪುಸ್ತಕ ರೂಪದಲ್ಲಿ ಪ್ರಕಟವಾದ ಕೃತಿಗಳೆಷ್ಟು?"

"ಐದು. ಜಿನ-ಸ್ತುತಿ(1928) ಗಿಳಿವಿಂಡು(1930) ಗೊಲ್ಗೊಥಾ(1937) ಹೆಬ್ಬೆರಳು(1946) ಮತ್ತು ವೈಶಾಖಿ ಇಲ್ಲವೆ ಬುದ್ಧನ ಕಡೆಯ ದಿನಗಳು(1947)"

"ನೀವೀಗ ಬರಿಯುತ್ತಿರುವುದೇನು?"

"ಗಾಂಧೀಜಿಯ ಕೊನೆಯ ದಿನಗಳ ಕುರಿತಾದ ಕವನ-ದೆಹಲಿ (ಇದೊಂದು Proposed name, ಬದಲಾಗಲೂ ಸಾಕು) ಬರೆಯುತ್ತಿದ್ದೇನೆ. 150–180 ಪಂಕ್ತಿಗಳನ್ನು ಈಗಾಗಲೇ ಬರೆದು ಮುಗಿಸಿದ್ದೇನೆ. ಸಾಧಾರಣ 500ಪಂಕ್ತಿಗಳ ಕವನವದು."

"ಕೃಷ್ಣನ ಕುರಿತಾದ ಕಾವ್ಯ ಮುಂಬೈಗೆ ಬರಬೇಕಾದರೇನೇ ಬರೆಯಲು ತೊಡಗಿದ್ದಿರಲ್ಲ? ಅದೆಲ್ಲಿಯ ತನಕ ಮುಂದುವರಿದಿದೆ" ಹೆಸರೇನು?"

"ಆ ಕವನದ ಹೆಸರು 'ಪ್ರಭಾಸ' ಇದರ ಆರಂಭದ, ಕಡಲ ವರ್ಣನೆಯನ್ನೊಳಗೊಂಡ 80 ಪಂಕ್ತಿಗಳು ಕಳೆದ "ಪ್ರಬುದ್ಧ ಕರ್ನಾಟಕ"ದಲ್ಲಿ ಪ್ರಕಟವಾಗಿದೆಯಲ್ಲ?"

"ಸಣ್ಣ ಕತೆಗಳನ್ನು ಬರಿಯಲಾರಂಭಿಸಿದವರು ಯಾರು? ಮಾಸ್ತಿ, ಕೆರೂರ ಯಾ ಪಂಜೆ"

"ಪಂಜೆಯವರು—ಇವುಗಳ ವಿವರಣೆ "ನೆರೆಮನೆಯ ಹುಡುಗಿ"ಯಲ್ಲಿನ ನನ್ನ ಮುನ್ನುಡಿಯಲ್ಲಿದೆ. ಓದಲಿಲ್ಲವೆ?"

"ಓದಿದ್ದಿರಬಹುದು, ನೆನಪಿಲ್ಲ"ವೆನ್ನುತ್ತಾ ನನ್ನ ಪ್ರಶ್ನಾವಳಿಯನ್ನು ಹಿಡಿದು ಮುಂದುವರಿದೆ.

"ನೀವು ಏಕಾಂಕ ನಾಟಕವನ್ನು ಬರೆಯುತ್ತಿಲ್ಲವೆ?"

"ತಾಯಿ"ಯೆಂಬುದು ನಾನು ಬರೆದ ಮೊದಲ ಏಕಾಂಕ."

"ನಿಮ್ಮ ಮನಮೆಚ್ಚಿದ ಕಾರಂತರ ಕಾದಂಬರಿ ಯಾವುದು?"

"ಮರಳಿ ಮಣ್ಣಿಗೆ."

"ಯಾರನ್ನು ಪ್ರಗತಿಶೀಲ ಲೇಖಕರೆನ್ನಬೇಕು?"

"ಪ್ರತಿಯೊಬ್ಬನೂ ಪ್ರಗತಿಶೀಲನೇ! ಒಬ್ಬನು ಇಂದು ಬರೆದ ಲೇಖನವನ್ನು, ಹಿಂದೆ ಬರೆದುದರೊಡನೆ ಹೋಲಿಸಿದರೆ ತುಸು ಬದಲಾವಣೆ ಯಾ ಪ್ರಗತಿ ತೋರದೆ ಇರದು. ಕಾಲ ಕಳೆದಂತೆ ಲೇಖನ ದೃಷ್ಟಿ ವಿಶಾಲವಾಗಿ, ಆಳವಾಗಿ, ಅನುಭವ, ಜ್ಞಾನಗಳು ಹೆಚ್ಚಿದುದೇ ಅದಕ್ಕೆ ಕಾರಣ."

"ಕಡೆಂಗೋಡ್ಲು ಶಂಕರಭಟ್ಟರನ್ನು ಯಾರೆನ್ನಲಿ? ಕವಿಗಳೆ, ನಾಟಕಕಾರರೆ ಯಾ ಕಾದಂಬರಿಕಾರರೆ?"

"ಕವಿಗಳು"

"ಶ್ರೀ ಶಂ.ಬಾ.ಜೋಶಿಯವರ "ಯಕ್ಷ ಪ್ರಶ್ನೆ ಇಲ್ಲವೆ ಬರಲಿರುವ ಸಮಾಜ" ಪುಸ್ತಕವನ್ನು ಓದಿರುವಿರಾ? ಹೇಗಿದೆ?"

"ಓದಿಲ್ಲ."

"ಶ್ರೀ ಶಿವರಾಮಕಾರಂತರ "ಆತ್ಮ ಚರಿತ್ರೆ" (ಹುಚ್ಚು ಮನಸ್ಸಿನ ಹತ್ತು ಮುಖಗಳು)ಯನ್ನು ಓದಿರುವಿರಾ?"

"ಹೌದು, ಅರ್ಧ ಮುಗಿಸಿದ್ದೇನೆ. ಅಷ್ಟರಲ್ಲಿ ಗೆಳೆಯರೊಬ್ಬರು ಬಲಾತ್ಕಾರದಿಂದ ಕೊಂಡೊಯ್ದರು. ಓದಿದ್ದ ಮಟ್ಟಿಗೆ ಉತ್ತಮವಾಗಿದೆ."

"ಶ್ರೀ ಡಿ.ವಿ. ಗುಂಡಪ್ಪನವರ "ಮಂಕು ತಿಮ್ಮನ ಕಗ್ಗ" ಮತ್ತು ಜಿ.ಪಿ.ರಾಜರತ್ನಂರ "ಯೆಂಡಕುಡ್ಕ ರತ್ನ" ಇವುಗಳನ್ನು ಆಯಾ ಲೇಖಕರ ಉತ್ಕೃಷ್ಟ ಕೃತಿಗಳೆನ್ನಲಾಗದೆ?"

"ಹೇಳದೇನು?"

"ದಕ್ಷಿಣ ಕನ್ನಡ ಜಿಲ್ಲೆಯು ಚಲಚ್ಚಿತ್ರ ಉದ್ಯಮಕ್ಕೆ ಅನರ್ಹವೇ?"

"ಅನರ್ಹವೆಂದು ಹೇಳುವವರಾರು?"

"ಮರಳಿ ಮಣ್ಣಿಗೆ, ಚೋಮನ ದುಡಿ, ಸುಬ್ಬಣ್ಣ ಮೊದಲಾದ ಕಾದಂಬರಿಗಳ ಚಿತ್ರಗಳನ್ನು ತಯಾರಿಸಿದರಾಗದೆ?"

"ತಯಾರಿಸತಕ್ಕುದು. ಇದರಿಂದ ಉತ್ತಮ ತರದ ಮನೋರಂಜನೆಯೂ ಆಗುವುದು."

"ನಿಮ್ಮಲ್ಲಿ ಅನುವಾದ ಮಾಡಿದ ಏಕಾಂಕಗಳನ್ನೆಲ್ಲ ಸೇರಿಸಿದರೆ, ಒಂದು ಪುಸ್ತಕವಾಗಿ ಹೊರಡಿಸಲು ಸಾಧ್ಯವಾಗದೆ?"

"ಏಳೆಂಟು ನಾಟಕಗಳು ಇವೆ. ಅಷ್ಟೆ!"

"ಶ್ರೀ ಎಸ್. ಅನಂತ ನಾರಾಯಣರ "ಕಾರಂತರ ಕಾದಂಬರಿಗಳು" ಎಂಬುದು ಇನ್ನುಮುಂದೆ ವಿಮರ್ಶಾತ್ಮಕ ಗ್ರಂಥ ಬರೆಯಲು ತೊಡಗುವವರಿಗೆ ಮಾರ್ಗದರ್ಶಕವಾಗಿದೆನ್ನಲಾಗದೆ?"

"ಹೇಳಬಹುದು."

"ನಿಮ್ಮ ಪುಸ್ತಕ ಭಂಡಾರವನ್ನು ನೋಡಬೇಕಲ್ಲ?"

"ಬನ್ನಿ. ಹೋಗೋಣ" ಎನ್ನುತ್ತಾ, ನನ್ನನ್ನವರು ಅಟ್ಟದ ಮೇಲಕ್ಕೆ ಕರೆದೊಯ್ದರು. ಶಾಂತವಾದ ತಂಪಾದ ವಾತಾವರಣ ಬರೆಯಲನುಕೂಲವಾದ ಸ್ಥಳಗಳನ್ನು ಕಂಡು ಆನಂದವಾಯ್ತು. ನೆಲದ ಮೇಲೆಯೇ ನೆಟ್ಟಗೆ ಕುಳಿತು ಬರೆಯಲನುಕೂಲವಾದ ಚಿಕ್ಕ ಮೇಜು, ಅದರ ಮೇಲೆ ನೇರಳೇಶಾಯಿ ಇರುವ ಬಾಟ್ಲಿ ಹಾಗೂ ಲೇಖನಿ. ಒಂದಿಷ್ಟು ಕಾರ್ಡು ಹಾಗೂ ಕವರುಗಳು, ಇಷ್ಟೆಯೇ? ತಮಗೆ ಬಂದಿದ್ದ ಆ ತಿಂಗಳ ಪತ್ರ ಮತ್ತು ಕಾರ್ಡುಗಳ ಅಟ್ಟಿಯೂ ಇತ್ತು. ಆಗಲೇ ನನಗೆ ನೆನಪಾಯಿತು. "ಜೋಡು ಕಾರ್ಡು ಬರೆಯುವುದಗತ್ಯವಿರಲಿಲ್ಲ. ಬಂದ ಪತ್ರಕ್ಕೆ ಸಕಾಲದಲ್ಲುತ್ತರ ಬರೆಯುವುದು ನನ್ನ ನಿಯಮ" ಎಂದು ನನ್ನ ಪತ್ರದಲ್ಲಿ ಬರೆದಿದ್ದರು. ಹಲವರು ಪೈಗಳವರ ಸಕಾಲದಲ್ಲಿಯ ಪತ್ರವ್ಯವಹಾರವನ್ನು ಕುರಿತು ನನ್ನೊಡನೆ ಹೇಳಿದ್ದರು. ಇದೀಗ ಅನುಭವದ ಆಧಾರ ಸಿಕ್ಕಿತು. ಇನ್ಮುಂದಕ್ಕೆ ನನಗೆ ಎಚ್ಚರದಿಂದ ವರ್ತಿಸಲನುಕೂಲವಾಯಿತಲ್ಲವೆ? ಎಂದು ಸುಮ್ಮನಾದೆ.

ಅಲ್ಲೇ ಗೋಡೆಯೊಳಗಿನ ಒಂದು ಕಪಾಟನ್ನು ತೆರೆದರು. ಅವುಗಳಲ್ಲಿ ತುಂಬಾ ಲೇಖನದ ಪ್ರತಿಗಳು! ಪ್ರಕಟವಾದುವುಗಳೊಂದೆಡೆ, ಅಪ್ರಕಟವಾದವುಗಳೊಂದೆಡೆ, ದ್ವಿಪ್ರತಿಗಳು ಬೇರೊಂದೆಡೆ-ಹೀಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸಿ ಅಂದವಾಗಿ ಇಟ್ಟಿರುವರು. ಆಗಲೇ ನಾನು ಅವರ ಲೇಖನಗಳ ಮಾತನ್ನೆತ್ತಿದೆ. ಆಗಲೇ ಅವರಿಂದ ತಿಳಿಯ ಬಂತು. ಅಪ್ರಕಟವಾದ ಸಂಶೋಧನಾತ್ಮಕ (ಕನ್ನಡ ಹಾಗೂ ಇಂಗ್ಲಿಷಿನಲ್ಲಿ ಬರೆದ) ಲೇಖನಗಳೆಷ್ಟೋ ಇವೆ. ಪ್ರಕಟವಾದವುಗಳನ್ನು ಸಂಗ್ರಹಿಸಿ, ಪುಸ್ತಕಗಳನ್ನು ಮಾಡಬಹುದು. ಅಷ್ಟೆಯೇ?

ಮುದ್ರಿತವಾದರೆ 300–400 ಪುಟಗಳನ್ನೊಳಗೊಳ್ಳುವ, ಆಂಗ್ಲ ಭಾಷೆಯಲ್ಲಿ, 'The Chronology of Sakas, Pahalavas and Kushans' ಎಂಬ ಪುಸ್ತಕ ಬರೆದು ಸಿದ್ಧವಿದೆ. ಇವರ ಸಂಶೋಧನೆ ಮಾಡಿದವರು ಅತಿ ವಿರಳ, ಇಲ್ಲವೇ ಇಲ್ಲ ಎನ್ನಬಹುದು. ಅಲ್ಲದೆ 'The Later Shathavahanas' ಎಂಬ ಇನ್ನೊಂದು ಪುಸ್ತಕವೂ ತಯಾರಾಗಿದೆ. ಆದರೆ ಪ್ರಕಟಿಸುವವರಾರು? ಪ್ರಕಾಶಕರೆಲ್ಲಿ? ಪ್ರಕಟವಾದರೂ ನಮ್ಮ ನಾಡಿನಲ್ಲಿ ಓದಿ, ಅರ್ಥಮಾಡಿಕೊಳ್ಳುವವರೆಷ್ಟು ಮಂದಿ? ಅವಕ್ಕೂ ಮೊದಲು ಆಕ್ಷೇಪಿಸಬಹುದಾದ ವಿಷಯವೆಂದರೆ ಗೋವಿಂದ ಪೈಗಳವರಲ್ಲಿ ಅವರು ಬರೆದು ಮುಗಿಸಿದ ಸಂಶೋಧನಾತ್ಮಕ ಗ್ರಂಥಗಳಿವೆಯೆಂದು ಯಾರಿಗೂ ತಿಳಿದಿಲ್ಲವೇ? ಯಾರಾದರೂ ತಿಳಿಯಲು ಆಸಕ್ತಿ ವಹಿಸಿ, ಅರಿಯಲು ಯತ್ನಿಸಿದರೆ? ಇಲ್ಲ. ಹಾಗಿದ್ದರೂ ಪೈಗಳವರಿಗೆ ಅದರಿಂದ ಬೇಸರವೂ ಇಲ್ಲ, ನಿರಾಶೆಯೂ ಇಲ್ಲ. ನನ್ನ ಕುರಿತು ಏನೊಂದೂ ಬರೆಯಬಾರದಾಗಿ ಪ್ರಚಾರ ಮಾಡಕೂಡದಾಗಿ ನನಗೆ ಹೇ

ಳಿರುವರು. ಆದರೆ ಇದು ಪ್ರಚಾರವಲ್ಲ; ಇದ್ದ ನಿಜಪರಿಸ್ಥಿತಿ. ಇಂತಹ ಹಿರಿಯ ಸಾಹಿತಿಗಳು ಎಲೆಮರೆಯಲ್ಲಿನ ಕಾಯಿಯಂತೆ ಇರಲು ಆಶಿಸ ಬಹುದು. ಆದರೆ ಅವರನ್ನು ಹುಡುಕಿ ತೆಗೆದು, ತಕ್ಕುದಾದ ಸನ್ಮಾನ, ಪ್ರೋತ್ಸಾಹಗಳನ್ನು ಕೊಟ್ಟು, ನಮಗೆ ಅವರಿಂದೆಷ್ಟು ಲಾಭವಾಗು ವುದೋ ಅಷ್ಟನ್ನು ಪಡೆಯುವುದು ನಮ್ಮ ಕರ್ತವ್ಯವಲ್ಲವೇ?

ಬಳಿಕ ಅವರ ಪುಸ್ತಕ ಸಂಗ್ರಹದ ಕಡೆಗೆ ತಿರುಗಿದೆ. ಅದೆಷ್ಟು ಕಪಾಟುಗಳು ತುಂಬ, ಕಿಕ್ಕಿರಿದು ತುಂಬಿವೆ? ಒಂದೇ, ಎರಡೇ... ಐದು! ಅವುಗಳ ಭಾರದಿಂದಾಗಿ ಅಟ್ಟ ಕೂಡಾ ಅದರಬಹುದೆಂದು ಇನ್ನೆರಡು ಪುಸ್ತಕಗಳಿರುವ ಕಪಾಟುಗಳನ್ನು ಕೆಳಗಡೆ ಇಟ್ಟಿದ್ದಾರೆ. ಎಂತ ಹ ಪುಸ್ತಕ ಸಂಗ್ರಹ? ಸಂಸ್ಕೃತ, ಪಾಳಿ, ಅರೇಬಿಕ್, ಗ್ರೀಕ್ ಮೊದಲಾದ ಭಾಷೆಗಳಲ್ಲಿಯ, ಸಂಶೋಧನೆಗೆ ಅನುಕೂಲವಾಗುವ, ಸಂಬಂಧಿಸಿದ ಅದೆಷ್ಟೋ ಪುಸ್ತಕಗಳನ್ನು ಪೇರಿಸಿಟ್ಟಿದ್ದಾರೆ. ಒಂದರಲ್ಲಿ ಇಂಗ್ಲಿಷ್, ನಾಟಕ, ಕವನ, ಕಾದಂಬರಿ, ನಿಬಂಧ ಮೊದಲಾದವುಗಳ ಪುಸ್ತಕಗಳ ಸಾಲುಗಳು! ಇನ್ನೊಂದು ಕಪಾಟು ಕನ್ನಡ ಪುಸ್ತಕಕ್ಕೇನೇ ಮೀಸಲು! ಕೆಳಗಿದ್ದ ಕಪಾಟನ್ನು ನೋಡಲು, ಸಮಯಾಭಾವದಿಂದಾಗಿ ಆಗಲಿಲ್ಲ.

ಆದರೆ ಒಂದು ಮರೆತೆ. ನಾನೂ, ಪೈಗಳವರೂ ಕಡಲ ತೀರಕ್ಕೆ ಹೋಗಿದ್ದೆವು. ಅಲ್ಲಿಯೂ ನಮ್ಮೊಳಗೆ ಸ್ವಲ್ಪ ಮಾತುಕತೆಗಳು ನಡೆದಿದ್ದುವು.

"ನನ್ನ ಗೆಳೆಯರೊಬ್ಬರ ಮೂರು ಏಕಾಂಕ ನಾಟಕಗಳ ಸಂಗ್ರಹ ಸದ್ಯದಲ್ಲೇ ಪ್ರಕಟವಾಗಲಿದೆ. ಅದಕ್ಕೆ ನಿಮ್ಮದೊಂದು "ವಿಮರ್ಶೆ" ಬೇಕೆಂದು ಹೇಳುತ್ತಿದ್ದರು. ಮುನ್ನುಡಿಯಲ್ಲ, ವಿಮರ್ಶೆ!" ಎಂದು ನಾನು ಸ್ವಲ್ಪ ಒತ್ತಿಹೇಳಿದೆ.

"ವಿಮರ್ಶೆ! ಅದೊಂದು ನಿಷ್ಠುರದ ಕೆಲಸ. ನನ್ನ ಮನಸ್ಸಿಗೆ ತಪ್ಪೆಂದು ಅದನ್ನು ತೋರಿಸದೆ ಇರಲು ನನ್ನಿಂದಾಗದು. ಹಾಗೇ ಗೈದಲ್ಲಿ ವಿಪರೀತಾರ್ಥ ಮಾಡುತ್ತಾರೆ. ಇಲ್ಲವೇ ರೇಗುತ್ತಾರೆ. ಇದರ ಅನುಭವವೂ ನನಗಿದೆ. ಮುನ್ನುಡಿ ಬರೆಯುವುದಾದರೆ, ಮುನ್ನುಡಿಕಾ ರನು ಆ ಪುಸ್ತಕದ ತಪ್ಪು, ಕೊರತೆಗಳನ್ನು ಎತ್ತಿತೋರಿಸಿ ವಿಮರ್ಶಿಸಬೇಕಿಲ್ಲ. ಬದಲು ಲೇಖಕನನ್ನು ಸ್ವಲ್ಪ ಬೆನ್ನುತಟ್ಟಿ ಪ್ರೋತ್ಸಾಹಿಸಬೇಕು ನನಗೆ ಇದಾವುದೂ ಬೇಡ." ಎಂದರವರು.

"ನಾನು ಕೆಲವು ಆಂಗ್ಲ ನಾಟಕಗಳನ್ನು ಓದಬೇಕೆಂದು ಇದ್ದೇನೆ. ಕೆಲವು ಉತ್ತಮ ನಾಟಕಕಾರರನ್ನು ಹೇಳುವಿರಾ?"

"ಇತ್ತೀಚಿನವರ ಕೃತಿಗಳನ್ನು ನಾನು ಓದುವುದು ಕಡಿಮೆ. ಆದರೂ ಕೆಲವನ್ನು ಹೇಳುತ್ತೇನೆ. ಗೋಲ್ಡ್‌ಸ್ಮಿಥ್, ಶೆರಿಡಾನ್, ಶಾ, ಜೋನ್‌ಗಾಲ್ಸ್‌ವರ್ದಿ, ಒಸ್ಕಾರ್‌ವ್ಯಾಲ್ಡ್, ಡ್ರಿಂಕ್‌ವಾಟರ್, ಜೋನ್ ಎಂ.ಸಿಂಜ್, ಡಬ್ಲ್ಯು.ಬಿ.ಯೀಟ್ಸ್"

"ಇನ್ನೊಂದೇ ಪ್ರಶ್ನೆ ಉಳಿದಿದೆ."

"ಏನದು? ಕೇಳಿಬಿಡಿ."

"ನಿಮ್ಮ "ಗಿಳಿವಿಂಡು" ಪ್ರಕಟವಾಗಿ ಪ್ರತಿಗಳು ಮುಗಿದು ಅದೆಷ್ಟೋ ಸಮಯವಾಯಿತಲ್ಲ. ಆದರೂ ಪುನ: ಮುದ್ರಿಸ ಲಿಲ್ಲೇಕೆ?"

"ನೀವು ಹೇಳುವುದೇನೋ ನಿಜ. ನನಗೂ ಗೊತ್ತಿದೆ. ಅದಕ್ಕಾಗಿ ಪ್ರಕಾಶಕರೂ ಒತ್ತಾಯ ಮಾಡಿ ಕೇಳುತ್ತಿದ್ದಾರೆ. "ಗಿಳಿವಿಂಡಿ" ನಲ್ಲಿಯ ಕೆಲವು ಮೂರನೆ ತರಗತಿ (Third rate)ಯ ಕವನಗಳನ್ನು ತೆಗೆದು, ಹೊಸ ಕೆಲವನ್ನು ಸೇರಿಸಿ ಅದೇ ಹೆಸರನ್ನು ಇಲ್ಲವೆ ಬೇರೊಂದನ್ನಿಟ್ಟು ಸದ್ಯದಲ್ಲೇ ಪ್ರಕಟಿಸಬೇಕೆಂದು ಯೋಚಿಸಿದ್ದೇನೆ. ಯಾವಾಗ? ಎಂದು ಮಾತ್ರ ಹೇಳಲಾರೆ"

ಇಷ್ಟಾಗುವಾಗ ನನಗೆ ಗಾಡಿಯ ಹೊತ್ತಾಯಿತು. ಕಡಲ ಬದಿಯಿಂದ ಬೀದಿಯೆಡೆಗೆ ಬಂದೆವು. ದಾರಿಯಲ್ಲಿಯೂ ಸಾಹಿತ್ಯದ ಕುರಿತಾದ ಕೆಲವು ಮಾತುಕತೆಗಳು ನಡೆದರೂ, ಅದಷ್ಟು ಪ್ರಾಮುಖ್ಯವಲ್ಲ. ಅವರ ಮನೆ ಸಮೀಪಿಸಿತು. ನಾನು "ಬರುತ್ತೇನೆ, ನಿಮಗೆ ಸ್ವಲ್ಪ ತೊಂದರೆಯಿತ್ತೆ, ನಮಸ್ಕಾರ"ವೆಂದೆ.

"ಹೋಗಿರಿ, ದೇವರು ಒಳ್ಳೆದು ಮಾಡಲಿ!" ಎಂದು ನಗುಮೋರೆಯಿಂದ ಹರಸಿದರು. ಹೋಗಲು ಸಮ್ಮತಿಯಿತ್ತರು. ಸ್ವಾಗ ತಿಸಿದ ಹಾಗೂ ಬೀಳ್ಕೊಟ್ಟ ಆ ಮೋರೆ ಮಂದಹಾಸದ ಮೋರೆ ಮತ್ತು ಅವರ ಆ ನಿಸ್ಸಂಕೋಚವಾದ ಸರಳ ಸ್ವಭಾವಗಳನ್ನೆಂದೂ ನಾನು ಮರೆಯಲಾರೆ. ನಾನು ಮಂಗಳೂರಲ್ಲೇ ಇರುವಾಗ ಇವರ ಪರಿಚಯ ಮಾಡಿಕೊಂಡಿದ್ದರೆ..................? ಎಂದು ಪರಿತಪಿಸಿದೆ. ಮತ್ತೆ ಮಂಗಳೂರಿನಿಂದ ಮುಂಬೈಗೆ ಕೆಲಸದ ನಿಮಿತ್ತ ಹೋದರೂ, ಕರ್ನಾಟಕದಿಂದ ಹೊರಗಿನ ಪ್ರದೇಶದಲ್ಲಿದ್ದರೂ ಅಲ್ಲಿಯೇ ಮಂಜೇಶ್ವರ ಗೋವಿಂದ ಪೈಗಳವರ ಪರಿಚಯ ಮಾಡಿಕೊಳ್ಳುವ ಭಾಗ್ಯ ನನಗೊದಗಿತಲ್ಲ" ಎಂದು ನಾನು ತೃಪ್ತಿಗೊಂಡೆ.

# ಗೋವಿಂದ ಪೈಗಳೊಡನೆ ಮೂರು ತಾಸು

**ದಿವಂಗತ ದ. ಬಾ. ಕುಲಕರ್ಣಿಯವರು**

ಈ ವರ್ಷಾರಂಭದ ದಿನ ಕನ್ನಡದ ಜ್ಞಾಪಕ ದೀಪ ಶ್ರೀ ಗೋವಿಂದ ಪೈ ಅವರನ್ನು ಕಂಡು ಬಂದೆ. ಹಾಗೆ ಅವರನ್ನು ಕಂಡದ್ದು ಇದು ನಾಲ್ಕನೆಯ ಸಲವೋ ಅಯ್ದನೆಯ ಸಲವೋ. ಕಳೆದ ವರುಷ ಕವಿ ಶ್ರೀ ಬೇಂದ್ರೆಯವರೊಡನೆ ಕನ್ನಡ ಜಿಲ್ಲೆಗೆ ಹೋದಾಗ ನಮ್ಮ ಒಂದು ಸಭೆಗೆ ಬಂದ ಶ್ರೀ ಗೋವಿಂದ ಪೈಗಳ ಸಂದೇಶದೊಡನೆಯೇ ಅವರ ಆದರದ ಕರೆ ಬಂದಿತ್ತು. ನಾನು ಕನ್ನಡ ಜಿಲ್ಲೆಗೆ ಹೋದಾಗಲೆಲ್ಲ, ಈ ಕರೆಯ ಕರಕರೆಯನ್ನು ಗಣಿಸದೆ ಮಂಜೇಶ್ವರ ಯಾತ್ರೆ ಮಾಡಿ ಬರುವುದು ಪದ್ಧತಿ. ಸಾಮಾನ್ಯವಾಗಿ ಪೈಗಳು ಮನೆಯಲ್ಲಿ ಇದ್ದೇ ಇರುತ್ತಾರೆ. ನಾನು ತೀರ ಹುಡುಗನಾಗಿದ್ದಾಗಲೂ ಪ್ರೀತಿಯಿಂದ ಸ್ವಾಗತಿಸಿ ಯಾವೊಂದು ಕೃತ್ರಿಮತೆಯೂ ಇಲ್ಲದ ತಮ್ಮ ತೆರೆದೆದೆಯ ಜ್ಞಾನಭಂಡಾರವನ್ನು ತೋರಿದ ಆ ಶ್ರೀಮಂತಿಕೆಯನ್ನು ನಾನು ಮರೆಯುವುದು ಸಾಧ್ಯವೇ ಇಲ್ಲ.

ಕಳೆದ ವರುಷ ಕಾರಣಾಂತರದಿಂದ ಮಂಜೇಶ್ವರದ ಯಾತ್ರೆ ಘಟಿಸಲಿಲ್ಲ. ಈ ಸಲ ಉಡುಪಿಯ ಸಾಹಿತ್ಯಸಮ್ಮೇಳನ ಮುಗಿಸಿ ಮಂಗಳೂರಿಗೆಂದು ಹೊರಟೆ. ಹೊರಟದ್ದು ಮಂಜೇಶ್ವರದ ನಿಟ್ಟಿಗೆ ಎಂಬ ಸಮಾಧಾನ. ಮಂಜೇಶ್ವರಕ್ಕೆ ಹೊರಟ ನನ್ನನ್ನು ಒಬ್ಬ ಮಿತ್ರ ತಾನು ಹೊರಟ ಕಾಞ್ಞಂಗಾಡಿಗೆ ಕರೆದೊಯ್ದ. ಏನೆಲ್ಲ ವಿಘ್ನಗಳೋ ಎಂದು ಒಳಮನಸ್ಸು ಪ್ರಶ್ನಿಸುತ್ತಲೇ ಇತ್ತು. ಕಾಞ್ಞಂಗಾಡಿನಿಂದ ಮರಳುವಾಗ ನಾನು ಮಂಜೇಶ್ವರದಲ್ಲಿಳಿದೆ. ಇಳಿಹೊತ್ತು ಪೈಗಳ ಮನೆಯ ಮುಂದೆ ಬಂದಾಗ ಐದು ಗಂಟೆ. ಪಶ್ಚಿಮಕ್ಕೆ ಸಮುದ್ರವೇ ಇರುವಾಗ ತಡೆ ಇಲ್ಲದೆ ಬೆಂಗದಿರುಗಳು ಚುಚ್ಚುತ್ತಿದ್ದವು. ಅದೇ ಆ ಚಾವಡಿಗೆ ಬಂದು ಕರೆದೆ, ಕೂಗಿದೆ. ಯಾರದೂ ಸದ್ದಿಲ್ಲ. "ಸ್ವಾಮೀ–ಪೈಗಳೇ" ಎಂದು ಜೋರಾಗಿ ಕೂಗಿದಾಗ ಒಬ್ಬರು ಬಂದರು. ವಿಚಾರಿಸುವಾಗ ಪೈಗಳು ಶಾನುಭೋಗರ ಮನೆಗೆ ಹೋಗಿದ್ದಾರೆಂದೂ ಆರು ಗಂಟೆಗೆ ಬಂದಾರೆಂದೂ ಹೇಳಿಕೆಯಾಯಿತು. "ಬಂದಾರು" ಎಂದರೇನು? ಗೋವಿಂದ ಪೈಗಳು ಆಗ ಬರುವುದೇ ನಿಶ್ಚಯವೆಂಬುದು ನನಗೆ ಖಾತ್ರಿ. ಆ ವರೆಗೆ ಕಡಲಿಗಾದರೂ ಹೋಗಿ ಬರೋಣವೆಂದು ಹೊರಟೆ.

ಬೀದಿಗಿಳಿದಾಗ ಮಂಜೇಶ್ವರ ಕೇರಳವೆಂಬ ವಿಪತ್ಸೂಚಿ ಬೋರ್ಡುಗಳು ಕೆಲವು ಸಾರಿದವು. ಅವನ್ನೇ ಮೆಲುಕಾಡಿಸುತ್ತ ಕಳೆದ ಬಾರಿ ಅಂದರೂ ಆರೇಳು ವರ್ಷಕ್ಕೆ ಮುಂಚೆ ಪೈಗಳೇ ತೋರಿದ ದಾರಿಯಿಂದ ಸಮುದ್ರಕ್ಕೆ ಅಂದರೆ ಪಶ್ಚಿಮಕ್ಕೆ–ಹಾಗೆಂದರೆ ಸುಡುವ ಸೂರ್ಯನ ಕಡೆಗೆ ನಡೆದೆ. ಕಡಲಂಚಿಗೆ ಬಂದೆ. ಹೊಯ್ಗೆ (ಮಳಲು) ಸುಡುತ್ತಿತ್ತು. ನೀರಿನಂಚಿಗೆ ಬಂದು ನಿಂತುಕೊಂಡೆ. ಒಂದು ಹವಳದ ಬಂಡೆಯೊಡನೆ ಆಟವಾಡುವ ತೆರೆಗಳನ್ನು ಕಂಡು ವಿಸ್ಮಿತನಾಗಿ ನಿಂತೆ. ಒಂದು ತೆರೆ ಬಂದಾಗ ಆ ಬಂಡೆ ದ್ವೀಪವಾಗುವುದು. ಮತ್ತೊಂದು ಬಂದು ಅದನ್ನು ಮುಳುಗಿಸಿ ಬಿಡುವುದು. ಮತ್ತೆ ನೀರು ಜರಿಯುವಾಗ ಶಿಖರವಾಗಿ ಕಂಡ ಬಂಡೆ ಮೆಲ್ಲಗೆ ಮೈತೆರೆದು ತೋರುವುದು. ಮತ್ತೆ ನೀರ ಮಾಲೆ ಅದರ ಉಡಿದಾರವಾಗುವುದು. ಮತ್ತೊಂದು ತೆರೆ ಬಂದು ಅಪ್ಪಳಿಸುವುದು. ಅದೇ ಆಟ. ಗಂಟೆಗಟ್ಟಲೆ ಅವನ್ನೇ ನೋಡುತ್ತ ನಿಂತೆ. ಬಿಳಿ ಸೂರ್ಯ ಕಂತುತ್ತ ಸಹ್ಯವಾಗಿ ಕಂಡ. ಮತ್ತೆ ಕೆಂಪಾಗಿ ಕೆಂಡವಾಗಿ ನೀರಲ್ಲಿ ಮುಳುಗಿ ಕೊಂಡ. ಬಂಗಾರಿನೋಕುಳಿಯಿಂದ ನೀರು ಹೊಳೆಯಿತು. ತೆರೆಗಳು ಹನಿಹನಿ ತೂರಿ ಮುತ್ತನ್ನು ಚಿಮ್ಮಿಸಿದವು. ಅದೇ ವಿಸ್ಮಯದಲ್ಲಿ ಆ ರಸವನ್ನು ಕೈಯಿಂದೆತ್ತಿ ಬಾಯಿಗಿಟ್ಟೆ. ವಾಸ್ತವ ಜಗತ್ತಿಗೆ ಬಂದೆ. ಆ ಉಪ್ಪು ನನಗೆ ಗೋವಿಂದ ಪೈಗಳ ನೆನಪು ತಂದಿತು. ಮರಳಿದೆ.

ಗೇಟಿನ ಹೊರಗಿನಿಂದಲೇ ಪೈಗಳನ್ನು ಕಂಡೆ. ಅದೇ ಚಾವಡಿ. ಅದೇ ಮಂಚದಲ್ಲಿ ಕುಳಿತವರು ಸ್ವಾಗತದ ಕೂಗನ್ನು ಕೊಟ್ಟರು. ಕೈಮುಗಿದುಕೊಂಡೇ ಒಳಹೊಕ್ಕು ನನ್ನ ಪರಿಚಯ ಹೇಳಿಕೊಂಡೆ. ಅವರಿಗೆಲ್ಲಿಯ ಮರೆವು? "ಗೊತ್ತು ಸ್ವಾಮೀ ಗೊತ್ತು. ಬನ್ನಿ-ಕುಳ್ಳಿರಿ" ಎಂದು ಕರೆದು ಬದಿಗೇ ಕೂಡಿಸಿಕೊಂಡರು.

"ಬೇಂದ್ರೆಯವರು ನೀವು ಕಳೆದ ವರುಷ ಬರುತ್ತೀರೆಂದು ಕಾಯಿಸಿ ಬರಲಿಲ್ಲ. ನೀವು ಬರುವುದು ಗಾದೆ ಮಾತು ಎಂದು ಕೊಂಡಿದ್ದೆ. ಈಗ ಬೇಂದ್ರೆ ಒಬ್ಬರೇ ಗಾದೆ–" ಎಂದರು.

ಕಾಫಿ ಬಂತು. ಇಪ್ಪತ್ತೈದು ವರ್ಷಕ್ಕೆ ಮೊದಲು ಅವರನ್ನು ಪ್ರಥಮತಃ ಕಂಡಾಗ ಬೀಡಿ ಎಳೆಯುತ್ತೀರಾ ಎಂದು ಕೇಳಿದ್ದರು ನಾನಾಗ ಧೂಮಪಾನ ತೊಡಗಿರಲಿಲ್ಲ. ಮುಂದೆ ತೊಡಗಿದಾಗ ಅವರು ನಿಸ್ಸಂಕೋಚವಾಗಿ ಎಳೆಯಿರಿ ಎಂದು ಸಿಗರೇಟು ಕೊಟ್ಟಿದ್ದರು. "ಈಗ ಬಿಟ್ಟುಬಿಟ್ಟಿದ್ದೇನೆ" ಎಂದು ಅವರ ಕಥೆಗೆ ತೊಡಗಿದರು.

"ನಾನು ಹದಿನೆಂಟು ವರುಷ ಬೀಡಿ, ಹದಿನೆಂಟು ವರುಷ ಸಿಗರೇಟ್, ಮತ್ತೆ ಸುಮಾರಾಗಿ ಹದಿನೆಂಟು ವರುಷ ಬೀಡಿ ಹೀಗೆ 54 ವರುಷ ಹೊಗೆ ಕುಡಿದಿದ್ದೇನೆ. ನನ್ನ ತಂದೆ ಒಳ್ಳೆಯವರು. ಆದರೆ ತಾಯಿ ಕ್ಷಮಿಸುವವರಲ್ಲವೆಂದು ಮಂಗಳೂರಿಗೆ ಕಲಿಯ ಹೋಗುವವರೆಗೆ ಇದು ತಾಗಿರಲಿಲ್ಲ. ಮಂಗಳೂರಲ್ಲಿ ಸ್ವಲ್ಪ ಸ್ವಾತಂತ್ರ್ಯವೆನಿಸಿದಾಗ ಇದು ಹಿಡಿಯಿತು. ಮನೆಯವರೊಡನೆ ಕಾಶೀ ಯಾತ್ರೆ ಹೋದಾಗಲೂ ಹಲವು ಸಾವಿರ ಬೀಡಿ ಒಯ್ದಿದ್ದೆ. ದಾರಿಯಲ್ಲಿ ತೀರುವುದೆಂದೆನಿಸಿದಾಗ ಟಪಾಲಿನಲ್ಲಿ ತರಿಸಿದ್ದೆ. ನನಗೆ ಮಂಗಳೂರಿನ ಬೀಡಿಯೆ ಆಗಬೇಕಿತ್ತು."–ಎಂದು ಹೇಳುವಾಗ ನಾನು ಸಿಗರೇಟು ಪೆಟ್ಟಿಗೆ ಹಿಡಿದು ಕುಳಿತದ್ದು ನೋಡಿ, "ನೀವು ಎಳೆಯಿರಿ. ಈಗ ನನಗೆ ಏನೂ ತೊಂದರೆಯಾಗುವುದಿಲ್ಲ. ಹೂಂ ನೀವು ಹತ್ತಿಸಿರಿ"–ಎಂದು ತಾವು ಬಿಟ್ಟದ್ದು ತಿರುಪತಿ ಬೆಟ್ಟದಲ್ಲಿ–ಎಂದರು. "ತಮ್ಮನ ಮಗಳು, ಅಳಿಯ ಕಾರು

ತಂದು ನಿಲ್ಲಿಸಿ "ಹೊರಡಿ" ಎಂದರು. ಮುಪ್ಪಿನ ಕಾಲಕ್ಕೆ ಒಂದು ಯಾತ್ರೆ ಎಂದು ಹೊರಟೆ. ತಿರುಪತಿ ತಲುಪಿ ತಿರುಮಲೆ ಏರುವಾಗ ಸಂಕಟವಾಯಿತು. ತಿಮ್ಮಪ್ಪನಿಗೆ ಸವಾಲು ಹಾಕಿ, "ಅಯ್ಯಾ ಈ ಸೆರೆಯಿಂದ ಬಿಡಿಸು; ಸಾಕು"–ಎಂದೆ ! ದಾಸರು ದೇವರೊಡನೆ ಹಟದಿಂದ ಹಾಡಿಲ್ಲವೇ–ಹಾಗೆ ದೇವರಲ್ಲಿ ಹಟಮಾಡಿ ಹಚ್ಚಿದ ಬೀಡಿ ಎಸೆದೆ. ಪುಷ್ಕರಣೀ ಸ್ನಾನ ಮಾಡಿ ಪೂಜೆ ಒಪ್ಪಿಸಿ ಬಿಡಾರಕ್ಕೆ ಬಂದು ಊಟಮಾಡಿದಾಗ-ಹೂಂ. ಸಂಜೆಗೆ ನಿಮ್ಮದು ಊಟವೊ–ಫಲಾಹಾರವೊ" ಎಂದು ಕೇಳಿದರು. "ಫಲಾಹಾರ"ವೆಂದೆ. "ಆಗ ಕಾಫಿ ಬೇಕೋ ಹಾಲು ಆದೀತೊ?"-ಎಂದರು. "ಯಾವುದೂ ಆದೀತು" ಎಂದೆ. "ಸಂಕೋಚವೇಕೆ? ಯಾವುದು ಹೇಳಿ"–ಎಂದರು. "ಹಾಲು ಆದೀತು" ಎಂದೆ. ಅವರಲ್ಲಿ ಕೃತ್ರಿಮತೆಯಿಲ್ಲ. ನಮ್ಮ ಕೃತ್ರಿಮತೆ ನಡೆಯುವುದಿಲ್ಲ.

ಮತ್ತೆ ಬೀಡಿಗೆ ಬಂದರು: "54 ವರುಷದ ಅಭ್ಯಾಸ ನೋಡಿ, ಬಹು ಸಂಕಟವಾಯಿತು. ನನ್ನ ಅಳಿಯ ಧೂಮಪಾನಿ. ಹೊರಗೆ ಹೋಗಿ ಎಳೆದರು. ಮಗಳು, "ದೊಡ್ಡಪ್ಪ, ಯಾಕೆ ಸಂಕಟಪಡುತ್ತೀರಿ?" ಎಂದಳು. "ಇಲ್ಲ; ಇದು ದೇವರಿಗೆ ನನ್ನ ಸವಾಲು"—ಎಂದೆ. ಅಂದು ಬಿಟ್ಟವನು ಬಿಟ್ಟೇ ಬಿಟ್ಟೆ ಸ್ವಾಮೀ—" ಎಂದು ಮುಗಿಸಿದರು.

ಮುಂದೆ ಸಾಹಿತಿಗಳ ಪ್ರಾಯದ ಮಾತು ಬಂತು. "ಈಗ ನಾನೇ ಹಿರಿಯ ನೋಡಿ ಸಾಹಿತಿಗಳ ಬಳಗಕ್ಕೆ" ಎಂದರು. ಮುಂದುವರಿದು, "ಶ್ರೀಯವರು ಬಂದಾಗ ನಾನು ಹಿರಿಯ ನಿಮಗೆ, ನಾನು ಹೇಳುತ್ತೇನೆ. ನೀವು ಬೆಂಗಳೂರಿಗೇಕೆ ಬರಬಾರದು?–ಎಂದರು. ಆಗ ನಾನು ನಿಮಗಿಂತ ಹತ್ತು ತಿಂಗಳಿಗೆ ಕಿರಿಯ ಎಂದು ಹೇಳಿ ಕೈಮುಗಿಸಿಕೊಂಡೆ ಸ್ವಾಮೀ"—ಎಂದರು. ನನಗೆ ಆಲೂರ ವೆಂಕಟರಾಯರ ನೆನಪಾಗಿ ಕೇಳಿದೆ. ಆಗ, "ಹೌದು ಸ್ವಾಮೀ. ಅವರು ನನಗೆ ಹಿರಿಯರು. ಮುಂಬಯಿಯ ಸಮ್ಮೇಳನಕ್ಕೆ ನಾನು ಅಧ್ಯಕ್ಷನಾದಾಗ ವೇದಿಕೆಯನ್ನೇರುವ ಮೊದಲು ಆಲೂರವರಿಗೆ ಬಾಗಿ ನಮಸ್ಕರಿಸಿದ್ದೆ. ಅವರು ಹಿರಿಯರು"–ಎಂದು ಗಲ್ಲ ಮುಟ್ಟಿಕೊಂಡು ಆಲೂರವರ ಕ್ಷೇಮ ವಿಚಾರಿಸಿದರು.

ನಾನು ಅವರ ಆರೋಗ್ಯ ವಿಚಾರಿಸಿದೆ. "ನೋಡುತ್ತಿರುವಿರಲ್ಲ. ಶಾನುಭೋಗರ ಮನೆ ನನ್ನ ತಾಯಮನೆ. ಅಲ್ಲಿಯವರೆಗೆ ಹೋಗಿ ಬರುತ್ತೇನೆ. ಅಲ್ಲಿರುವ ಬಳಗದವರು 'ಯಾಕೆ ಬರುತ್ತೀರಿ? ನಾವೇ ಬಂದು ಕಾಣುತ್ತೇವೆ' ಎನ್ನುತ್ತಾರೆ. 'ನಾನು ನಿಮ್ಮ ಮನೆಯ ವರೆಗೆ ನಡೆದು ಬರಬಲ್ಲೆ—ಎಂಬುದನ್ನು ತೋರಿಸುವುದಕ್ಕೆ ಬರುತ್ತೇನೆ' ಎಂದವರಿಗೆ ಹೇಳುತ್ತೇನೆ" ಎಂದರು. ಆ ಮೇಲೆ ತಮ್ಮ ದೈನಿಕ ಎರಡು ಸ್ನಾನದ ಒಂದು ಊಟದ ಕಥೆ ಹೇಳಿದರು.

ದೀಪ ಹಚ್ಚಿಯಾಗಿತ್ತು. ಮಂಜೇಶ್ವರಕ್ಕೆ ಮಿಂಚಿನ ದೀಪ ಬಂದಿಲ್ಲ. "ನಾನು ಇದೇ ದೀಪದಲ್ಲಿ ಓದುತ್ತೇನೆ. ಆದರೆ ರಾತ್ರಿ ಓದುವುದು ಕಡಿಮೆ. ಬೇಗ ನಿದ್ರೆ ಬೀಳುವುದಿಲ್ಲ. ಭಗವಚ್ಚಿಂತನೆಗೆ ಬೆಳಕೇಕೆ? ಆದರೂ ಹಾಸಿಗೆಯ ಸುತ್ತ ನಾಲ್ಕು ಪುಸ್ತಕ ಇರುತ್ತವೆ. ನನಗೆ ಪ್ರಾಯವಾಯಿತು ಎಂಬುದು ನನ್ನ ಮರೆವಿನ ಕಾರಣದಿಂದ ನನಗೆ ಕ್ಷಣಕ್ಷಣಕ್ಕೆ ನೆನಪಾಗುತ್ತದೆ. ಒಂದು ಟಿಪ್ಪಣಿ ಪುಸ್ತಕ ಬದಿಗೆ ಇದ್ದೇ ಇರಬೇಕು. ಒಮ್ಮೆ ಬಂದ ಭಾವನೆ ಮತ್ತೆ ಕಳೆದೇ ಹೋದರೆ?" ಎಂದರು. ತಮ್ಮ ತಲೆಯನ್ನು ಮುಟ್ಟಿ ಹೇಳಿದರು. "ನಾನೀಗ ಇದನ್ನು ನಂಬುವುದಿಲ್ಲ. ಆಧಾರಕ್ಕೆ ಪುಸ್ತಕವೇ ಬೇಕು" ಎಂದು.

ತಾರೀಕು ಹೇಳದೆ, ಆಧಾರ ಗ್ರಂಥದ ಪುಟ ತಿಳಿಸದೆ ಮಾತೇ ಆಡದ ಅಗಾಧ ಜ್ಞಾಪಕಶಕ್ತಿ ಅವರದು. ಅದು ಕುಂದಿತೆ ಎಂದುಕೊಂಡೆ. ತಡೆಯಿಲ್ಲದ ಮಾತುಗಳು ! ತುಟಿಗೆ ಚಪ್ಪರವಾಗಿರುವ ಬಿಳಿ ಮೀಸೆ–ಹೊಳೆಯುವ ಚಿಲುಮೆಯಂಥ ಕಣ್ಣುಗಳು. ನಾನು ಸರಿದಾಡುವುದನ್ನು ಕಂಡು ದಿಂಬನ್ನು ನನಗೇ ಕೊಟ್ಟು ಸೆಟೆದು ಕುಳಿತುಕೊಂಡರು. ನಿಮಗಿರಲಿ ಎಂದರೆ "ನನಗೆ ಅಂಥದೇನೂ ಬೇಕಾಗುವುದಿಲ್ಲ" ವೆಂದರು. ಬಳಗದ ಮಾತು ಮಧ್ಯೆ ಮಧ್ಯೆ ಬರುವುದೇ. "ಮಂಗಳೂರಿನಲ್ಲಿ ನನಗೆ ಹತ್ತೆಂಟು ಮನೆಗಳು. ನಾನು ಇಷ್ಟು ಹತ್ತಿರದ ಆ ನಗರಕ್ಕೆ ಹೋಗುವುದು ವರುಷಕ್ಕೆ ಒಂದೆರಡೇ ಬಾರಿ. ಆಗ ಎಲ್ಲಾ ಮನೆಗಳನ್ನು ನಡೆದು ಸುತ್ತುತ್ತಿದ್ದೆ. ಇಂದಾದರೆ ವಾಹನ ಬೇಕು." ಎನ್ನುತ್ತ ಕಳೆದ ಬಾರಿ ಮಂಗಳೂರಿಗೆ ಹೋದ ತಾರೀಖು ಹೇಳಿದರು. !

ಮನದಲ್ಲೇ ಕೊರೆಯುತ್ತಿದ್ದ ಭಾಷಾ ಪ್ರಾಂತಗಳ ವಿಂಗಡಣೆಯ ಮಾತನ್ನೆತ್ತಿದೆ. ಮುದುಕನ ಸಂಕಟ ಉಮ್ಮಳಿಸಿತು "ಪಣಿಕ್ಕರ್ ರಾಕ್ಷಸನ ಕೈಚಳಕ ಸ್ವಾಮೀ. ನನ್ನನ್ನು ಕೇರಳಕ್ಕೆ ನೂಕಿದ. ನೆಹ್ರೂ ದೊಡ್ಡ ಮನುಷ್ಯನಾದರೂ ಕುರುಡನಂತೆ ಒಪ್ಪಿಗೆಯಿತ್ತರಲ್ಲವೋ ! ಚಂದ್ರಗಿರಿ ಹೊಳೆಯೀಚೆಯ ನಾಡು ಅದೆಂತು ಕೇರಳವಾದೀತು? ನನ್ನ ಮಟ್ಟಿಗೆ ನನ್ನ ವಿಳಾಸ: "ಎಂ. ಗೋವಿಂದ ಪೈ. ಮಂಜೇಶ್ವರ. ಸೌತ್ ಕೆನರಾ" ಎಂದೇ ಇದೆ. ಹೊರದೇಶಗಳಿಗಾದರೆ ಮಾತ್ರ "ಸೌತ್ ಇಂಡಿಯಾ" ಎಂದು ಬರೆಯುತ್ತೇನೆ. ನನ್ನ ಕಾಗದಗಳು ತಿರುಗಿ ಬರಲಿ–ನನಗೆ ಚಿಂತೆಯಿಲ್ಲ. "ಮಂಜೇಶ್ವರ" ಎಂದೆಂದಿಗೂ ದಕ್ಷಿಣ ಕನ್ನಡ ಜಿಲ್ಲೆ. ನಾನಿರುವಷ್ಟು ಕಾಲ ಹೀಗೇ ಬರೆಯುವುದು. ಎಂದು ಕೂಗಿಕೊಂಡರು." ನಾನಾಗ ಮೂಕನಾಗಿದ್ದೆ. ಪೈಗಳ ಭಾವಾವೇಶದ ಮುಂದೆ ಯಾವ ಮಾತು ಆಡುವುದು? ಆ ಮಹಾ ಜೀವದ ಶಾಂತಿ ಇಡಿ ನಾಡಿನ ಶಾಂತಿ. ಆ ಜೀವಕ್ಕಾದ ಸಂಕಟ ನಾಡಿನ ಸಂಕಟವಾಗಬೇಕು. ಆದರೆ ನಮ್ಮ ದೇಶದ ರಾಜಕೀಯಕ್ಕೆ ಯಾವುದು ಗಣನೆಗೆ ಬಂದೀತು.?

ನಾನು ಪೈಗಳನ್ನು ಈ ಸಂಕಟದ ಮಾತಿನಿಂದ ಬೇರೆ ಮಾತಿಗೆ ತರಬೇಕೆಂದು ಕೊಂಡು ಅವರ ಲೇಖನಗಳ ಸಮಗ್ರ ಸಂಪುಟವೊಂದರ ಮಾತು ತೆಗೆದೆ. ಕಳೆದ ಬಾರಿ ಬದಿಯಡ್ಕದಲ್ಲಿ ಕಿಞ್ಞಣ್ಣ ರೈಗಳ ಮುಂದೆ ಈ ಪ್ರಸ್ತಾಪ ಮಾಡಿದ್ದೆ. ಕಿಞ್ಞಣ್ಣ ಎಂದು ನಾನು ಹೇಳುವ ಸ್ವರೋಚ್ಚಾರ ಪೈಗಳಿಗೆ ಸಮ್ಮತವಾಗಲಿಲ್ಲ. ಅದನ್ನು ಹಟದಿಂದ ತಿದ್ದಿದರು. ಕಿಞ್ಞಣ್ಣ ಎಂದರೆ ಚಿಕ್ಕಣ್ಣ ಎಂದು ಅರ್ಥ ಹೇಳಿದರು. ಆ ತುಳು ಪದವನ್ನು ನಾವು ತಿಳಿಯದೆ ಅವರೆದುರು ತಪ್ಪಾಗಿ ಉಚ್ಚರಿಸುವುದನ್ನು ಅವರು ಸಹಿಸರು.

"ಸಮಗ್ರ ಸಂಪುಟದ ಗೊಡವೆ ನನಗಿಲ್ಲ. ಆದರೆ ನನ್ನ ಪದ್ಯಗಳನ್ನು ರಾಜರತ್ನಂ ಪ್ರಕಟಿಸುವವರಿದ್ದಾರೆ. ಬಾಳಿಗರು ಗೊಲ್ಗೊಥಾ, ವೈಶಾಖಿ ಪುನ: ಮುದ್ರಿಸಿದ್ದಾರೆ. ಧಾರವಾಡದ ಕನ್ನಡ ರಿಸರ್ಚಿನವರು ಮೂರು ಉಪನ್ಯಾಸಗಳನ್ನು ಪುನರಪಿ ಮುದ್ರಿಸಲು ಕೇಳಿದ್ದಾರೆ. ಹಿಂದೆ ನನ್ನ ಲೇಖನಗಳ ಸ್ಥಳಪ್ರತಿ ಇಟ್ಟುಕೊಳ್ಳದೆ ಒದ್ದಾಡಿದೆ. ಆಗಲಾದರೆ ನೆನಪು ಸಹಜವಾಗಿತ್ತು. ಇಂದು ನನ್ನ ನೆನಪಿನ ಬಗ್ಗೆ ನನಗೇ

ನಚ್ಚಿಕೆ ಉಳಿದಿಲ್ಲ. ಅದರಿಂದ ಒಂದು ಕಾರ್ಬನ್ ಪ್ರತಿ ನನ್ನಲ್ಲಿ ಇಟ್ಟುಕೊಳ್ಳುತ್ತಿದ್ದೇನೆ. ನನ್ನ ಬರಹಗಳೆಲ್ಲ ನನ್ನಲ್ಲಿ ಸುರಕ್ಷಿತವಾಗಿವೆ. ಮತ್ತಾವ ಚಿಂತೆ?" ಎಂದರು. ಮುಂದುವರಿದು "ಕರ್ನಾಟಕ ಯುನಿವರ್ಸಿಟಿಯವರು ಸಾಹಿತ್ಯ ಚರಿತ್ರೆ ಪ್ರಕಟಿಸುತ್ತಾರಂತೆ. ನನ್ನ ಪಾಲಿನದನ್ನು ನಾನು ಅಂದೇ ಬರೆದು ಕಳಿಸಿದ್ದೇನೆ. ಆದರೆ ಅವರು ಪಾರ್ತಿಸುಬ್ಬನ ಕಾಲ-ದೇಶಗಳನ್ನು ಯಾರಿಗೆ ಕೇಳಿದ್ದಾರೋ–ತಿಳಿಯದು. ಅವನ ಊರು ಕುಂಬಳೆ—ಇಲ್ಲಿಂದ ಹನ್ನೊಂದು ಮೈಲು. ಕಾರಂತರು ಇತ್ತೀಚೆ ಅವನನ್ನು ತುಳುನಾಡಿನಿಂದ ಕಲ್ಯಾಣಪುರದ ಹೊಳೆಯಾಚೆ ಬ್ರಹ್ಮಾವರಕ್ಕೆ ಒಯ್ದಿದ್ದಾರೆ. ನನಗೂ ಅವರಿಗೂ ಈ ಬಗೆಗೆ ಸಾಕಷ್ಟು ವಾದ–ಪ್ರತಿವಾದವಾಗಿದೆ. ಈಗ ಅವರು ಇಲ್ಲಿ ಬರುವುದು ಕಡಿಮೆ" ಎಂದರು.

"ಕಾಂಚನ ಮೃಗ ಬೆನ್ನಟ್ಟಿ ರಾಮ ಹೋದ. ಮಾರೀಚ ಸಾಯುವಾಗ 'ಹಾ ಲಕ್ಷ್ಮಣಾ ! ಹಾ ಸೀತಾ !' ಎಂದು ಕೂಗಿದ. ಸೀತೆ ಒತ್ತಾಯ ಪಡಿಸಿ ರಾಮನ ನೆರವಿಗೆ ಲಕ್ಷ್ಮಣನನ್ನು ಕಳಿಸಿದಳು. ಆಗ ಲಕ್ಷ್ಮಣ ತಮ್ಮ ಪರ್ಣಶಾಲೆಯ ಮುಂದೆ ಕೆಲವು ಗೆರೆಗಳನ್ನೆಳೆದು ಸೀತಾಮಾತೆಗೆ ಈ ಗೆರೆ ದಾಟಬೇಡವೆಂದು ಹೇಳಿ ಹೋದ. ರಾವಣ ಸಂನ್ಯಾಸಿ ಗೆರೆದಾಟಿ ಒಳಗೆ ಬರಲಾರ. ಸೀತೆ ಗೆರೆ ದಾಟಿ ಹೋಗಿ ಭಿಕ್ಷೆ ನೀಡಿ ಸಿಕ್ಕಿಬಿದ್ದಳು. ಅಲ್ಲವೇ ಸ್ವಾಮೀ?"-ಎಂದವರನ್ನು ಕೇಳಿದೆ. ಹೌದು–ಎಂದರು. "ನೀವೇ ಒಂದು ಕಥಾ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತ "ಭೂಜಾತೆ ಲಕ್ಷ್ಮಣನ ಗೆರೆ ದಾಟದಿದ್ದಿಲ್ಲವಾದರೆ ರಾಮಾಯಣವೆಲ್ಲಿಂದ?" ಎಂದು–ಬರೆದಿದ್ದೀರಿ" ಎಂದೆ. ಹೌದು-ಎಂದರು. "ವಾಲ್ಮೀಕಿ ರಾಮಾಯಣದಲ್ಲಿ ಸೀತೆ ರಾವಣನನ್ನು ಒಳಗೆ ಕರೆದು ಆಸನವಿತ್ತು ಕೂಡಿಸಿ. ಅರ್ಘ್ಯಪಾದ್ಯವಿತ್ತು ಸತ್ಕರಿಸುತ್ತಾಳೆ. ಗಡ್ಡೆಗೆಣಸನ್ನು ಕೊಡುತ್ತಾಳೆ. ಪತಿ, ಮೈದುನ ಬೇಟೆಗೆ ಹೋಗಿದ್ದಾರೆ. ಅವರು ಬರುವವರೆಗೆ ನಿಂತರೆ ಅಡಿಗೆ ಮಾಡಿ ಹಾಕುತ್ತೇನೆ ಎನ್ನುತ್ತಾಳೆ. ಲಕ್ಷ್ಮಣನ ಗೆರೆಗಳ ಸುದ್ದಿಯೇ ವಾಲ್ಮೀಕಿ ಕೃತಿಯಲ್ಲಿಲ್ಲವಲ್ಲ ! ಈ ಗೆರೆಗಳಿಗೆ ಯಾವುದು ಆಧಾರ?" ಎಂದೆ. ನೀವು ವಾಲ್ಮೀಕಿಯ ಕೃತಿಯನ್ನು ನೋಡಿದ್ದೀರಾ—ಎಂದರು. ಹೌದು; ಅದರ ಅನುವಾದಗಳನ್ನು ಮಾತ್ರ ನೋಡಿದ್ದೇನೆ ಎಂದೆ. ರಾಜಗೋಪಾಲಾಚಾರ್ಯರ ರಾಮಾಯಣದಲ್ಲಿಲ್ಲ ಎಂದೆ. ಅದು ಬಿಡಿ—ಅದು ಯಥಾವತ್ತಾದ ಅನುವಾದವಾಗಿರಲಾರದು ಎಂದರು. ಅಳಸಿಂಗಾಚಾರ್ಯರ ಪ್ರತಿ ನೋಡಿದೆ ಎಂದೆ. ಅದು ಸರಿ ಎಂದರು. "ಅದರಲ್ಲಿಲ್ಲ. ನೀವು ಬರೆದಿದ್ದೀರಿ-ಆಧಾರವೆಲ್ಲಿಂದ?" ಎಂದೆ. "ತುಳಸೀ ರಾಮಾಯಣ ನೋಡಬೇಕು. ಇಲ್ಲೇ ಇದೆ. ಸಂಸ್ಕೃತ ರಾಮಾಯಣದ ಪ್ರತಿಯೂ ಇದೆ. ನನಗೆ ಚಿಕ್ಕಂದಿನಿಂದ ನೋಡಿದ ಯಕ್ಷಗಾನವೇ ಆಧಾರ. ಲಕ್ಷ್ಮಣನಾದವ ಬಿಲ್ಲಿನ ತುದಿಯಿಂದ ಗೆರೆ ಎಳೆದದ್ದು ಇನ್ನೂ ನನ್ನ ಕಣ್ಣಿಗೆ ಕಟ್ಟಿದೆ. ಅದು ಬಹುಶ: ಪಾರ್ತಿಸುಬ್ಬನ ಪಂಚವಟಿ ಪ್ರಸಂಗ" ಎಂದರು. "ನಮ್ಮ ಕಡೆಗೆ ಪಾರ್ತಿಸುಬ್ಬನಿಲ್ಲವಾದರೂ ರಾಮಾಯಣದ ಜನಜನಿತವಾದ ಕಥೆಯಲ್ಲಿ ಲಕ್ಷ್ಮಣನ ಗೆರೆಗಳಿವೆ. ಆದರೆ ಇದು ಎಲ್ಲಿಂದ–ಎಂದು ನನಗೀಗ ಯೋಚನೆ ತೊಡಗಿದೆ. ಪಾರ್ತಿಸುಬ್ಬನಿಗಾದರೂ ಒಂದು ಆಧಾರವೆಂಬುದು ಬೇಕಲ್ಲ," ಎಂದೆ. "ಇದು ಹೇಗೆ? ಒಳ್ಳೇ ಕಷ್ಟಕ್ಕೆ ಬಂತಲ್ಲ"–ಎಂದು ತಲೆ ತುರಿಸಿಕೊಂಡರು. "ತೊರವೆ ಪ್ರತಿ ನೋಡಿದ್ದೀರಾ"–ಎಂದರು. ಇಲ್ಲವೆಂದೆ. "ದಯವಿಟ್ಟು ನೋಡಿ. ನನ್ನಲ್ಲಿದ್ದ ತೊರವೆ ಯಾರೋ ಎತ್ತಿಕೊಂಡು ಹೋದವರು ಮರಳಿ ಕೊಡಲಿಲ್ಲ." ಎಂದರು. ಒಂದು ಹಾಳೆ ತೆಗೆದುಕೊಂಡು ನನ್ನೊಡನಾದ ಸಂಭಾಷಣೆಯನ್ನು ಬರೆದುಕೊಂಡರು.

ಫಲಾಹಾರ ಬಂದಿತ್ತು. ಕುಳಿತಲ್ಲೇ ಮುಗಿಸಿದೆವು.

ನನ್ನ ಸಮಯವಾಗುತ್ತ ಬಂತು. ಮೂರು ಗಂಟೆಗಳಿಂದ ಅವರೊಡನಿದ್ದವನು ಹೊರಡಬೇಕಲ್ಲಾ–ಎಂದು ಏನೋ ಮಬ್ಬು ಬಂದಂತಾಯಿತು.

ನಾನು ಹೊರಡಲನುವಾದೆ. ಅವರ ಆಳು ಹೋಗಿಬಿಟ್ಟಿದ್ದ. 'ನೀವಿಂದೇ ಹೋಗುವವರೆಂದು ನಾನವನಿಗೆ ತಿಳಿಸಲಿಲ್ಲವಲ್ಲ !' ಎಂದರು. ಮಾತಿನೆಡೆಯಲ್ಲಿ ಅದೆಲ್ಲಿಯ ಲಕ್ಷ್ಯ? "ಯಾಕೆ? ನಾನು ಸ್ಟೇಶನ್ನಿಗೆ ಹೋಗಲಾರೆನೆ? ತಿಂಗಳ ಬೆಳಕು ಇದೆ" ಎಂದೆ.

ಮತ್ತೇನು ಬರೆಯುತ್ತೀರಿ ಎಂದೆ. ಕೃಷ್ಣನ ಕಡೆಯ ದಿನಗಳ ಕಾವ್ಯ ಅವರು ಬರೆಯುವುದಾಗಿ ಹಿಂದೆ ಹೇಳಿದ್ದರು. ಕ್ರಿಸ್ತ ಬುದ್ಧರದನ್ನು ಬರೆದಾಗಿದೆ ಎನ್ನಬೇಕೆಂದಿದ್ದೆ. ಆದರೆ ಮತ್ತವರ ಮಾತಿನ ಹೊನಲಲ್ಲಿ ಅದನ್ನು ಸೂಚಿಸುವುದಾಗಲೇ ಇಲ್ಲ. "ಉಡುಪಿಯ ಐತಿಹ್ಯದ ಬಗ್ಗೆ ನಾನೇ ಬರೆಯಬೇಕೆಂದು ಹರಿದಾಸಭಟ್ಟರು ಅವಸರ ಮಾಡುತ್ತಿದ್ದಾರೆ. ನನಗೆ ನನ್ನ ನಿತ್ಯ ಕ್ರಮಗಳಿವೆ. ಬರುವವರ ಸಂಗಡ ಮಾತಾಡಬೇಕು. ಬಂದ ಕಾಗದಕ್ಕೆ ಉತ್ತರಿಸಬೇಕು. ಮತ್ತೆ ನನ್ನ ಓದು ಇರುತ್ತದೆ. ಮಾಳಿಗೆ ಏರಲಾಗದೆಂದು ನನ್ನ ತಮ್ಮನ ಮಗ ಪರದೇಶಕ್ಕೆ ಹೊರತು ನಿಂತಾಗ ಬಿನ್ನಹ ಮಾಡಿ ಆಣೆ ಇಟ್ಟುಕೊಂಡ. ನನ್ನ ಜೀವ–ಪುಸ್ತಕಗಳಿರುವುದೇ ಅಲ್ಲಿ. ಏನಾದರೂ ಅಲ್ಲೇ ಆಗಲಿ ಎಂದು ನನ್ನ ಮಾಳಿಗೆಗೆ ಹೋಗುತ್ತಲೇ ಇದ್ದೇನೆ. ಹೇಳಿ ಬರೆಸುವುದು ನನ್ನ ಕ್ರಮವಲ್ಲ. ಹಾಗೆ ನನಗಾರೂ ಇಲ್ಲ. ಆದಾಗ ಬರುತ್ತೇನೆ. "ನಡೆದು ಬಂದ ದಾರಿ"ಗೆ ಒತ್ತಾಯಗಳು ಬರುತ್ತಿದ್ದಾಗ ನನಗೆ ಸೌಖ್ಯವಿದ್ದಿಲ್ಲ. ಏನೋ ಒಂದು ಪದ್ಯ ಬರೆದದ್ದು ಹುಡುಕಿ ಕಳಿಸಿದೆ. ಕವನಿಸುವುದು ನನ್ನ ಜೀವದ ಕ್ರಮವಾಗಿದೆ. ಟಿಪ್ಪಣಿಗಳನ್ನು ಮಾಡಿಕೊಂಡಿರುತ್ತೇನೆ. ಬೇಕೆಂದಾಗ ಬರೆದುಬಿಡುತ್ತೇನೆ," ಎಂದರು.

ಕಳೆದ ಬಾರಿ ನನ್ನೊಡನೆ ಏ.ಜಿ.ತಿರುಮಲೇಶ್ವರ ಭಟ್ಟ ಬಂದಿದ್ದರು. ಈಗವರು ಇಲ್ಲವಾದರೆಂದು ನೆನಪಿಸಿದೆ. ಹೌದು; ಆ ಹೆಸರಿನವರು ಮೂವರು ಇದ್ದಾರೆ. ಒಬ್ಬರು ಇಲ್ಲವಾದರು–ಒಳ್ಳೆಯ ಮನುಷ್ಯ ! ಎಂದರು. ನಾನು ಹೊರಟು ಬಾಗಿ ನಮಸ್ಕರಿಸಹೋದಾಗ ಅಷ್ಟೆಲ್ಲ ಬೇಡವೆಂದರು. ದೇವರು ಒಳ್ಳೆಯದು ಮಾಡಲಿ ಎಂದು ಹರಸಿದರು. ಮನೆಯ ಮುಂದಣ ಬೀದಿಯ ವರೆಗೆ ಬಂದು ಒಬ್ಬರೇ ಹೋಗಬೇಕಾಯಿತೆಂದು ಮರುಗಿದರು. "ಎಷ್ಟು ದೂರ? ನಿಮಗೆ ರಾತ್ರಿಯಾಯಿತು. ವಿಶ್ರಮಿಸಿ"-ಎಂದು ಹೇಳಿ ಹೊರಟೆ. ಇಷ್ಟು ಬೇಗ ನಿದ್ರಿಸಬೇಕಾದ ನಿಲುವುದಿಲ್ಲವೆನ್ನುತ್ತ ಮರಳಿದರು.

ನಾನು ಹೊರಟವನು ಪೈಗಳ ಮಾತಿನದೇ ತಂದ್ರಿಯಲ್ಲಿ ಸಾಗಿದ್ದೆ. ಈ ಸಲವೂ ಬಂದು ಕಾಣದಿದ್ದರೆ ಎಷ್ಟು ನಷ್ಟವಾಗುತ್ತಿತ್ತು ಎಂದು ಪಡೆದ ಶ್ರೀಮಂತಿಕೆ ಕೇಳುತ್ತಿತ್ತು.

ಗೋವಿಂದ ಪೈ ! ಕನ್ನಡದ ಆಸ್ತಿ. ಜ್ಞಾನ ದೀಪ ! ಜ್ಞಾಪಕ ದೀಪ ! ಅದೆಲ್ಲಕ್ಕಿಂತ ಅವರಲ್ಲಿಯ ಮಾನವೀಯತೆ ನಿತ್ಯನೂತನವಾದದ್ದು. ಒಂದಿಷ್ಟೂ ಆಡಂಬರವಿಲ್ಲ; ಕೃತ್ರಿಮತೆಯಿಲ್ಲ. ಅದೊಂದು ಪೂರ್ಣ ಕುಂಭ.

* * * * *

ಧಾರವಾಡಕ್ಕೆ ತಲುಪಿದೆನೋ ಇಲ್ಲವೋ ಪೈಗಳ ಕಾಗದ! ವಾಲ್ಮೀಕಿ ರಾಮಾಯಣದ ಕುಂಭಕೋಣದ ಪ್ರತಿ (1905)ಓದಿ ಅರಣ್ಯಕಾಂಡದ ಎರಡು ಶ್ಲೋಕ, ಅರ್ಥ, ವಿವರಿಸಿದ್ದರು. ತುಲಸೀರಾಮಾಯಣದ (ಶ್ರೀ ರಾಮಚರಿತ ಮಾನಸ) ಎರಡು ಶ್ಲೋಕಗಳು; ಅರ್ಥ. ಆದರೆ ಅವರೆಡರಲ್ಲೂ ಲಕ್ಷ್ಮಣನ ಗೆರೆಗಳಿಲ್ಲ. "ನನ್ನ ಮಟ್ಟಿಗೆ ನಾನು ಹಿಂದೆ ನೋಡಿದ ಯಕ್ಷಗಾನವೇ ಆಧಾರ. ಬಹುಶ: ಪಾರ್ತಿ ಸುಬ್ಬನ ಪಂಚವಟಿ ಪ್ರಸಂಗದಲ್ಲಿ ಕಂಡಂತೆ ಮಸುಕು ನೆನಪು. ಆದರೆ ಖಂಡಿತ ಹೇಳಲಾರೆ!"

ತೊರವೆ ರಾಮಾಯಣವಲ್ಲೂ ಗೆರೆ ಕಾಣದ ಒಂದು ನುಡಿ ಎತ್ತಿಕೊಂಡು ಅವರಿಗೆ ತಿಳಿಸಿದ್ದೇನೆ.

ಅವರಿಗೆ ಇದೊಂದು ಚಿಂತೆಯಾಗಬಾರದಲ ಎನಿಸುತ್ತದೆ. ಆದರೆ ಚಿಂತೆ-ಚಿಂತನಗಳಲ್ಲಿ ಆ ಮಹಾಜೀವ ವ್ಯತ್ಯಾಸವನ್ನೇ ಕಾಣಲಾರರು.



# ಶ್ರೀ ಎಂ. ಗೋವಿಂದ ಪೈ

ಶ್ರೀ ಜಿ. ಪಿ. ರಾಜರತ್ನಂ

"ಎಂ" ಎಂದರೆ, ಬಹುದಿವಸದವರೆಗೂ "ಮಂಜೇಶ್ವರ" ಎಂದು ನಾನು ತಿಳಿದುಕೊಂಡಿದ್ದೆ. ಆದರೆ "ಎಂ" ಎಂದರೆ "ಮಂಗಳೂರು" ಶ್ರೀ ಗೋವಿಂದ ಪೈಗಳ ತಂದೆಯ ಹಿರಿಯರ ಊರು. ಅದರಂತೆಯೇ ಮಂಜೇಶ್ವರ ಶ್ರೀ ಪೈಗಳ ತಾಯಿಯ ಊರು. ಹೀಗಾಗಿ ಇವರು ಹುಟ್ಟಿದ್ದು ಮಂಗಳೂರಲ್ಲಿ, ಬೆಳೆದದ್ದು ಬಹುಪಾಲು ಮಂಜೇಶ್ವರದಲ್ಲಿ, ಈಗಂತೂ ವಾಸ ಅಲ್ಲೇ. ದಕ್ಷಿಣ ಕನ್ನಡ ಜಿಲ್ಲೆಯ ಭೌಗೋಲಿಕ ಐತಿಹಾಸಿಕ ನಕ್ಷೆಯಲ್ಲಿ ಈ ಮಂಜೇಶ್ವರದ ಸ್ಥಾನಮಾನ ಏನುಂಟೋ ನಾನರಿಯೆ; ಆದರೆ ಸಮಸ್ತ ಕನ್ನಡ ನಾಡಿನ ಸಾಹಿತ್ಯಕ ನಕ್ಷೆಯಲ್ಲಿ ಮಂಜೇಶ್ವರದ ಸ್ಥಾನ ಮಾನ ಸ್ವಯಂಸ್ಪಷ್ಟ: ಶ್ರೀ ಗೋವಿಂದ ಪೈಗಳ ವಾಸಸ್ಥಾನವೆಂದು.

ಶ್ರೀ ಗೋವಿಂದ ಪೈ ಈ ಶತಮಾನದ ಕನ್ನಡ ಸಾಹಿತ್ಯ ಆಚಾರ್ಯರುಗಳಲ್ಲಿ ಅಗ್ರ ಪಂಕ್ತಿಗೆ ಸೇರಿದವರು. ತಮ್ಮ ಪಾಂಡಿತ್ಯದಿಂದ, ತಮ್ಮ ಸಂಶೋಧನೆಯಿಂದ, ತಮ್ಮ ಕಾವ್ಯಕರ್ಮದಿಂದ, ತಮ್ಮ "ಸುಕವಿಯಶೋನಿರ್ಮತ್ಸರತೆ"ಯಿಂದ, ತಮ್ಮ ನಯವಿನಯಗಳಿಂದ, ತಮ್ಮ ಸರಳತೆಯಿಂದ, ತಮ್ಮ ಸೌಜನ್ಯದಿಂದ, ತಮ್ಮ ಸಹಜತೆಯಿಂದ, ತಮ್ಮ ರಸಿಕತೆಯಿಂದ, ತಮ್ಮ ಆತಿಥ್ಯದಿಂದ, ತಮ್ಮ ಬಹುಮುಖವಾದ ಆದರದಿಂದ ದೃಗ್ಗೋಚರವಾಗುವ ವ್ಯಕ್ತಿಯೇ ಆಗಲಿ, ಶ್ರವಣಗೋಚರವಾಗುವ ವಾಣಿಯೇ ಆಗಲಿ ಅದೇ ಮೊದಲ ಪಂಕ್ತಿಯ ತುಂಬು ಗಾಂಭೀರ್ಯ; ಅದೇ ಮೇರೆಯರಿತ ಮಾನವವರ್ತನೆ.

ಶ್ರೀ ಗೋವಿಂದ ಪೈಗಳ ಹೆಸರು ಕೇಳುವ ಪುಣ್ಯ ಬಂಧ ನನಗಾದದ್ದು ಇಂದಿಗೆ ಇಪ್ಪತ್ತು ವರ್ಷಗಳ ಹಿಂದೆ 1930ರಲ್ಲಿ, ನಾನು ಎಂ.ಎ.,ಗೆ ಓದುತ್ತಿದ್ದಾಗ. ಕನ್ನಡ ಕವಿಗಳ ಕಾಲವಿಚಾರ ಮಾಡಬೇಕಾಗಿ ಬಂದಾಗಲೆಲ್ಲಾ "ಆರ್.ನರಸಿಂಹಾಚಾರ್ಯರು ಹೀಗೆ ಹೇಳುತ್ತಾರೆ... ಡಾಕ್ಟರ್ ವೆಂಕಟಸುಬ್ಬಯ್ಯನವರು ಹೀಗೆ ಹೇಳುತ್ತಾರೆ. ಶ್ರೀ ಗೋವಿಂದ ಪೈಗಳು ಹೀಗೆ ಹೇಳುತ್ತಾರೆ." ಎಂಬ ಮಾತನ್ನು ನಮ್ಮ ಗುರುಗಳಿಂದ ಕೇಳಿ ಕೇಳಿ ಶ್ರೀ ಪೈಗಳನ್ನು ಕಾಣಬೇಕೆಂದು ಒಂದು ತರದ ಹಂಬಲವಿತ್ತು. ಮೂವತ್ತರಲ್ಲಿ ಕನ್ನಡ ಸಾಹಿತ್ಯ ಸಮ್ಮೇಲನ ಮೈಸೂರಿನಲ್ಲಿ ನಡೆದಾಗ ಆಗಲಿ, ಮೂವತ್ತೊಂದರಲ್ಲಿ ಮಡಿಕೇರಿಯಲ್ಲಿ ನಡೆದಾಗ ಆಗಲಿ, ಅವರು ಬರಬಹುದು, ಅವರನ್ನು ಕಾಣಬಹುದು. ಎಂದುಕೊಂಡಿದ್ದೆ. ಆದರೆ ಅವರು ಅಂಥ ಕಡೆ ಅಗಪಡುವವರಲ್ಲವೆಂಬುದು ಅನಂತರ ಕಂಡುಬಂದು ದೃಢಪಟ್ಟಿತು. ಅನಂತರ "ಕಾಲಲಬ್ಧಿ" ಎನ್ನಬೇಕು–ಮೂವತ್ತೆರಡರ ಮೇ ತಿಂಗಳು, ಪಂಜೆ ಮಂಗೇಶರಾಯರು ಏರ್ಪಡಿಸಿದ್ದ ಒಂದು ಶಿಕ್ಷಕರ ಸಮ್ಮೇಳನಕ್ಕೆ ಹೋಗಿದ್ದಾಗ, ಮಂಗಳೂರಿನಿಂದ ಹತ್ತು ಮೈಲಿ ದೂರದ ಮಂಜೇಶ್ವರಕ್ಕೂ ಹೋಗಿ ಬರುವುದಾಯಿತು.

ಮಂಜೇಶ್ವರವನ್ನು ರೈಲಿನಲ್ಲಿ ಮುಟ್ಟಿದಾಗ–ಊರಿನ ದಾರಿ ನನಗೆ ತಿಳಿಯದು, ಪೈಗಳಿಗಾದರೂ ನಾನು ಬರುವೆನೆಂದು ತಿಳಿಸಿರಲಿಲ್ಲ-ಓರ್ವ ಬಸ್ ನಡೆಸುವವನು ಅವರ ಹೆಸರನ್ನು ನಾನು ಹೇಳಿದ ಕೂಡಲೇ, ತಾನೇ ನನ್ನನ್ನು ಬಸ್ಸಿನಲ್ಲಿ ಕೂರಿಸಿಕೊಂಡು ಹೋಗಿ ಅವರ ಮನೆಬಾಗಿಲು ಮುಟ್ಟಿಸಿದ. ಆಗ ಇನ್ನೂ ಬೆಳಕು ಹರಿದಿರಲಿಲ್ಲ. ಮುಂದಿನ ಪಡಸಾಲೆಯ ಮೇಲಿನ ಮರದ ಮಂಚದಲ್ಲಿ ಕುಳಿತು, ಅನತಿ ದೂರದಿಂದ ಕೇಳಿಬರುತ್ತಿದ್ದ ಸಮುದ್ರದ ಸುಪ್ರಭಾತ ಗೀತದಲ್ಲಿ ಮೈಮರೆತಿದ್ದೆ. ಅದು ಎಷ್ಟು ಹೊತ್ತು ಹಾಗಿದ್ದೆನೋ, ಇದ್ದಕ್ಕಿದ್ದಂತೆ ಬೆನ್ನ ಹಿಂದೆ ಯಾರೋ "ಯಾರದು?" ಎಂದು ಗರ್ಜಿಸಿದಹಾಗಾಯಿತು.

ಎದ್ದು ಹಿಂದಿರುಗಿ ನೋಡಿದರೆ ಮನೆಯ ಬಾಗಿಲಿನ ಎಡಗಡೆಯ ಕಿಟಿಕಿಯಲ್ಲಿ ಯಾರೋ ! ಕಂಕುಳಲ್ಲಿ ಒಂದು ಹಾಸಿಗೆಯ ಸುರಳಿ ! ಶ್ರೀ ಗೋವಿಂದ ಪೈಗಳು ಇದ್ದಾರೆಯೆ? ಎಂದೆ. ಬಾಗಿಲು ತೆರೆಯಿತು. ಬಂದವರ ಕಂಕುಳಲ್ಲಿ ಸುರುಳಿಯಿರಲಿಲ್ಲ. ಮುಖಕ್ಕೆ ಮೊದಲು ಆ ತುಟಿ ಮುಚ್ಚುವ ಮೀಸೆ. ಮತ್ತೆ ಆ ಮಾಟದ ಮೂಗು. ಆಗ ತಾನೇ ನಿದ್ರೆಯ ಭಾರವನ್ನು ಒದರುತ್ತಿದ್ದ ಕಣ್ಣು, ತಲೆಯ ಮೇಲಿನ ಆ ಕೆದರುಕೂದಲು ! ಅವರೇ ಗೋವಿಂದ ಪೈ ಅಂತೆ ! ನಾನು ಯಾರು? ಎಲ್ಲಿಂದ? ಪರಿಚಯ ಹೇಳಿಕೊಂಡೆ. ಬರಿಕೈಯಲ್ಲಿ ದೊಡ್ಡವರ ಬಳಿ ಹೋಗಬಾರದೆಂದು, ನನ್ನ ಆಗತಾನೇ ಪ್ರಕಟವಾಗಿದ್ದ "ಚೀನಾ ದೇಶದ ಬೌದ್ಧ ಯಾತ್ರಿಕರು" ಕೊಂಡುಹೋಗಿದ್ದೆ. ಅವನ್ನು ಹೆಸರು ಹೇಳಿಕೊಂಡು ಒಪ್ಪಿಸಿದೆ. ಅವರ ಪ್ರೀತಿಯ ನೋಟ ಅದೇ ಒಂದು ಆಲಿಂಗನದ ಹಾಗಿತ್ತು. ಮತ್ತೆ ಮುಂದಿನ ಪ್ರಶ್ನೆ. "ಪ್ರಾತರ್ವಿಧಿಗಳೆಲ್ಲ ಮುಗಿದಿವೆಯೋ?" ತಾವೂ ಮುಗಿಸಿ ಬಂದುಬಿಡುವರಂತೆ. ನಾನು ಕುಳಿತುಕೊಳ್ಳಬಹುದಂತೆ. ಅದೇ ಉಸಿರಿನಲ್ಲೇ. ಹೊರಟವರು ಹಾಗೇ ಹಿಂತಿರುಗಿ, "ಕಾಫಿಯೋ? ಟೀಯೋ? ಮಧ್ಯಾಹ್ನ ಊಟಕ್ಕೆ ನಿಲ್ಲುವುದು ಹೌದು ತಾನೇ? ಕೂತಿರಬಹುದು. ಇದೇ ಈಗ ಬಂದೆ."

ಇದಾದಮೇಲೆ ಎಷ್ಟೋ ಸಲ ಮಂಜೇಶ್ವರಕ್ಕೆ ಹೋಗಿದ್ದೇನೆ. ಮೊದಲು ಅದೇ ಪ್ರಶ್ನೆ "ಕಾಫಿಯೋ? ಟೀಯೋ?" ನನ್ನದು ಒಂದೇ ಉತ್ತರ "ಯಾವುದಾದರೂ ಆಯ್ತು" ಕಡೆಗೆ ಬರುವುದು ಕಾಫಿಯೂ ಮತ್ತು ಟೀಯೂ.

ಮರದ ಮಂಚದ ಮೇಲೆ ಹಾಗೇ ಕುಳಿತೆ. ಒಂಟಿಯಾದವನ ಜೊತೆಗೆ ಯಾರೆಂದು ಯಾರೂ ಹೇಳಲಿಲ್ಲ, ನಾನೂ ಕೇಳಲಿಲ್ಲ. ಆದರೂ ಅವರು ಬರುವವರೆಗೂ ನನಗೆ ಜೊತೆಯಾಗಿತ್ತು-ಅದೃಶ್ಯವಾದ ಸಮುದ್ರದ ಸುವ್ಯಕ್ತವಾದ ಘೋಷ.

ಸ್ವಲ್ಪ ವೇಳೆಯಲ್ಲಿಯೇ ಅವರು ಬಂದರು. ಸಜ್ಜಿಗೆ, ಪೂರಿ, ಕಾಫಿ, ಟೀ; ಆ ಕಡೆ ಹೇಳುವ ಹಾಗೆ "ಗಡದ್ದು !" ಮಧ್ಯೆ ಮಧ್ಯೆ ಅದು ಇದು ಮಾತುಕತೆ-ಮೈಸೂರಿನಲ್ಲಿ ಅವರ ವಿಷಯ, ಇವರ ವಿಷಯ, ಕೆಲವು ತಿಂಗಳ ಹಿಂದಿನ ಮಡಿಕೇರಿಯ ಸಮ್ಮೇಳನದ ವಿಷಯ, ನಡುನಡುವೆ ನನ್ನ ವಿಷಯ. ಒಂದು ನಿಮಿಷವಾದರೂ ಆ ಬಾಯಿಗೆ ವಿರಾಮವಿದ್ದರೆ !

ಅನಂತರ ಮನೆಯ ಬಾಗಿಲು ದಾಟಿ, ಮೆಟ್ಟಲು ಹತ್ತಿ, ಮೇಲಿನ ಅಟ್ಟಕ್ಕೆ ಕರೆದುಕೊಂಡು ಹೋದರು. ಒಳ್ಳೇ ಓರಣವಾದ ಅಚ್ಚುಕಟ್ಟಿನ ಪುಸ್ತಕಮಯವಾದ ಕೊಠಡಿ. ಕುಳಿತುಕೊಳ್ಳಲು ಎದುರುಗೋಡೆಯ ಬಳಿ ಹಾಸು. ಬೆನ್ನಿಗೆ ಒರಗು. ಅವರ ಮೇಲೆ, ಗೋಡೆಯಲ್ಲಿ ತಾಯಿ ಕೃಷ್ಣಾಬಾಯಿಯವರ ಪತ-ಪೈಗಳ ಸ್ವರ್ಗಸ್ಥ ಸತಿಯರದು. ಪಶ್ಚಿಮದ ಕಡೆಗೆ ತೆರೆದ ದೊಡ್ಡ ಕಿಟಿಕಿಗಳು; ಕಿಟಿಕಿಯಾಚೆ ಕಣ್ಣನ್ನು ಕೊಳ್ಳುವ ನೀಲಸಮುದ್ರ.

ಕೆಳಗಡೆ ಉಪಾಹಾರಕ್ಕೆ ನಾವು ಕುಳಿತಿದ್ದ ಆ ಜಗಲಿಯ ಮಂಚದ ಆವರಣಕ್ಕೂ ಈಗ ಇಲ್ಲಿ ಈ ಶಾರದಾ ಸದನದ ಈ ಶಾಂತಿಯ ಆವರಣಕ್ಕೂ ಎಷ್ಟು ವ್ಯತ್ಯಾಸವಿದ್ದಿತೋ ಅಷ್ಟೇ ವ್ಯತ್ಯಾಸ ಅಲ್ಲಿ ನಡೆದ ಮಾತುಕತೆಗೂ ಇಲ್ಲಿ ಆಡಿದ ಮಾತುಕತೆಗೂ ಅಲ್ಲಿ ವ್ಯಕ್ತಿಗಳ ಪ್ರಸ್ತಾಪ, ಇಲ್ಲಿ ವಸ್ತುಗಳ ವಿಷಯಗಳ ಪ್ರಸ್ತಾಪ.

ಯಾವುದೋ ರಾಶಿಯಿಂದ ಅದೇ ವರ್ಷದ "ಜಯಕರ್ನಾಟಕ" ಎಳೆದುಕೊಂಡರು. ಅದರಲ್ಲಿ ಪ್ರಕಟವಾಗಿದ್ದ ನನ್ನ "ಗಂಡುಗೊಡಲಿ"ಯನ್ನು ಬಿಚ್ಚಿದರು. ಅಲ್ಲಲ್ಲೆ ಅಲ್ಲಲ್ಲೆ ಊದಾಬಣ್ಣ ಶಾಯಿಯಿಂದ ಏನೇನೋ ಗುರುತು ಮಾಡಿದ್ದುದು ಕಂಡೆ. ಇದು ಹೇಗೆ ಎಂದು ಕೇಳಿದರು ಪುರಾಣದ ಪ್ರಕರಣವನ್ನ; ಇದು ಹೇಗೆ ಸಾಧು ಎಂದರು, ವ್ಯಾಕರಣದ ರೂಪವನ್ನ; ಇದು ಹೇಗೆ, ಏಕೆ ಎಂದರು, ಛಂದಸ್ಸಿನ ಚ್ಯುತಿಯನ್ನ: ನಾನು ಆಗ ಇನ್ನೂ ಬರವಣಿಗೆಯಲ್ಲಿ "ಬಚ್ಚ." ಅವರು ಅಲ್ಲಿನ ಲೋಪದೋಷಗಳನ್ನು ತೆಗೆದು ಆಡಿದ ರೀತಿ. ನನ್ನ ಕುಂದುಗಳನ್ನು ನಾನೇ ಕಂಡುಕೊಂಡಂತೆ ಇತ್ತೇ ಹೊರತು. ಅನ್ಯರು ಯಾರೋ ಎತ್ತಿ ತೋರಿಸಿದಂತೆ ಅಸಮಾಧಾನವಾಗಲಿಲ್ಲ. ಅನಂತರ ಬುದ್ಧನ ಮಾತು ಬಂತು. ಹುಯೆನ್‌ತ್ಸಾಂಗನ ಮಾತು ಬಂತು, ಅವನು ಕಂಡ ಕರ್ನಾಟಕದ ಮಾತು ಬಂತು. ಏನೇನೇ ಬಂದರೂ ನನಗೆ ಅವರ ಮಾತು ಕೇಳಬೇಕೆನ್ನಿಸಿತ್ತೇ ಅಲ್ಲದೆ, ನನಗೆ ನಾನು ಮಾತನಾಡಲು ಸರಕು ಸಾಲದಾಗಿತ್ತು.

ಅನಂತರ ಮನೆಯಲ್ಲಿ ಎಷ್ಟೋ ಸಲ ಊಟಮಾಡಿದ್ದೇನೆ. ಈ ಮೊದಲ ಸಲ ಊಟಮಾಡಿದೆನೋ ಮಾಡದೆಯೇ ಮಂಗಳೂರಿಗೆ ಮರಳಿದೆನೋ ಸರಿಯಾಗಿ ಜ್ಞಾಪಕವಿಲ್ಲ. ಆದರೆ ಪ್ರತಿಸಲ. ನಾನು ಅಲ್ಲಿ ಊಟಕ್ಕೆ ಕುಳಿತಾಗಲೂ ದಿನದ ಅನ್ನಾದಿಗಳ ಜೊತೆಗೆ ಹಲವಾದರೂ ವ್ಯಂಜನಗಳಿರುತ್ತವೆ. ಆ ರೀತಿಯ ಅಡುಗೆ ನಮ್ಮಲ್ಲಿ ಹೊಸದು. ಊಟ ಮಾಡುವಾಗ. ನಮಗೆ ಹೊಸದೆನಿಸುವ ವಸ್ತುವಿನ ಹೆಸರನ್ನು ಅವರು ಹೇಳಬೇಕು; ನಿಮ್ಮ ಕಡೆ ಇಂಥದು ಉಂಟೋ, ಇದ್ದರೆ ಅದಕ್ಕೆ ಏನು ಹೆಸರು, ಈ ಹೆಸರು ಹೇಗೆ ಬಂತು ಇತ್ಯಾದಿ ಕೇಳಬೇಕು. ಅಟ್ಟದ ಮೇಲೆ ಅಡುಗೆ ಮಾಡಿದ ಸಂಶೋಧನೆಯ ಶಿಕ್ಷಿತ ಮನಸ್ಸು ಅಡುಗೆಯ ಮನೆಗೂ ಊಟದ ಮನೆಗೂ ಬಿಡಿಸಿಕೊಂಡು ಬರಬೇಕು. ಅದು ಗೋವಿಂದ ಪೈ ! ಆದರೆ ನನಗೇನೋ ಅವರ ಸಂಶೋಧನೆಯ ಅನೇಕ ಮಾತುಕತೆ ಈ ಕಿವಿಯಿಂದ ಬಂದು ಆ ಕಿವಿಯಿಂದ ಹೋಗಿಬಿಟ್ಟಿದ್ದರೂ ಅದರ ಇತರ ಮಾತುಕತೆಗಳ ಕರ್ಣರಸಾಯನವೂ ಆಗಾಗ್ಗೆ ಸವಿದ ಜಿಹ್ವಾರಸಾಯನವೂ ಮನಸ್ಸಿಗೆ ಅಂಟಿದೆ, ಮೈಗೆ ಅಂಟಿದೆ.

ಹೀಗೆ ಮೊದಲನೆಯ ಸಲ ಒಬ್ಬ ಪ್ರಮುಖ ಸಂಶೋಧಕರ ಮುಖವನ್ನು ನೋಡಿ ಬರಬೇಕೆಂದು ಹೋದವನು ಅವರದೇ ಒಂದು ಕಾವ್ಯರಸಿಕತೆಯ, ಅವರದೇ ಒಂದು ಸರಸ ಸಂಭಾಷಣೆಯ, ಅವರದೇ ಒಂದು ಅತಿಥಿ ಸಂತರ್ಪಣೆಯ ಮತ್ತೂ ಮೂರು ಮುಖಗಳನ್ನು ಕಂಡು ಬಂದೆ.

ಇಂಥವರನ್ನು ಒಮ್ಮೆ ಕಂಡರೆ ಮತ್ತೂ ಕಾಣಬೇಕೆನ್ನಿಸುವುದು ಸಹಜ. ಅದರಿಂದಾಗಿ. ಪುತ್ತೂರಿನಲ್ಲಿ ಶ್ರೀ ಕಾರಂತರು ಏರ್ಪಡಿಸುತ್ತಿದ್ದ ನವರಾತ್ರಿ ಸಾಹಿತ್ಯೋತ್ಸವಕ್ಕೆ ವರ್ಷೇ ವರ್ಷೇ ಕರೆ ಬಂದ ಕೂಡಲೇ ಒಪ್ಪಿಕೊಂಡು. ಆ ನೆಪದಲ್ಲಿ ಮಂಜೇಶ್ವರಕ್ಕೂ ಹೋಗಿ, ಸ್ವಲ್ಪ ಹೊತ್ತು ಅಲ್ಲಿದ್ದು ಮನಸ್ಸಿನ ಮಾಲಿನ್ಯವನ್ನು ಕಳೆದುಕೊಂಡು ಬರುತ್ತಿದ್ದೆ. ಮೂವತ್ತಾರರಲ್ಲಿ ಮಾತ್ರ. ನಾನೇ ಮಂಗಳೂರಿನಲ್ಲಿ ಒಂದು ವರ್ಷಕ್ಕೆ ಮೇಲ್ಪಟ್ಟು ಬಿಡಾರ ಮಾಡಿದ್ದೆನಾಗಿ, ಆಗಾಗ್ಗೆ ಅವರನ್ನು ಕಾಣುವ ಸುಯೋಗ ನನಗೆ ಲಭಿಸಿತು. ಅತಿ ಪರಿಚಯದಿಂದ ಅವಜ್ಞೆಯುಂಟಾಗುತ್ತದೆಂದು ಯಾರೋ ಸಂಸ್ಕೃತರು ಹೇಳಿದ್ದಾರಂತೆ. ಆದರೆ ಗೋವಿಂದ ಪೈಗಳ ಅತಿಪರಿಚಯದಿಂದ ಅವರ ಪರಿಧಿಯ ಅಪಾರದ ಗೋಚರವಾಗುವುದಕ್ಕಿಂತ ಹೆಚ್ಚಾಗಿ. ಮುಖ್ಯವಾಗಿ, ನಮ್ಮ ಸ್ವಜ್ಞಪ್ತಿಯ ಶೋಧನೆಗೆ ಸದವಕಾಶ ಒದಗುತ್ತದೆ. "ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ."

ಮೂವತ್ತಾರರವರೆಗೂ ನನ್ನ ಕಲ್ಪನೆಯ ಗೋವಿಂದ ಪೈ ಅದ್ಭುತ ವಿದ್ವಾಂಸರು. ಅತಿಶಯ ಸಂಶೋಧಕರು ಎಂದಷ್ಟೆ. ಅವರು ಕೂಡ ಕವನ ಬರೆಯುತ್ತಾರೆಂದು ದೂರದಿಂದ ಕೇಳಿದ್ದೆನಾದರೂ. ಮೂವತ್ತೆರಡರ ವೇಳೆಗೆ ಅವರ "ಗಿಳಿವಿಂಡು" ಸಂಗ್ರಹವನ್ನು ಒಯ್ದು ಓದಲು ಯತ್ನಿಸಿದ್ದೆನಾದರೂ. ಅವರ ಕವನಗಳ ಬಗೆಗೆ ನಾನು ಕರಗಿರಲಿಲ್ಲ. ಅವರು ನಮ್ಮ ಪಾಲಿಗೆ ದುರ್ಗಮರೆಂದೇ ನಾನು ನನ್ನ ದೂರದಲ್ಲಿ. ಆದರೆ ಮೂವತ್ತಾರರಲ್ಲಿ. ಅವರ "ಗೊಲ್ಗೊಥಾ" ಪುಸ್ತಕ ರೂಪದಲ್ಲಿ ಬಂದಾಗ. ಅದನ್ನು ಅವರಿಂದ ಓದಿಸಿ ಕೇಳಿದಾಗ. ನಾನು ಕವಿ ಗೋವಿಂದ ಪೈಗಳಿಗೂ ನನ್ನನ್ನು ಮಾರಿಕೊಂಡವನಾದೆ. "ಗೊಲ್ಗೊಥಾ" ದ ಆ ದ್ರವಾಗ್ನಿಯ ಬೆಳಕು ನನಗೆ "ಗಿಳಿವಿಂಡು" ದರ್ಶನಕ್ಕೆ ಸಹಾಯಕವಾಯಿತು.

ಮೂವತ್ತಾರರವರೆಗೆ ಗೋವಿಂದ ಪೈಗಳಿಗೆ ಇಂಗ್ಲೀಷು. ಕನ್ನಡ. ಸಂಸ್ಕೃತ ಮೂರು ಭಾಷೆಗಳಲ್ಲಿ ಪಾಂಡಿತ್ಯವೆಂಬುದು ಗೊತ್ತಾಗಿತ್ತು. ಆದರೆ. ಆಗ-ಕಂಡೆ-ಅವರಿಗೆ ಪಾಲಿಯ ಪರಿಚಯವೂ ಉಂಟು. ಪರಿಚಯ ಎಂದು ಏಕೆ ಹೇಳುತ್ತೇನೆ. ಎಂದರೆ. ಹಲವು ವರ್ಷಗಳಿಂದೆ ಅವರಿಗೆ ಪಾಲಿಯಲ್ಲಿ ಓದಲೂ ಬರೆಯಲೂ ಬರುತ್ತಿತ್ತಂತೆ ! ಸಿಂಹಳದ ಬೌದ್ಧ ಭಿಕ್ಷುಗಳೊಡನೆ ಪಾಲಿಯಲ್ಲೇ ಪತ್ರವ್ಯವಹಾರ ಮಾಡುತ್ತಿದ್ದರಂತೆ. "ಸಿಗಾಲೋವಾದ ಸುತ್ತಂತ"ವನ್ನು ಮೊದಲ ಬಾರಿಗೆ ಮೂಲಪಾಲಿಯಿಂದ ಕನ್ನಡಿಸಿದವರು ಇವರು ! ಈಚೆಗೆ ಬಳಕೆ ಕಡಿಮೆಯಾಗಿ ಪರಿಚಯದಷ್ಟರಲ್ಲೇ ನಿಂತಿದೆ. ಹಿಂದಿಯಂತೂ ಹೇಗೂ ಸರಿ: ತುಳು. ಕೊಂಕಣಿ. ಮಲೆಯಾಳಿ ಅವರವೇ. ಅವರ ನೆರೆಯವೇ; ಜೊತೆಗೆ ತಮಿಳು, ಬಂಗಾಳಿ, ಗುಜರಾತಿ ಮುಂತಾದ ಇನ್ನು ಹಲವುಗಳ "ವರ್ಕಿಂಗ್ ನಾಲೆಡ್ಜ್" (ಎಷ್ಟು ಬೇಕೋ ಅಷ್ಟು ಮಟ್ಟಿನ ತಿಳಿವಳಿಕೆ) ಇದ್ದಂ

ತಿದೆ. ಆದರೆ ಈ ಸಂಪತ್ತಿಯೆಲ್ಲಾ ಎಂದೂ ವಾಚ್ಯವಾಗಿ ಪ್ರದರ್ಶನವಾದದ್ದಿಲ್ಲ. ಅವರ ಸಂಶೋಧನೆಯ ಲೇಖನಗಳಲ್ಲಿಯೂ ಅವರ ಕವಿತೆಗಳಲ್ಲಿಯೂ ಅವರ ಮಾತುಗಳಲ್ಲಿಯೂ ಅದನ್ನು ವ್ಯಂಗವಾಗಿ ಕಂಡು ಗುರುತಿಸಿಕೊಳ್ಳಬಹುದು.

ಇದೇ ಗುಣ, ಹೀಗೆ ಪ್ರದರ್ಶನವಿಲ್ಲದೆ ಎಷ್ಟು ಅಗತ್ಯವೋ ಅಷ್ಟೇ ಸಕಾಲದಲ್ಲಿ ಪ್ರಕಟವಾಗುವ ಗುಣ, ಅವರ ಮಾತುಕತೆಯಲ್ಲಿ ಲೇಖನ ಕವಿತೆಗಳಲ್ಲಿ ಮಾತ್ರವಲ್ಲದೆ ಅವರ ಕಾಗದ ಪತ್ರಗಳಲ್ಲಿಯೂ, ಅದೇ ನಿಖರವಾದ ಉದ್ದೇಶ, ಅದೇ ಅತ್ತ ಇತ್ತ ಹೋಗದ ಬರೆಹ ಅದೇ ಓದುಗರ ಗಮನವನ್ನೆಳೆಯುವ ಅಡಿಗೀಟುಗಳು-ಅದೇ ಸಂಶೋಧನೆಯ ಲೇಖ ಬರೆಯುವ ಮನಸ್ಸೇ, ಬರೆಯುವ ಅದೇ ಕೈಯೇ—ಪತ್ರಬರೆಯುವಾಗಲೂ. ನಾವು ಸಾಮಾನ್ಯವಾಗಿ ಒಂದು ಕವರಿನಲ್ಲಿ ತುಂಬುವ ವಿಷಯವನ್ನು ಅವರು ಒಂದು ಕಾರ್ಡಿನಲ್ಲಿ ತುಂಬುತ್ತಾರೆ. ಆದರೂ ಅಕ್ಷರ ಕಲಸಿರುವುದಿಲ್ಲ. ಅಡಿ ಗೀಟು ಬೀಳಬೇಕಾದ ಕಡೆ ತಪ್ಪಿರುವುದಿಲ್ಲ. ಸಂಸ್ಕೃತದ, ಕನ್ನಡದ ಪದ ಇಂಗ್ಲಿಷಿನಲ್ಲಿ ಬರೆದರೆ, ಆ ಅಕ್ಷರಗಳ ಮೇಲೆ ಕೆಳಗೆ ಸ್ವರವರ್ಣ ಸೂಚಕಗಳನ್ನೂ ಮರೆತಿರುವುದಿಲ್ಲ. ಆ ಪದದ ಪಕ್ಕದಲ್ಲಿ ಆವರಣಗಳೊಳಗೆ ನಾಗರಿಯೊಳಗೋ ಕನ್ನಡದಲ್ಲೋ ಆ ಪದವನ್ನು ಬರೆದು ಸ್ಪಷ್ಟ ಪಡಿಸದೆ ಬಿಡುವುದಿಲ್ಲ. ತಾರೀಕು ಸ್ಥಳಗಳಿಲ್ಲದೆ ಕಾರ್ಡಿನ ಬಲತುದಿ ಕಾಣೆ. ಇಷ್ಟೆಲ್ಲಾ ಶಿಸ್ತಿನ ಬರೆವಣಿಗೆ ಕಾರ್ಡಿನ ಮೈಯನ್ನು ಆವರಿಸಿಕೊಂಡಿದ್ದರೂ ಅದರ ತುದಿಯ ಆರಂಭದಲ್ಲೂ ಕೊನೆಯ ಮುಕ್ತಾಯದಲ್ಲೂ ಆತ್ಮೀಯತೆಯ ಸೂಚನೆಗಳಿಗೆ ಚ್ಯುತಿ ಬಂದಿಲ್ಲ. ಚೀನಾ ದೇಶದ ಟಾಓ ತತ್ತ್ವವನ್ನು ಅರಗಿಸಿಕೊಂಡವರ ವಿಷಯದಲ್ಲಿ ಹೇಳುವಂತೆ—ಇಂಥವರು ತಪ್ಪುಮಾಡಬೇಕೆಂದರೂ ತಪ್ಪಾಗುವುದು ಸಾಧ್ಯವಿಲ್ಲ, ಎಂಬಂತೆ ಇರುತ್ತದೆ, ಇವರ ಬರೆವಣಿಗೆ.

"ನಡೆವರೆಡಹದೆ ಕುಳಿತರೆಡಹುವರೆ?" ಎಂದ ರಾಘವಾಂಕ. ಶ್ರೀ ಗೋವಿಂದ ಪೈಗಳು ಕೂಡ ಎಡವಲು ಸಾಧ್ಯವಾಗಿದೆ ಎಂದು ಅವರ ಸಂಶೋಧನೆಯ ಕೃತಿಗಳನ್ನು ನೋಡಿರುವವರು ಬಲ್ಲರು. ಕೆಲವು ಕಡೆ ಏನೋ ಪ್ರಥಮಾಭಿನಿವೇಶದಿಂದ ಏನೋ ಅರ್ಥ ಮಾಡಿಕೊಂಡು , ಅನುಮಾನಿಸಿದುದು ಅಡ್ಡಹಾದಿ ತಿರುಗಿದ್ದುಂಟು. ಆದರೆ ಅಂಥ ಕಡೆ ಇದು ಹೀಗಲ್ಲ ಎಂದು ತೋರಿ ಬಂದಾಗ, ಅದು ಹಾಗಲ್ಲವೆಂದು ಒಪ್ಪಿಕೊಂಡು, ಸರಿಯೆನಿಸಿದ ಸಿದ್ಧಾಂತವನ್ನು ತಾವೇ ಮತ್ತೆ ರೂಢಿಸಿಕೊಂಡದ್ದೂ ಉಂಟು. ಆದರೆ ತಮ್ಮ ಸಾಕ್ಷಿಗಳೂ ಆಧಾರಗಳೂ, ಅನುಮಾನಗಳೂ ಯುಕ್ತಿಯುಕ್ತವಲ್ಲವೆಂದು ಯಾರೇ ಏನೇ ವಾದಿಸಿದರೂ, ತಮ್ಮ ಮನಸ್ಸಿಗೆ ಅದು ದೃಢಪಡದಿದ್ದರೆ ತಮ್ಮ ಸಿದ್ಧಾಂತವನ್ನೇ ತಾವು ಏಕೈಕರಾಗಿಯೂ ಎತ್ತಿ ಹಿಡಿದದ್ದುಂಟು.

ಇಂತಹ ದೃಢ ವಿಶ್ವಾಸ, ನಿಃಸ್ಪೃಹತೆ, ಅದಕ್ಕೆ ಮೂಲವಾದ ಘನ ಪಾಂಡಿತ್ಯ ಇರುವ ಕಾರಣದಿಂದಲೇ ಯಾವ ಕವಿಯನ್ನು ಕುರಿತು ಒಂದು ಪ್ರಶಸ್ತಿ ಗ್ರಂಥ ಹೊರಡಿಸಬೇಕಾಯಿತು—ಪೈಗಳಿಲ್ಲದೆ ಎರಡನೆಯ ಹೆಜ್ಜೆಯಿಲ್ಲ; ಅಷ್ಟೇ ಏಕೆ ಯಾವ ಕನ್ನಡ ಪತ್ರಿಕೆಯ ವಿಶೇಷ ಸಂಚಿಕೆ ಗೌರವದಿಂದ ಬರಬೇಕಾದರೂ—ಅದರಲ್ಲಿ ಪೈಗಳದೊಂದು ಕವನವೋ, ಅನೇಕ ಸಲ ಸಂಶೋಧನೆಯ ಲೇಖನವೋ ಇದ್ದೇ ತೀರಬೇಕು. ಇಷ್ಟೆಲ್ಲಾ ಆದರೂ, ಎಲ್ಲರೂ ಕೇಳುವವರೇ ಆದರೂ, ಇವರು ಕೂಡ ಕೇಳಿದವರಿಗೆ ಇಲ್ಲ ಎನ್ನದವರಾದರೂ, ಈ ದಾನ ಗುಣದ ಪ್ರಕರಣದಲ್ಲಿ ಅವರಿಗಾಗಿರುವ ವಿಚಿತ್ರ ಅನುಭವಗಳನ್ನು "ಬರಹಗಾರನ ಹಣೆಯಬರಹ" ("ಮುತ್ತು ಹವಳ" ಎಂಬ ಸಂಗ್ರಹದಲ್ಲಿ) ಎಂಬ ಲೇಖನದಲ್ಲಿ ಕಾಣಬಹುದು. ಆದರೂ ಇಂದಿಗೂ ಅವರ ಕೊಡುಗೈ ಹಿಂದೆ ನಿಂತಿಲ್ಲ ಎಂದರೆ ಅದು ಅವರ ಕ್ಷಮಾಗುಣವೆನ್ನಬೇಕು. ಅದು ಅವರ ವಿದ್ಯಾಪ್ರೇಮವೆನ್ನಬೇಕು. ಅದು ಅವರ ಸಹಜವತ್ಸಲತೆ ಎನ್ನಬೇಕು. ಅವರನ್ನು ಹುಟ್ಟು ಆಶಾವಾದಿಯೆನ್ನಬೇಕು.

ಕೆಲವು ಸಲ ಹೀಗೆ ಪ್ರಕಟವಾದ ಕವಿತೆಗಳನ್ನೋ ಲೇಖನಗಳನ್ನೋ ಅಚ್ಚಿನ ಪ್ರತಿ ತೆಗೆಸಿ. ಇಷ್ಟಮಿತ್ರರು ಕೇಳಿದರೆ, ಕಳಿಸುವುದುಂಟು. ನಮ್ಮ ನಾಡಿನ ಅಚ್ಚು ಪದ್ಧತಿಯಲ್ಲಿ ತಪ್ಪುಗಳು ನಿಲ್ಲುವುದೂ ನಲಿಯುವುದೂ ವಿರಳವೇನಲ್ಲವಲ್ಲ ! ಪೈಗಳು ತಾವು ಕಳಿಸುವ ಪ್ರತಿಯಲ್ಲಿ ಸಾಮಾನ್ಯವಾಗಿ ಇದ್ದೇ ತೀರುವ ಅಚ್ಚಿನ ತಪ್ಪುಗಳನ್ನೆಲ್ಲಾ ಜೋಪಾನವಾಗಿ ತಿದ್ದಿ. ಆ ಮೇಲೆಯೇ ಕಳಿಸುತ್ತಾರೆ. ತಪ್ಪಿದ್ದ ಅಕ್ಷರದ ಮೇಲೆ ತಿದ್ದುವುದು ಮಾತ್ರವಲ್ಲ ಆ ತಿದ್ದಿದ ಅಕ್ಷರವಿರುವ ಪಂಕ್ತಿಯ ಪಕ್ಕದಲ್ಲೇ ಆ ಲೇಖನದ ಅಂಚಿನಲ್ಲಿ ಅದನ್ನೇ ಮತ್ತೊಮ್ಮೆ ತಿದ್ದಿ ತೋರಿಸುತ್ತಾರೆ. ಇದು ಶಾಸ್ತ್ರ ವ್ಯಾಸಂಗದಿಂದ ಶಿಸ್ತಾಗಿ ಬಂದಿರುವ ನಿಷ್ಕೃಷ್ಟತೆಯ ಪ್ರೀತಿ.

ಅವರಿಂದ ಏನಾದರೂ ಕಾಗದ ಬಂದರೆ ನಾವು ಕೆಲವರು ಒಮ್ಮೊಮ್ಮೆ ಕೂಡಲೇ ಉತ್ತರ ಬರೆಯುತ್ತೇವೆ, ಕೆಲವು ಸಲ ಬರೆಯಲು ತಡವಾಗುತ್ತದೆ, ಕೆಲವು ಸಲ ಬರೆಯದೆಯೇ ಪ್ರಮಾದವಾಗಿಯೂ ಬಿಡುತ್ತದೆ. ಅದು ನಮ್ಮ ಜಾಯಮಾನ. ಅಶಿಸ್ತಿನ ಅಥವಾ ಅಕ್ರಮ ಶಿಸ್ತಿನ ಫಲ. ಆದರೆ ಪೈಗಳೋ, ತಪ್ಪದೆ. ಏನಾದರೂ ಬರೆದರೆ ಅಥವಾ ಕಳಿಸಿದರೆ ಆ ಕೂಡಲೇ ತಲಪಿತೆಂದು ಒಂದು ಪಂಕ್ತಿ. ಕಳಿಸಿದ್ದನ್ನು ಇನ್ನೇನು? ಬರೆದುದು ಏನಾದರೂ-ಕುರಿತು ಬರೆಯಬೇಕೆಂದರೆ, ಹಾಗೆಂದೇ ಕೇಳಿಕೊಂಡರೆ, ಬರೆದವರು ಹಿರಿಯರಾಗಲಿ, ಕಿರಿಯರೇ ಆಗಲಿ (ಅದೆಲ್ಲಿ ವಿರಾಮ ಸಿಕ್ಕುತ್ತದೋ ಅವರಿಗೆ ! ಅದೇನು ಸೈರಣೆಯೋ ಅವರದು !) ಬಂದುದನ್ನು ಆಮೂಲಾಗ್ರವಾಗಿ ಓದಿ ತಮಗೆ ಅನ್ನಿಸಿದುದನ್ನು ಅಶೇಷವಾಗಿ ತಿಳಿಸಿ, ಇದರ ಮೇಲೆ ಕೃಷ್ಣಾರ್ಪಣ ಎನ್ನುವವರು. ಇದು ನನ್ನ ಅನುಭವಮಾತ್ರವೆಂದಿದ್ದೆ; ಇತರರು ಕೆಲವರು ತಮಗೂ ಹಾಗೆಯೇ ಎಂದಿದ್ದಾರೆ. ಒಮ್ಮೆ, ದಿವಂಗತ ಸಂಸರ "ವಿಗಡವಿಕ್ರಮಚರಿತೆ"ಗೆ ನಾನೊಂದು ಹಿನ್ನುಡಿ ಬರೆದೆ. ಪ್ರಕಾಶಕರು ಅದನ್ನು ಶ್ರೀ ಪೈಗಳ ಕಡೆಗೆ ಅವಲೋಕನಕ್ಕೆ ಕಳಿಸಿದರು. ಒಂದು ವಾರದ ಮೇಲೆ ಶ್ರೀ ಪೈಗಳು ಆ ಪ್ರಕಾಶಕರಿಗೊಂದು ಕಾಗದ ಬರೆದರು. ಅದರಲ್ಲಿ ಅವರು ತೋರಿದುದು—ಅಚ್ಚಿನ ತಪ್ಪುಗಳಿಂದ ಹಿಡಿದು, ಸಂಸರ ಕೃತಿಯ ಗುಣದೋಷಗಳ ಸಾಧಾರವಾದ ವಿಮರ್ಶೆಯವರೆಗೂ, ಅಷ್ಟೇ ಅಲ್ಲ, ನನ್ನ "ಹಿನ್ನುಡಿ"ಯಲ್ಲಿ ನಾನು ಹೆಸರಿಸದಿದ್ದ ಸಂಸರ "ಮಹಾಪ್ರಭು" ಎಂಬ ಒಂದು ಈಗ ನಷ್ಟವಾಗಿರುವ ನಾಟಕವನ್ನು ಕುರಿತು ತಮಗೆ ಅನುಭವವಾಗಿದ್ದ ಹಲವಂಶಗಳನ್ನು ಹತ್ತು ಹನ್ನೆರಡು ಪುಟಗಳಲ್ಲಿ ಒಕ್ಕಣಿಸಿ ಬರೆದಿದ್ದರು ! ಇದನ್ನೇ ನಾನು ಹಿಂದೆ ಹೇಳಿದ್ದು-ವಿದ್ಯಾಪ್ರೀತಿ ಎಂದು, ಸತ್ಯಪ್ರಿಯತೆ ಎಂದು.

ಕಾಗದಗಳ ವಿಷಯ ಹೇಳುತ್ತಿರುವಾಗಲೇ ಇನ್ನೊಂದು ಸಂಗತಿ ಜ್ಞಾಪಕವಾಗುತ್ತದೆ. ಶ್ರೀ ಪೈಗಳಿಂದ ನಾನು ಕೆಲವು ಪುಸ್ತಕ ಎರವು ತಂದದ್ದುಂಟು. ಎಷ್ಟು ದಿನ ಎಂದು ವಾಯಿದೆ ಹೇಳಿ, ಅನಂತರ ವಾಯಿದೆಯ ಗಡುವನ್ನು ನಾನು ನೆನೆಯದೆ ಇದ್ದುದುಂಟು. ಆದರೆ

ವಾಯಿದೆ ಮುಗಿದ ಕೆಲವು ದಿವಸದಲ್ಲೇ ಒಂದು ಕಾಗದ: ಪುಸ್ತಕ ಕಳಿಸಬೇಕೆಂದಲ್ಲ; ವಾಯಿದೆ ತೀರಿತು. ಪುಸ್ತಕ ಇನ್ನೂ ಬೇಕಾದ ಪಕ್ಷದಲ್ಲಿ ಇನ್ನಷ್ಟು ದಿನ ಇಟ್ಟುಕೊಳ್ಳಬಹುದು. ಇದನ್ನೇ ಹಿಂದೆ ಹೇಳಿದ್ದು; ಹೃದ್ಗತವಾದ ಈ ಶಿಸ್ತಿನ ಬುದ್ಧಿ ತಪ್ಪಬೇಕೆಂದರೂ ತಪ್ಪುವುದು ಸಾಧ್ಯವಿಲ್ಲ, ಎಂದು.

ಒಂದು ಸಲ, ಅವರು"ವೈಶಾಖಿ"ಯನ್ನು ರಚಿಸುವ ಕಾಲಕ್ಕೆ ಅವರಿಗೆ "ಮಹಾಪರಿನಿಬ್ಬಾನ ಸುತ್ತ" ಎಂಬ ಪಾಲಿಗ್ರಂಥ ಅಗತ್ಯ ಬಿತ್ತು. ನಾನು ಅದನ್ನು ರಿಜಿಸ್ಟರ್ ಮಾಡಿ,ಕಳಿಸಿಕೊಟ್ಟೆ; ಮತ್ತೆ ನಾನೇ ಮಂಜೇಶ್ವರಕ್ಕೆ ಬಂದಾಗ ಎದುರಾಗಿ ತೆಗೆದುಕೊಳ್ಳುವೆನೆಂದೆ. ಅದರಂತೆ ಅವರ ಅಗತ್ಯ ಮುಗಿದ ಮೇಲೆ ನಾನು ಮಂಜೇಶ್ವರಕ್ಕೆ ಹೋದಾಗ ನನ್ನ ಪುಸ್ತಕ ನನಗೆ ಬಂತು. ಅವರೊಳಗೆ ನಾನು ಪುಸ್ತಕವನ್ನು ಸುತ್ತಿ ಕಳಿಸಿದ್ದ ವಿಳಾಸದ ಕಾಗದ, ಒಂದೂ ಚಿಲ್ಲರೆ ರೂಪಾಯಿನ ತಲೆಚೀಟಿ ಸಮೇತ ಹಾಗೇ ಇತ್ತು. ಅದರ ಮೇಲೆ ಆ ತಲೆಚೀಟಿಯ ಬೆಲೆಯನ್ನು ದಕ್ಷಿಣೆ ಇಟ್ಟ ಹಾಗೆ ಇಟ್ಟು, ಪುಸ್ತಕ ಕೊಟ್ಟರು. ಮುಖಮುಖ ನೋಡಿದೆ. "ಅಲ್ಲವೋ ಮತ್ತೆ" ಎಂದರು. ದೊಡ್ಡವರು ಹೇಳಿದ್ದಕ್ಕೆ ಬದಲು ಹೇಳಬಾರದು ಎಂದು ಒಂದೂ ಚಿಲ್ಲರೆ ಜೇಬಿಗೆ ಹಾಕಿಕೊಂಡೆ, ಪುಸ್ತಕ ಚೀಲಕ್ಕೆ ಹಾಕಿಕೊಂಡೆ. ಅದು -ಗೋವಿಂದ ಪೈ !

ಈ ನಿತ್ಯ ವ್ಯವಹಾರದಲ್ಲಿ ಈ ಸಂಶೋಧನೆಯ ಕರ್ಮದಲ್ಲಿ ಕಂಡುಬರುವ ಅದೇ ಶಿಕ್ಷಿತವಾದ ಮನಸ್ಸೇ ಕವಿತೆಯ ತಂತಿಯನ್ನೂ ಮೀಟಿ ನಡೆಸುತ್ತದೆಯೆಂಬುದು ಪಂಕ್ತಿ ಪಂಕ್ತಿಯಲ್ಲೂ ಸ್ಪಷ್ಟವಾಗಿದೆ. ಇದರ ಜೊತೆಗೆ, ನಿಜವಾದ ಪಾಂಡಿತ್ಯಕ್ಕೆ ಸಂಗತವಾಗಬೇಕಾದ ಔದಾರ್ಯವೂ ಇರುವುದರಿಂದ ಈ ಕವಿತೆ ಬೆಟ್ಟದಂತೆ ಸ್ಥಿರವಾಗಿಯೂ ಇದೆ, ನದಿಯಂತೆ ಹರಿಯುತ್ತಲೂ ಇದೆ; ಬಳ್ಳಿಯಂತೆ ಪಬ್ಬಿಕೊಳ್ಳುತ್ತಲೂ ಇದೆ, ವೃಕ್ಷದಂತೆ ಹಬ್ಬಿಸಿಕೊಳ್ಳುತ್ತಲೂ ಇದೆ.

ಶ್ರೀ ಗೋವಿಂದ ಪೈಗಳ ಕವನ ಜೀವನ ಅವರ ಹತ್ತು ಹನ್ನೆರಡನೇ ವಯಸ್ಸಿನಿಂದಲೇ ತೊಡಗಿತಂತೆ. ಅದರೆ ಅದಕ್ಕೆ ಇವರದೇ ಆದ ಸ್ವಂತ ವ್ಯಕ್ತಿಮುದ್ರೆ ಅಂಕಿತವಾದದ್ದು ಈಗ್ಗೆ ಸುಮಾರು ಮೂವತ್ತೊಂಭತ್ತು ವರ್ಷಗಳ ಹಿಂದೆ. . ಈ ದಿನ ನಮಗೆ ಪ್ರಾಸವಿಲ್ಲದ ಪದ್ಯಗಳೆಂದರೆ ಸರ್ವಸಾಧಾರಣವಾಗಿ ಹೋಗಿದೆ. ಆದರೆ, 1911ರ ಸುಮಾರಿನಲ್ಲಿ ಪದ್ಯ ಬರೆಯುವವನು ಪ್ರಾಸತ್ಯಾಗಮಾಡಿದನೆಂದರೆ ಅವನು ಪ್ರಾಣತ್ಯಾಗಮಾಡಿಕೊಂಡಷ್ಟೇ ಅಲ್ಲೋಲ ಕಲ್ಲೋಲವಾಗುವ ದಿವಸ. ಅಂತಹ ಕಾಲದಲ್ಲಿ ಶ್ರೀ ಪೈಗಳು, ತಮ್ಮ ಸ್ವಂತ ಜವಾಬ್ದಾರಿಯನ್ನು ತೂಗಿ "ಪ್ರಾಸವನೀಗಲೇ ತೊರೆದು ಬಿಡುವುದೇ ನಿಶ್ಚಯಂ" ಎಂದು ಧೀರಗಮನದಿಂದ ಹೆಜ್ಜೆಯಿಟ್ಟರಂತೆ. (ಇಲ್ಲಿ ಪ್ರಾಸವೆಂದರೆ ದ್ವಿತೀಯಾಕ್ಷರ ಪ್ರಾಸ. ಏಕೆಂದರೆ ಈ ಪ್ರಾಸವನ್ನು ಕೈಬಿಟ್ಟ ಇವರ ಕವನಗಳಲ್ಲೂ ಇವರಂತವರ ಕವನಗಳಲ್ಲೂ ಅಂತ್ಯಪ್ರಾಸ ಒಳಪ್ರಾಸಗಳು ಉಂಟೇ ಉಂಟು. ಆದರೂ ಆ ಕಾಲಕ್ಕೆ ಇದು ಎದೆಗಾರಿಕೆಯೇ.)

ಪ್ರಾಸವನ್ನು ಬಿಟ್ಟರೂ ಹಳೆಯ ಛಂದಸ್ಸನ್ನು ಬಿಡಲಿಲ್ಲ. ಅವರ ಮೊದಮೊದಲಿನ ಕವನಗಳು ಕಂದಗಳಲ್ಲೂ ವೃತ್ತಗಳಲ್ಲೂ ರಚಿತವಾಗಿವೆ. ಸಂಸ್ಕೃತ ಕನ್ನಡಗಳ ಸಾಹಚರ್ಯದಿಂದ ಈ ವೃತ್ತಕಂದಗಳು ಹೇಗೆ ರೂಢಿಸಿಬಂದುವೋ ಹಾಗೆಯೇ ಇಂಗ್ಲೀಷಿನ ಸಂಪರ್ಕದಿಂದ ಹೊಸ ಹೊಸ ಛಂದಸ್ಸುಗಳ ಹೊಳವು ತೋರಿತು. (ಪ್ರಾಸ ಬಿಟ್ಟದ್ದಕ್ಕಾದರೂ ಪ್ರೇರಣೆ ಬಂದದ್ದು ಇಂಗ್ಲೀಷಿನಿಂದಲೇ)

ಓಗೆ ಸ್ವತಂತ್ರವಾಗಿ ಅನುವಾದವಾಗಿ ಅವರ ಲೇಖನಿಯಿಂದ ಬಂದ ಕವನಗಳೆಲ್ಲಾ ಅವರಿಂದ ಪಡೆದ ಪತ್ರಿಕೆಗಳಲ್ಲಿ ಅಲ್ಲಲ್ಲಿ ಪ್ರಕಟವಾಗಿ ಅಂತರ್ಹಿತವಾಗಿತ್ತು. ಇವುಗಳಲ್ಲಿ ಕೆಲವನ್ನಾದರೂ ಸಂಕಲಿಸಿ, "ಗಿಳಿವಿಂಡು" ಎಂಬ ಹೆಸರಿನಿಂದ ದಿವಂಗತ ಪಂಜೆ ಮಂಗೇಶ ರಾಯರು ಪ್ರಕಟಿಸಿದುದು ನಮ್ಮ ಭಾಗ್ಯ. "ಸ್ವಾಂತ:ಸುಖಾಯ" ಹಾಡಿಕೊಂಡ ಕವಿಯ ನುಡಿಗಳನ್ನು ನಮ್ಮವರೆಗೂ ತಂದು ಮುಟ್ಟಿಸಿದವರನ್ನು ತಂಪು ಹೊತ್ತಿನಲ್ಲಿ ನೆನೆಯಬೇಕು.

ಈ "ಗಿಳಿವಿಂಡು" ಸಂಕಲನ ಅದರ ಕರ್ತೃವಿನ ಮೂರ್ತಿ ಸ್ವರೂಪಕ್ಕೆ ಕನ್ನಡಿಯಂತಿದೆ. ಕಲ್ಪನೆ ಕಟ್ಟಿಕೊಂಡು ಕುಣಿದಾಡಿರುವ ವಿಷಯಗಳಾಗಿರಲಿ, ಅದನ್ನು ನಡಸಿ ತಂದಿರುವ ಛಂದಸ್ಸಿನ ವಿವಿಧತೆಯಾಗಲಿ, ಅಲ್ಲಿ ಬಳಸಿರುವ ಶಬ್ದಾರ್ಥಗಳ ಧೋರಣೆಯಾಗಲಿ-ಅವರ ಸ್ವಜನ ಪ್ರೀತಿಗೆ , ತುಳುನಾಡ ಪ್ರೇಮಕ್ಕೆ, ಕರ್ನಾಟಕದ ವಿಶ್ವಾಸಕ್ಕೆ, ಭರತ ಭೂಮಿಯ ಭಕ್ತಿಗೆ, ದೈವದಲ್ಲಿನ ಶ್ರದ್ಧೆಗೆ. ಹರಿಜನರ ಮೇಲಿನ ಮರುಕಕ್ಕೆ, ಅನ್ಯ ಭಾಷಾ ಸಾಹಿತ್ಯದ ರಸಸವಿಗೆ. ಭಾರತದ ಇತಿಹಾಸದ ಆಳವಾದ ಪಾಂಡಿತ್ಯಕ್ಕೆ. ಕನ್ನಡ ಸಂಸ್ಕೃತಗಳ ಮೇಲಿನ ಲೀಲಾಜಾಲವಾದ ಆಳಿಕೆಗೆ ಸಾಕ್ಷಿಯಾಗಿದೆ.

ಇದಾದ ಮೇಲೆ ಪ್ರಕಟವಾದ ಇದರ ಮೊದಲನೇ ದೀರ್ಘ ಕವನ: "ಗೊಲ್ಗೊಥಾ"; ಯೇಸುಕ್ರಿಸ್ತನ ಕೊನೆಯ ದಿನದ ಕತೆ. "ಗಿಳಿವಿಂಡು" ಸಂಗ್ರಹವನ್ನು ಓದಿ. ಅದರ ಕವಿಯ ವಿಷ್ಣುಭಕ್ತಿಯನ್ನು ಕಂಡಿದ್ದವರಿಗೆ. ಅದೇ ಕವಿ ಈ "ಗೊಲ್ಗೊಥಾ" ಕೃತಿಯನ್ನೂ ಬರೆದಿರುವರೆಂದರೆ, ಮತಗಳನ್ನು ಕುರಿತು ನಮ್ಮ ಇಂದಿನ ದೃಷ್ಟಿ ಧೋರಣೆಯಲ್ಲಿ, ವಿಸ್ಮಯವಾದೀತು. ಆದರೆ ಕವಿಯ ಪ್ರಪಂಚದಲ್ಲಿ ಇತಿಮಿತಿಗಳಿಲ್ಲ. ಸಂಶೋಧನೆಯ ಪ್ರಪಂಚವಂತೂ ಸೀಮೆಯಿಲ್ಲದೆ ಸರ್ವವ್ಯಾಪಿ. ಎಂದ ಮೇಲೆ. ಹೇಗೆ ಹುಟ್ಟು ಕವಿಯೋ ಹಾಗೆಯೇ ವೃದ್ಧ ಸಂಶೋಧಕರೂ ಆದವರು ಅದನ್ನೂ ಬರೆದು ಇದನ್ನೂ ಬರೆದರೆಂದರೆ. ಏನು ಸೋಜಿಗ? ಈ ಕೃತಿಯಲ್ಲಿ ಅನುವಾದಕನ ಕೈಯೂ ಇದೆ. ಸಂಶೋಧಕನ ಬುದ್ಧಿಯೂ ಇದೆ, ಕವಿಯ ಹೃದಯದ ಕಲಕೂ ಇದೆ. ಆದ್ದರಿಂದಲೇ ಈ ಕೃತಿ ಬೈಬಲ್ ಬಲ್ಲವರಿಗೆ ತನ್ನ ಪ್ರಾಮಾಣಿಕತೆಯಿಂದ ಕ್ರೈಸ್ತ ಧರ್ಮದವರಿಗೆ ತನ್ನೊಳಗಿನ ಆತ್ಮೀಯ ವೇದನೆಯಿಂದ. ಇತರ ಧರ್ಮದವರಿಗಾದರೂ ಆ ಮಹಾ ಜೀವನ ಅನನ್ಯ ಸಾಮಾನ್ಯವಾದ ಜೀವಾರ್ಪಣೆಯ ರಸನಿರೂಪಣೆಯಿಂದ ತುಂಬ ಸಂತೃಪ್ತಿಯನ್ನು ಬಡಿಸುತ್ತದೆ. .

ಇವರ ಎರಡನೇ ದೀರ್ಘ ಕವನ: "ಗೊಲ್ಗೊಥಾ" ಗಿಂತ ದೊಡ್ಡದಾದುದು. "ವೈಶಾಖಿ": ಬುದ್ಧದೇವನ ಕೊನೆಯ ದಿವಸದ ಕತೆ. ಮೊದಲಿನದರಲ್ಲಿ ಇರುವ ಉದ್ವೇಗ, ಕಾವು ಈ ಕತೆಯಲ್ಲಿ ಇಲ್ಲದ್ದು. ನಿರ್ವಾಣಕ್ಕೆ ನೆರೆಯದೇ ಅದ ಉಪಶಾಂತಿ ಈ ಹೊತ್ತಿನ ಹಣ್ಣು ಅದೇ ಈ ಕೃತಿಯಲ್ಲಿ ರಸ. ಈ ರಸವನ್ನು ತಂದು ಇಲ್ಲಿ ತುಂಬುವುದಕ್ಕಾದರೂ ಅಷ್ಟೇ, ಕಾವ್ಯದ ಕಥೆಯ ಯಥಾರ್ಥತೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಬುದ್ಧನ ಕಡೆಯ ದಿನಗಳ ಚಿತ್ರವನ್ನೊಳಗೊಂಡ "ಮಹಾಪರಿನಿಬ್ಬಾನಸುತ್ತಂತ"ದಿಂದ ಅತ್ಯಗತ್ಯವಾದ ಕಣಕವನ್ನು ನಾದಿ

ಕೊಂಡು ಅದಕ್ಕೆ ತಕ್ಕಂತಹ ಧರ್ಮಾಮೃತದ ಪೂರಣವನ್ನು ಸುತ್ತನಿಪಾತ ಧರ್ಮಪದವೇ ಮುಂತಾದ ಬೌದ್ಧಾಗಾರಗಳಿಂದ ತಂದು ಕಲಿಸಿಕೊಂಡು, ಈ ಒಂದು ಅಪೂರ್ವವಾದ ಪಕ್ವ ಪದಾರ್ಥವನ್ನು ಸಿದ್ಧ ಪಡಿಸಿದ್ದಾರೆ. ಪಂಪನ "ವಿಕ್ರಮಾರ್ಜುನ ವಿಜಯ"ದ ಪಕ್ಕದಲ್ಲಿ ಅವನದೇ "ಆದಿ ಪುರಾಣ" ಹೇಗೋ, ರನ್ನನ "ಸಾಹಸ ಭೀಮವಿಜಯ"ದ ಪಕ್ಕದಲ್ಲಿ "ಅಜಿತ ಪುರಾಣ" ಹೇಗೋ—ಹಾಗೆಯೇ ಶ್ರೀ ಪೈಗಳ "ಗೊಲ್ಗೊಥಾ" ಅವರ ಪಕ್ಕದಲ್ಲಿ ಅವರದೇ "ವೈಶಾಖಿ" ಬೌದ್ಧರ ಸಂಪ್ರದಾಯವನ್ನು ಮೀರಿ ಹೋಗದಂತೆ ಕತೆಯನ್ನು ನಡಿಸಿಕೊಂಡು ಅಲ್ಲಲ್ಲೇ ಅವಿರೋಧವಾಗುವಂತೆ ಅನ್ಯತ್ರ ಉದಾನಿಸಿದ ಪ್ರಸಿದ್ಧ ಬುದ್ಧ ವಚನಗಳನ್ನು ತಂದು ಅಳವಡಿಸಿಕೊಂಡು, ಕವಿಕರ್ಮದ ಅಲಂಕಾರಗಳನ್ನೂ ವರ್ಣನೆಗಳನ್ನೂ ಉಚಿತವರಿತು ಅರ್ಥ ಹೆಚ್ಚುವಂತೆ ಸೃಷ್ಟಿಸಿ ಸಿಂಗರಿಸಿರುವುದು-ದಿಟಕ್ಕೂ ಹೃದ್ಯವಾಗಿದೆ. ಅಷ್ಟೇ ಅಲ್ಲದೆ, "ಗೊಲ್ಗೊಥಾ"ದಲ್ಲಿ ಧುಮುಧುಮುಕಿ ದುಡುಕುವ ಅದೇ ಆ "ಝಂಪೆ" ತಾಳದ ಛಂದಸ್ಸು ಇಲ್ಲಿ "ವೈಶಾಖಿ"ಯಲ್ಲಿ ಇಲ್ಲಿನ ಭಾವಕ್ಕನುಗುಣವಾಗಿ ಗಂಭೀರ ಗಮನದಿಂದ ಮೃದು ಮಂದಗತಿಯಲ್ಲಿ ಹೋಗುವುದನ್ನೂ ಕಾಣಬಹುದು.

ಈ ಎರಡರ ಅನಂತರ ಬಂದದ್ದು "ಹೆಬ್ಬೆರಳು"; ಏಕಲವ್ಯನ ಉಪಾಖ್ಯಾನದ ದೃಶ್ಯರೂಪ ಆದರೂ ಅದೇ ಉಪಾಖ್ಯಾನದ ಪಡಿಯಚ್ಚಲ್ಲ. ಅಲ್ಲಿನ ಕತೆಯ ಚೌಕಟ್ಟೇ ಇದು ಆದರೂ ಇದರೊಳಗಿನ ಚಿತ್ರದ ದ್ರೋಣನೇ ಬೇರೆ. ಇದರೊಳಗಿನ ಏಕಲವ್ಯನೇ ಬೇರೆ. ಅಲ್ಲಿಲ್ಲದ ಹಿರಣ್ಯಧನುಷನ ಹೊಸ ಮೂರ್ತಿ ಬೇರೆ ಇಲ್ಲಿ ಉಂಟು. ಮೂಲದಲ್ಲಿ ಇಲ್ಲವೇ ಇಲ್ಲದ ಅಲಂಕಾರಗಳು—ಅದರಲ್ಲೂ ಸರ್ವ ಸಮರ್ಪಕವಾದ ಉಪಮಾನಗಳು—ಗೊಲ್ಗೊಥಾ ವೈಶಾಖಿಗಳಲ್ಲಿ ಹೇಗೋ ಹಾಗೇ ಹೊದ್ದಿ ಹೊಂದಿಕೊಳ್ಳುವ ಉಪಮಾನ ಮಂಜರಿಗಳು ಪುಟ ಪುಟದಲ್ಲೂ ಹಿಂದಿನ ಎರಡು ಶ್ರವ್ಯ ಕಾವ್ಯಗಳಲ್ಲಿ ನಿರೂಪಣೆಗೆ ಉಪಯೋಗಿಸಿದ ಅದೇ ಛಂದಸ್ಸನ್ನೇ ಇಲ್ಲಿ ಈ ದೃಶ್ಯ ಕಾವ್ಯದಲ್ಲಿ ಸಂಭಾಷಣೆಗೆ ಯಾವ ಮಾಯದಿಂದ ಹೇಗೆ ಮಾರ್ಪಡಿಸಿ ಕೊಂಡಿದ್ದಾರೆ, ಅದನ್ನೂ ವಿವೇಚಿಸತಕ್ಕದ್ದು. ಮತ್ತೆ, ಈ ಹಳೆಯ ಕತೆಯಿಂದ ಈ ಹೊಸ ಪಾತ್ರಗಳ ಮೂಲಕ, ಇಂದಿನ ಜಗತ್ತಿಗೆ ತಂದಿರುವ ಸಂದೇಶದ ಸುರಭಿಯೋ! ಮೂಲದಲ್ಲಿ ಅದು ಮಸಕು ಮಸಕಾಗಿದೆ—ಆರ್ಯ ಅನಾರ್ಯ ಎಂಬ ಕಾರಣದಿಂದ ಭಾರತ ಕಾಲದಲ್ಲಿದ್ದ ಅನೈಕ್ಯತೆ: ಅದೇ ಇಲ್ಲಿ ಒಡೆದು ಮೂಡಿದೆ-ಆರ್ಯನಾದ ದ್ರೋಣನಲ್ಲಿ ಅನಾರ್ಯನೆನಿಸಿದ ಏಕಲವ್ಯನಲ್ಲಿ, ನಾಟಕದ ಆರಂಭಕಾಲದಲ್ಲಿ ಏಕಲವ್ಯನನ್ನು ಅನಾರ್ಯನೆಂದು ತಿರಸ್ಕರಿಸಿದ ಅದೇ ದ್ರೋಣ, ನಡುವೆ ತಾನು ಕಂಡ ಆರ್ಯ ಆರ್ಯರಲ್ಲೇ ಹುಟ್ಟಿದ ತಿಕ್ಕಾಟದಿಂದ ನಾಟಕದ ಉತ್ತರಾರ್ಧದ ಹೊತ್ತಿಗೆ ತಿಳಿವಳಿಕೆ ಪಡೆಯುತ್ತಾನೆ. ಆರ್ಯರು ಅನಾರ್ಯರನ್ನೂ ಜೊತೆಗೆ ಸೇರಿಸಿಕೊಳ್ಳದಿದ್ದರೆ, ಅನ್ನ ಸಸ್ಯಾಳಿಗಳಿಗೆ ಎಡೆಕೊಡದ ಬಿದುರು ಮೆಳೆ ಹೇಗೆ ತನ್ನ ತಿಕ್ಕಾಟದಿಂದಲೇ ಹತ್ತಿ ಉರಿದು ಹೋಗುವುದೋ ಹಾಗೆ, ಆರ್ಯರೂ ನಾಶವಾಗುವರು, ಅನಾರ್ಯರೂ ಅಷ್ಟೇ. ನಮ್ಮ ಕಾಲದ ಈ ಹಾಳು ಸವರ್ಣ–ಅಸವರ್ಣ ಪ್ರಶ್ನೆಗೆ ಎಷ್ಟು ಚನ್ನಾಗಿ ಅನ್ವಯವಾಗುತ್ತದೆ? ಕವಿ ಹಾಗೆಂದೇ ವಾಚ್ಯವಾಗಿ ಹೇಳದೆ ಇದ್ದರೂ, ಈ ಭಾವ ಸೂಚ್ಯವಾಗಿ ಇದ್ದೇ ಇದೆ. ಹೀಗೆ ಈ ಏಕಲವ್ಯನ ಕತೆಯ ಈ ಸೇತುವೆಯಿಂದ ಇವರು ಅಂದಿನ ಭಾರತದಿಂದ ಇಂದಿನ ಭಾರತಕ್ಕೆ ಒಂದು ಸಂತಾನವನ್ನು ತೋರಿಸಿದ್ದಾರೆ. ಒಂದು ಸಂದೇಶವನ್ನು ತಂದಿದ್ದಾರೆ.

ಶ್ರೀ ಪೈಗಳು ತಾವೇ ತಮ್ಮ "ಸಾಹಿತ್ಯಜ್ಞರ ಆತ್ಮ ಕಥನ"ದಲ್ಲಿ ಹೇಳಿಕೊಂಡಿರುವಂತೆ, ಕಂಡ ಕನಸು ಎಷ್ಟೋ. ಅದರಲ್ಲಿ ಕೃತಿಯಾಗಿ ಬಂದುದಾದರೂ –ಕಾವ್ಯವಾಗಲಿ, ಸಂಶೋಧನೆಯಾಗಲಿ–ಏನೂ ಅಲ್ಪ ಪ್ರಮಾಣದ್ದಲ್ಲ. ಇವರು ಕನ್ನಡ ಕಾವ್ಯಕ್ಕೆ ಒಪ್ಪಿಸಿರುವ ಚತುರ್ದಶಪದಿ (Sonnet)ಗಳಾಗಲಿ, ಇವರು ಬರೆದಿರುವ ಹಲವು ಬೌದ್ಧ ಕಥನ ಕವನಗಳಾಗಲಿ, ಅಥವಾ ತಮ್ಮ ಸಹಧರ್ಮಿಣಿಯ ಅಚ್ಚಳಿಯದ ನೆನಪಿಗೆ ಹಚ್ಚಿಸಿಟ್ಟ "ನಂದಾದೀಪ" ಕವನ ಮಾಲೆಯಾಗಲಿ ಇನ್ನೂ ಒತ್ತಟ್ಟಿಗೆ ಪ್ರಕಟವಾಗಲಿಲ್ಲ. ಅವರ ಮೂರು ಉಪನ್ಯಾಸಗಳನ್ನು ಬಿಟ್ಟರೆ, ಅವರ ಸಂಶೋಧನೆಯ ದೀರ್ಘಶ್ರಮದ ಫಲವಾದರೂ ಹೀಗೇ ಒಟ್ಟಿಗೆ ಒದಗಿಲ್ಲ.

ಇದಕ್ಕೆ ಕಾರಣ, ನನಗೆನ್ನಿಸುತ್ತದೆ: ಅವರ ಅನಾಸಕ್ತಿ. ಯಾವುದನ್ನೂ ಹಚ್ಚಿಕೊಂಡು ಹೋಗುವುದು ಅವರ ಸ್ವಭಾವದಲ್ಲಿ ಇದ್ದಂತಿಲ್ಲ—ಅದೂ ಮುಖ್ಯವಾಗಿ ತನಗೆ ಕುರಿತದ್ದನ್ನು ಕೇವಲ ಕೃತಿಯಿಂದಲೇ ಅವರು ಕೃತಕೃತ್ಯರಾದಂತಿದೆ. ಅದ್ದರಿಂದಲೇ ಅವರ ಕೃತಿ ಕಾಗದಕ್ಕೆ ಬಂದಷ್ಟು, ಇಷ್ಟಪಟ್ಟವರು ಪ್ರಕಟಿಸಿದಷ್ಟು, ಪ್ರಕಟಿಸದಲ್ಲಿ; ಒಟ್ಟು ಒಂದು ಕಡೆ ಇಡುಗಂಟಾಗಿ ದೊರಕದು. ಇದಾದರೂ ವಾಸಿ, ಕೆಲವರಾದರೂ ಅವರ ಕೃತಿಗಳನ್ನು ಅಚ್ಚಿನಲ್ಲಿ ಕಾಣಲುಂಟು. ಆದರೆ ಗೋವಿಂದ ಪೈಗಳನ್ನು ಕಾಣಬೇಕೆಂದರೆ, ಮೊನ್ನೆಯವರೆಗೂ ಅವರ ಊರಿಗೇ ಹೋಗಿ ತೀರಬೇಕಾಗಿತ್ತು. ಆದರೆ ಈಚೆಗೆ ಅವರಿಗೆ ಮನಸ್ಸಿನ ನೆಮ್ಮದಿ ಏನೇ ಭಂಗವಾದರೂ ಅವರಿಗೆ ಎಷ್ಟೇ ಇಷ್ಟವಿಲ್ಲದಿದ್ದರೂ ಜನರ ಅಭಿಮಾನ ಅನುರಾಗ ಅವರನ್ನು ಹಿಡಿದು ಕಟ್ಟಿ ಮೂಲ ವಿಗ್ರಹವನ್ನೇ ಉತ್ಸವಮೂರ್ತಿಯಾಗಿ ಮಾಡಿಕೊಂಡುಬಿಟ್ಟಿದೆ.

ಎಲ್ಲಿ ಯಾರು ಕರೆದರೂ ತಮ್ಮ ದಕ್ಷಿಣ ಜಿಲ್ಲೆಯಲ್ಲಿ ಬಂದು ಕೆಲವು ಸಲ ಹೊರತು, ಎಲ್ಲೂ ಬರಲು ಒಲ್ಲದಿದ್ದವರು ಕೊಂಚ ವರುಷಗಳ ಹಿಂದೆ ಆಪ್ತರಾದವರ ಬಲವಂತಕ್ಕೆ ಕಟ್ಟುಬಿದ್ದು, ಸಾಹಿತ್ಯ ಪರಿಷತ್ತಿನ ವಸಂತೋತ್ಸವ ಸಮಯಕ್ಕೆ ಬೆಂಗಳೂರಿಗೆ ಬಂದು ತಮ್ಮ ದರ್ಶನಸೌಖ್ಯವನ್ನು ನೀಡಿದರು. ಎರಡು ವರ್ಷಗಳ ಹಿಂದೆ ಅವರಿಗೆ "ರಾಷ್ಟ್ರಕವಿ" ಎಂಬ ಸನ್ಮಾನ ದೊರೆತಾಗಲೂ ಅಷ್ಟೇ. ಒಲ್ಲೆ ಎಂದು ಬಿಡುತ್ತಿದ್ದರೋ ಹೇಗೋ, ಮತ್ತೆ ಮಿತ್ರರ ಒತ್ತಾಯಕ್ಕೆ ಕಟ್ಟುಬಿದ್ದು ಅದನ್ನು ಒಪ್ಪಿಕೊಂಡರು. ಇದೇ ಹೆಜ್ಜೆಯಲ್ಲಿ ಮೂರನೆಯದಾಗಿ ಈ ಸಲದ ಮೂವತ್ತನಾಲ್ಕನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತನಕ್ಕೆ ಒಪ್ಪಿಕೊಂಡು, ನಾಡು ತಮಗೆ ತನ್ನ ಸಂಭಾವನೆಯನ್ನು ಅರ್ಪಿಸಲು ಅವಕಾಶಕೊಟ್ಟಿದ್ದಾರೆ.

ಎರಡು ವರ್ಷಗಳ ಹಿಂದೆ, ಅವರ ಕೃತಿಗಳನ್ನು ಕುರಿತು ನಾನು "ಜೀವನ"ದಲ್ಲಿ ಕೆಲವು ಲೇಖನ ಬರೆದು, ಅದೇ ಪುಸ್ತಕ ರೂಪದಲ್ಲಿ ಬಂದಾಗ ಆ ಕಾರ್ಯ ಅವರಿಗೆ ಅಷ್ಟು ಸಮಾಧಾನವಾಗಿರಲಿಲ್ಲವೆಂಬುದನ್ನು ಕಂಡಿದ್ದೇನೆ. ಈಗಲಾದರೂ ಈ ಲೇಖನ ಏನಾದರೂ ಅವರ ಕಣ್ಣಿಗೆ ಬಿದ್ದರೆ, "ಇವನ ಯೋಗ್ಯತೆಯೇ ಇಷ್ಟು" ಎಂದುಕೊಂಡಾರೋ ಎಂಬ ಅಂಜಿಕೆಯೂ ಇಲ್ಲದಿಲ್ಲ. ಆದರೂ, ಚಿರಂಜೀವಿಯಿಂದ ಏನೇ ಪ್ರಮಾದ ನಡೆದರೂ ತೀರ್ಥರೂಪರು ಅದಕ್ಕಾಗಿ ಹೆಚ್ಚುಕಾಲ ಅಸಂತುಷ್ಟರಾಗಿರುವುದಿಲ್ಲ ಎಂಬ ಧೈರ್ಯವೂ ನನಗಿಲ್ಲದಿಲ್ಲ.

ಶ್ರೀ ಗೋವಿಂದ ಪೈಗಳ ಹೆಸರು ಎತ್ತಿದಾಗ ಸಮುದ್ರದ ಮಾತು ಬರದೇ ಇದ್ದರೆ ಅದು ಅರ್ಧ ಅರಕೆ. ಶ್ರೀ ಪೈಗಳು ಮನೆಗೆ ಬಂದವರಿಗೆ ಅವರು ತಮ್ಮ ಮನೆಯ ಹಿರಿಯರನ್ನು ಕಾಣಿಸುತ್ತಾರೋ ಅಥವಾ ಮನೆಯ ಮಕ್ಕಳನ್ನು ಕಾಣಿಸುತ್ತಾರೋ ಎಂಬ ಅಭಿಮಾನ ದಿಂದ ತಮ್ಮ ನೆಲದ ನೆರೆಯ ಸಮುದ್ರವನ್ನು ತೋರಿಸುತ್ತಾರೆ, ವರ್ಣಿಸುತ್ತಾರೆ. ನಾನೂ ಅನೇಕ ಸಲ ಪೈಗಳ ಮನೆಗೆ ಹೋಗಿದ್ದರೂ ಸಮು ದ್ರವನ್ನು ನೋಡಬೇಕೆಂದು ನನಗೂ ಲವಲವಿಕೆಯಿದ್ದರೂ ನಾನು ಅವರೊಡನೆ ಅವರ ಸಮುದ್ರವನ್ನು ಹೋಗಿ ನೋಡಿ ಕೇಳಿ ಬಂದದ್ದು ಒಂದೇ ಒಂದು ಸಲ. ಅದೂ ನನ್ನ ಜೊತೆಯಲ್ಲಿ ನನ್ನ ಮನೆಯವರು, ಮಕ್ಕಳು ಇದ್ದದ್ದರಿಂದ, ನನಗಂತೂ ದಿಟವಾಗಿ ಗೋವಿಂದ ಪೈಗಳ ಘೋಷವನ್ನು ಕೇಳಿದ ಮೇಲೆ, ಅದು ಕಿವಿತುಂಬ ಇರುವಂತೆಯೇ ಮಂಜೇಶ್ವರದಿಂದ ಹೊರಡಬೇಕೆಂದಲ್ಲದೆ, ಸಮುದ್ರದ ಘೋಷವೇ ಆದ ರೂ ಅದನ್ನು ಕೇಳಿ ಹೋಗುವ ಕುತೂಹಲ ಏಕೋ ಬರಲಿಲ್ಲ. ಅದೂ ಒಂದು ಸಮುದ್ರ, ವಾಸ್ತವಿಕವಾಗಿ; ಇವರೂ ಒಂದು ಸಮುದ್ರ, ಅ ಲಂಕಾರಿಕವಾಗಿ.



# ಮ. ಗೋವಿಂದ ಪೈಗಳ ಜ್ಯೋತಿಷ ಪ್ರಾವೀಣ್ಯ

ಶ್ರೀ ಎಂ. ಸುಬ್ರಾಯನ್

ಜಗದಿ ಮೂವಿಧದ ನರರಿಹರು ಮೊದಲವರೆಕ್ಕದಂತೆ ಹೂವುಂಟು ಹಣ್ಣಿಲ್ಲ, ಗಳಪವೆ ವಿನಾ ಕೆಲಸವೆನೆ ಹಿಡಿಪಶ್ರಿ; ಈಳೆಯಂತವರು ಹೂವೆ ಹಣ್ಣಿಹಸೆರದಿ ಮಾತೊಡನೆ ಮಾಟವಿದೆ, ಅತ್ತಿಯಂತಿನ್ನವರು ಹೂವಿಲ್ಲ ಹಣ್ಣೈಸೆ ಕೆಲಸವಲ್ಲದೆ ಮಾತನೊಲ್ಲರು."

"ಹೆಬ್ಬೆರಳು" ಎಂಬ ಗೀತನಾಟಕದಲ್ಲಿ ಮೂರು ವಿಧದ ಮಾನವರನ್ನು ದಿ.ಗೋವಿಂದ ಪೈಯವರು ನಮಗೆ ನಿರ್ದೇಶಿಸಿಕೊಟ್ಟಿದ್ದಾರೆ. ಕೆಲಸವನ್ನಲ್ಲದೆ ಮಾತನೊಲ್ಲದ ಸಾಧಕ ಜೀವಿಗಳೆನಿಸಿ ಕರ್ನಾಟಕ ನವಕವಿತಾ ತಾತ ಹಾಗೂ ಸಂಶೋಧನೆ, ನಾಟಕ, ಕಥೆ ಮೊದಲಾದುವುಗಳಿಂದ ಚತುರ್ಮುಖನ ನೆಲೆಗೇರಿದ ಈ ಮಹಾ ವ್ಯಕ್ತಿಯ ದರ್ಶನ ನನಗೆ 1935ರಲ್ಲಾಯಿತು. ಆ ದರ್ಶನವು ನನ್ನನ್ನು ಮುಂದಕ್ಕೆ ಅವರ ಕುಟುಂಬದ ಒಡನಾಟದ ನಿಕಟ ಸಂಪರ್ಕಕ್ಕೆಳೆದು ನನಗೂ ಅವರಿಗೂ ಅವರ ಸಹೋದರರಿಗೂ ಸಹೋದರರ ಮಕ್ಕಳಲ್ಲಿಯೂ ಅನನ್ಯ ಭಾವನೆಯ ಏಕತ್ವದ ಸದ್ಭಾವನಾ ಬಂಧುತ್ವದ ಸಾವಿೂಪ್ಯದಲ್ಲಿರಿಸಿದೆ.

ದಿ. ಪೈಗಳಲ್ಲಿ ವರಾಹನ ಹೋರಾಶಾಸ್ತ್ರ ಬೃಹತ್ಸಂಹಿತೆಗಳ ಸಮ್ಯಗ್ಜ್ಞಾನ-ಅದರೊಂದಿಗೆ ಮುಹೂರ್ತವಿಚಾರ, ಗ್ರಹಕುಂಡಲಿಯನ್ನು ತಯಾರಿಸುವಿಕೆ, ದೇಶಾಂತರ ಸಂಬಂಧದ ಸಮಯಗಣಿತ ಸಾಧನೆ, ಗ್ರಹಗಣಿತ ಗ್ರಹಣಾದಿ ಪಂಚಬೋಧಾ ಜ್ಞಾನಗಳು ತುಂಬಿದ್ದುವು. ಭಾರತದ ಪ್ರಾಚೀನ ಭವ್ಯ ಪರಂಪರೆಯ ಸಂಶೋಧನಾ ಕಾರ್ಯ ಕರ್ಮಮಾರ್ಗದಿಂದಲೇ ನಡೆದು ಬಂದು ಭಾರತೀಯ ಸಂಸ್ಕೃತಿಯನ್ನು ಬೆಳಗಿಸಿ ಭಾರತದ ಘನತೆಯನ್ನು ಹೆಚ್ಚಿಸಿ ಮತ್ತೂ ಬಳೆಯಿಸಲಿರುವ ಕಾರ್ಯಭಾರದ ಹೊಣೆಗಾರಿಕೆ ಭಾರತೀಯರೆಲ್ಲರಿಗೂ ಸೇರಿದ್ದಾಗಿದ್ದು ಇಂದು ನಾಳೆ ಮತ್ತೆ ಎನ್ನದೆ ಶ್ರಮಿಸುತ್ತ ಜೀವನವನ್ನು ಅದಕ್ಕಾಗಿ ವಿೂಸಲಾಗಿರಿಸುವುದರಿಂದಲೇ ನಮ್ಮ ಅಸ್ತಿತ್ವ: ಈ ಅಸ್ತಿತ್ವ ಸಾಧನೆಗೆ ವಿವಿಧ ಭಾಷಾ ವರ್ಗದವರು ತಮ್ಮ ತಮ್ಮ ಭಾಷೆಯಿಂದ ಸಾಹಿತ್ಯದ ಮೂಲಕ ಪ್ರಚಾರ ಕಾರ್ಯವನ್ನು ಮಾಡುವುದರಿಂದಲೇ ಜನತೆಯ ಏಳಿಗೆ; ಭಾಷೆಯ ಪ್ರಗತಿಯಿಂದಲೇ ಜನರ ಪ್ರಗತಿ; ಜನತೆಯ ಬಳವಣಿಗೆಗೆ ಭಾಷೆಯು ಉನ್ನತಿಯಾಗಲೇಬೇಕು; ಇದಕ್ಕೆ ಸಾಹಿತ್ಯಾಂಗದ ವಿವಿಧ ಜ್ಞಾನಗಳು ಬೇಕು. ಸಾಹಿತ್ಯವೂ ವಿಜ್ಞಾನವೂ ಭಾಷೆಯ ಮನೋದೇಹ ಸಂಪತ್ತುಗಳು. ಮಾನಸಿಕ ಬಳವಣಿಗೆಯೊಂದಿಗೆ ದೇಹದ ಬಳವಣಿಗೆಯಾಗಬೇಕು. ದೇಹ ಮನಸ್ಸುಗಳೆರಡೂ ಬಳೆದರೆ ಆರೋಗ್ಯದ ಕರ್ಮ ಶರೀರವಾಗುವುದು. ಈ ಕರ್ಮಶರೀರ, ಸಂಪತ್ತು ನಮಗಿರಬೇಕೆಂದೇ ದಿ. ಪೈಯವರ ಮನೋಭಾವವಾಗಿದ್ದು ಅವರು ಜ್ಯೋತಿಷ ವಿಷಯದಲ್ಲಿ ಅಭಿಮಾನ ಪೂರ್ಣರಾಗಿದ್ದರು. ಮಾತ್ರವಲ್ಲದೆ ನಾವು ಈ ವಿಷಯದಲ್ಲಿ ಕುಂದುಳ್ಳವರಾಗಿರಬಾರದೆಂಬುದನ್ನು "ಪ್ರಭಾತ" ಪತ್ರಿಕೆಯಲ್ಲಿ ಜ್ಯೋತಿಷ ವಿಷಯ ಲೇಖನಮಾಲೆಯನ್ನು ಬರೆಯಲುಪಕ್ರಮಿಸಿದಾಗ 'ಶ್ರಮಿಸುವುದು ಕರ್ತವ್ಯ. ಫಲ ಸಿದ್ಧಿಯಾಗುವವರೆಗೂ ಮುನ್ನಡೆಯುತ್ತಿರುವುದನ್ನು ಬಿಡಬಾರದೆ'ಂದು ಎಚ್ಚರಿಸಿದ್ದಾರೆ. ಈ ಎಚ್ಚರದಿಂದಲೇ ನಡೆಯುತ್ತಿರುವ ನನಗೆ ದಿವಂಗತರು ತಮ್ಮ ಕುಟುಂಬದ ಹಾಗೂ ಬಂಧುಗಳೆಲ್ಲರ ಜಾತಕದ ಎಲ್ಲಾ ವಿಷಯಗಳಲ್ಲಿಯೂ ತಮ್ಮಲ್ಲಿ ಜ್ಞಾನವಿದ್ದರೂ ನನ್ನೊಡನೆ ಕೇಳುವುದೂ ಕೇಳಿಸುವುದೂ ಅವರಿಂದ ನಡೆದುವು. 1935ರಿಂದ ಅವರ ಸಹೋದರರ ಮತ್ತು ಅವರ ಮಕ್ಕಳ, ಬಂಧು ವರ್ಗದವರ ಶುಭಾಶುಭ ಫಲಚಿಂತನೆಯನ್ನು ಜಾತಕದಿಂದ ಕಥಿಸಿರುವೆನು. ಮದುವೆಯ ವಿಚಾರ ಮತ್ತು ಅನಾರೋಗ್ಯ ಸಂಘಟನೆಗಳೊದಗಿದಾಗ ಮಕ್ಕಳು, ಜನಿಸಿದಾಗ, ಗ್ರಹ ಸ್ಥಿತಿ ಫಲ ಪರಾಮರ್ಶೆಗೊಂಡುದಲ್ಲದೆ ಅವನ್ನು ಬರೆದೂ ಕೊಟ್ಟಿರುವೆನು; ಸಂಭಾವನೆಯೂ ದೊರಕಿದೆ. ಇದರಿಂದ ದಿವಂಗತರಿಗೂ ಅವರ ಕುಟುಂಬೀಯರಿಗೂ ಜ್ಯೋತಿಷ ವಿಷಯದಲ್ಲಿ ತುಂಬಾ ಅಭಿಮಾನ ಗೌರವಗಳಿರುತ್ತವೆ-ಎಂಬುದನ್ನು ಪ್ರತ್ಯೇಕತ: ಹೇಳಬೇಕಾಗಿಲ್ಲ; ಅದೂ ಅಲ್ಲದೆ ಅವರ ಸಹೋದರರಲ್ಲಿ ಶ್ರೀ ಅನಂತ ಪೈಗಳವರಿಗೂ ಸಹೋದರ ಶ್ರೀ ನಾರಾಯಣ ಪೈಗಳ ಪುತ್ರರಲ್ಲಿ ಹಿರಿಯರಾದ ಶ್ರೀ ಡಾ॥ ಕೇಶವ ಪೈ. ಎಂ.ಬಿ.ಬಿ.ಎಸ್.ಎಫ್.ಆರ್.ಸಿ.ಎಸ್.ಹಾರ್ಟ್ ಸ್ಪೆಶಲಿಸ್ಟ್ ಇವರಿಗೂ ಇವರ ತಮ್ಮ ಶ್ರೀ ಡಾ॥ ದಾಮೋದರ ಪೈ. ಜಿ.ಸಿ.ಐ.ಎಮ್. ಇವರಿಗೂ ಸಹೋದರ ಶ್ರೀ ಸುಬ್ರಾಯ ಪೈಗಳ ಪ್ರಥಮ ಪುತ್ರ ಎಡ್ವೋಕೇಟ್ ಶ್ರೀ ಎಸ್.ತುಕಾರಾಮ ಪೈ ಇವರಿಗೂ ಇವರ ಕಿರಿಯ ತಮ್ಮ ಶ್ರೀ ರಂಗನಾಥ ಪೈ ಬಿ.ಇ.ಇವರಿಗೂ ಜ್ಯೋತಿಷ ಫಲ ವಿಷಯಜ್ಞಾನ ಇದ್ದು ಅಭ್ಯಾಸಿಗಳೂ, ಜಿಜ್ಞಾಸುಗಳೂ ಆಗಿರುವರು.

ಯಾರಾದರೂ ದಿವಂಗತ ಪೈಗಳವರಿಗೆ ಪತ್ರ ಮುಖೇನ ಜನನ ವಿಷಯದಲ್ಲಿ ಕೇಳಿದಾಗ ತಾವೇ ಅವರು ಗ್ರಹಕುಂಡಲಿಯನ್ನು ತಯಾರಿಸಿ ಶುಭಾಶುಭಗಳನ್ನು ಆದೇಶಿಸುತ್ತಿದ್ದರು. ಕುಂಡಲಿಯ ತಯಾರಿಕೆಯಲ್ಲೂ ಯಾವ ತೊಡಕು ಸಂಶಯಗಳು ಅನ್ಯರಿಗೆ ಉಂಟಾಗದಂತೆ ಶಕ ವರ್ಷ ಸಂವತ್ಸರ ಸೌರ ಚಾಂದ್ರ ಮಾಸ ದಿನಗಳನ್ನು ಗುರುತಿಸಿ ವಾರ, ಪಂಚಾಂಗಗಳನ್ನು ಬರೆದು ತಾರೀಕು ಮತ್ತು ಸಮಯವನ್ನು ಆವರಣದಲ್ಲಿ ಸೂಚಿಸಿರುವುದರೊಂದಿಗೆ ಸೂರ್ಯೋದಯಾದಿ ಘಟಿಯನ್ನು ಸ್ಪಷ್ಟವಾಗುವಂತೆ ಅಂಕಿಸಿಕೊಡುತ್ತಿದ್ದರು. ಇವನ್ನು ನಾವಿಂದೂ ಅವರ ಬಂಧುವರ್ಗ ಮತ್ತು ಅನ್ಯ ಪರಿಚಿತ ವ್ಯಕ್ತಿಗಳ ವಶವಿರುವ ಜನ್ಮ ಪತ್ರಿಕೆಗಳಿಂದ ಕಂಡುಕೊಳ್ಳಬಹುದು. ಮಾತ್ರವಲ್ಲದೆ ಅವರ ಬರೆಹ ಮತ್ತು ಶಾಯಿಗಳನ್ನು ಒಮ್ಮೆ ಗುರುತಿಸಿದ ವ್ಯಕ್ತಿಗೆ ಮತ್ತೆ ಅದು ದಿವಂಗತ ಪೈಯವರ ಬರೆಹ ಎಂಬುದನ್ನು ಸುಲಭವಾಗಿ ಗುರುರುತಿಸುವಂತಿವೆ. ಪತ್ರಕ್ಕೆ ತಡವಿರದೆ ಉತ್ತರ ಎಲ್ಲರಿಗೂ ಸೇರುತ್ತಿತ್ತು. ಎಷ್ಟು ಕೆಲಸವಿದ್ದರೂ ಹೊತ್ತು, ವೇಳೆ, ಮೇಳಾಮೇಳಿ ಮುಹೂರ್ತ

ವಿಷಯಗಳನ್ನು ಕುರಿತು ಪತ್ರ ಬರೆದರೆ ಶಾಸ್ತ್ರಾಭಿಮಾನದಿಂದಯುಕ್ತರಾಗಿ ಉತ್ತರಿಸುತ್ತಿದ್ದರು. ವೃದ್ಧಾಪ್ಯದಲ್ಲಿ ಹೀಗೆ ಉತ್ತರ ಬರೆದೂ "ನನಗೆ
ವೃದ್ಧಾಪ್ಯ, ಗಣಿತದಲ್ಲಿ ತಪ್ಪಿರಲೂ ಬಹುದು, ಬಲ್ಲವರೊಡನೆ ವಿಚಾರಿಸಿ" ಎಂದೂ ಬರೆಯುತ್ತಿದ್ದರಲ್ಲದೆ ಮಂಗಳೂರ ಜನರಿಗೆ ಮತ್ತು ನನ
ಪರಿಚಯವುಳ್ಳವರಿಗೆ ನನ್ನೊಡನೆ ಕೇಳುವಂತೆ ಬರೆದುದೂ ಇದೆ. ಇದು ಅವರಲ್ಲಿದ್ದ ಶಾಸ್ತ್ರಾಭಿಮಾನದ ಕಾಯುವಿಕೆಯೆಂದೇ ನನಗನಿಸುತ್ತದೆ.

ಫಲ ಬೋಧನೆಗೊಂಡಾಗ ಒಮ್ಮೆ ಗಜಕೇಸರಿಯೋಗವೆನ್ನಲು ಎರಡೂಕಾಲು ದಿನಗಳಲ್ಲಿ ಜನಿಸಿದವರಿಗೆಲ್ಲಾ ಗಜಕೇಸರಿಯೋ
ಗಬರುತ್ತದೆ: ಎಲ್ಲರಿಗೂ ಒಂದೇ ಫಲ ಎಂದು ಉಪಹಾಸಗೊಂಡರು. ನಾನಾಗ ಗಜಕೇಸರಿ ಯೋಗದಲ್ಲಿ ಚಂದ್ರನಿಂದ ನಾಲ್ಕು ಅಥವಾ ಏಳರ
ಗುರುವಿನಿಂದ ಪ್ರಬಲತೆಯಿರುವುದಿಲ್ಲ. ದಶಮದ ಗುರು ಶುಭಫಲ ಕೊಡುವನು; ಚಂದ್ರನಿಂದ ಚತುರ್ಥ ಅಥವಾ ಸಪ್ತಮದ ಗುರುವಿನಿಂ
ದುಂಟಾದ ಗಜಕೇಸರಿ ಯೋಗದಲ್ಲಿ ಹೆತ್ತವರಲ್ಲೊಬ್ಬರಿಗೆ ಮಾತ್ರ ದೀರ್ಘಾಯುಸ್ಸು; ಅಲ್ಲವೇ ಗೃಹಸುಖಾಭಾವ, ದೂರಸ್ಥಿತಿ, ಮಧ್ಯಾ
ಯುಸ್ಸು, ಹಿರಿಯರ ಸಂಪತ್ತುಗಳಿಗೆ ತೊಡಕು ಮೊದಲಾದುವು ಕಂಡುಬರುತ್ತವೆ; ಎಂದಾಗ ಪ್ರಸನ್ನಚಿತ್ತರಾಗಿ ಇದು ಸರಿ ಎಂದು ಅವರ
ನೆನಪಿನಲ್ಲಿರುವ ಮಂದಿಗಳ ಗ್ರಹಕುಂಡಲಿಗಳನ್ನು ಅದಕ್ಕುದಾಹರಿಸಿ ಸಮರ್ಥನೆಗೆ ನನಗನುಕೂಲರಾದರು. ಇಂತೆಯೇ ಶ್ರೀನಾಥಯೋಗ,
ಕಲಾನಿಧಿಯೋಗ, ಅಂಶಾವತಾರ ಯೋಗ, ವಿಚಾರವೆತ್ತಿದಾಗ ಫಲಶ್ರುತಿ ತಪ್ಪಾಗುತ್ತಿದೆ; ಅದು ಶಾಸ್ತ್ರೀಯ ರೀತ್ಯಾ ಹೇಗೆ ಸಂಗತವಾಗಬೇ
ಕೆಂಬುದನ್ನು ನಾನು ಹೇಳಿದಾಗ ಅದಕ್ಕೆ ಮೆಚ್ಚುಗೆಯನ್ನು ಪ್ರದರ್ಶಿಸಿದರು. ಉಚ್ಚ, ನೀಚ, ಗ್ರಹರ ವಿಚಾರದಲ್ಲಿ ವರಾಹನು ಬೃಹತ್ ಸಂಹಿ
ತೆಯಲ್ಲಿ ಬೃಹಸ್ಪತಿಚಾರಾಧ್ಯಾಯದಲ್ಲಿ ಉಚ್ಚದವನು ಯುದ್ಧವನ್ನು ಮಾಡಿಸುವನೆಂದೂ ನೀಚದವನು ಶಾಂತಿಯನ್ನು ಕೊಡುವನೆಂದೂ
ಹೇಳಿದ್ದನ್ನು ಉದಾಹರಿಸಿ ಉಚ್ಚದ ಗ್ರಹರು ವೇದಾಂತ ಜ್ಞಾನವನ್ನು ಕೊಡುವರು; ನೀಚದ ಗ್ರಹರು ಐಹಿಕ ಸುಖಧ್ಯೇಯವಾದ
(Materialism) ದಾಯಕರಾಗುವರೆಂದೊಡನೆ ಸಂತಸಗೊಂಡು ತಮ್ಮ ಶ್ರೀ ಅನಂತ ಪೈಗಳ ಸ್ಥಿತಿಯನ್ನು ಎದುರು ಮಡಗಿ ಹರ್ಷ
ತಾಳಿದರು. ದಿವಂಗತ ಪೈಗಳವರಿಗೆ ತಮ್ಮಂದಿರಲ್ಲಿಯೂ ತಮ್ಮಂದಿರ ಮಕ್ಕಳಲ್ಲಿಯೂ ಅತಿಪ್ರೇಮ. ಗಂಡು ಹೆಣ್ಣು ಎಂಬ ಭೇದವಿಲ್ಲ.
ಅಕ್ಕರೆಯಿಂದ ಮಕ್ಕಳಿಲ್ಲದ ದೊಡ್ಡಪ್ಪ, ಮಕ್ಕಳೆಲ್ಲರಿಗೂ ತಂದೆಯಲ್ಲಿರತಕ್ಕ ಭಕ್ತಿ ಪ್ರೇಮ ಗೌರವಗಳಿಗೆ ಪಾತ್ರರಾಗಿದ್ದರು. ಬಾಲಕರಿಂದ
ಏನಾದರೂ ಬಾಲ್ಯಚಾಪಲ್ಯದ ತಪ್ಪು ನಡೆದರೆ ಅವರ ಮುಂದೆ ಬರಲು ಅಂಜುವವರಾಗುತ್ತಿದ್ದರು; ಮಾತ್ರವಲ್ಲದೆ ಎಲ್ಲರ ಗ್ರಹಕುಂಡಲಿ
ಯವನ್ನು ಪರಾಮರ್ಶಿಸುವಂತೆ ದಿವಂಗತ ಪೈಯವರ ಆದೇಶವಾಣಿ ನನಗೊದಗುತ್ತಿತ್ತು. ಮಾತ್ರವಲ್ಲದೆ ಸುಬ್ರಾಯ ಪೈಗಳ ಮೂರನೆ
ಪುತ್ರ ಶ್ರೀ ರಂಗನಾಥ ಪೈ ಇವರು ಮನೆಗೆ ಬಂದು ಸಂಶಯ ವಿಚಾರಗಳನ್ನು ಪ್ರಶ್ನಿಸುತ್ತಲೂ ಭವಿತವ್ಯದ ವಿಚಾರದಲ್ಲಿ ಅತ್ಯುತ್ಸುಕತೆಯಿಂದ
ಶಾಲಾ ಸಂಪರ್ಕದಿಂದಲೇ ಗುರುಶಿಷ್ಯ ಬಂಧನವನ್ನು ನನ್ನಲ್ಲಿ ಮಡಗಿರುವರು. ಇದು ದಿ. ಪೈಗಳ ಕುಟುಂಬ ಪ್ರೇಮ. ಕುಟುಂಬೀಯರಿಗೂ
ಅವರಿಗೂ ಇರುವ ಜ್ಯೋತಿಷ ಪ್ರೇಮಾಭಿಮಾನ ಆಸಕ್ತಿ ಪ್ರಾವೀಣ್ಯದ್ಯೋತಕಗಳಾಗಿವೆ.

ಅನ್ಯರಿಗೆ ಫಲವನ್ನು ಉಪದೇಶಿಸುವಲ್ಲಿ ದಿ. ಪೈಯವರು ಅಸಾಮಾನ್ಯರೇ ಆಗಿದ್ದರು. ಮಂಜೇಶ್ವರ ವೇದಮೂರ್ತಿ ಭಿಕಾರಿ
ವಾಸುದೇವ ಪದ್ಮನಾಭ ಭಟ್ಟರು ಅನಾರೋಗ್ಯಯುಕ್ತರಾದರು. ತಾ॥ 9–10–1959 ಆಶ್ವೀಜ ಶುದ್ಧ ಬಿದಿಗೆ ಕಳೆದರೆ ಅವರ ಆಯುಸ್ಸ
ನ್ನು ನಿರ್ಣಯಿಸಬಹುದೆಂದು ಅವರ ಮಕ್ಕಳೊಡನೆ ಹೇಳಿದರು. ಇವರು ಪೈಯವರ ಬಂಧುವರ್ಗಕ್ಕೆ ಸೇರಿದವರು. ನನ್ನೊಡನೆಯೂ ದಿವಂ
ಗತ ಭಟ್ಟರ ಪುತ್ರ ಶ್ರೀ ಸಾಂತಯ್ಯ ಭಟ್ಟರು ತನ್ನ ತಂದೆಯ ವಿಚಾರದಲ್ಲಿ ಪ್ರಶ್ನಿಸಿದ್ದರು. ಇಬ್ಬರೂ ಸೂಚಿಸಿದ ಕಾಲ ಒಂದೇ ಆಗಿತ್ತು. ಅದೇ
ದಿನ ಭಟ್ಟರು ದಿವಂಗತರಾದರು. ಇದು ದಿ. ಪೈಯವರ ಆಯುರ್ದಾಯ ವಿಚಾರ ಜ್ಞಾನಕ್ಕೆ ಉದಾಹರಣೆಯಾಗಿರುತ್ತದೆ.

ಉಪನಯನಕ್ಕೆ ಗುರುಬಲ ತಂದೆಗೂ ಮಗನಿಗೂ ಬೇಕು. ಅಲ್ಲವಾದರೆ ಪ್ರಶಸ್ತವಲ್ಲ. ಇದನ್ನು ಪೈಗಳು ಚೆನ್ನಾಗಿ ಮಾನಿಸುವ
ವರಿದ್ದರು. ಪೈಗಳದೇ ಕುಟುಂಬ ಸಂಪರ್ಕವುಳ್ಳ ಸಾಹುಕಾರ ವೆಂಕಟೇಶ ಪೈಗಳು ತನ್ನ ಮಗನ ಉಪನಯನವನ್ನು ಅವರಿಗೆ ಗುರುಬಲವಿಲ್ಲ
ದಾಗ ಕಾರಣಾಂತರಗಳಿಂದ ಮಾಡಹೊರಟರು; ಅದರ ಮುನ್ನ ತಂದೆಗೆ ಗುರುಬಲ ಅಗತ್ಯವಿದೆ ಎಂದು ದಿ. ಪೈಯವರು ಆದೇಶಿಸಿದ್ದರು.
ಇದೇ ಅಭಿಪ್ರಾಯವನ್ನು ನನ್ನೊಡನೆ ಕೇಳಿದಾಗ ಹೇಳಿದ್ದೆ. ಉಪನಯನವಾದ ಒಂದು ವರುಷದೊಳಗೆ ತಂದೆಗೆ ಅಹಿತ ಪರಿಣಾಮ ಕಂಡು
ಬಂದಿತು. ಈ ವಿಷಯವನ್ನು ನನ್ನೊಡನೆ ದಿ.ಪೈಯವರು ಮಾತನಾಡಿದಾಗ ಇದು ವ್ಯಕ್ತವಾಯಿತು.

ಶಾಸನಾಧಾರ ಗ್ರಂಥಾಧಾರಗಳ ಮೂಲಕ ಗ್ರಂಥಕರ್ತೃಗಳ ಕಾಲವನ್ನೂ ಪ್ರಾಚೀನತೆಯನ್ನೂ ನಿರ್ದೇಶಿಸುವ ಅವರ ಕ್ರಮ
ಅಪ್ರತಿಮವಾದುದು ! "ಕನ್ನಡ ನಾಟಕಗಳ ಹಳಮೆ" (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಜೂನ್ 1946 ಸಂಪುಟ 31 ಸಂಚಿಕೆ 2) ಈ ಲೇಖನ
ದಲ್ಲಿ "ಕ್ರಿ.ಶ.1800ರವರೆಗೆ ಕನ್ನಡ ಸಾಹಿತ್ಯಕ್ಕೆ ದಕ್ಕಿರುವ ನಾಟಕವೆಂದರೆ ಮೈಸೂರಿನ ಅರಸನಾದ ಚಿಕ್ಕದೇವರಾಯನ (ಕ್ರಿ.ಶ. 1672–
1708) ಆಸ್ಥಾನ ಕವಿಯಾದ ಸಿಂಗರಾರ್ಯನ "ಮಿತ್ರವಿಂದಾ ಗೋವಿಂದಾ" ಎಂಬ ನಾಟಕ ಎಂದು ಆರಂಭಿಸಿ, ರತ್ನಾಕರ ಸಿದ್ಧ ಮತ್ತು
ಬಸವ ಪುರಾಣ, ಪಂಪರಾಮಾಯಣ, ಗದಾಯುದ್ಧ, ಗದಗುಭಾರತಗಳ, ಕೇಶಿರಾಜ, ನಾಗವರ್ಮರೇ ಮೊದಲಾದ ಕವಿಗಳ ವಚನಗಳಿಂದ
ನಾಟಕಪರ ಮಾತುಗಳನ್ನುದ್ಧರಿಸಿ ಕನ್ನಡ ಸಂಸ್ಕೃತ ಕವಿಗಳ ನಾಟಕ ಪರಂಪರೆಯ ಸಂಬಂಧವನ್ನು ತುದಿಯಿಂದ ಬೇರುವರೆಗೆ ತೋರಿಸಿಕೊಟ್ಟು
ಶ್ರೀ ನರಸಿಂಹಾಚಾರ್ಯರು ಕೊಟ್ಟ ಸಾಕ್ಷ್ಯಗಳು ಸರಿಯಾದುವುಗಳಾಗಿರದೆ ಇದ್ದುದಕ್ಕೆ ನನ್ನನ್ನು ಶ್ರೀ ನರಸಿಂಹಾಚಾರ್ಯರು ಎಚ್ಚರಿಸುತ್ತಾರೆ
ಎಂದು ನೋಯಿಸದೆ ನನ್ನ ಪ್ರತ್ಯುಕ್ತಿ ಹೀಗಿದೆ ಎಂದು ಸಾಕಷ್ಟು ಪ್ರಮಾಣೀಕರಿಸಿ "ಕೊನೆಗೆ ಕುಮಾರವ್ಯಾಸನ ಕಾಲದಲ್ಲಿ ಆ ಹಿಂದಣ ನಾಟಕ
ಗಳು ಇದ್ದುವೆಂದೂ ನಾಗವರ್ಮನ ಕಾವ್ಯಾವಲೋಕನದಲ್ಲಿ ಕನ್ನಡ ನಾಟಕಗಳಿಂದ ಎತ್ತಿಕೊಂಡ ಉದಾಹರಣೆಗಳಿವೆ ಎಂದೂ ಕೇಶಿರಾಜನೂ
ಕನ್ನಮಯ್ಯನೂ ಕನ್ನಡ ನಾಟಕ ರಚಿಸಿರುತ್ತಾರೆಂದೂ ಮೇಲಣ ವಿವರಣದಿಂದ ತಕ್ಕಷ್ಟಾದರೂ ನಿಷ್ಪನ್ನವಾಗುವುದರಿಂದ ಕ್ರಿ.ಶ. 9–10ಶತ
ಮಾನದಿಂದ ಕುಮಾರವ್ಯಾಸನ ಕಾಲದವರೆಗೆ ಕೆಲವಾದರೂ ಸಾಹಿತ್ಯೋಚಿತವಾದ ನಾಟಕಗಳೂ ಪ್ರಾಯಶ: ಹಲವಾರು ನಾಡಾಡಿಗಳ
ನಾಟಕಗಳೂ ಕನ್ನಡದಲ್ಲಿ ಇದ್ದಿರಬೇಕು." ಎಂದು ಬರೆದ ಲೇಖನದಲ್ಲಿ ಕ್ರಿ.ಶ.910ರಿಂದ ಕ್ರಿ.ಶ. 1800ರವರೆಗಿರುವ ಕಾಲಕ್ಕುದಾಹರಿಸಿದ
ವಿಷಯಗಳು ಕಾಲನಿರ್ದೇಶದ ಆಮೂಲಾಗ್ರ ರೂಪ ಚಿತ್ರಗಳಾಗಿವೆ.

1947 "ತೆಂಕನಾಡು" 31ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಾಲವಲ್ಲಿ ದಕ್ಷಿಣ ಕನ್ನಡದ ವಿಶಿಷ್ಟತೆಯನ್ನು ಕುರಿತು ಪ್ರಕಟಿಸ ಲಾದ ಈ ಹೊತ್ತಗೆಯಲ್ಲಿ "ತುಳುನಾಡು" (ಪೂರ್ವಸ್ಮೃತಿ) ಎಂಬ ವಿಸ್ತಾರವಾದ ಐವತ್ತೆರಡು ಪುಟಗಳಷ್ಟಿರುವ ಲೇಖನದಲ್ಲಿ ತುಳು ನಾಡ ಇತಿಹಾಸ ಪರಂಪರೆಯ ಕಾಲ ಸಮೀಕ್ಷೆಗೆ ಋಕ್ ಸೂಕ್ತದಿಂದ ತೊಡಗಿ ಒಂದನೆಯ ಶತಮಾನದ ವರೆಗಣ ಕಾಲಪ್ರತಿಪಾದನಾಧಾರ ಗಳನ್ನು ವಿವರಿಸಿದ್ದು ನೋಡುವಾಗ ಉಪಮಾನ ಬಾಹ್ಯವಾದ ವೈಶಿಷ್ಟ್ಯವನ್ನು ಕಾಲಗಣನಾ ವಿಚಾರದಲ್ಲಿರುವುದನ್ನು ಕಾಣುವೆವು.

"ಕಂಠೀರವ" ವಿಶೇಷಾಂಕ ಒಂದರಲ್ಲಿ "ಕರ್ಣಾಟಕವೋ ಕರ್ನಾಟಕವೋ?" ಎಂಬ ಶಿರೋನಾಮೆಯ ಲೇಖನದಲ್ಲಿ ಧ್ವನಿಶಾಸ್ತ್ರದ ವರೆಗೂ ವಿಚಾರ ಬಂದು ವ್ಯಾಕರಣದಲ್ಲಿ ಹೇಳಲಾದ ರ, ಟ, ವರ್ಗಪಕಾರ, ಮೂರ್ಧನ್ಯ, ತವರ್ಗ, ಸಕಾರ, ದಂತ್ಯ, ಎಂಬೀ ವಿಷಯಗಳನ್ನು ಸಾಧಾ ರವಾಗಿ ಶಾಸನ ಹಾಗೂ ಧ್ವನಿಶಾಸ್ತ್ರ, ವ್ಯಾಕರಣ ನಿಯಮಗಳಿಂದ ಪಾಣಿನಿಯ "ತುಲ್ಯಾಸ್ಯ ಪ್ರಯತ್ನಂ ಸವರ್ಣಂ" ಎಂಬೀ ಸೂತ್ರ ನಿಯಮ ಸಂಬಂಧವನ್ನು ಜೋಡಿಸಿದ್ದು ಕಾಣುವಾಗ ಪಾಣಿನಿಯ ಸಿದ್ಧಾಂತ ಕೌಮುದಿಯ ಸಮ್ಯಕ್ ಪರಿಜ್ಞಾನ ಕಂಡುಬರುತ್ತಿದೆ. ಮಾತ್ರವಲ್ಲದೆ ಕ ರ್ಣಾಟಕವೆಂದೇ ಆಗಬೇಕೆಂಬೀ ವಿಷಯವನ್ನು ತಿಳಿಸುವಲ್ಲಿಯೂ "ಧ್ವನಿವಿರುತ"ದ ಶಕುನ ಸಂಬಂಧದ ಸಂಹಿತಾ ಸಂಪರ್ಕದ ಜ್ಯೋತಿಷ ವಿ ಷಯ ವಿಭಾಗಗಳು ಅಳವಟ್ಟಿವೆ.

ಬೊಂಬಾಯಿಯಲ್ಲಿ ಜರಗಿದ ಮೂವತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷಸ್ಥಾನದಿಂದ "ಮುಂಬಯಿ ಕೊಂಕಣ ಪ್ರದೇಶದಲ್ಲಿದೆ ! ಕ್ರಿ.ಶ.8–9ನೆಯ ಶತಮಾನದಿಂದ 13ನೆಯ ಶತಮಾನದವರೆಗಾದರೂ ಉತ್ತರ ಕೊಂಕಣವನ್ನು ಆಳಿದ ಶಿಲಾಹಾರ ವಂ ಶದ ಅರಸರು ಕರ್ನಾಟಕದ ಚಕ್ರವರ್ತಿಗಳಾದ ರಾಷ್ಟ್ರಕೂಟರ ಹಾಗೂ ಕಲ್ಯಾಣಿಯ ಪಶ್ಚಿಮ ಚಾಳುಕ್ಯರ ಕೈಕೆಳಗೆ ಮಹಾ ಸಾಮಂತರೂ ಮಹಾ ಮಂಡಲೇಶ್ವರರೂ ಆಗಿದ್ದರೆಂದು ಅವರ ಅನೇಕ ಶಾಸನಗಳಿಂದ ತಿಳಿಯುವುದೇ ಅಲ್ಲ, ರನ್ನನ "ಗದಾಯುದ್ಧ"ದಲ್ಲಿ ಉತ್ತರ ಕೊಂ ಕಣದ ಅಪರಾದಿತ್ಯನನ್ನು ಚಾಳುಕ್ಯ ಸತ್ಯಾಶ್ರಯನು ಗೆದ್ದುದನ್ನು (I. 22-28) ಹೇಳಿದೆ. ಗದಾಯುದ್ಧದಲ್ಲಿಯ (I. 26) ಆ ಕಂದ ಪದ್ಯವು ಇಂತಿದೆ.

ಕಂಡೆಂ ಗ್ರಹಣಮದನಾ
ಖಂಡಲದಿಙ್ಮುಖದೆ ಬಂದು ಸರ್ವಗ್ರಾಸಂ॥
ಗೊಂಡತ್ತಪರಾದಿತ್ಯನ
ಮಂಡಲಮಂ ಬಾಹುರಾಹು ಸತ್ಯಾಶ್ರಯನಾ॥

ಇದರಲ್ಲಿ ರಾಷ್ಟ್ರಕೂಟರನ್ನು ಚಾಳುಕ್ಯರ ಆಹವಮಲ್ಲ ತೈಲಪನು ಗೆದ್ದು ಆತನ ಬಳಿಕ ಅವರ ಸಮ್ರಾಜತೆಯ ಸಿಂಹಾಸನದಲ್ಲಿ ಆಹವಮಲ್ಲ ಸತ್ಯಾಶ್ರಯನು ನೆಲಸಿದ್ದಾಗ ಈತನ ಒಡೆತನವನ್ನು ಒಪ್ಪದಿದ್ದ ಉತ್ತರ ಕೊಂಕಣದ ಅರಸನಾದ ಅಪರಾದಿತ್ಯನಿಗೆ ಈತನಿಂದಾದ ಪರಾಭವವನ್ನೂ ಅದೇ ಕಾಲಕ್ಕೆ ಸರಿಯಾಗಿ ಕ್ರಿ.ಶ.1007ನೆಯ ಮೇ 19ನೆಯ ತಾರೀಕಿನಂದು ಅಪರಾಹ್ಣದಲ್ಲಿ ಅತಏವ ಅಪರಾದಿತ್ಯನಿಗೆ ತಗುಲಿದ ಪೂರ್ಣ ಗ್ರಹಣವನ್ನು ಈ ಅಪ್ರತಿಮವಾದ ರೂಪಕ ಶ್ಲೇಷೆಯಿಂದ ಬಣ್ಣಿಸಿದೆ ಎಂದ ಮಾತನ್ನು ಅಧ್ಯಕ್ಷ ಭಾಷಣದ ಮುದ್ರಿತ ಪುಸ್ತಕಗಳಲ್ಲಿ ನಾವು ಕಾಣುತ್ತಿರಲು ದಿವಂಗತ ಪೈಯವರು ಗ್ರಹಣ ಗಣಿತ ಜ್ಞಾನವುಳ್ಳವರಾಗಿದ್ದರೆಂಬುದನ್ನು ಗಣಿತತಜ್ಞರಾರೂ ಅಲ್ಲಗಳೆ ವಂತಿಲ್ಲ. ಜ್ಯೋತಿಷವು ಗಣಿತ, ಸಂಹಿತಾ, ಹೋರಾ ಎಂಬ ಸ್ಕಂಧತ್ರಯ ಯುಕ್ತವಾಗಿದೆ. ಪ್ರಮಾಣಗಣಿತಸ್ಕಂಧ. ಸಂಹಿತಾಹೋರಾ ಫಲ ಬೋಧಕಗಳು.

ಸ್ಕಂಧತ್ರಯಾತ್ಮಕಂ ಜ್ಯೋತಿಶಾಸ್ತ್ರ—
ಮೇತತ್ ಷಡಂಗವತ್॥
ಗಣಿತಸಂಹಿತಾಹೋರಾ ಚೇತಿ
ಸ್ಕಂಧತ್ರಯಂ ಮತಮ್॥
ಪ್ರಮಾಣ ಫಲಭೇದೇನ
ದ್ವಿವಿಧಂಚ ಭವೇದಿದಮ್॥
ಪ್ರಮಾಣಂ ಗಣಿತಸ್ಕಂಧ:
ಸ್ಕಂಧಾವಸ್ಯಾಫಲಾತ್ಮಕಾ

ಎಂಬ ವಚನಗಳಿಂದ ಈ ವಿಷಯ ವ್ಯಕ್ತವಾಗುತ್ತಿದೆ. ಈ ಮೇಲಣ ವಿಚಾರಗಳಿಂದ ದಿ. ಪೈಯವರು ಗಣಿತ, ಸಂಹಿತಾ, ಹೋರಾ ಎಂಬೀ ಮೂರು ಜ್ಯೋತಿಶ್ಶಾಸ್ತ್ರ ಸಂಬಂಧ ವಿಷಯಗಳನ್ನೂ ಬಲ್ಲವರಾಗಿದ್ದರೆಂಬುದನ್ನು ಪ್ರತ್ಯೇಕತ: ಉಲ್ಲೇಖಿಸದೆ ಮನವೊಪ್ಪಲಾರದು.

ಸಾಹಿತ್ಯಂ ಜನಜೀವನಸ್ಯ ಮುಕುರಾದರ್ಶ: ಸದಾ ನಿರ್ಮಲ:
ಬಿಂಬಾನೀಹ ಯಶೋವ್ಯತೀತ ಸಮಯೇ ದೇಶೇಽಪಿಯೋ ದರ್ಶಯೇತ್॥
ಆಶಾಭಂಗವಿಯೋಗವಿಹ್ವಲಜನಂ ಚಾಶ್ವಾಸ್ಯ ಯಸ್ತೋಷಯೇತ್
ಮೋಹೋನ್ಮೂಲನ ಶಾಂತಿಸೌಖ್ಯಕಲನೇ ಯೋರತ್ನದೀಪಾಯತೇ॥

ಎಂದು ಸಾಹಿತ್ಯ ವಿಚಾರದಲ್ಲಿ ಲಾಕ್ಷಣಿಕರು ಹೇಳಿರುವುದನ್ನು ಮನವರಿಕೆಗೊಳ್ಳುವೆನು. ಸಾಹಿತ್ಯವು ಸದಾ ನಿರ್ಮಲವಾಗಿದ್ದು ಜನಜೀವನವ ನ್ನು ತಿದ್ದಲಿರುವ ಕನ್ನಡಿ. ಅದನ್ನು ನೋಡಿಯೇ ಜೀವನವನ್ನು ತಿದ್ದಿಕೊಳ್ಳಬೇಕು. ಸಾಹಿತ್ಯ ದೇಶಕಾಲಗಳ ಯಶೋಬಿಂಬವನ್ನು ತೋರಿಸು ತ್ತಿರುವುದು; ಮಾತ್ರವಲ್ಲದೆ ದೇಶಕಾಲಗಳಿಗೆ ಬೇಕಾದ ಯಶೋಚಿತ್ರವನ್ನು ಪ್ರದರ್ಶಿಸಲಿಕ್ಕಿರುವುದು. ಆಶಾಭಂಗ, ವಿಯೋಗ ದು:ಖಪೀಡಿ

ತರನ್ನು ಸಮಾಧಾನಿಸಿ ಸಂತಸ ಗೊಳಿಸುವುದು. ಸಂತಸಕ್ಕಿರುವ ಆಶ್ವಾಸನೆಯನ್ನು ಕೊಡಲಿಕ್ಕಾಗಿಯೇ ಇರುವುದು. ಮೋಹ ಅಜ್ಞಾನಗಳನ್ನು ಕಿತ್ತೊಗೆದು ಶಾಂತಿ ಸೌಖ್ಯಗಳ ಕೂಡಿಕೆ ಇರುವ, ರತ್ನದೀಪ ಸಾಹಿತ್ಯ. ರತ್ನ ದೀಪಿಕೆಗೆ ಎಣ್ಣೆ ಬೇಡ. ಬೆಳಕು ಕೊಡುತ್ತಿರುವುದು. ತಾಪ ಕೊಡ ಲಾರದು. ಸದಾ ಪ್ರಕಾಶಿಸುತ್ತಿರುವುದು. ಇಂತಹ ಸಾಹಿತ್ಯದ ನಿರ್ಮಾಣ ದಿವಂಗತ ರಾಷ್ಟ್ರಕವಿ ಗೋವಿಂದ ಪೈಗಳಿಂದಾಗಿದೆ. ಅವರ ಮಾರ್ಗ ವನ್ನನುಸರಿಸುವುದೂ ಆ ಧ್ಯೇಯ ವಿಚಾರಗಳಿಂದ ತುಂಬಿ ನಡೆಯುತ್ತಿರುವುದೂ ನಮಗುಳಿದ ಕರ್ತವ್ಯ.

ಪ್ರಾಯೇಣ ಸೂತ್ರೇಣ ವಿನಾಕೃತಾನಿ
ಪ್ರಕಾಶ ರಂಧ್ರಾಣಿ ಚಿರಂತನಾನಿ॥
ರತ್ನಾನಿ ಶಾಸ್ತ್ರಾಣಿ ಚ ಯೋಜಿತಾನಿ
ನವೈರ್ಗುಣೈರ್ಭೂಷಯಿತುಂ ಕ್ಷಮಾಣಿ॥

(ವರಾಹಮಿಹಿರ ಪ್ರಣೀತ ಬೃಹತ್ಸಂಹಿತಾ ಅಧ್ಯಾಯ 103 ಪದ್ಯ 1)

ಪ್ರಾಚೀನವಾದ ರತ್ನಹಾರ, ಹಳೆದಾರ ಕಡಿದಿರಲು ಧರಿಸಲು ಅರ್ಹವಾಗದು. ಹೊಸದಾರದಿಂದ ಬಂಧಿಸಿದಾಗ ಧರಿಸಲು ಬರು ತ್ತದೆ. ರತ್ನಗಳೂ ಶಾಸ್ತ್ರಗಳೂ ನವಗುಣಗಳಿಂದ (ಹೊಸದಾರಗಳಿಂದ) ಯೋಜಿಸಿದಾಗ ಮಾತ್ರ ಅಲಂಕರಿಸಲು ಯೋಗ್ಯಗಳೆನಿಸುತ್ತವೆ-ಎಂಬ ವರಾಹನ ಈ ಮಾತು ನಮಗೆಲ್ಲಾ ಮಾನ್ಯವಲ್ಲವೆ? ಅಂತೆಯೇ ಶ್ರಮಿಸೋಣ. ಅದಕ್ಕೆ ಪರಮಾತ್ಮನು ಭಾರತಮಾತೆಯ ಪುತ್ರರೆಲ್ಲರನ್ನೂ ಅನುಗ್ರಹಿಸಲಿ. ಕನ್ನಡನಾಡು ಯತಿತ್ರಯರ ಧರ್ಮತ್ರಿವೇಣಿಯ ಹೊನಲುಗೊಂಡುದಾಗಿದ್ದು ಆ ಹೊನಲಲ್ಲಿ ಮಿಂದ ಪಾವಿತ್ರ್ಯದುದ್ಯಮ ಬಳೆದು ಧರ್ಮದರ್ಶಿಕತ್ವದ ಶಕ್ತಿ ನಮ್ಮಲ್ಲಿ ತೋರಿಬರುವಂತಾಗಲೆಂದು ಭಾರತಮಾತೆ ಮತ್ತು ಕನ್ನಡಮಾತೆಯರಲ್ಲಿ ಮಣಿದು ಚಿರಂತಪ ನಾಗಿ ಬೇಡುತ್ತಿರುವೆನು.



# "ಬೆಲ್ಲವಾಗಿರಬೇಕು ಬಂಧುಜನರೊಳಗೆ"

ಶ್ರೀ ರಾಜಾರಾಮ ಮಲ್ಯ.

ಪೂಜ್ಯ ಗೋವಿಂದ ಪೈ ಅವರನ್ನು ಹಲವರು ಹಲವು ದೃಷ್ಟಿಗಳಿಂದ ಕಂಡದ್ದುಂಟು. ಕವಿ, ಇತಿಹಾಸ ಸಂಶೋಧಕ, ಉದ್ದಾಮ ಪಂಡಿತ, ಬಹುಭಾಷಾ ಕೋವಿದ, ನಿಸ್ಸೀಮ ಸಾಹಿತಿ, ವೇದಾಂತಿ, ನಾಟಕಕಾರ ಇತ್ಯಾದಿ ಅವರ ಬಹುಮುಖ ಪ್ರತಿಭೆಯನ್ನು ಹೊಗಳಿದವರುಂಟು. ಆದರೆ ತಮ್ಮ ಸಮೀಪದ ಬಂಧು ಮಿತ್ರರಲ್ಲಿ ಅವರು ಹೇಗೆ ವರ್ತಿಸುತಿದ್ದರು, ಮತ್ತು ಅವರ ನಿಕಟವರ್ತಿಗಳ ದೃಷ್ಟಿಯಲ್ಲಿ ಅವರು ಹೇಗೆ ತೋರುತ್ತಿದ್ದರು ಎಂಬುದು ಈ ಲೇಖನದ ವಸ್ತು.

ಶ್ರೀ ಪೈ ಅವರನ್ನು ನೋಡಲು ಅವರೊಡನೆ ಮಾತಾಡಲು ದೇಶವಿದೇಶದಿಂದ ಪಂಡಿತರೂ ಪಾಮರರೂ ಬರುತ್ತಿದ್ದರು. ಅವರಿಗೆ ಎಲ್ಲರೊಡನೆಯೂ ಒಂದೇ ವಿಧದ ಆತ್ಮೀಯತೆ; ಒಂದೇ ರೀತಿಯ ಸ್ವಾಗತ. ಆಗ ಅವರ ಮಾತುಗಳನ್ನು ಕೇಳಬೇಕು; ಅವರ ಜ್ಞಾನಭಂಡಾರವನ್ನು ನೋಡಬೇಕು; ಅವರ ನೆನಪಿನ ಅಗಾಧತೆಯನ್ನು ಕಾಣಬೇಕು. ಯಾವ ತೇದಿಯಲ್ಲಿ ಏನೇನು ನಡೆಯಿತು, ಯಾವ ಗ್ರಂಥದಲ್ಲಿ ಏನೇನು ಎಲ್ಲೆಲ್ಲಿದೆ, ಯಾರು ಯಾವಾಗ ಏನು ಹೇಳಿದರು-ಇವೆಲ್ಲ ಅವರ ಅಗಾಧ ಸ್ಮರಣಾಸಂಗ್ರಹದಿಂದ ಬೇಕಾದಂತೆ ಪ್ರವಹಿಸುತ್ತಿದ್ದುವು.

ಆದರೆ ಸಾಹಿತ್ಯ, ಇತಿಹಾಸ, ಪಾಂಡಿತ್ಯಗಳ ಕ್ಷೇತ್ರದಿಂದ ಹೊರಗೆ ನಾವು ಕಾಣುತ್ತಿದ್ದುದೇನು? ಒಂದು ಮಗು! ಮುಗ್ಧ ಮಗು! ಶುದ್ಧ ಹೃದಯದ, ನಿಷ್ಕಪಟ ಮನೋವೃತ್ತಿಯ. ಬಿಚ್ಚು ಮಾತಿನ ಮಗು! ಅವರಿಗೆ ವಯಸ್ಸು 70 ಕಳೆದಿದ್ದರೂ ಅವರಕ್ಕ ಅವರನ್ನು ಕರೆಯುತ್ತಿದ್ದುದೂ "ಮಗೂ!(ಚರ್ಡಾ!)"ಎಂದೇ!

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಎಂಬ ಮಾತು ಶ್ರೀ ಪೈ ಅವರ ವಿಷಯದಲ್ಲಿ ಸಂಪೂರ್ಣ ಸತ್ಯ! ಮನಸ್ಸಿನಲ್ಲಿದ್ದುದನ್ನು ತಟ್ಟನೆ ನುಡಿಯುವುದು, ಅಂತೆಯೇ ನಡೆಯುವುದು ಈ ಮಹಾತ್ಮರ ಹುಟ್ಟುಗುಣ.

ಪೂಜ್ಯ ಪೈ ಅವರಿಗೆ ಸಂತಾನವಿರಲಿಲ್ಲ. ಹುಟ್ಟಿದ ಒಂದು ಹೆಣ್ಣು ಕೂಸು ಶಿಶುವಾಗಿದ್ದಾಗಲೆ ತೀರಿಹೋಗಿತ್ತು. ಪುತ್ರಶೋಕದಿಂದ ಬೆಂದ ಅವರ ಹೃದಯ ತಮ್ಮಂದಿರ ಮಕ್ಕಳ ಮೇಲೆ ಅಕ್ಕರೆಯ ಹಾಲು ಸುರಿಸುತ್ತಿತ್ತು. ಜೇನು ಹರಿಸುತ್ತಿತ್ತು, ಸಂಜೆಯಾದೊಡನೆ ಈ ಪುಟ್ಟ ಮಕ್ಕಳು ದೊಡ್ಡಪ್ಪನ ಸುತ್ತಲೂ ಮುತ್ತಿಗೆ ಹಾಕುತ್ತಿದ್ದರು. "ದೊಡ್ಡಪ್ಪಾ ಕಥೆ ಹೇಳು!"

"ದೊಡ್ಡಪ್ಪಾ ಕಥೆ ಹೇಳು!"

"ಸೈ! ಸುರುವಾಯಿತೋ? ಎಲ್ಲಿಂದ ತರಲಿ ನಿಮಗೆ ಕಥೆಗಳನ್ನು"

"ಒಂದೇ ಕಥೆ; ಒಂದೇ ಕಥೆ ಸಾಕು."

"ಈಗ ಒಂದು. ಮತ್ತೆ ಒಂದಾದ ಮೇಲೊಂದು!"

ಹೀಗೆ ಪ್ರಾರಂಭವಾಗುತ್ತಿತ್ತು ಅವರ ಕಥೆಹೇಳುವ ಕಾರ್ಯಕ್ರಮ. ಅವರ ಕಲ್ಪನಾ ಶಕ್ತಿಯಲ್ಲಿ ಕಥೆಗಳಿಗೆ ಬರಗಾಲವಿದ್ದಿತೆ? ಏನೆಲ್ಲ ಕಥೆಗಳು! ಪುರಾಣಗಳಿಂದ, ಇತಿಹಾಸದಿಂದ, ಪಂಚತಂತ್ರದಿಂದ, ಚಿತ್ರ ವಿಚಿತ್ರ ಕಟ್ಟುಕತೆಗಳು ಸಹ ಅವುಗಳಲ್ಲಿದ್ದುವು. ಈ ಮಕ್ಕಳು ದೊಡ್ಡವರಾಗುವವರೆಗೆ ಕಥೆ ಹೇಳುವುದು ಶ್ರೀ ಪೈಗಳ ನಿತ್ಯ ಕಾರ್ಯಕ್ರಮಗಳಲ್ಲೊಂದು. ಆ ಮಕ್ಕಳಿಗೂ ತಮ್ಮ ತಾಯ್ತಂದೆಯರಿಗಿಂತಲೂ ದೊಡ್ಡಪ್ಪನೊಡನೆ ಹೆಚ್ಚು ಸಲಿಗೆ, ಹೆಚ್ಚು ಮಮತೆ. ಯಾವ ಸಮಸ್ಯೆಯಿದ್ದರೂ ಯಾವ ಸಂದೇಹವಿದ್ದರೂ ದೊಡ್ಡಪ್ಪನದೇ ಕೊನೆಯ ಮಾತು.

ಹಾಗೆಯೇ ಇತರ ಚಿಕ್ಕಮಕ್ಕಳೆಂದರೆ ಶ್ರೀ ಪೈ ಅವರಿಗೆ ಅಷ್ಟೇ ಪ್ರೇಮ. ಇಷ್ಟು ಓದಿದ, ಇಷ್ಟು ಬರೆದ, ಇಷ್ಟು ಹೆಸರಾಂತ ಈ ಮಹಾನ್ ವ್ಯಕ್ತಿಯ ನಿಜವಾದ ವ್ಯಕ್ತಿತ್ವವನ್ನು ಕಾಣಬೇಕು ಅವರು ಮಕ್ಕಳೊಡನೆ ಮಾತಾಡುವಾಗ. 3–4 ವರ್ಷದ ಮಗು ಆದಾಗ ತಾನೆ ಭಾಷೆ ತಿಳಿದು ಸುತ್ತಲ ಪ್ರಪಂಚದ ಮೇಲೆ ಆಚ್ಚರಿಯ ಕಣ್ಣು ಹಾಯಿಸಿ "ಅಜ್ಜಾ ಇದು ಏನು?" ಎಂದು ಕೇಳಿತೆನ್ನೋಣ. ನಾವು ಯಾರೇ ಆದರೂ ಕೆಲವು ಮಾತುಗಳಲ್ಲಿ ಏನಾದರೂ ಹೇಳುವುದು; ಅಥವಾ ಮಗುವನ್ನು ಮುದ್ದಿಸುವುದು, ಅಷ್ಟೆ ತಾನೆ! ಆದರೆ ಗೋವಿಂದ ಪೈಗಳು ಹಾಗಲ್ಲ. ತನ್ನಷ್ಟೇ ವಯಸ್ಸಾದ ವ್ಯಕ್ತಿ ಆ ಪ್ರಶ್ನೆಯನ್ನು ಕೇಳಿದ್ದರೆ ಹೇಗೋ ಅಷ್ಟೇ ಮನಸ್ಪೂರ್ವಕವಾಗಿ, ಅಷ್ಟೇ ಸಂಪೂರ್ಣವಾಗಿ ವಿವರಿಸಿ ಹೇಳುತ್ತಿದ್ದರು. ಮಗುವಿಗೆ ಅದು ತಿಳಿದರೂ ತಿಳಿಯದಿದ್ದರೂ, ಹತ್ತಿರ ಕುಳಿತು ಕೇಳುತ್ತಿದ್ದ ನಮ್ಮಂತಹವರಿಗೆ ಅದೊಂದು ಔತಣ.

ಯಾವ ಮಗುವಿನ ಜನ್ಮದಿನ ಬರಲಿ, ಶ್ರೀ ಗೋವಿಂದ ಪೈ ಅವರ ನೇರಳೆಯ ಶಾಯಿಯ ಒಂದು ಕಾರ್ಡು ತಪ್ಪದೇ ಸಿದ್ಧ. ಅದರಲ್ಲಿ ಎಷ್ಟು ಪ್ರೇಮ. ಎಷ್ಟು ಆಶೀರ್ವಾದಗಳು! ಅದರ ಬೆನ್ನ ಹಿಂದೆಯೇ ಮಂಜೇಶ್ವರ ದೇವರ ಪ್ರಸಾದವೂ! ಅವರ ತಮ್ಮ ಶ್ರೀ ನಾರಾಯಣ ಪೈಯವರ ಇಬ್ಬರು ಪುತ್ರಿಯರು ಚಿಕ್ಕಂದಿನಲ್ಲೇ ತೀರಿಹೋಗಿದ್ದರು. ಶ್ರೀ ಗೋವಿಂದ ಪೈ ಅವರು ತಮ್ಮ "ವೈಶಾಖಿ"ಯನ್ನು "ಇವರ ಅಮ್ಲಾನವಾದ ಅಕ್ಕರೆಯ ನೆನವಿಗೆ ಕಣ್ಣೀರಿನ ಕಾಣಿಕೆ"ಯನ್ನಾಗಿ ಕೊಟ್ಟಾಗ ಬರೆದುದನ್ನು ನೋಡಿ:–

ಇರುಳು ಹಗಲಿಸುವಂದು, ಹಗಲಿರುಳಿಪಂದು,
ಕಾವೆ ನಾನನುದಿನಂ ಬಹಿರಿ ನೀವೆಂದು?
ಕಾದ ದಿನಗಳೆ ಸಂತು ! ಕಾಯಿ ನೀವಿನ್ನು,
ನಿಮ್ಮ ಬಳಿಗಯ್ದುವೆನ್ನಯ ದಾರಿಯುನ್ನು.

× × ×

ಈಗ ನೀವಿರುವಲ್ಲಿ ಕೊಳುವಿರೇನಮ್ಮ
ಈ ಕಾಣಿಕೆಯ? ನೆನವಿರೇನಲ್ಲಿ ನಮ್ಮ?"

ಹಾಗೆಯೆ, "ಗೊಲ್ಗೊಥಾ" ಮಹಾಕಾವ್ಯವನ್ನು "ನನ್ನ ತಮ್ಮಂದಿರ ಮುದ್ದು ಮಕ್ಕಳಿಗೆ" ಕಾಣಿಕೆ ಕೊಟ್ಟಾಗ ಬರೆದುದನ್ನೂ ನೋಡಿರಿ

ದೇವರೆಂಬುದೇ ಸತ್ಯ, ಸತ್ಯವೆಂಬುದೆ ದೇವ
ರೆಲ್ಲ ರಥಕೊಂದೆ ಪಥ-ತತ್ತ್ವವಿದೆ ಭಾವ್ಯಂ,
ಇಂತಖಿಲ ಧರ್ಮಗಳೊಳೇಕ ದೇವನನೋವ
ಲೆಂದು ಮಕ್ಕಳಿರ ನಿಮಗಿತ್ತೆನೀ ಕಾವ್ಯಂ,"

—ಹೀಗಿತ್ತು ಅವರ ಮಕ್ಕಳ ಮೇಲಣ ಪ್ರೇಮ.

ಅವರ ಬಂಧುಮಿತ್ರರ ಮೇಲಿದ್ದ ಪ್ರೇಮವೂ ಅಷ್ಟೆ ಅಮ್ಲಾನವೂ. ಅಷ್ಟೆ ವಿಪುಲವೂ ಆಗಿತ್ತು. ಮಂಜೇಶ್ವರದಿಂದ ಮಂಗಳೂರಿಗೆ ಬಂದರೆಂದರೆ, ಸಮೀಪದ, ದೂರದ ಎಲ್ಲಾ ಬಂಧುಗಳ, ಮಿತ್ರರ ಮನೆಗಳಿಗೆ ಕಾಲುನಡಿಗೆಯಿಂದಲೇ ಹೋಗುತ್ತಿದ್ದರು. ಆ ನಡಿಗೆಯಾದರೋ ಅತಿತ್ವರಿತವಾದುದು, ಗಂಭೀರವಾದುದು ! ಬಿಸಿಲು ಮಳೆಗಳ ಲಕ್ಷ್ಯವೇ ಇದ್ದಿಲ್ಲ. "ಏನೋ ! ಹೇಗಿದ್ದಿ? ಸೌಖ್ಯವಷ್ಟೆ ! ಹೆಂಡತಿ ಮಕ್ಕಳೆಲ್ಲ ಹೇಗಿದ್ದಾರೆ? ವ್ಯಾಪಾರ ಹೇಗಿದೆ?" ಎಂಬಿತ್ಯಾದಿ ಕುಶಲ ಪ್ರಶ್ನೆಗಳು; "ದೇವರು ಒಳ್ಳೇದು ಮಾಡಲಿ, ಹೋಗಿ ಬರುತ್ತೇನೆ" ಎಂಬಿತ್ಯಾದಿ ಆಶೀರ್ವಾದಪೂರ್ವಕ ಬೀಳ್ಕೊಳ್ಳುವಿಕೆ ! ನಕ್ಕರೆ ಹೃತ್ಪೂರ್ವಕವಾದ, ಕೇಕೆಹಾಕಿಯೋ ಎಂಬಂತಹ ನಗೆ ! ಮಾತಾಡಿದರೆ ನಿಷ್ಕಪಟ ಮನಸ್ಸಿನಿಂದ ನಿರ್ಭಯವಾದ ಮಾತುಗಳು ಗಂಭೀರ ಧ್ವನಿಯಿಂದ ಹೊರಡುತ್ತಿದ್ದುವು.

ಭಿಕ್ಷುಕರು, ಅನಾಥರು, ದು:ಖಿಗಳು ಇವರೆಂದರೆ ಶ್ರೀ ಪೈಗಳಿಗೆ ಪ್ರಾಣ. ಅವರ ಮನೆಯಿಂದ ಯಾರೊಬ್ಬನೂ ಬರಿಗೈಯಿಂದ ಹಿಂತೆರಳಲಿಲ್ಲ. ಮನೆಯಿಂದ ಹೊರಡುವಾಗ ಚಿಲ್ಲರೆ ನಾಣ್ಯಗಳ ಸಂಗ್ರಹವನ್ನೇ ತರುತ್ತಿದ್ದರು. ದಾರಿಯುದ್ದಕ್ಕೂ ಇದ್ದ ಭಿಕ್ಷುಕರಿಗೆಲ್ಲ ಭಿಕ್ಷೆ ನೀಡುತ್ತಿದ್ದರು. ಕೊಡಿಯಾಲಬೈಲು ಚರ್ಚಿನ ಬಳಿ ಅಡ್ಡರಸ್ತೆಯಲ್ಲಿ ಕುಷ್ಠರೋಗಿಯೊಬ್ಬನು ಚಿಕ್ಕ ಗಾಡಿಯಲ್ಲಿ ಕುಳಿತು ಭಿಕ್ಷೆ ಬೇಡುತ್ತಿದ್ದುದನ್ನು ಹಲವರು ಬಲ್ಲರು. ಈತನಿಗೆ ಶ್ರೀ ಪೈಗಳು ತಪ್ಪದೆ ಪ್ರತಿವರ್ಷವೂ ಒಂದು ಮುಂಡು ಮತ್ತೊಂದು ಶರ್ಟನ್ನು ಮರೆಯದೆ ಕೊಡುತ್ತಿದ್ದರು. ಅವರು ಅದನ್ನು ತಂದಾಗ ಆತನಿಲ್ಲದಿದ್ದರೆ ನನ್ನ ಹತ್ತಿರ ಕೊಟ್ಟು ಮರುದಿನ ಅವನಿಗೆ ಕೊಡಿಸಿದ್ದಾರೆ. ಆಗ ಆ ಭಿಕ್ಷುಕನು "ಪೈಗಳು ಹೇಗಿದ್ದಾರೆ. ಅವರು ಬಂದಾಗ ನಾನಿಲ್ಲದೆ ಹೋದೆನಲ್ಲಾ ! ದೇವರು ಅವರಿಗೆ ಒಳ್ಳೆದು ಮಾಡಲಿ" ಎಂದಾಗ ಅವರ್ಣನೀಯ ಭಾವನೆ ನನ್ನಲ್ಲಿಯೂ ಮೂಡಿತ್ತು. ಮಂಜೇಶ್ವರದ ಒಬ್ಬ ಮುಸ್ಲಿಮ ಮುದುಕಿಗೆ ಕಾಲುಗಳು ಬಲಹೀನವಾಗಿ ನಡೆಯಲು ಅಸಾಧ್ಯವಾದಾಗ ಶ್ರೀ ಪೈ ಅವರು ಅವಳಿಗೊಂದು ಮರದ ಗಾಡಿಯನ್ನು ಮಾಡಿಸಿಕೊಟ್ಟಿದ್ದರು. ಲೇಖನವು ವಿಸ್ತಾರವಾಗುವ ಭಯದಿಂದ ಅವರ ಅಸಂಖ್ಯ ದಾನಗಳನ್ನು ಇಲ್ಲಿ ಬರೆಯಲು ಸಾಧ್ಯವಾಗುವುದಿಲ್ಲ.

ಶ್ರೀ ಗೋವಿಂದ ಪೈ ಅವರು ಸರ್ವಜ್ಞರೆಂದು ನಂಬಿದವರನ್ನೂ ನಾನು ಕಂಡಿದ್ದೇನೆ. ಅವರ ಜ್ಯೋತಿಷದಲ್ಲಿನ ಪರಿಜ್ಞಾನ ಪ್ರಸಿದ್ಧವಾದುದು. ಅವರಿಂದ ಜಾತಕರಚಿಸಲಿಕ್ಕೆ, ನಾಮಕರಣಕ್ಕೆ ಮುಹೂರ್ತವನ್ನೂ ಹೆಸರನ್ನೂ ಕೇಳಲಿಕ್ಕೆ, ಮೇಳಾಮೇಳಿ ನೋಡಲಿಕ್ಕೆ ಇತ್ಯಾದಿಗಳಿಗೆ ಬರುವ ಜನರಿಗೆ ಲೆಕ್ಕವೇ ಇದ್ದಿಲ್ಲ. ಯಾರು ಏನು ಕೇಳಿದರೂ ಹೇಳುತ್ತಿದ್ದರು. ಒಮ್ಮೆ ಒಬ್ಬರು ತಮ್ಮ ಮನೆಯಲ್ಲಿನ ಮುದುಕಿಗೆ ದೃಷ್ಟಿಮಂದವಾಗುತ್ತಾ ಬರುತ್ತಿದ್ದು ಅದಕ್ಕೇನಾದರೂ ಔಷಧವಿದೆಯೇ ಎಂದು ಸಹ ಕೇಳಿಬಿಟ್ಟರು. ಕವಿಗಳು ಏನು ಮದ್ದು ಹೇಳುವರೋ ಎಂದು ನನಗೂ ಕುತೂಹಲವಾಯಿತು. ಶ್ರೀ ಪೈ ಅವರ ಹತ್ತಿರ ಅದಕ್ಕೂ ಮದ್ದು ಇತ್ತು. ಹಸುರು ಬಣ್ಣದ ತರಕಾರಿ, ಹರಿವೆಸೊಪ್ಪು, ಕೆಸುವಿನ ಎಲೆ, ಬಸಳೆ ಸೊಪ್ಪು ಇತ್ಯಾದಿಗಳನ್ನು ಹೆಚ್ಚಾಗಿ ತಿಂದರೆ ದೃಷ್ಟಿಮಾಂದ್ಯ ಗುಣವಾಗುವುದೆಂದು ಹೇಳಿಯೇ ಬಿಟ್ಟರು.

ರೋಗಿಗಳ ಆರೈಕೆಯಲ್ಲಿಯೂ ಶ್ರೀ ಪೈಗಳು ತುಂಬ ಆಸಕ್ತಿ ವಹಿಸುತ್ತಿದ್ದರು. ತಮ್ಮ ಬಂಧುಮಿತ್ರರಲ್ಲಿ ಯಾರಿಗಾದರೂ ಅಸೌಖ್ಯವಾದರೆ ಶ್ರೀ ಗೋವಿಂದ ಪೈಗಳು ರಾತ್ರೆ ಬೆಳಕಿನವರೆಗೂ ಬೇಕಾದರೆ ಆರೈಕೆ ಮಾಡುತ್ತಿದ್ದರು. ರೋಗಿಯ ವಸ್ತ್ರ ಬದಲಾಯಿಸುವುದು ಇತ್ಯಾದಿ ಕೆಲಸಗಳನ್ನು ತಮ್ಮ ಕೈಯಾರೆ ಮಾಡಿದ್ದುಂಟು. ದಿವಸಾಗಲೂ ದೇವರ ಪ್ರಸಾದಗಳನ್ನು ರೋಗಿಯ ಹಣೆಗೆ ಹಚ್ಚಿ, "ನೀನು ಬೇಗನೆ ಗುಣಮುಖನಾಗುವೆ ! ದೇವರು ಒಳ್ಳೇದು ಮಾಡಲಿ" ಎಂದು ಆಶೀರ್ವದಿಸುತ್ತಿದ್ದರು. ಅವರು ಹತ್ತಿರವಿದ್ದರೆ ರೋಗಿಯ ಮನಸ್ಸು ಗೆಲುವಿನಿಂದ ತುಂಬುತ್ತಿತ್ತು.

ಶ್ರೀ ಪೈಯವರು ಸಿಗರೇಟನ್ನು ಬಹಳವಾಗಿ ಸೇದುತ್ತಿದ್ದರು. ದಿನಕ್ಕೆ 30ರಿಂದ 40ರವರೆಗೆ ಸೇದುತ್ತಿದ್ದರು. ಅವರ ಮಾತಿನಲ್ಲಿ ಅದು "ಸಿಗಾರೆಟ್ಟ್ !" ಎಷ್ಟು ವರ್ಷಗಳ ಅಭ್ಯಾಸವೋ ! ಅವರ ಬಿಳಿ ಮೀಸೆಯ ನಡುವೆ ಹೊಗೆ ತಾಗಿ ಕಂದು ಬಣ್ಣದ ಕಲೆ ಎದ್ದು ಕಾಣುತ್ತಿತ್ತು. ಅಂಥ ಬಲವಾದ ಅಭ್ಯಾಸವಿದ್ದವರು ಒಮ್ಮೆ ತಿರುಪತಿಗೆ ಹೋದರು. ಗಿರಿ ಏರಿ ವೆಂಕಟಪತಿಯ ದ

ರ್ಶನ ಪಡೆದರು. "ದೇವ! ಇನ್ನೂ ಏಕೆ ಇದೊಂದು ಬಂಧನದಿಂದ ನನ್ನನ್ನು ಮುಕ್ತನಾಗಿಸುವುದಿಲ್ಲ? ಇಂದಿನಿಂದ ಹೊಗೆಬತ್ತಿಸೇದುವುದನ್ನು ಬಿಟ್ಟೆ!"ಎಂದು ಆಣೆಹಾಕಿದರು. ಅಂದು ರಾತ್ರೆ ನಾನು ಸಿಗರೇಟನ್ನು ಸೇದುವಾಗ ಅವರಿಗೂ ಕೊಡಹೋದೆ. "ಬೇಡ ಮಹಾರಾಯಾ ಬೇಡ!ಇನ್ನು ಸೇದಿದರೆ ತಿರುಪತಿ ದೇವರು **Accused No. 1.** ನಾನು **Accused No. 2**" ಎಂದು ನಿರಾಕರಿಸಿದರು. ಅಂದಿನಿಂದ ಕೊನೆವರೆಗೆ ಅಂದರೆ ಸುಮಾರು 12 ವರ್ಷಗಳ ಕಾಲ ಸಿಗರೇಟನ್ನು ಮುಟ್ಟಲಿಲ್ಲ. ಈ ನಿಶ್ಚಲ ಮನಸ್ಸಿನ ತ್ಯಾಗಿ!

ಶ್ರೀ ಪೈ ಅವರು ಸಿನೆಮಾ ನೋಡುವುದನ್ನು ಬಿಟ್ಟು ದಶಕಗಳೇ ಕಳೆದಿದ್ದುವು. ಚಲಚಿತ್ರ ಎಂದೊಡನೆ ಅವರಿಗೆ ತಾತ್ಸಾರ. ನನ್ನ ಅವರ ಪರಿಚಯವಾದ ಬಳಿಕ 16 ವರ್ಷಗಳಲ್ಲಿ ಅವರು ನೋಡಿದ ಒಂದೇ ಒಂದು ಚಲಚ್ಚಿತ್ರಕ್ಕೆ ಅವರನ್ನು ಕೊಂಡು ಹೋದ ಭಾಗ್ಯ ನನ್ನದಾಯಿತು! ಅದು "ಝಾನ್ಸಿಕೀ ರಾಣಿ" ಚಾರಿತ್ರಿಕ ಚಿತ್ರ; ಚೆನ್ನಾಗಿದೆ; ನೋಡೋಣ ಎಂದು ಅವರನ್ನು ಒಪ್ಪಿಸಿದೆ. ಚಿತ್ರ ನೋಡುತ್ತ ನೋಡುತ್ತ ಅವರ ಮೇಲೆ ಉಂಟಾದ ಪರಿಣಾಮವನ್ನು ನೋಡಿ ಧನ್ಯನೆನಿಸಿದೆ! ಭಾವನಾಜೀವಿಯವರು! ಹೃದಯದ ಭಾವನೆಗಳೆಲ್ಲ ಮುಖದಲ್ಲಿ, ಕಣ್ಣಿನಲ್ಲಿ, ಮಾತಿನಲ್ಲಿ ಪ್ರಕಟವಾಗುತ್ತಿದ್ದುವು. ಸುತ್ತಲು ಕುಳಿತ ಇತರ ಪ್ರೇಕ್ಷಕರ ನೆನಪೇ ಅವರಿಗಿದ್ದಿಲ್ಲ. ಅವರ ನಗುವೇನು? ದು:ಖವೇನು, ಆವೇಶವೇನು, ಆವೇಗವೇನು, ಸಂತೋಷವೇನು? ಇಂಗ್ಲೀಷರು ಸೋತು ಓಡಿದ ದೃಶ್ಯ ಬಂದಾಗ ಅವರ ಕೈ ಚಪ್ಪಾಳೆಯೇನು? ಲಕ್ಷ್ಮೀಬಾಯಿ ಗಾಯಗೊಂಡು ಮಡಿದಾಗ ತನ್ನ ಆತ್ಮೀಯನೊಬ್ಬನು ತೀರಿಹೋದಂತೆ ಗಳಗಳನೆ ಅತ್ತುಬಿಟ್ಟರು! "ಬಹಳ ಚೆನ್ನಾಗಿದೆ ಚಿತ್ರ!" ಎಂದರು. ಅವರ ವಿಷಯ ಹಲವಾರು ಪ್ರಶ್ನೆ ಕೇಳಿದರು. ಚಿತ್ರಕಥೆ ಚರಿತ್ರೆಯಿಂದ ಎಲ್ಲೆಲ್ಲಿ ಬೇರೆಯಾಗಿದೆ ಎಂಬುದನ್ನು ತೋರಿಸಿದರು.

ವೃದ್ಧ ಕವಿ ಅಸೌಖ್ಯದಿಂದ ಆಸ್ಪತ್ರೆಯಲ್ಲಿದ್ದರು. ಬಳಿಯಲ್ಲಿ ಒಬ್ಬರಲ್ಲ ಒಬ್ಬರು ತಪ್ಪುತಿದ್ದಿಲ್ಲ. ಎಷ್ಟು ಮಿತ್ರರು ಎಷ್ಟು ಬಂಧುಗಳು, ಎಷ್ಟು ಜನರು ಬಂದು ಅವರನ್ನು ನೋಡಿ ಹೋದರು! ಯಾರು ಬಂದರೂ ಮುಖತುಂಬ ನಗೆ, ಕುಶಲ ಪ್ರಶ್ನೆಗಳು. ಅವರು ಮರಣಕ್ಕೆ ಎಂದೂ ಹೆದರಿದವರಲ್ಲ. ಒಂದು ಮಧ್ಯಾಹ್ನ, ಅವರ ನಿರ್ವಾಣದ ಏಳೆಂಟು ದಿನಗಳ ಮುಂಚೆ ಆಸ್ಪತ್ರೆಗೆ ನಾನು ಹೋಗಿದ್ದೆ. ಕವಿ ಒರಗಿ ಕೂತಿದ್ದರು. ನೋಡುತ್ತ ಗೊಲ್ಗೊಥಾವಲ್ಲಿನ ಅವರ ಮಾತು ಕಣ್ಣಿಗೆ ಕಟ್ಟಿತು. ಅವರ ಕಣ್ಣು ದೂರದಲ್ಲಿ ನಟ್ಟಿತ್ತು. "ನಯನದಿ ಭವಿಷ್ಯಮಂ ತಿವಿವ ಪುರುಷನ ದೃಷ್ಟಿ............ದಿವ್ಯ ಜ್ಞಾನದೇಕಾಂತದಾಡುಂಬೊಲವೊ ಪೃಥುಲವಮವಲಿನ ಲಲಾಟವದೊ ನೋಡ! ಮಾರನ ತರಿವ ನಿಡುವಾಳೊ ನಾಸಿಕವೊ ನೋಡ!......ನಿಷ್ಪಟ ಬ್ರಹ್ಮಚರ್ಯದ ದೀಧಿತಿಯ ನೋಡ!......ಆಪನಿತು ನೋಡ, ಕಣ್ತುಂಬ ನೋಡೀಗಳಿದೊ ಈ ಹರೆಯದೀ ಶೋಭೆಯಿೊ ಜಗತ್ಪ್ರೇಮದಿ ಸುಜ್ಞಾನದೀ ಶಾಂತಿಯಿೊ ಮಹಿಮೆಯಿೊ ಜಿತಾತ್ಮತೆಯಿೊ ತಪ:ಶಕ್ತಿಯಿೊ ಧರ್ಮದೀ ಮನುಜ ದೇವತನದೀ ಸುಧಾಸಿಂಧು ನೋಡ!" ನೋಡುತ್ತ ಕಣ್ತುಂಬಿ ಬಂತು.

ಅವರೂ ನನ್ನನ್ನು ನೋಡಿದರು. ಅವರ ಕಣ್ಣಿನಲ್ಲಿಯೂ ಒಂದೆರಡು ಹನಿ ಹನಿಯಿತು. "ತಾವು ದು:ಖಿಸಬಾರದು. ಮನಸ್ಸು ಅನುದ್ವಿಗ್ನವಾಗಿರಬೇಕು. ಶಾಂತವಾಗಿರಬೇಕು. "ವೈಶಾಖಿ." "ಗೊಲ್ಗೊಥಾ" ಬರೆದವರಲ್ಲವೇ ನೀವು? ನೀವೇ ಬರೆದುದನ್ನು ಮರೆತಿರಾ?" ಎಂದೆ. ಆಗ ಒಂದು ನಗೆ ಮಿಂಚಿತು. "ಹೌದು. ಆ ಬುದ್ಧನ ಪ್ರಾಯವನ್ನೂ ದಾಟಿದೆನಲ್ಲ!" ಎಂದರು.

ಅವರು ಬದುಕಿದ್ದಷ್ಟು ದಿನ ಅವರು ಎಷ್ಟು ಮಹಾನ್ ಜೀವಿ ಎಂಬುದರ ಅರಿವು ನಮಗಾಗುತ್ತಿದ್ದಿಲ್ಲ. ಹಾಗೆ ಅರಿವಾಗಲು ಅವರು ಬಿಟ್ಟದ್ದೂ ಇಲ್ಲ. ನಮ್ಮೊಡನೆ ಬೆರೆತು. ನಮ್ಮಲ್ಲಿ ಒಂದಾಗಿ, ನಮ್ಮ ಕಷ್ಟ ಸುಖದಲ್ಲಿ ಭಾಗಿಯಾಗಿ, "ಬೆಲ್ಲವಾಗಿರಬೇಕು ಬಂಧುಜನರೊಳಗೆ" ಎಂಬ ಪುರಂದರದಾಸರ ಮಾತನ್ನು ಜೀವಿಸಿದ್ದರು. ಇಂದು ಅವರು ತೀರಿಹೋಗಿದ್ದಾರೆ. ಆದರೆ ಶ್ರೀ ವಿ.ಸೀ.ಯವರು ಬರೆದಂತೆ "ಸಾಧುಗಳ ನಿಧನ ಸಾವಲ್ಲ; ಸಾಮಾನ್ಯರ ಬದುಕು ಬಾಳಲ್ಲ. ಇದ್ದಷ್ಟು ಕಾಲ ಸಾರ್ಥಕವಾದ ಬದುಕನ್ನು ಬದುಕಿದ್ದಾರೆ. ಅಪರಾಧೀನವಾದ ಬಾಳು ನಿರಾಯಾಸ ಮರಣ ಇದಕ್ಕಿಂತ ದೊಡ್ಡ ಪುಣ್ಯಗಳು ಬೇರೆ ಇಲ್ಲವೆನ್ನುತ್ತಾರೆ"

ಆದರೆ ನಮಗೆ ಇನ್ನೆಲ್ಲಿ ಆ ಸಿಂಹ ಗಂಭೀರ ಅನಭಿಷಿಕ್ತ ಕವಿಸಾಮ್ರಾಟ! ಇನ್ನೆಲ್ಲಿ ಆ ತೇಜ:ಪುಂಜ ಆಧುನಿಕ ಋಷಿ! ಇನ್ನೆಲ್ಲಿ ಚಲಿಸುತ್ತಿರುವ ಆ ಜ್ಞಾನ ಭಂಡಾರ! "ಇಲ್ಲಿ!, ಇಲ್ಲಿ!. ಇಲ್ಲಿ!"ಎಂದಂತಾಯಿತು! ಕಣ್ತೆರೆದು ನೋಡಿದೆ. ಸಾಹಿತ್ಯಾಕಾಶದಲ್ಲಿ ವಿಹರಿಸುವ "**ಗಿಳಿವಿಂಡು**"! "**ಗೊಲ್ಗೊಥಾ**" ದಿನ್ನೆಯ ಸಿಲುಬೆಯಲಿ ಚಾಚಿದಪರಾರ್ಕ! "**ವೈಶಾಖಿ**"ಯಲ್ಲಿ ಮಹಾಪರಿನಿರ್ವಾಣ ಹೊಂದಿದ ತಥಾಗತ! ಪುನ: "ಇಲ್ಲಿ!"ಎಂದಂತಾಯಿತು, ಎಲ್ಲವನ್ನೂ ಬೆಳಗಿಸಿ ಪ್ರಜ್ವಲವಾಗಿ, ಶಾಂತವಾಗಿ, ನಿಷ್ಪಂದವಾಗಿ, ಶಾಶ್ವತವಾಗಿ ಉರಿಯುತ್ತಿತ್ತೊಂದು "**ನಂದಾದೀಪ**"

---

# ಕನ್ನಡದ ಕಣ್ಮರೆಯಾದ ಕಣ್ಮಣಿ

ಶ್ರೀ ಬಿ. ವೈಕುಂಠ ಬಾಳಿಗಾ

"ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ"

—ಇದು ಹದಿನಾಲ್ಕನೆಯ ಶತಕದ ಕನ್ನಡ ಕವಿಯೊಬ್ಬನ ಮಾತು; ಕನ್ನಡದ ಆದಿಕವಿ ಪಂಪನನ್ನು ಮುಕ್ತಕಂಠದಿಂದ ಸ್ತುತಿಸಿದ ಮೋಡಿ. ಕನ್ನಡ ಕಾವ್ಯ ಸಾಮ್ರಾಜ್ಯಕ್ಕೆಲ್ಲ ಪಂಪನೊಬ್ಬನೇ ಚಕ್ರಾಧಿಪತಿ; ಅವನಂಥವರು ಬೇರೊಬ್ಬರಿಲ್ಲ; ಧರ್ಮವೂ ಕಾವ್ಯಧರ್ಮವೂ ಇತಿಹಾಸವೂ ಮೇಳವಿಸಿದ ಲೋಕೋತ್ತರ ಕಾವ್ಯಗಳನ್ನು ರಚಿಸಿ ಅಜರಾಮರ ಕೀರ್ತಿಗೆ ಭಾಗಿಯಾದ ಕವಿಯೆಂದರೆ ಪಂಪನೊಬ್ಬನೇ ಸರಿ-ಎಂಬುದು ಈ ಪ್ರಶಂಸೋಕ್ತಿಯ ಭಾವ. ಇಂದಿನ ಸಾಹಿತ್ಯಾರಾಧಕರು ದಿವಂಗತ ಗೋವಿಂದ ಪೈಯವರ ಬಗೆಗೆ ಇದೇ ಮಾತನ್ನು ಅಳವಡಿಸಿಕೊಂಡರೆ, ಅತಿಶಯೋಕ್ತಿಯಾಗುವಂತಿಲ್ಲ. ಈ ವಿಶಾಲ ಕರ್ನಾಟಕದಲ್ಲಿ ಈ ದಿವಂಗತ ವಿದ್ವಾಂಸರೊಡನೆ ಭುಜವೊರಸಿ ನಿಲ್ಲಬಲ್ಲವರು ಅನೇಕರಿಲ್ಲ. ವಿದ್ವಾಂಸರಾಗಿ, ಇತಿಹಾಸ ಸಂಶೋಧಕರಾಗಿ, ಕವಿಕಾವ್ಯವಿಮರ್ಶಕರಾಗಿ. ಸ್ವಯಂ ಕವಿಯಾಗಿ ಬಹುಮುಖ ಪ್ರತಿಭಾ ಬಲದಿಂದ, ಸಾಹಿತ್ಯ ಮೇಧಾವಿಗಳಲ್ಲಿ ಅಗ್ರಪಟ್ಟಕ್ಕೇರಿ, ಕನ್ನಡ ನಾಡಿಗೂ ಭಾರತಕ್ಕೂ ಭೂಷಣ ಪ್ರಾಯರಾದವರಲ್ಲಿ ಗೋವಿಂದ ಪೈಯವರು ಅಗ್ರಗಣ್ಯರು.

ಸರಸ್ವತಿಗೂ ಲಕ್ಷ್ಮಿಗೂ ಎಂದೆಂದೂ ವೈರವಂತೆ. ಆದರೆ ಗೋವಿಂದ ಪೈಯವರ ಮಟ್ಟಿಗೆ ಅದು ನಿಜವಾಗಿರಲಿಲ್ಲ. ಅವರು ಸರಸ್ವತೀ ಪುತ್ರರಾಗಿದ್ದಂತೆ ಲಕ್ಷ್ಮಿಯ ಒಲವಿಗೂ ಪಾತ್ರರಾಗಿದ್ದರು. ಆದರೆ ಮನುಷ್ಯಮಾತ್ರನಾದವನು ಪರಿಪೂರ್ಣ ಸುಖವನ್ನು ಅನುಭವಿಸುವುದುಂಟೆ? ಅಪಾರ ಸಂಪತ್ತಿದ್ದರೂ ಗೋವಿಂದ ಪೈಯವರು ಸಂತಾನ ಸುಖದಿಂದ ವಂಚಿತರಾಗಿದ್ದರು. ತಾರುಣ್ಯದಲ್ಲಿಯೇ ಪತ್ನಿ ವಿಯೋಗಕ್ಕೆ ಗುರಿಯಾಗಿದ್ದರು. ಆದರೆ ಪುನರ್ವಿವಾಹದ ಯೋಚನೆ ಅವರ ತಲೆಯಲ್ಲಿ ಎಂದೂ ಸುಳಿದಿರಲಿಲ್ಲ. ತಮ್ಮ ತಮ್ಮನ ಮಕ್ಕಳು-ಇವರೇ ಅವರಿಗೂ ಮಕ್ಕಳು. ಉತ್ಕಟ ದೈವ ಭಕ್ತರಾದ ಗೋವಿಂದ ಪೈಯವರು ಇದಾವುದರಿಂದಲೂ ಅಧೀರರಾಗದೆ, "ಬಂದದ್ದೆಲ್ಲಾ ಬರಲಿ, ಗೋವಿಂದನ ದಯೆಯೊಂದಿರಲಿ"-ಎಂದು ನಿರ್ಲಿಪ್ತರಾಗಿಬಿಟ್ಟರು. ತಮ್ಮ ತನುಮನಗಳನ್ನು ಮಾತ್ರವಲ್ಲ, ಪಿತ್ರಾರ್ಜಿತವಾದ ಅಪಾರ ಧನವನ್ನೂ ಜ್ಞಾನಾರ್ಜನೆಗಾಗಿ ವಿನಿಯೋಗಿಸಿದರು. ಜ್ಞಾನದಾಹವೊಂದಲ್ಲದೆ, ಬೇರೆ ಯಾವ ದಾಹವೂ ಅವರಿಗಿರಲಿಲ್ಲ.

ಸಾಹಿತ್ಯ ರಾಜ್ಯದಲ್ಲಿ ಗೋವಿಂದ ಪೈಗಳು ಕಾಲಿಡದ ಕ್ಷೇತ್ರವಿಲ್ಲ. ಕಾವ್ಯರಚನೆಯೇ? ಕಾವ್ಯವಿಮರ್ಶೆಯೆ? ಕವಿಕಾವ್ಯ ಕಾಲನಿರ್ಣಯವೆ? ಭಾರತೀಯ ಇತಿಹಾಸವೆ? ಅವರು ಪ್ರವೇಶಿಸದ ಕ್ಷೇತ್ರ ಯಾವುದು? ಯಾವುದೂ ಇಲ್ಲ. ಲಘುಲೇಖನ, ಲಘು ವಿಮರ್ಶೆ ಅವರಿಗೆ ಹಿಡಿಸದು. ಪ್ರೌಢವಾಗಿ ಪಾಂಡಿತ್ಯಪೂರ್ಣವಾಗಿ ತಮ್ಮ ಅಭಿಪ್ರಾಯಕ್ಕೆ ಪೋಷಕವಾದ ನೂರಾರು ಆಧಾರಗಳನ್ನು ಕೊಡದೆ, "ಮೇಲಿಂದ ಮೇಲೆ" ಇಲ್ಲವೆ,"ತೇಲಿಸಿ" ಬರೆಯುವ ಹವ್ಯಾಸ ಅವರಿಗಿರಲಿಲ್ಲ. ಅವರು ಆರಿಸಿಕೊಳ್ಳುವ ವಿಷಯವು ಎಷ್ಟು ಜಟಿಲವೋ ಅವರ ಪ್ರತಿಪಾದನ ಕ್ರಮವೂ ಅಷ್ಟೇ ಜಟಿಲ. ಸಂಶೋಧನೆ ಎಂದರೆ ಸಹಜವಾದ ಅಭಿರುಚಿ ಇಲ್ಲದೆ ಕಾಲಯಾಪನೆಗೋ, ವಿನೋದಕ್ಕೋ, ಬಾರದ ನಿದ್ರೆಯನ್ನು ಬರಿಸುವುದಕ್ಕೋ ಎತ್ತಿಕೊಳ್ಳತಕ್ಕ ವಿಷಯವಲ್ಲ. ಅದು. ವಾದಗ್ರಸ್ತವಾದ ಯಾವ ಅಂಶವೇ ಆಗಲಿ-ಅದರ ಮೂಲವನ್ನು ಬೆದಕಿ, ಪೂರ್ವೋತ್ತರ ಪಕ್ಷಗಳ ಮಂಡನ ಖಂಡನಗಳನ್ನು ತರ್ಕಶುದ್ಧವಾಗಿ ಮುಗಿಸಿ ತಮ್ಮದೇ ಆದ ಸ್ವತಂತ್ರ ಸಿದ್ಧಾಂತಕ್ಕೆ ಬರುವುದು ಅವರ ಪದ್ಧತಿ. ಸಾಮಾನ್ಯವಾಗಿ ಅವರ ಸಂಶೋಧನಾತ್ಮಕ ಲೇಖನಗಳು, ದೀರ್ಘ ಲೇಖನಗಳು-ಅರುವತ್ತು-ಎಪ್ಪತ್ತು ಪುಟಗಳ ವರೆಗೂ ಮುಂದುವರಿಯುವ ಲೇಖನಗಳು. ಅವುಗಳಲ್ಲಿ ಆಧಾರರಹಿತವಾದ ಒಂದು ವಾಕ್ಯವೂ ಇರಲಾರದು. ಪ್ರತಿಯೊಂದು ಲೇಖನದ ಪ್ರತಿಯೊಂದು ಪುಟದಲ್ಲೂ ಕಾಲುಭಾಗಕ್ಕೂ ಹೆಚ್ಚಾಗಿ ಆಧಾರ ಗ್ರಂಥಲೇಖನಗಳ ಸೂಚನೆಗೇ ಮೀಸಲು. ನಾನಾ ಪ್ರಮಾಣ ಗ್ರಂಥಗಳಿಂದ ಉದ್ಧರಿಸಿದ ಪೋಷಕಾಂಶಗಳೂ ಅಡಿ ಟಿಪ್ಪಣಿಗಳೂ ತುಂಬಿದ ಈ ಲೇಖನಗಳಿಂದ ಸ್ನಾತಕೋತ್ತರ ಜಿಜ್ಞಾಸುಗಳಿಗೂ ದಿಗ್ಭ್ರಮೆ ಹಿಡಿಯುವುದು. ಇನ್ನು ಸೂಕ್ತ ಸಂಸ್ಕಾರವೂ ಪೂರ್ವಸಿದ್ಧತೆಯೂ ಇಲ್ಲದ ಪಂಡಿತಮನ್ಯರು ಕಕ್ಕಾಬಿಕ್ಕಿಯಾಗುವುದೇ ಸರಿ. ಅವರ ವಿಷಯ ಮಂಡನ ಸಾಮರ್ಥ್ಯವನ್ನೂ. ವಾದವೈಖರಿಯನ್ನೂ. ಸ್ಪಷ್ಟ ನಿರ್ಭೀತ ಸಿದ್ಧಾಂತ ಕ್ರಮವನ್ನೂ ಕಂಡು ಬೆರಗಾಗದವರಿಲ್ಲ; ಅವರ ವಿದ್ವತ್ತೆಯ ಆಳವನ್ನೂ ಔನ್ನತ್ಯವನ್ನೂ. ವಿಸ್ತಾರವನ್ನೂ ಕಂಡು ಬೆರಗಾಗದವರಿಲ್ಲ. ಲೇಖನಗಳಲ್ಲಿ ಮಾತ್ರವಲ್ಲ, ಬಂಧು ಮಿತ್ರಗೋಷ್ಠಿಯಲ್ಲೂ ಅಷ್ಟೆ. ಚರ್ಚೆ ಪ್ರಾರಂಭಿಸಿ ಬಿಟ್ಟರೆಂದರೆ ತೀರಿತು, ಮತ್ತೆ ಅವರಿಗೆ ಬಾಹ್ಯ ಪ್ರಪಂಚದ ಜ್ಞಾನವಿರುತ್ತಿರಲಿಲ್ಲ. ಅವರು ಹೇಳಬೇಕು, ನಾವು ಕೇಳಬೇಕು-ಅಷ್ಟೆ. ಅವರ ಲೇಖನಗಳ ಶೈಲಿಯೂ ಗಡುಸಾದ ಶೈಲಿ. ಯಾವುದೇ ಗಹನ ವಿಚಾರ ದೋಹನದ ನಡುವೆ ಅವರು ಚಿರನೂತನ ಶಬ್ದಗಳನ್ನು ಸೃಷ್ಟಿಸುತ್ತಾ ಹೋಗುತ್ತಿದ್ದರು; ಅವರ ಕನ್ನಡ ಶೈಲಿ. ಎಷ್ಟು ಜಟಿಲವೋ ಎಷ್ಟು ದುರವಗಾಹ್ಯವೋ. ಅವರ ಇಂಗ್ಲೀಷ್ ಭಾಷಾ ಶೈಲಿ ಅಷ್ಟೇ ಸರಳ ಶೈಲಿ, ಅಷ್ಟೇ ಮೋಹಕ ಶೈಲಿ. ಅವರು ಶಬ್ದಗಳಿಗಾಗಿ "ಕುರುಡು ಪರಡು"ವ ಹಾಗಿರಲಿಲ್ಲ: ಶಬ್ದಗಳೆ ಅವರನ್ನು ಆರಿಸಿಕೊಂಡು ಬರುತ್ತಿದ್ದವು. ಸಂಸ್ಕೃತದ ಭವಭೂತಿಯಂತೆ, ಅವರೂ "ವಶ್ಯವಾಕ್"

ಇನ್ನು ಅವರ ಕಾವ್ಯದ ವೈಶಿಷ್ಟ್ಯವೇನು? ಆಧುನಿಕ ಕಾವ್ಯ ಪರಂಪರೆಯ ಮೂಲ ಪುರುಷರಲ್ಲಿ ಅವರೂ ಒಬ್ಬರೆಂದೂ ಪ್ರಾಸರಹಿತ ಕಾವ್ಯರಚನೆಗೆ ಅವರೇ ಮೊದಲಿಗರೆಂದೂ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅದು ಹಾಗಿರಲಿ. ಅವರ ಕಾವ್ಯಪಾಕ ನಾಳಿಕೇರಪಾಕ; ದ್ರಾಕ್ಷಾಪಾಕವಲ್ಲ. ರಸನಿಷ್ಯಂದಿಯಾದ ಹಣ್ಣು ಬಾಯಿಗೆ ಬಿದ್ದೊಡನೆ ಅದರ ರುಚಿ ತಿಳಿಯುವುದು. ಆದರೆ ಹೊರಗಡೆ ಗಟ್ಟಿ ತೊಗಟೆಯಿರುವ ತೆಂಗಿನ ಕಾಯಿ ಹಾಗಲ್ಲ. ಅದನ್ನು ಒಡೆದ ಹೊರತು ಒಳಗಿನ ತಿರುಳಿನ ರುಚಿ ತಿಳಿಯುವುದುಂಟೆ? ಇಲ್ಲ. ಗೋವಿಂದ ಪೈಯವರ ಕಾವ್ಯವೂ ಹಾಗೆಯೇ, ಅವರ ಪದಪದವನ್ನೂ ಬಿಡಿಸಿ ಅನ್ವಯ ಮಾಡಿಕೊಂಡ ಹೊರತು, ವ್ಯಾಕರಣ ಅಲಂಕಾರಾದಿಗಳ ಸೂಕ್ಷ್ಮವನ್ನು ಅರಿತುಕೊಂಡ ಹೊರತು, ಕೊನೆಗೆ ಇತಿಹಾಸಕಥೆಯನ್ನೂ ತಿಳಿದುಕೊಂಡ ಹೊರತು, ಅವರ ಕಾವ್ಯದ ಸ್ವಾರಸ್ಯ ಮನದಟ್ಟಾಗುವಂತಿಲ್ಲ. ಅವರ ಎಲ್ಲ ಕೃತಿಗಳಲ್ಲೂ ವಿದ್ವತ್ತೆಯ ಮುದ್ರೆಬಿದ್ದಿರುವುದರಿಂದ ಅವುಗಳಲ್ಲಿ ಹುದುಗಿರುವ ತತ್ವವಿವೇಚನೆಯೂ ಅನುಭವಸಾರವೂ ಸುಲಭಗ್ರಾಹ್ಯವಲ್ಲ–ಎಂಬ ಟೀಕೆ ಬಂದಿರುವುದುಂಟು. ಅದೇನೊ ನಿಜವಾಗಿರಬಹುದು. ಆದರೆ ಪ್ರಾಚೀನ ರಾಜಕವಿಯೊಬ್ಬ ಹೇಳಿದಂತೆ. "ವ್ಯಾಕರಣ ಕಾವ್ಯನಾಟಕ ಲೋಕ ಕಲಾವ್ಯಾಕುಲನಲ್ಲದಂ ಏಕೆ ವಿವೇಕ ಬೃಹಸ್ಪತಿಯ ನಗರಮಂ ಪುಗುತರ್ಪ್ಪಂ?" ಎಂಬುದೂ ಅಷ್ಟೇ ನಿಜವಲ್ಲವೇ? ಹಾಗಿದ್ದರೂ ಅವರ ಕೆಲಕೆಲವು ಕೃತಿಗಳು ಸುಲಲಿತವಾಗಿ ಎಲ್ಲರ ಮನಸ್ಸನ್ನೂ ಸೂರೆಗೊಳ್ಳುತ್ತವೆ. "ಪರಮಾತ್ಮನೆಲ್ಲಿರುವನು" "ಕನ್ನಡಿಗರ ತಾಯಿ" ಮುಂತಾದ ಕವನಗಳೇ ಇದಕ್ಕೆ ನಿದರ್ಶನ. ಈ ನಿರವಧಿಯಾದ ಕಾಲದಲ್ಲಿ ಎಂದೋ ಒಮ್ಮೆ. ಈ ವಿಶಾಲ ಪೃಥ್ವಿಯಲ್ಲಿ ಎಲ್ಲೋ ಒಂದೆಡೆ ಅವರ ಸಮಾನ ಧರ್ಮಿಯನೊಬ್ಬ ಹುಟ್ಟಿ ಬಂದು, ಅವರ ಕೃತಿಗಳನ್ನು ಉಂಡರಗಿಸಿಕೊಂಡು, ಅವರ ಕಾವ್ಯ ಸಂದೇಶವನ್ನು ಪ್ರಸಾರಮಾಡಬಲ್ಲನಾದರೆ, ಅದಕ್ಕೂ ಮಿಗಿಲಾದ ಶ್ರದ್ಧಾಂಜಲಿಯುಂಟೇ, ಅವರ ಆತ್ಮಕ್ಕೆ?

ಗೋವಿಂದ ಪೈಯವರ ಪುಸ್ತಕ ಭಂಡಾರವೆಂದರೆ ಅದೊಂದು ಅಪೂರ್ವ ಜ್ಞಾನ ಮಂದಿರ. ಇತಿಹಾಸ. ಕಾವ್ಯ, ಸಾಹಿತ್ಯ ವಿಷಯಕವಾದ ಅತ್ಯಾಧುನಿಕ ಪ್ರಮಾಣಭೂತ ಗ್ರಂಥ ಅವರ ಬಳಿ ದೊರೆಯುತ್ತಿತ್ತು. ಅದನ್ನು ಕಣ್ಣಾರೆ ಕಂಡು ವಿಸ್ಮಿತರಾದವರು "ಇಲ್ಲಿಲ್ಲದುದುಳಿದುದೆ?" ಎಂದು ಉದ್ಗರಿಸಿದ್ದಾರೆ. ಪ್ರತಿಯೊಂದು ಗ್ರಂಥದೊಳಗೂ ಕೆನ್ನೀಲಿ ಶಾಯಿಯ ಗುರುತುಗಳೂ, ಅಲ್ಲಲ್ಲೇ ತಾವು ಬರೆದ ಟಿಪ್ಪಣಿಗಳೂ ಹೇರಳವಾಗಿ ಕಂಡುಬರುವುವು. ಕನ್ನಡ, ಸಂಸ್ಕೃತ, ಇಂಗ್ಲೀಷ್, ಜರ್ಮನ್ ಮತ್ತು ಗ್ರೀಕ್ ಭಾಷೆಗಳಲ್ಲಿ ಉದ್ದಾಮ ಪಾಂಡಿತ್ಯವನ್ನು ಪಡೆದ ಗೋವಿಂದ ಪೈಯವರು, ಆ ಭಾಷೆಗಳಲ್ಲಿ ಪ್ರಕಟವಾದ, ತಮ್ಮ ಆಸಕ್ತಿಗೊಳಪಟ್ಟ ಯಾವ ಗ್ರಂಥವನ್ನೇ ಆಗಲಿ. ಒಡನೆಯೇ ತರಿಸಿಕೊಳ್ಳುತ್ತಿದ್ದರು. ಗ್ರಂಥಗಳನ್ನು ಎರವಲು ತರುವ ಪರಿಪಾಟಿ ಅವರಿಗಿರಲಿಲ್ಲ. ಮನನ ನಿಧಿಧ್ಯಾಸನ ಮಾತ್ರವೇ ಅವರ ಜೀವನ ಧ್ಯೇಯ; ಜ್ಞಾನಾರ್ಜನೆ ಮಾತ್ರವೇ ಅವರ ಆಜೀವ ತಪಸ್ಸು: ವಿದ್ವತ್ಪೂರ್ಣ ಲೇಖನ ರಚನೆಯೇ ಅವರ "ಏಕೈಕ ವೃತ್ತಿ." ಇಂತಹ ಋಷಿಕಲ್ಪರು ನಮ್ಮಲ್ಲಿ ಅನೇಕರಿಲ್ಲ. ಇದ್ದವರಲ್ಲಿ ಗೋವಿಂದ ಪೈಯವರು ಅಗ್ರಗಣ್ಯರು. "ಕರ್ಮಣ್ಯೇವಾಧಿಕಾರಸ್ತೇ" ಎಂಬ ಗೀತಾ ವಚನವನ್ನು ಅನುಷ್ಠಾನಕ್ಕೆ ತಂದ ನಿಷ್ಕಾಮ ಕರ್ಮಿಗಳು.

ಈ ಕವಿವರರನ್ನು ಮದ್ರಾಸು ಸರಕಾರವು 1949ರಲ್ಲಿ "ರಾಷ್ಟ್ರಕವಿ"ಎಂದು ಬಿರುದಿತ್ತು ಸನ್ಮಾನಿಸಿತು. ಅದರಲ್ಲಿ ಆಶ್ಚರ್ಯವೇನು? ಹಾಗೆ ಗೌರವಿಸಿದ ಸರ್ಕಾರ ತನ್ನ ಗುಣಗ್ರಹಣ ಶಕ್ತಿಯಿಂದ ತನ್ನನ್ನು ತಾನೇ ಗೌರವಿಸಿಕೊಂಡಿದೆ. ಅಂದು ಆ ತುಂಬಿದ ಸಭೆಯಲ್ಲಿ ಗೌರವ ಸಮರ್ಪಣೆಯ ವಿಧ್ಯುಕ್ತ ಕಾರ್ಯಕಲಾಪಗಳೆಲ್ಲ ಮುಗಿದ ಮೇಲೆ "ರಾಷ್ಟ್ರಕವಿ"ಗಳು ಸರ್ಕಾರಕ್ಕೆ ಕೃತಜ್ಞತೆ ಸೂಚಿಸಿಕೊಟ್ಟ ಭಾಷಣದ ಗಂಭೀರವಾಣಿ ನನ್ನ ಕಿವಿಯಲ್ಲಿ ಇನ್ನೂ ಪ್ರತಿಧ್ವನಿಸುತ್ತದೆ. ಉಳಿದ ಭಾಷಾ ಕವಿಗಳು ತಂತಮ್ಮ ಭಾಷೆಗಳಲ್ಲೇ ಉತ್ತರಕೊಟ್ಟಿದ್ದರೂ, ಗೋವಿಂದ ಪೈಯವರು ಕವಿಗಳಿಗೆ ಉಚಿತವಾದ ಧಾಟಿಯಲ್ಲಿ ಇಂಗ್ಲೀಷ್ ಭಾಷೆಯಲ್ಲೇ ಭಾಷಣ ನೀಡಿದ್ದರು. ಅವರ ಆ ಭಾಷಣ ಚಿರಸ್ಮರಣೀಯವಾದೊಂದು ಕಾವ್ಯಧಾರೆ.

ಗೋವಿಂದ ಪೈಯವರು ಹೋದಲ್ಲಿ ಬಂದಲ್ಲಿ ಭಾಷಣ ಕೊಟ್ಟು ಲೋಕದ ಕಣ್ಣಿಗೆ ಬೀಳಲು ಆತುರರಾಗಿದ್ದವರಲ್ಲ. ಹಾಗೂ ಒಮ್ಮೊಮ್ಮೆ ಯಾರದೋ ನಿರ್ಬಂಧಕ್ಕೆ ಕಟ್ಟುಬಿದ್ದು ವೇದಿಕೆಯನ್ನೇರಿದರೂ ಅವರ ಭಾಷಣ ವಿಚಾರಪರಿಪ್ಲುತವಾಗಿತ್ತೇ ಹೊರತು ಸಭಿಕರನ್ನು ನಗೆಗಡಲಲ್ಲಿ ತೇಲಿಸುವ ಹಾಸ್ಯಭರಿತ ವಾಕ್ಚಾತುರ್ಯದಲ್ಲಿ ಕೊನೆಗಾಣುತ್ತಿರಲಿಲ್ಲ. "ರಾಷ್ಟ್ರಕವಿ" ನಿಯುಕ್ತಿ ಸಮಾರಂಭಕ್ಕಾಗಿ ಮದ್ರಾಸಿಗೆ ಬಂದಾಗ. ಗೋವಿಂದ ಪೈಯವರು ಮದ್ರಾಸಿನ ಕರ್ಣಾಟಕ ಸಂಘದಲ್ಲೂ ಒಂದು ಉಪನ್ಯಾಸ ನೀಡಿದ್ದರು. "ಕನ್ನಡ ಸಾಹಿತ್ಯದ ಹಳಮೆ"ಯ ವಿಚಾರವಾಗಿ ಸುಮಾರು ಒಂದೂವರೆ ಗಂಟೆಗಳ ಕಾಲ ಕೊಟ್ಟ ಅಸ್ಖಲಿತ ಭಾಷಣವು ಕಿಕ್ಕಿರಿದು ತುಂಬಿದ ಸಭಿಕರಿಗೆ ಅಪೂರ್ವವಾದ ಜ್ಞಾನ ಸಂತರ್ಪಣೆಯಾಗಿದ್ದಿತು.

ಗೋವಿಂದ ಪೈಯವರು ಸದಾ ಚಿಂತನಪರರಾಗಿದ್ದರು. ಆದರೂ ಸದಾ ಹರ್ಷಚಿತ್ತರಾಗಿದ್ದರು. ಸರಳ ಸ್ವಭಾವದ, ಸರಳ ಜೀವನದ, ನಿರ್ಲಿಪ್ತವ್ಯಕ್ತಿಗಳ ರೀತಿ ಹಾಗೆಯೇ ಅಲ್ಲವೆ? ಗೋವಿಂದ ಪೈಯವರಿಗೆ ಮಕ್ಕಳೆಂದರೆ ಬಲು ಮಮತೆ; ಮಕ್ಕಳಿಗೂ ಅವರೆಂದರೆ ಪ್ರಾಣ. ಈಗ ಸುಮಾರು 25 ವರ್ಷಗಳ ಹಿಂದಿನ ಮಾತು. ನಾನೊಮ್ಮೆ ನನ್ನ ಕಚೇರಿಯಲ್ಲಿ ಕಾಗದ ಪತ್ರಗಳನ್ನು ನೋಡುತ್ತಾ ಕುಳಿತಿದ್ದೆ. ಅಕಸ್ಮಾತ್ತಾಗಿ ಪೈಯವರು ಬಂದು ಒಳಹೊಕ್ಕರು. ಮನೆಯ ಮಗ್ಗುಲಲ್ಲೇ ನನ್ನ ಕಚೇರಿ. ಪೈಯವರು ಆಗಮನದ ಸುದ್ದಿ ತಿಳಿದ ನನ್ನ ಮಕ್ಕಳು ಓಡೋಡಿ ಬಂದರು-ಗೋಡೆಯ ಹಿಂದೆ ಅಡಗಿ ನೋಡಿದರು; ಬಾಗಿಲ ಮರೆಯಲ್ಲಿ ಇಣಿಕಿ ನೋಡಿದರು: ಕಿಟಿಕಿಯ ಎಡೆಯಿಂದ ಹಲ್ಲುಕಿರಿದರು. ಹೀಗೆ ಯಾವ ಯಾವದೋ ಬಗೆಯಲ್ಲಿ ತಾವು ಹಾಜರಾದ ಸಂಗತಿಯನ್ನು ಪೈಯವರ ಗಮನಕ್ಕೆ ತಂದರು. ಹೊರಳಿ ನೋಡಿದ ಪೈಯವರು. ದೊಡ್ಡ ಮಕ್ಕಳೂ ಸಣ್ಣ ಮಕ್ಕಳೂ ಗುಂಪಾಗಿ ಎಲ್ಲ ಕಡೆಯಲ್ಲೂ ಸುತ್ತುವರಿದುದನ್ನು ಕಂಡು. ಹರ್ಷಾತಿರೇಕದಿಂದ ನಮ್ಮ ಚರ್ಚೆಯನ್ನು ಅಲ್ಲಿಗೇ ನಿಲ್ಲಿಸಿ ಮಕ್ಕಳೊಡನೆ ಆಡಿ, ಹಾಡಿ, ಕುಣಿದು ಕುಪ್ಪಳಿಸಿದರು. ಯಾವ ಕೆಲಸಕ್ಕಾಗಿ ನನ್ನಲ್ಲಿಗೆ ಬಂದಿದ್ದರೋ ಆ ಕೆಲಸ ಅವರಿಗೂ ಮರೆತು ಹೋಯಿತು; ನನಗೂ

ಮರೆತು ಹೋಯಿತು; ಗೋವಿಂದ ಪೈಯವರು ಮಕ್ಕಳ ಜತೆಯಲ್ಲಿ ಹಸುಗೂಸಾಗುತ್ತಿದ್ದರು; ವೃದ್ಧರೊಡನೆ ಬೆರೆತು ವೃದ್ಧರಾಗುತ್ತಿದ್ದರು.

ಕಾವ್ಯ ವಿಮರ್ಶೆಯಲ್ಲಿ, ಇತಿಹಾಸ ಸಂಶೋಧನೆಯಲ್ಲಿ, ಹೇಗೋ ಹಾಗೆ ಭಗವತ್ತತ್ತ್ವ ಚಿಂತನೆಯಲ್ಲೂ ಪೈಯವರದು ಎತ್ತಿದ ಕೈ. ಭಗವದ್ಗೀತೆಯ ಅಧ್ಯಾಯಗಳೆಲ್ಲ ಅವರಿಗೆ ಮುಖೋದ್ಗತವಾಗಿದ್ದುವು. ನನಗೆ ಸಮೀಪ ಬಂಧುಗಳೇ ಆದ ಅವರು ನನ್ನನ್ನೊಮ್ಮೆ ಕುಟುಂಬ ಸಮೇತನಾಗಿ ಮಂಜೇಶ್ವರಕ್ಕೆ ಬರುವಂತೆ ಕರೆದಿದ್ದರು. ಒಂದು ದಿನ ಬೆಳಿಗ್ಗೆ ಸುಮಾರು ಹತ್ತು ಗಂಟೆಗೆ ಅಲ್ಲಿಗೆ ತಲುಪಿದ್ದೆವು. ಹೋದವರು, ಗೀತೆಯ ಯಾವುದಾದರೊಂದು ಅಧ್ಯಾಯದ ಪ್ರವಚನವಾಗಬೇಕೆಂದು ಕೋರಿದ್ದೆವು. ಸುಮಾರು ಎರಡು ತಾಸುಗಳಷ್ಟು ಕಾಲ ಪ್ರವಚನ ನಡೆಯಿತು. ಅಷ್ಟು ಕಾಲವೂ ಅತ್ತಿತ್ತ ನೋಡುವುದರೊಳಗಾಗಿ ಕಳೆದುಹೋಗಿತ್ತು. ಈ ಅಲ್ಪಾವಧಿಯ ಗೀತಾಭ್ಯಾಸದಲ್ಲಿ, ಪೌರಸ್ತ್ಯ ಪಾಶ್ಚಾತ್ಯ ಸತ್ತ್ವಗ್ರಂಥಗಳಲ್ಲೂ ಕನ್ನಡ, ಸಂಸ್ಕೃತ, ಇಂಗ್ಲೀಷ್ ಸಾಹಿತ್ಯ ಗ್ರಂಥಗಳಲ್ಲೂ ಸಂವಾದಿಯಾಗಿದ್ದ ಭಾವಗಳ ತುಲನಾತ್ಮಕ ವಿವೇಚನೆಯೂ ನಡೆಯಿತು. ಅವರು ಇತಿಹಾಸ ಸಾಹಿತ್ಯ ವಿದ್ವಾಂಸರೆಂದಷ್ಟೇ ತಿಳಿದುಕೊಂಡಿದ್ದ ನಾನು ಅವರ ತತ್ವಜ್ಞಾನದ ಆಳವನ್ನು ಕಂಡು ಅವಾಕ್ಕಾದೆ.

ಗೋವಿಂದ ಪೈಯವರ ವಿಚಾರದಲ್ಲಿ ಹೇಳಿದಷ್ಟೂ ಮುಗಿಯದು; ಬರೆದಷ್ಟೂ ಮುಗಿಯದು. ಒಟ್ಟಿನಲ್ಲಿ ಅವರೊಂದು ಅಪೂರ್ವ ವ್ಯಕ್ತಿ; ಅದ್ಭುತ ವ್ಯಕ್ತಿ. ಅವರು ಕನ್ನಡಕ್ಕೆ ಕೊಟ್ಟ ಕೊಡುಗೆ ಅಪಾರ. ಜತೆಗೆ ಭಾರತೀಯ ಇತಿಹಾಸ ಭಂಡಾರಕ್ಕೆ ನೀಡಿದ ಕಾಣಿಕೆಯೂ ಅಪಾರ. ಯಾವ ಬಗೆಯ ಪೂರ್ವಗ್ರಹದಿಂದಾಗಲಿ, ದುರಭಿಮಾನದಿಂದಾಗಲಿ, ಸಂಕುಚಿತ ಬುದ್ಧಿಯಿಂದಾಗಲಿ ಪೀಡಿತರಾಗದೆ, ಯಾವ ಬಗೆಯ ಲೌಕಿಕ ಮಹತ್ವಾಕಾಂಕ್ಷೆಯೂ ಇಲ್ಲದೆ, ವಿಶಾಲ ಹೃದಯದಿಂದ ಸಮಗ್ರ ದೇಶದ ಜ್ಞಾನಾಭಿವೃದ್ಧಿಗಾಗಿ ಐವತ್ತು ವರ್ಷಕ್ಕೂ ಮೀರಿ ಅವಿಶ್ರಾಂತವಾಗಿ ದುಡಿದ ಅಮೋಘ ಜೀವನ ಅವರದು.

ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಹೇಳಿದಂತೆ, "ಕನ್ನಡಕ್ಕಾಗಿ ದುಡಿಯುವವರು ಬರಿಯ ಕನ್ನಡಕ್ಕಾಗಿ ದುಡಿಯುವುದಿಲ್ಲ; ಲೋಕಕ್ಕಾಗಿ ದುಡಿಯುತ್ತಾರೆ; ಧರ್ಮಕ್ಕಾಗಿ ದುಡಿಯುತ್ತಾರೆ. ಲೋಕದ ಕೆಲಸವೆಲ್ಲ ಒಂದು ಕೆಲಸ. ಅದನ್ನು ಮಾಡುವವರೆಲ್ಲ ಒಂದು ದಳ. ಆ ಕೆಲಸವನ್ನು ದಕ್ಷತೆಯಿಂದ ಮಾಡಿ ಅದರಲ್ಲಿ ಸೇರುವ ಯೋಗ್ಯತೆಯನ್ನು ಪಡೆದವರೆಂಬ ಕಾರಣದಿಂದ ಕನ್ನಡ ಜನತೆ ಕವಿವರ ಗೋವಿಂದ ಪೈಗಳನ್ನು ಕುರಿತು ಹೆಮ್ಮೆ ಪಡಬಹುದಾಗಿದೆ, ಸಂತೋಷಪಡುತ್ತಿದೆ"—ಗೋವಿಂದ ಪೈಗಳಿಗೆ ಇದಕ್ಕಿಂತ ಹೆಚ್ಚಿನ ಗೌರವಾರ್ಪಣೆ ಇನ್ನೇನು?

"Theodor Korner" ಎಂದೊಬ್ಬ ಜರ್ಮನ್ ಕವಿ ಜರ್ಮನ್ ಭಾಷೆಯಲ್ಲಿ ಬರೆದ ಕವಿತೆಯೊಂದನ್ನು ಗೋವಿಂದ ಪೈಯವರು "Prayer During The Battle" ಎಂಬ ಹೆಸರಿನಿಂದ ಇಂಗ್ಲೀಷಿಗೆ ಅನುವಾದ ಮಾಡಿದ್ದಾರೆ. ಅವರ ಒಂದು ಪದ ಹೀಗಿದೆ:–

Father Thou, bless me!
My life I commit to the will of Heaven,
Thou canst it take, for Thou hast it given;
To life or to death, Father, bless me!
Father, I praise Thee.

ಈ ಸರ್ವಸಮರ್ಪಣ ಭಾವವೇ ಗೋವಿಂದ ಪೈಯವರ ಜೀವನ ತತ್ತ್ವ.

ಇಂತಹ ವಿಭೂತಿಪುರುಷರನ್ನು ಪಡೆದ ನಮ್ಮ ಜಿಲ್ಲೆ ಧನ್ಯ; ಕನ್ನಡ ನಾಡೂ ಧನ್ಯ; ಸಮಗ್ರ ದೇಶವೂ ಧನ್ಯ. ಅವರ ಸಮಕಾಲೀನರಾಗಿ ಬಂದ ನಾವೂ ಧನ್ಯರು.



# ಸಿಂಹದ ಗುಹೆಯಲ್ಲಿ ಮೀನಿನ ಹೆಜ್ಜೆ

**ಶ್ರೀ ಎಸ್. ಎಂ. ವೃಷಭೇಂದ್ರ ಸ್ವಾಮಿ.**

ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳನ್ನು ನೋಡಬೇಕು, ಮಾತನಾಡಬೇಕು, ಪರಿಚಯಮಾಡಿಕೊಳ್ಳಬೇಕು ಎಂಬ ಬಯಕೆ ಬಹು ದಿನಗಳಿಂದ ಮೂಡಿದ್ದಿತು. ಅವರ ಬಗ್ಗೆ ತಿಳಿದಾಗಲೆಲ್ಲ, ಅವರ ಲೇಖನ, ಕವಿತೆಗಳನ್ನು ಓದಿದಾಗಲೆಲ್ಲ, ಈ ಬಯಕೆ ಬೇರ್ಪರಿಯುತ್ತಿತ್ತು. ಅವರ ಅಗಾಧ ಪಾಂಡಿತ್ಯ. ಅನೇಕ ಭಾಷೆಗಳ ಸ್ವಾಮ್ಯ, ಅತ್ಯದ್ಭುತ ಸ್ಮರಣಾ ಶಕ್ತಿಯನ್ನು ಭಾವಿಸಿದಾಗಲೆಲ್ಲ ಈ ಬಯಕೆಯ ಬೇರುಗಳು ಅಲುಗಾಡುತ್ತಿದ್ದುವು. ಶ್ರೀ ಪೈಗಳನ್ನು ನೋಡಿ ಬಂದವರ ಮಾತುಗಳನ್ನು ಕೇಳಿ ಈ ಬಯಕೆ ಒಂದು "ಮಧುರಭಯ"ವಾಗಿ ಪರಿಣಮಿಸಿತ್ತು. ಒಮ್ಮೆ ಮೈಸೂರಿಗೆ ಬಂದಿದ್ದರು. ಹಲವು ಮಿತ್ರರೊಡನೆ ಹೋಗಿ ನೋಡಿದೆ. ಅವರ ವಿಶಾಲವಾದ ಮುಖ, ನೇರ ನಿಂತಿದ್ದ ಬಿಳಿ ಕೂದಲು, ಉದ್ದವಾಗಿ ಬೆಳೆದಿದ್ದ ಬಿಳಿ ಮೀಸೆಯನ್ನು ಕಂಡ ಕೂಡಲೇ, ಸಿಂಹರಾಜನನ್ನು ಕಂಡಂಥ ಅನುಭವವಾಯಿತು. ಆದರೆ, ಅವರು ಬೀರಿದ ನಗೆ, ತೋರಿಸಿದ ಆತ್ಮೀಯತೆ, ಬಯಸಿದ ಸ್ವಾಗತ, ಮಾಡಿದ ಚರ್ಚೆ, ಮಾತಿನ ಶೈಲಿ, ನನ್ನನ್ನು ಸೂರೆಗೊಂಡವು. ಅವರ ಕೋಣೆಯನ್ನು ಬಿಟ್ಟು ಹೊರಗೆ ಬಂದಾಗ ಸಿಂಹದ ಗುಹೆಯಿಂದ ಹೊರಬಂದ ಅನುಭವದ ರೋಮಾಂಚ ತುಂಬಿತ್ತು ನನ್ನ ಹೃದಯದಲ್ಲಿ !

ಮತ್ತೊಮ್ಮೆ ಕಂಡೆ, ಮಂಜೇಶ್ವರದ ಅವರ ಮನೆಯಲ್ಲಿಯೇ. ನನ್ನ ಕೆಲವು ವಿದ್ಯಾರ್ಥಿಮಿತ್ರರೊಡನೆ, ಸಾಂಸ್ಕೃತಿಕ ಪ್ರವಾಸ ಕೈಗೊಂಡು ಮಂಗಳೂರು ಜಿಲ್ಲೆಗೆ ಹೋಗಿದ್ದೆ. ವರ್ಷ. ದಿನಾಂಕ ನೆನಪಿಲ್ಲ.(ಪೈಗಳಿಗೆ ಖಂಡಿತ ಗೊತ್ತಿರಬೇಕು !) ಹಿಂದಿನ ಅನುಭವ ಪುನರಪಿ ಆಯಿತು ! ಸಮುದ್ರದ ತೆರೆಗಳ ಮೊರೆತ ದೂರದಿಂದ ಕೇಳಿಸುತ್ತಿತ್ತು. "ಹರಟೆ ಕೂಡದು.........ಜೋಕೆಯಿಂದಿರಬೇಕು" ಎಂದು ವಿದ್ಯಾರ್ಥಿಗಳಿಗೆ ಎಚ್ಚರಿಕೆ ನೀಡಿದ್ದೆ. ಪೈಗಳ ಮನೆಯಲ್ಲಿ ದೊರೆತ ಆದರ, ನಮ್ಮೊಡನೆ ಬೆರೆತು ಅವರಾಡಿದ ಮಾತು, ಅವರು ಕೊಟ್ಟ ತಿಂಡಿ-ಪಾನೀಯ ನನ್ನ ಮನಸ್ಸಿಗೆ ಧೃತಿ ತಂದಿತು. ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ರಾಜಕೀಯ, ಜನಜೀವನದ ಸಮಸ್ಯೆಗಳು. ಇವೆಲ್ಲ ನುಗ್ಗಿ ಬಂದುವು ನಮ್ಮ ಮಾತುಕತೆಗಳಲ್ಲಿ. ಬೇರೆ ಬೇರೆ ಊರುಗಳಿಂದ ಬಂದ ವಿದ್ಯಾರ್ಥಿಗಳ ಹುಟ್ಟೂರು ಕೇಳಿದಾಗಲೆಲ್ಲ, ಇಂಥ ತಾಲೂಕು, ಇಂಥ ಜಿಲ್ಲೆ, ಆ ಗ್ರಾಮದಲ್ಲಿ ಈ ದೇವಾಲಯ, ಶಾಸನಗಳಿವೆ. ಚರಿತ್ರೆಯಲ್ಲಿ ಅದರ ಸ್ಥಾನ-ಮಾನ. ಅದರ ಸುತ್ತುಮುತ್ತಲಿನ ಊರುಗಳ ಗತ ಇತಿಹಾಸ-ಇವನ್ನೆಲ್ಲ ಪೈಗಳು ಸರಾಗವಾಗಿ ಹೇಳಿಬಿಡುತ್ತಿದ್ದರು ! ನಾನು ಬಳ್ಳಾರಿಯವನೆಂದ ಕೂಡಲೇ, ಹಂಪೆಯ ಮಾತು ಬಂದಿತು. ಅಲ್ಲಿನ ಒಂದೊಂದು ದೇವಾಲಯ, ಒಂದೊಂದು ಕೋಟೆ, ಸುತ್ತುಮುತ್ತಲಿನ ಚಾರಿತ್ರಿಕ ಅವಶೇಷಗಳ ದುಸ್ಥಿತಿ-ಸಂಗತಿಗಳನ್ನೆಲ್ಲ ಅದೆಷ್ಟು ವಿವರವಾಗಿ ತಿಳಿಸಿದರೆಂದರೆ ಹತ್ತಾರು ಬಾರಿ ನೋಡಿದ ನನಗೂ ನಾಚಿಕೆ ಎನಿಸಿತು. ಆಗ ನಾನೆಂದೆ" ಹಂಪೆಯನ್ನು ತಾವು ಎಷ್ಟು ಬಾರಿ ನೋಡಿರುವಿರಿ" "ಆ:! ನೋಡಲೇ ಇಲ್ಲ ಇನ್ನೂ..............." ಎಂದು ತಮ್ಮ ಬಿಳಿಯ ಹುಬ್ಬುಗಳನ್ನು ಮೇಲೇರಿಸಿದರು ! ನಮ್ಮ ಹುಬ್ಬುಗಳೂ ಆಶ್ಚರ್ಯದಿಂದ ಮೇಲೇರಿದುವು ! ಕಾಸರಗೋಡಿನ ಮಾತು ಬಂದಿತು. ಪೈಗಳು ಕೆಂಡವಾದರು. ಕ್ರಾಂತವಾಯಿತು ಅವರ ಮನಸ್ಸು; ಮಾತು ಬಿರುಸಾಯಿತು. ಕನ್ನಡ ಮಣ್ಣಿನ ಪ್ರೀತಿಯ ಪ್ರತೀಕವಾದರು ಅವರು ! ಕನ್ನಡ ಮುಂದಾಳುಗಳ ಅನಾದರವನ್ನೂ. ಕೇರಳೀಯರ ಕುಬುದ್ಧಿಯನ್ನೂ ಕೊಚ್ಚಿ ಕೊಡವಿದರು. "ನನ್ನ ಕೈಯಲ್ಲಿ ಒಂದು ಕೋವಿ ಇದ್ದಿದ್ದರೆ......"ಎಂದು ಗುಡುಗಿದರು. ಸಿಂಹದ ಗರ್ಜನೆಯಂತಿತ್ತು ! ಈ ಭಾವಾವೇಶದಿಂದ ಎಲ್ಲಿ ಅವರ ಹೃದಯ ಒಡೆದು ಹೋಗುವುದೋ ಎಂಬ ಭೀತಿ ಬಂದಿತು. ನೆನಸಿದರೆ ಈಗಲೂ ನನ್ನ ಎದೆ ನಡುಗುತ್ತದೆ ! ಆ ವಾದ ಮಾಡುವಲ್ಲಿಯೂ ಅದೆಷ್ಟು ವಿವರ ವೃತ್ತಾಂತ ! ಸಕಾರಣವಾದ ವಾದ !! ಅದೆಂಥ ನಿಸ್ಸೀಮ ಕನ್ನಡ ಭಕ್ತಿ !!! "ನಾನು ಪರರಾಜ್ಯದಲ್ಲಿ ಸಾಯ ಬೇಕಾಯಿತಲ್ಲ" ಎಂಬ ಅವರ ನುಡಿ ನಮ್ಮ ಕರುಳು ಕತ್ತರಿಸಿತು. (ಪುಣ್ಯಕ್ಕೆ ಕನ್ನಡದ ರಾಜ್ಯದ ಮಂಗಳೂರಿನಲ್ಲಿ ದಿವಂಗತರಾದರು.) ಇತ್ತ ಭಯ, ಅತ್ತ ದು:ಖ, ಒಮ್ಮೆ ಶಂಕೆ, ಒಮ್ಮೆ ಸಮಾಧಾನ, ಏನೇನೊ ಆಗಿ, ಭಾರವಾದ ಹೃದಯದಿಂದ ಹೊರಬಂದೆವು. ಮನೆಯ ಮೆಟ್ಟಲುಗಳನ್ನಿಳಿದು, ಕಾಂಪೌಂಡಿನ ಗೇಟಿನ ವರೆಗೆ ಬರಲು ಅರ್ಧತಾಸು ಹಿಡಿಯಿತು. "ಕರ್ನಾಟಕದಲ್ಲಿ ದೊಡ್ಡವರೆನಿಸಿಕೊಳ್ಳುವ ಕೆಲವರು ತುಂಬಾ ಸಣ್ಣವರು" ಎಂಬುದು ಅವರ ಅನಿಸಿಕೆ. ತಮ್ಮ ಲೇಖನ ಕವಿತೆ, ಕೃತಿಗಳ ಬಗ್ಗೆ ನುಡಿದಾಗಲೆಲ್ಲ ಅದೆಂಥ ವಿವರವಾದ ನೆನಪು ಅವರದು ! ಯಾವ ದಿನ. ಹೇಗೆ ಕುಳಿತು ಬರೆದರು ಎಂಬುದೆಲ್ಲ ನೆನಪಿದೆ ಅವರಿಗೆ. ಹಿಂದೆ ನಾನು ಮೈಸೂರಿನಲ್ಲಿ ಕಂಡ ನೆನಪು ಮಾಡಿಕೊಂಡರು. ದಿನಾಂಕ, ಸ್ಥಳ. ಸಮಯ, ಹಾಗೂ ಯಾರೊಡನೆ ಬಂದದ್ದು ಎಂಬೆಲ್ಲ ವಿವರ ಅವರಿಗೆ ಹೊಳೆಯಿತು. ನನಗೆ ಅತ್ಯಾಶ್ಚರ್ಯವಾಯಿತು ! ಶಾಸನಗಳ ಮಾತು ಬಂದಾಗ, ಎಲ್ಲ ಶಾಸನಗಳ ಸ್ಥಳ-ಸಂಗತಿ. ತಾವು ಅವುಗಳನ್ನು ಎಲ್ಲಿ ಓದಿದರು ಎಂಬೆಲ್ಲ ವಿವರ ತಿಳಿಸಿದರು. ಗ್ರೀಕ್ ನಾಟಕದಲ್ಲಿನ ಕನ್ನಡ ಮಾತು, ಪ್ಟೊಲೆಮಿ ಹೇಳಿದ ಕನ್ನಡ ಊರುಗಳು; ಕುಮಾರವ್ಯಾಸ, ಬಸವೇಶ್ವರ ಇವರ ಕಾಲ-ಮಾನ; ತುಳುನಾಡು-ನುಡಿಗಳ ಗತ ಇತಿಹಾಸ, ಕನ್ನಡ ಸಾಹಿತ್ಯದ ಪ್ರಾಚೀನತೆ, ಕೆಲವು ವಿಶೇಷ ಶಬ್ದಗಳ ಹುಟ್ಟು-ಬೆಳವಣಿಗೆ, ವೊಡ್ಡಾರಾಧನೆಯ ಭಾಷೆ-ಶೈಲಿ-ಆಕರ ಇಂಥ ಅನೇಕ ಸಂಗತಿಗಳ ಸುಸೂಕ್ಷ್ಮ ವಿಷಯಗಳ ವಿಚಾರ-ಇವೆಲ್ಲ ಸಂಶೋಧನೆಯ ಸಿಂಹ ತನ್ನ ಗುಹೆಯಲ್ಲಿ ಕುಳಿತು ಕಂಡ "ಮೀನಿನ ಹೆಜ್ಜೆ"ಗಳು ! ಗತಕಾಲದ ಗುರುತುಗಳು !!

—2—

"ಪೈಗಳು ಇಂದು ಇಲ್ಲ" ಎಂಬುದನ್ನೇ ಒಪ್ಪದು ನನ್ನ ಹೃದಯ. ಅವರ ಯಾವುದೇ ಲೇಖನ ಓದಿದಾಗ, ಈ ಸಿಂಹ ಗುಹೆ-ಮಿಂಚಿನ ಹೆಜ್ಜೆ"ಗಳ ಅನುಭವ ನನಗಾಗುತ್ತದೆ; ಅವರ ಮೂರ್ತಿ ಮನದಲ್ಲಿ ಮೂಡಿ ನಿಲ್ಲುತ್ತದೆ; ಹೃದಯ ಮೌನ-ಛಯದ ಲ್ಲಿ ಮುಳುಗುತ್ತದೆ. ಆತ್ಮ ಅಮರ ಅಹುದೋ ಅಲ್ಲವೋ, ನಾಕಾಣೆ. ಆದರೆ ಈ ಅನುಭವ ಮಾತ್ರ ಶಾಶ್ವತ. ಅದನ್ನು ಪಡೆ ದವರಿಗೆಲ್ಲ ಸತ್ಯ, ಶಾಶ್ವತ. ಅವರ ಸಂಶೋಧನೆಯ ಗುಹೆಯನ್ನು ಹೋಗುವ ಸಾಹಸಿ ಅವರ ವಿಚಾರಗಳ ಮಿಂಚಿನ ಹೆಜ್ಜೆ ಕಾಣುವ ಭಾಗ್ಯ ಪಡೆಯುತ್ತಾನೆ. ನಾನಂತೂ ಪಡೆಯುತ್ತಿದ್ದೇನೆ.

ಕಳೆದು ಹೋಗಿರುವ ರನ್ನನ ಕೃತಿಗಳ ಬಗ್ಗೆ ಪೈಗಳ ಸಂಶೋಧನೆ, ಆ ಕೃತಿ ರಚನೆಯ ಕಾಲ, ಉದ್ದೇಶ, ವಸ್ತು, ಮತ್ತು ಅಂಕಿತಗಳ ವಿವರಣೆಯನ್ನು ನೀಡುತ್ತದೆ. ಪರಶುರಾಮ ಚರಿತ, ಚಕ್ರೇಶ್ವರ ಚರಿತಗಳನ್ನು ರನ್ನನು ತನ್ನ ಮಕ್ಕಳಾದ ರಾಯ, ಅತ್ತಿ ಮಬ್ಬೆಯರಿಗೆ ಅಂಕಿತಮಾಡಿಲ್ಲವೆಂಬ ಸತ್ಯವನ್ನು ಹತ್ತು ಪುರಾವೆ, ವಾದಗಳಿಂದ ಸ್ಥಾಪಿಸಿದ್ದಾರೆ. ಜಾತಕಗಳು ಇಲ್ಲದಿದ್ದರೂ ಆ ಇಬ್ಬರು ಮಕ್ಕಳು ಹುಟ್ಟಿದ ದಿನಗಳನ್ನು ಸಕಾರಣವಾಗಿ ಊಹಿಸಿದ್ದಾರೆ. ರನ್ನನ "ಪರಶುರಾಮ ಚರಿತ" ವೈದಿಕ ಪರಶುರಾಮನ ಕಥೆ ಇರಲಿಕ್ಕಿಲ್ಲ. ಗುಣಭದ್ರನ ಸಂಸ್ಕೃತ ಉತ್ತರ ಪುರಾಣದ ಸುಳುಹು ಹಿಡಿದು, ಸುಭೌಮನೆಂಬ (ಜೈನ) ಕಾರ್ತವೀರ್ಯನ ಕಥೆಯೇ "ಪರಶುರಾಮ ಚರಿತ" ಎಂಬ "ಜೈನ ರನ್ನನು" ರಚಿಸಿದ "ಜೈನ ಕಥೆ" ಎಂದು ನಿರ್ಣಯಿಸಿದ್ದಾರೆ. ಇದಕ್ಕೂ, "ಹುತವಹ ಬಾಣದಿಂದಮಿಸೆ ತೂಳ್ದುದು" ಎಂಬ ಅದೊಂದು ಮಾತಿನ ಸುಳುಹು ಹಿಡಿದು, ರನ್ನನ ಮೂರು ಕಾವ್ಯಗಳನ್ನೂ ಜೈನರಲ್ಲಿ ಪರಮಪೂಜ್ಯವಾದ "ತ್ರಿರತ್ನ"ಗಳಿಗೆ ಹೋಲಿಸಿರುವ ದಾರಿ ಹಿಡಿದು, ಅಜಿತ ಪುರಾಣದ "ಪೊಲ್ಲಮೆ ಪರಮತದೊಳ್॥ ಫಲಮಿಲ್ಲದ ಅತಿಶೊಲ್ಮೊಡದ್ದು ಕಿಡದಿರೆಲೆ ಜೀವನೆ ನೀ" ಎಂಬ ಹಾಗೂ "ಪರಮತ" "ಪೆಱಪೆಱರ ಪೇಟ್ಬ್ರಧರ್ಮ" "ಮಿಥ್ಯಾತ್ವ" ಎಂಬ ನುಡಿಗಳ ಜಾಡು ಹಿಡಿದು, ತಾನು ಬರೆದ ಜೈನ ಪುರಾಣ ಎಂದರೆ (ತೀರ್ಥಂಕರನ ಕಥೆ) "ಅಜಿತಪುರಾಣ"ಒಂದೇ ಎಂಬ ರನ್ನನದೇ ಹೇಳಿಕೆ (ಅಜಿತ ಪುರಾಣ XII-35)ಯಲ್ಲಿ ಕೋಲೂರಿ, ಚಿಕ್ಕಮಗಳೂರಿನ ಕ್ರಿ.ಶ.1102ರ ಶಿಲಾಶಾಸನದ ಪದ್ಯವೊಂದರ "ಅರ್ಥ"ದಲ್ಲಿ ಮುಂದಡಿ ಯಿಟ್ಟು, ರನ್ನನ ಅಜ್ಞಾತ ಕೃತಿಗಳ "ವಸ್ತು"ವೇನಿರಬಹುದೆಂಬ ನಿರ್ಣಯಕ್ಕೆ ಬಂದಿದ್ದಾರೆ. ಅಲ್ಲದೆ, ಪರಶುರಾಮ ಚರಿತ, ಚಕ್ರೇ ಶ್ವರ ಚರಿತಗಳು ಕ್ರಮವಾಗಿ, "ಸಾಮಂತರ, ಮಂಡಳಿಕರ" ಆಶ್ರಯದಲ್ಲಿ ರಚಿತವಾದ ಕೃತಿಗಳೆಂದು ಊಹಿಸಿದ್ದಾರೆ. ಗದಾಯುದ್ಧ ಕಾವ್ಯದ ರನ್ನನ ಪದ್ಯಗಳಲ್ಲಿ ಬರುವ ಗಂಗಮಂಡಲ ಚಕ್ರೇಶ್ವರ ಕಟಕೋತ್ತಮನಾಯಕ" ಮತ್ತು "ವಸುಧಾಧಿಪತಿಯ......ಕೇ ವಣದೊಳ್ ಸೇರಿದುದರಿಂದೀಗಳ್" ಎಂಬ ನುಡಿಗಳನ್ನು ಸೂಚಿಸಿ, ಈ ವಾದವನ್ನು ಸ್ಥಾಪಿಸಿದ್ದಾರೆ. ಅನಂತರ, ಕ್ರಿ.ಶ. 981ಮಾ ರ್ಚ್ 13ನೆಯ ದಿನಾಂಕ, ರವಿವಾರ ನೆರವೇರಿದ, ಶ್ರವಣಬೆಳಗೊಳ ಗೊಮ್ಮಟ ಪ್ರತಿಷ್ಠೆಗೆ ಬಂದ ರನ್ನನು, ಚಾವುಂಡಾರಾಯನಿಗೆ ಪರಿ ಚಿತನಾಗಿ ಗಂಗಮಂಡಲೇಶ್ವರರ ಆಸ್ಥಾನ ಸೇರಿ, "ಚಕ್ರೇಶ್ವರ ಚರಿತ"ವನ್ನು ಕಿ.ಶ.981-2ರಲ್ಲಿ ಬರೆದಿರಬೇಕೆಂದು ನಿರ್ಣಯಿಸಿದ್ದಾರೆ. ಹಾಗೆಯೇ, ಗದಾಯುದ್ಧ ಕಾವ್ಯವು ಕ್ರಿ.ಶ. 955ರಿಂದ ಈಚೆಗೆ ರಚಿತವಾಗಿದೆ ಎಂಬುದನ್ನೂ ಶಾಸನಗಳ ಮಿನುಗು ಸೂಚನೆಗಳಿಂದ ಊಹಿಸಿದ್ದಾರೆ.

ಗದಾಯುದ್ಧದಲ್ಲಿಯ (I-26)

ಕಂಡೆಂ ಗ್ರಹಣಮನದನಾ<br>
ಖಂಡಲ ದಿಙ್ಮುಖದೆ ಬಂದು ಸರ್ವಗ್ರಾಸಂ<br>
ಗೊಂಡತ್ತ ಪರಾದಿತ್ಯನ<br>
ಮಂಡಲಮಂ ಬಾಹುರಾಹು ಸತ್ಯಾಶ್ರಯನಾ॥

ಎಂಬ "ಪೂರ್ಣ ಸೂರ್ಯಗ್ರಹಣ"ದ ಉಪಮಾನದಲ್ಲಿ ಮಿಂಚಿದ ಅರ್ಥ ಎತ್ತಿಕೊಂಡು ಕ್ರಿ.ಶ. 1007 ಮೇ 19ನೆಯ ತಾರೀಕಿ ನಂದು ಅಪರಾಹ್ನದಲ್ಲಿ ಜರುಗಿದ ಪೂರ್ಣ ಸೂರ್ಯಗ್ರಹಣವನ್ನು ಕಂಡ ದರ್ಶನದಿಂದಲೇ ಈ ರೂಪಕ ಶ್ಲೇಷೆಯನ್ನು ರಚಿಸಿದನೆಂ ದು ಸಂಯುಕ್ತಿಕವಾಗಿಯಾದರೂ ಸಾಧಿಸಿದ್ದಾರೆ. ಅಲ್ಲದೆ "ನಂದೀಶ್ವರ ತಿಥಿ" ಎಂಬ ಸೂಚನೆಯ ತಥ್ಯಾಂಶವನ್ನು ಎತ್ತಿ ನುಡಿದಿ ದ್ದಾರೆ. ಈ ಸಂಶೋಧನೆಯ ಮಿಂಚಿನ ಹೆಜ್ಜೆಗಳ ಜಾಡು ಹಿಡಿದು, "ಸತ್ಯ" ಸುಳಿದಾಡಿದ ಜಾಡನ್ನೆಲ್ಲ ರೂಪಿಸಿ ತಿಳಿಸಿದ್ದಾರೆ. ಈ ಲೇಖನದ ವಿಷಯ ಸಂಗ್ರಹದ ಗುಹೆಯಲ್ಲಿ, ಈ ಸಿಂಹರಾಜನ ಪ್ರತಿಭೆಯ ಮಿಂಚಿನ ಹೆಜ್ಜೆಗಳನ್ನು ಕಂಡು, ಸತ್ಯ ಸಂಗತಿಗಳ ದರ್ಶನ ಪಡೆದು ಬೆರಗಾಗುತ್ತೇವೆ. ಪೈಗಳ ಸಂಶೋಧನೆಯ ವಾದ ಒಂದು ಚಕ್ರಬಿಂಬದ ಕೋಟೆ. ದಾರಿದೂರವೆನಿಸಿದರೂ. ತಿರುತಿರುಗಿ ಬಳಲಿದರೂ, ದಾರಿ ತಪ್ಪಿತೆಂಬ ಸಂಶಯ ಮಾಡಿದರೂ, ಹಿಂದೆ ಮುಂದೆ ತೊಳಲಿ ಜಗ್ಗಾಡಿದರೂ, ಊಹೆಯ ಮಳಲಿನಲ್ಲಿ ಅನಿಸಿ ಕೆಯ ನೀರು ಕುಡಿದು ಸಾಗಿದಂತೆ ಭಾಸವಾದರೂ, ಸತ್ಯ ಸೂರ್ಯನ ದರ್ಶನ ಪಡೆದಾಗ, ಪೈಗಳ ಪ್ರತಿಭೆಗೆ ನಮೋ ನಮೋ ಎನ್ನಲೇಬೇಕು.

—3—

ಕಾಲ ನಿರ್ಣಯಕ್ಕೆ ಪೈಗಳದು ಎತ್ತಿದ ಕೈ. ನೂರು ಪುರಾವೆಗಳನ್ನು ಹುಡುಕಿ, ಅವುಗಳ ಕುಲ-ಗೋತ್ರಗಳನ್ನು ಗೊ ತ್ತುಹಚ್ಚಿ, ತೀಕ್ಷ್ಣಮತಿಯಿಂದ ಅವುಗಳಿಗೆ ತಳುಕುಹಾಕಿ ಸಿದ್ಧಾಂತವನ್ನು ತುಳುಕಿಸುತ್ತಾರೆ. ಪಾಂಡಿತ್ಯ ಸಾಗರದಲ್ಲಿ ತಿಮಿಂಗಿಲದಂತೆ ಈಜಿದರೂ, ಮಿನುಗಳ ಚಲನವಲನವನ್ನು ಗುರುತಿಸದೆ ಬಿಡುವುದಿಲ್ಲ. ದೂರದ ಕಾಳ್ಗಿಚ್ಚಿನ ವಾಸನೆಯನ್ನಾಗಲೀ, ಬಹುದೂರ ದಲ್ಲಿರುವ ಉಜುಗಲುನೆಲ (Marshy land)ದ ಸೂಚನೆಯನ್ನಾಗಲೀ, ಕರಿರಾಜ ತನ್ನ ಸೊಂಡಿಲಿನ ಸೂಕ್ಷ್ಮ ಶ್ವಾಸ

ದಿಂದ ಗುರುತಿಸುವಂತೆ, ಪೈಗಳು ಹಿಂದಿನ ಸಂಗತಿಗಳ ಕಾಲ ಸೂಕ್ಷ್ಮಗಳನ್ನು ಗೊತ್ತು ಹಚ್ಚುತ್ತಾರೆ. ಬಸವೇಶ್ವರರ ಕಾಲ ನಿರ್ಣಯ ಅಂಥ ಪ್ರತಿಭೆಗೊಂದು ನಿದರ್ಶನ. ಬಸವಣ್ಣನವರ ಹೆಸರು ಬರುವ ಎಲ್ಲ ಶಾಸನಗಳನ್ನು ಇಡಿಯಾಗಿ ವಿಚಾರಿಸಿ, ಅವರು ಓಲಗಿಸಿದ "ಭವಿಬಿಜ್ಜಳ"ನ ಕುಲ-ಗೋತ್ರ, ಕಾಲ-ಮಾನಗಳನ್ನು ಕೂಲಂಕುಶವಾಗಿ ಚರ್ಚಿಸಿ, ಬಸವಣ್ಣನವರ ಬಗ್ಗೆ ಇರುವ ಅಪಪ್ರಥೆಗಳ ಕಾರ್ಮೋಡವನ್ನೂ ಚದುರಿಸಿದ್ದಾರೆ. ರಾಯಮುರಾರಿ ಸೋವಿದೇವನ "ಗತಿ-ಗತ್ಯಂತರ"ಗಳನ್ನು ಶಾಸನ ಕಾವ್ಯಗಳ ಆಧಾರದಿಂದ ಗೊತ್ತುಹಚ್ಚಿ, ಬಿಜ್ಜಳನು ಕ್ರಾಂತಿಯಲ್ಲಿ ಕೊಲೆಗೊಳಗಾಗಲಿಲ್ಲ, "ಬಸವಣ್ಣನವರ ಕೊಲೆಯಾಗಲಿಲ್ಲ" "ಕಲ್ಯಾಣ ಕ್ರಾಂತಿಯ ಕಾರಣಗಳು ಬೇರೆ" "ಬಿಜ್ಜಳನು ಸಿಂದ ಬಿಜ್ಜಳನಲ್ಲ; ಕಳಚುರ್ಯಬಿಜ್ಜಳ; ಅವನೂ ಜೈನನಲ್ಲ, ಶೈವ" "ಸಿದ್ಧ ದಂಡಾಧಿಪನು ಕಳಚುರ್ಯಬಿಜ್ಜಳನ ಅಧಿಕಾರಿ" ಎಂದೂ "ಬಲದೇವ ದಂಡನಾಯಕನು ಎರಡನೆಯ ಸಿಂದ ಚಾವುಂಡ IIನೆ ಅಧಿಕಾರಿ" ಎಂದೂ, "ಚನ್ನಬಸವಣ್ಣನವರು ಕಲ್ಯಾಣ ಕ್ರಾಂತಿಯ ನಂತರ ಸೋವಿದೇವನಲ್ಲಿ ಮಂತ್ರಿಯಾಗಿರಲಿಲ್ಲ, ಅಳಿಯ ಬಿಜ್ಜಳನೆಂದು ಹೆಸರಾದ (ವೀರಶೈವನಾಗಿರಬಹುದಾದ) ಸಿಂದ ಬಿಜ್ಜಳನಲ್ಲಿ ಆಶ್ರಯ ಪಡೆದರು" ಎಂಬ ಸಂಶೋಧನೆಯನ್ನು ಮಾಡಿತೋರಿಸಿದ್ದಾರೆ. ಪೈಗಳ ಸಂಶೋಧನೆಯನ್ನು ಒಂದು ದೊಡ್ಡ ಕಾರ್ಖಾನೆ ಎಂದು ಕರೆಯಬಹುದು. ಈ ಕಾರ್ಖಾನೆಯಲ್ಲಿ ಮುಖ್ಯ ಉತ್ಪತ್ತಿ (Main Product)ಯಷ್ಟೇ ಬೆಲೆಯುಳ್ಳದು ಉಪಉತ್ಪತ್ತಿ! (By product) ಮೂಲ ನಿರ್ಣಯಕ್ಕೆ ಬರುವ ಜಾಡಿನಲ್ಲಿ ಕಾಣುವ ಪ್ರತಿಯೊಂದು ಸಂಗತಿಯ ಪೂರ್ಣ ನಿರ್ಣಯ ಮಾಡಿಯೇ ಮುಂದುವರಿಯುತ್ತಾರೆ. ಸಂಗನ ಬಸವನ ವಂಶಾವಳಿಯ ನಿರ್ಣಯದ ಜೊತೆಗೆ, ಕಳಚುರ್ಯ ವಂಶಾವಳಿ, ಸಂದ ಅರಸರ ವಂಶಾವಳಿ, ಅವೆರಡಕ್ಕಿರುವ ಸಂಬಂಧ; ಮಂಗಳವೇಡೆ-ಕಲ್ಯಾಣಗಳು ಯಾರ ಯಾರ ಕಾಲದಲ್ಲಿ ರಾಜಧಾನಿಗಳಾಗಿದ್ದುವು; ಆಯಾ ರಾಜರುಗಳ ಕೈಕೆಳಗಿನ ಸಾಮಂತರು, ದಂಡಾಧಿಪರು; ಬಿಜ್ಜಳನ ಮೊಮ್ಮಗ (ಸಾಹಿತ್ಯ ಗ್ರಂಥಗಳಲ್ಲಿ "ತಮ್ಮ" ಎಂದು ತಪ್ಪುಬಿದ್ದಿದೆ) ಕನ್ನರ ಅಥವಾ ಕರ್ಣದೇವ, ಅಧಿಕಾರಕ್ಕೆ ಬಡಿದಾಡಿದ ಕಾರಣಗಳು ಮುಂತಾದ ಉಪ ಉತ್ಪತ್ತಿಯೂ, ಮೂಲ ಉತ್ಪತ್ತಿಯಷ್ಟೇ ಬೆಲೆಬಾಳುವ ವಸ್ತುವಾಗಿ ಬಿಡುತ್ತವೆ, ಪೈಗಳ ಈ ಸಂಶೋಧನೆಯ ಕಾರ್ಖಾನೆಯಲ್ಲಿ! ಸಿಂಹಸದೃಷ ಸಾಹಸ ಪಯಣಿಗ ಪೈ, ಗತಕಾಲದ ಸಾಗರದಲ್ಲಿ ಈಜಿ, ಶಾಸನಗಳ ದ್ವೀಪಗಳಲ್ಲಿ ಕಾಲೂರಿ, ಸಾಹಿತ್ಯ ಗ್ರಂಥಗಳ ಹೇಳಿಕೆಗಳ ಪ್ರವಾಹದಲ್ಲಿಳಿದು, ಮಿತಿ-ತಿಥಿಗಳ ಬಂಡೆಗೆ ಹಾಯ್ದು, ಎಲ್ಲಿಲ್ಲಿಯೋ ಚಲಿಸಿ, ಸಮುದ್ರದಾಳದ ಕಾಳದ ತಿಳಿಮಣ್ಣಿನಲ್ಲಿ ಮೂಡಿದ ಮೀನಿನ ಹೆಜ್ಜೆಗಳನ್ನು ತನ್ನ ಗುಹೆಯಲ್ಲಿಯೇ ಕುಳಿತು ಗುರುತಿಸುವ ಸಾಹಸ ಒಂದು ಅದ್ಭುತ. ಅದನ್ನು ಕಂಡ ಹೃದಯ ದಿಗ್ಭ್ರಾಂತವಾಗಿ ಸೋಲುತ್ತದೆ, ಶರಣಾಗುತ್ತದೆ.

**—4—**

ಶ್ರೀ ಗೋವಿಂದ ಪೈಗಳ ಮನಸ್ಸು ಅಯಸ್ಕಾಂತ, ಬುದ್ಧಿ ಕ್ಷ-ಕಿರಣ; ವಿಚಾರ ವಿದ್ಯುಲ್ಲತೆ. ಪುರಾತನ ಚರಿತ್ರೆಯ ಕಾಳಗರ್ಭವನ್ನು ಹೊಕ್ಕು ಅಲ್ಲಿನ ಅಣು ಅಣುಗಳನ್ನು ಪರೀಕ್ಷಿಸಿ, ಸತ್ಯವನ್ನು ಹೊರತೆಗೆಯುವಲ್ಲಿ ಅವರದು ಅದ್ಭುತ ಸಾಧನೆ.

"ಕನ್ನಡ ಸಾಹಿತ್ಯದ ಪ್ರಾಚೀನತೆ"ಯನ್ನು ಗುರುತಿಸುವಲ್ಲಿ ಪೈಗಳ ಈ ಪ್ರತಿಭೆಯ ದರ್ಶನವಾಗಿದೆ. ಪ್ರಾಚೀನ ಕನ್ನಡ ಶಾಸನಗಳಲ್ಲಿ ಕನ್ನಡದ ಪ್ರಾರಂಭಿಕ ಹೆಜ್ಜೆಗಳನ್ನು ಗುರುತಿಸಿದ್ದಾರೆ. "ಯಾವೊಂದು ಭಾಷೆಗೆ ನುಡಿತವಿದ್ದರೆ ಮಾತ್ರ ಸಾಲದು, ಅದು ತಾನೆ ಪ್ರೌಢವಲ್ಲದಿದ್ದರೆ ಸಾಕಷ್ಟು ಯೋಗ್ಯವೂ ವಿಸ್ತೃತವೂ ಆದ ಸಾಹಿತ್ಯವಿಲ್ಲದ ಮುಂಚೆ ಅದು ವ್ಯಾಕರಣಬದ್ಧವಾಗದು. ನೇರಾದ ಭಾವಪ್ರಕಾಶನಕ್ಕೆ ಸಲ್ಲದು, ಅಂಥಾ ಸಾಹಿತ್ಯವೂ ವ್ಯಾಕರಣವೂ ಇಲ್ಲದ ಭಾಷೆ ಶಾಸನಗಳಲ್ಲಿ ಬಳಸಲ್ಪಡದು.........ತಕ್ಕ ಸಾಹಿತ್ಯವೂ ಇದ್ದಿಲ್ಲದ ಭಾಷೆಯಲ್ಲಿ ಸರ್ವಥಾ ಈ ಪ್ರಮಾಣದಿಂದ (ಸಂಸ್ಕೃತ ಭಾಷೆಯಲ್ಲಿ ಕನ್ನಡ ಮಾತುಗಳು) ಸೇರಿರವು ಎಂದೂ ಹತ್ತು ಮಂದಿಯ ಓದಿಕೆಯ ಹಾಗೂ ತಿಳುವಳಿಕೆಯ ಬಗ್ಗೆ ಎಂದೇ ಕೊರೆದಿಟ್ಟ ಈ ಶಾಸನಗಳಲ್ಲಿ ಹೀಗಾದರೆ, ಆಗಣ ಸಮ ಸಾಮಯಿಕವಾದ ಸಾಹಿತ್ಯದಲ್ಲಿ ಈ ಪ್ರಮಾಣವು ಇನ್ನೂ ಹಿಗ್ಗಿರಬೇಕು ಎಂದು ಸ್ವಯಂ ವ್ಯಕ್ತವಾಗುವುದರಿಂದ, ಹಲ್ಮಿಡಿಯ ಶಿಲಾಲೇಖನ...........ಸಾಕಷ್ಟು ಹಿಂದಿನಿಂದಲೆ ಕನ್ನಡದಲ್ಲಿ ಸಂಸ್ಕೃತ ಮಿಶ್ರವಾದ (ಅತಏವ ಸಂಸ್ಕೃತ ಛಂದೋ ಬದ್ಧವೂ ಆದ)ಕನ್ನಡ ಸಾಹಿತ್ಯವು ಇದ್ದಿರಬೇಕು" ಎಂಬ ನಿರ್ಣಯಕ್ಕೆ ಬಂದು ನಿಂತಿದ್ದಾರೆ. ಈ ಮೇಲಿನ ಮಾತುಗಳಲ್ಲಿ ಪೈಗಳ ವಿಚಾರಧಾರೆ, ವಾದದ ರೀತಿ, ಮಾತಿನ ಶೈಲಿಯ ಅರಿವಾಗುತ್ತದೆ. ಇಷ್ಟಲ್ಲದೆ, ಉಳಿದು ಬಂದಿರುವ ಸಾಹಿತ್ಯಗ್ರಂಥಗಳಲ್ಲಿ ಸೂಚಿತವಾಗಿರುವ "ಪಳಿಯುಳಿಕೆ"ಗಳನ್ನು ಪವಣಿಸಿ, ತಮ್ಮ ವಾದವನ್ನು ಬೆಳೆಯಿಸಿದ್ದಾರೆ. ನೃಪತುಂಗನ ಕವಿರಾಜ ಮಾರ್ಗದ ಸೂಚನೆಗಳು-"ತಚ್ಚಿರಂ ತನಾಚಾರ್ಯರ್ಕಳ್"......" "ಪುರಾಣ ಕವಿಗಳ ಸಂತತಗತ ಮಾರ್ಗ" "ಪುರಾಣಕಾವ್ಯ ಪ್ರಯೋಗ" ಎಂಬುವುಗಳಲ್ಲಿ, ಕವಿರಾಜ ಮಾರ್ಗದ ಪೂರ್ವದ ಕಾವ್ಯ ಪರಂಪರೆಯನ್ನು ಊಹಿಸಿದ್ದಾರೆ. ಕನ್ನಡ ರಾಮಾಯಣವೊಂದರ ತುಣುಕುಗಳ ಉದಾಹರಣೆಗಳು ಕವಿರಾಜಮಾರ್ಗದಲ್ಲಿ ಬಂದಿರುವುದರಿಂದ ಹಿಂದೆ ಒಂದು ರಾಮಾಯಣ ಇದ್ದಿರಬೇಕೆಂದು ವಾದಿಸಿದ್ದಾರೆ. ಅಲ್ಲದೆ "ಪೂರ್ವಶಾಸ್ತ್ರಪದವಿಧಿಯಿಂ" ಎಂಬ ಕೆಲವು ಹೇಳಿಕೆಗಳನ್ನು ಆಶ್ರಯಿಸಿ, ಕವಿರಾಜ ಮಾರ್ಗಕ್ಕಿಂತ ಹಿಂದೆ, ವ್ಯಾಕರಣ ಗ್ರಂಥಗಳೂ, ಅಲಂಕಾರ ಗ್ರಂಥಗಳೂ ಇದ್ದುವೆಂದು ತರ್ಕಿಸಿದ್ದಾರೆ. ಕವಿರಾಜ ಮಾರ್ಗದ ಕೆಲವು ವೃತ್ತಗಳ ಛಂದಸ್ಸು, ಬಳಕೆಗಳನ್ನು ಪರೀಕ್ಷಿಸಿ, ಹಿಂದಿರಬಹುದಾಗಿದ್ದ ಕಾವ್ಯಗಳಲ್ಲಿ ಪ್ರಯೋಗವಾದ ವೃತ್ತಗಳಿವೆಂದು ಭಾವಿಸಿದ್ದಾರೆ. ಅಲ್ಲದೆ "ಗದ್ಯ ಪದ್ಯ ಸಂಮಿಶ್ರಿತ", "ಚತ್ತಾಣಮುಂ ಬೆದಂಡೆಯುಂ" ಮುಂತಾದ ಸೂಚನೆಗಳ ಸುತ್ತ ಕನ್ನಡ ಕಾವ್ಯ ಪ್ರಕಾರಗಳ ಸೌಧವನ್ನು ನಿರ್ಮಿಸಿದ್ದಾರೆ. ನಾಗವರ್ಮನ ಕಾವ್ಯಾವಲೋಕನದ "ವಿಕ್ರಮವಪ್ಪ ಮುನ್ನಳುರ್ದುಕೊಂಪುದು ತನ್ನುನಿಯಂ...............ಜಸಂ ಬಡೆದಂ ಪೊಲಕೇಶಿವಲ್ಲಭಂ" ಎಂಬ ಪದ್ಯ "ಪ್ರಾಯಶಃ ಶಾಸನ ಪದ್ಯವೂ ಅಲ್ಲ, ಪಡುವಣ ಚಾಳುಕ್ಯರ ಕಾಲದ ಇಲ್ಲವೆ ಅದರಿಂದ ಈಚೆಯ ಗ್ರಂಥಸ್ಥ ಪದ್ಯವೂ ಅಲ್ಲ.................. ಕ್ರಿ.ಶ.753ರೊಳಗಾದರೂ ರಚಿತವಾದ ಯಾವೊಂದು ಕನ್ನಡ ಕಾವ್ಯದಲ್ಲಿಯ ಪದ್ಯವಾಗಿರಬೇಕು" ಎಂದು ನಿರ್ಣಯಿಸಿದ್ದಾರೆ. ಅಲ್ಲ

ದೆ, ಕ್ರಿ.ಶ.634ರ ಐಹೊಳೆಯ ರವಿಕೀರ್ತಿ ಬರೆದ ಶಾಸನದ ಛಂದಸ್ಸಿನ ವಿಚಾರ ಎತ್ತಿಕೊಂಡು "ರವಿಕೀರ್ತಿಗಿಂತ ತಕ್ಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಛಂದೋಬದ್ಧವಾದ ಕಾವ್ಯ ಸಾಹಿತ್ಯವಿದ್ದಿರಬೇಕು." ಎಂದು ಸಕಾರಣವಾದ ಊಹೆಯನ್ನು ಮುಂದಿರಿಸಿದ್ದಾರೆ. ವೊಡ್ಡಾರಾಧಣ ಗ್ರಂಥದ "ದೀನಾರ" "ಕಳ್ದ" "ಕಲ್ಪಿಸು" "ಬಡ್ಡಿಸು" ಕೆಂದು" "ಲುಂದಿವ" "ತೊಟ್ಟು" "ಒಡೆಯು" ಮುಂತಾದ ವಿಶೇಷ ಶಬ್ದ ಮತ್ತು ಪ್ರಯೋಗಗಳು ಕವಿರಾಜ ಮಾರ್ಗದಲ್ಲಿ ಇಲ್ಲದಿರುವುದರಿಂದ "ವೊಡ್ಡಾರಾಧಣ ಆರನೆಯ ಶತಮಾನಕ್ಕಿಂತ ಈಚಿನದಲ್ಲವೆಂಬ ನಿರ್ಣಯವನ್ನು ಮುಂದಿರಿಸಿ, "ಕವಿರಾಜ ಮಾರ್ಗದ" ಪೂರ್ವದಲ್ಲಿ ಈ ಬಗೆಯ ಪ್ರಯೋಗ ತುಂಬಿರುವ ಕಾವ್ಯವಿದ್ದಿರಬೇಕೆಂದು ನಿರ್ಣಯಿಸಿದ್ದಾರೆ. "ವೊಡ್ಡಾರಾಧಣ"ದ ಕಾಲದ ಬಗ್ಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಪೈಗಳ ವಾದವನ್ನು ಸುಲಭವಾಗಿ ತಳ್ಳಿ ಹಾಕುವುದು ಕಷ್ಟ. ಅದಿರಲಿ, ಆದರೆ ಅಲ್ಲಲ್ಲಿ ಮಿನುಗುವ ಈ ನಕ್ಷತ್ರದ ಬೆಳಕಿನಲ್ಲಿಯೂ, ಮೀನಿನ ಹೆಜ್ಜೆಗಳನ್ನೂ ಗುರುತಿಸಬಲ್ಲ ಪೈಗಳ ಜಾಣತನಕ್ಕೆ ತಲೆದೂಗಬೇಕಲ್ಲವೆ?

—5—

ಪೈಗಳ ಗದ್ಯ ಶೈಲಿ, ಪೈಗಳದೇ. ಅವರು ಬಳಸುವ ಸುದೀರ್ಘವಾದ ವಾಕ್ಯಗಳು, ಅಡೆತಡೆಯಿಲ್ಲದೆ ಸುತ್ತಿಸುಳಿವ "ಒದುವ ಹುಳ" (ಒಂದು ಬಗೆಯ ನೀರುಹುಳ) ದ ಚಲನೆಯನ್ನೂ ನೆನಪಿಗೆ ತರುತ್ತದೆ. "ಅವರ ಕಾವ್ಯಗಳು ಕೋಟೆಯಂತೆ, ಅವರೇ ಕೊಡುವ ಅರ್ಥದ ಕೀಲಿಕೈ ಇಲ್ಲದಿದ್ದರೆ ಕೈಮುಗಿಯಬೇಕು ಅಷ್ಟೆ" ಎಂಬುದು ನಿಜವಾದರೂ, ಅವರು ಕೆಲವು ವಿಶೇಷ ಶಬ್ದಗಳಿಗೆ ಜೀವ ತುಂಬುತ್ತಾರೆ, ಆಡು ನುಡಿಯ ಸತ್ವವನ್ನು ಬಳಸಿಕೊಳ್ಳುತ್ತಾರೆ. ಹೊಸ ಶಬ್ದಗಳನ್ನು ಸೃಷ್ಟಿಸುತ್ತಾರೆ. ಹೀಗಾಗಿ ಪದ್ಯದಂತೆ ಪೈಗಳ ಗದ್ಯವೂ ಒಂದು ರೀತಿಯಲ್ಲಿ "ಬಾಣಗದ್ಯ"

ಪೈಗಳಲ್ಲಿ ಕಾಣುವ ಇನ್ನೊಂದು ವಿಶೇಷ ಅಂಶವೆಂದರೆ, ಘಟನೆ, ಸನ್ನಿವೇಶ, ವಿಚಾರಗಳಿಗೆ ಅವರು ಕೊಡುವ ಸಾಮ್ಯ ಹಾಗೂ ಹಾಕುವ "ತಳುಕು" ಸಂಬಂಧ! ಬಸವೇಶ್ವರನನ್ನು ಕಿತ್ತೊಗೆಯಲು ಬಿಜ್ಜಳನು ಮಾಡಿರಬಹುದಾದ ಸಂಗತಿಗಳ ವಿವರ ಬಂದಾಗ, ನೆಟ್ಟನೆ ಅದೇ ಸಮಯಕ್ಕೆ ಸರಿಯಾಗಿ ಕ್ರಿ.ಶ. 1170ರಲ್ಲಿ ಅಂಗ್ಲಾಳದ IIನೇ ಹೆನ್ರಿ ಎಂಬ ಅರಸನು ತನ್ನ ಸಚಿವನನ್ನೂ ತನ್ನ ರಾಜ್ಯದ ಧರ್ಮಾಧ್ಯಕ್ಷನೂ ಆದ ಥೋಮಸ್ ಎ ಬೆಕೆಟ್ ಎಂಬವನನ್ನು ಕೊಲ್ಲಿಸಿದ ಹೋಲಿಕೆ ಬಂದುಬಿಡುತ್ತದೆ. ರನ್ನನು, ಮಾಂಡಳಿಕರ-ಸಾಮಂತರ-ಚಕ್ರವರ್ತಿಗಳ ಆಶ್ರಯ ಪಡೆದನೆಂಬ ಸಂಗತಿಗೂ ರೋಮನ್ ಪ್ರಥಮ ಚಕ್ರವರ್ತಿ ಅಗಸ್ಟಸ್ ಮತ್ತು ವರ್ಜಿಲ್, ಹೊರೇಸ್, ಮೇಸೀನ್‌ರ ಸಂಬಂಧಕ್ಕೂ "ತಳುಕು" ಹಾಕಿಬಿಡುತ್ತಾರೆ! ಬಸವಣ್ಣನವರು 37–38 ವರ್ಷ ಮಾತ್ರ ಬದುಕಿದ್ದರೆನ್ನುವ ಸನ್ನಿವೇಶದಲ್ಲಿ, ಶಂಕರಾಚಾರ್ಯ, ಯೇಸುಕ್ರಿಸ್ತ ಮೊದಲಾದ ಅಲ್ಪಸಂಖ್ಯಾಕ ಮಹಾಪುರುಷರ ಸಂಬಂಧವನ್ನು ಎತ್ತಿತೋರಿಸುತ್ತಾರೆ. ಸಂಸ್ಕೃತ ಭಾಷೆಯಲ್ಲಿ ವಿಶೇಷ ಪ್ರಯೋಗವಿಲ್ಲದ ಕಂದಪದ್ಯಗಳು ಕನ್ನಡದ ಶಾಸನ ಕಾವ್ಯಗಳಲ್ಲಿ ವಿಶೇಷವಾಗಿ ಪ್ರಯೋಗವಾಗಿರುವ ಸಂಗತಿ ಬಂದಾಗ ಮೈಥಿಲಿ ಶರಣಗುಪ್ತರ "ಸಾಕೇತ"ದಲ್ಲಿ ಕಾಣುವ ಅಚ್ಚ ಕಂದ ಪದ್ಯಗಳ "ಕಳ್ಳು-ಬಳ್ಳಿ"ಯನ್ನೂ ಸೂಚಿಸುತ್ತಾರೆ. ಹೀಗೆ ಪೈಗಳ ಗರುಡಪ್ರತಿಭೆ ಸಂಶೋಧನೆಯ ಆಕಾಶದಲ್ಲಿ ಹಾರುವಾಗ ದೂರ ದೂರದ ದೃಶ್ಯಗಳನ್ನೂ ಕಂಡು ಸಂಬಂಧ ಸೂಚಿಸಿ, ನಮ್ಮನ್ನೂ ಮುಗ್ಧವಾಗಿಸುತ್ತದೆ.

ಮಂಜೇಶ್ವರದ ಗೋವಿಂದ ಪೈ ಸಿಂಹದಂತೆ ಬಾಳಿದರು. ಕನ್ನಡ ನಾಡಿನ ಸಂಶೋಧನೆಯ ರಂಗದಲ್ಲಿ ಅವರ ಹೆಜ್ಜೆಗಳು ಅಚ್ಚಳಿಯದೆ ಮೂಡಿವೆ; ಆ ಸಿಂಹರಾಜನ "ಗರ್ಜನೆ" ಎಂದಿಗೂ ಕೇಳಿಸುತ್ತದೆ. ಅಂತೆಯೇ ಆ ಪ್ರತಿಭೆ ತನ್ನ ಸೂಕ್ಷ್ಮ ಮತಿಯಿಂದ ಗುರುತಿಸಿದ "ಮೀನಿನ ಹೆಜ್ಜೆ"ಗಳು ಎಂದಿಗೂ ಮಾರ್ಗದರ್ಶಕವಾಗಿವೆ. ಇದಲ್ಲವೆ ಸಾರ್ಥಕ ಬದುಕು, ಶಾಶ್ವತ ಸೃಷ್ಟಿ, ಸಜೀವ ಕೃಷಿ!



# ಗೋವಿಂದ ಪ್ರಾಶ

ಎಂ. ರಮಾಬಾಯಿ

ಮಗಳು:–ಅಮ್ಮಾ, ಅಮ್ಮಾ! ನೋಡಿದೆಯಾ?

ತಾಯಿ:–ಏನಾಯಿತೇ, ಏನಾಯ್ತು?

ಮಗಳು:-ಅಲ್ಲಮ್ಮಾ, ನೋಡು! ತಿ॥ ಗೋವಿಂದ ಮಾಮರು ವೈಕುಂಠಕ್ಕೆ ಹೋಗಿ ಹಲವು ತಿಂಗಳುಗಳು ಕಳೆದರೂ ಇನ್ನೂ ಪತ್ರಿಕೆಗಳಲ್ಲಿ, ಬಾಷ್ಪಾಂಜಲಿ, ಕಣ್ಣೀರು ತುಂಬಿಯೇ ಇದೆ.

ತಾಯಿ:–ಕೊಂಚ ಬಿಸಿಲಲ್ಲಿಡಮ್ಮಾ, ಕಣ್ಣೀರಿನಿಂದ ಒದ್ದೆಯಾದ ಪತ್ರಿಕೆಗಳು ಒಣಗಲಿ!

ಮಗಳು:–ಹಾಗಲ್ಲಮ್ಮಾ! ಇನ್ನೂ ಅವರ ಗುಣಗಾನದ ಕಣ್ಣೀರು ಮುಗಿಯಲಿಲ್ಲ ಎಂದೆ.

ತಾಯಿ:–ಮುಗಿಯುವುದೇ! ಇನ್ನೂ ಬೆಳೆಯುವುದು. ಮೊನ್ನೆ ತೇದಿ 4–11–63ರಂದು ಮಂಗಳೂರು ಗವರ್ನ ಮೆಂಟ್ ಕಾಲೇಜಿನಲ್ಲಿ ಅವರ ತೈಲಚಿತ್ರ ಅನಾವರಣ, ಗುಣಗಾನ ಭಾಷಣಗಳು ಎಲ್ಲ ಇತ್ತು. ಮೈಸೂರಿನ ಮುಖ್ಯಮಂತ್ರಿಗಳಾದ ಶ್ರೀಮಾನ್ ನಿಜಲಿಂಗಪ್ಪನವರು ಮತ್ತು ಮುಖ್ಯನ್ಯಾಯಾಧೀಶರಾಗಿದ್ದ ಶ್ರೀಮಾನ್ ನಿಟ್ಟೂರ ಶ್ರೀನಿವಾಸರಾಯರು ಬಂದಿದ್ದರು. ಪತ್ರಿಕೆಯಲ್ಲಿ ಫೋಟೋ ನೋಡಮ್ಮಾ, ಎಂದು ತೋರಿಸಿದ್ದೀಯಲ್ಲಾ ನನಗೆ?

ಮಗಳು:– ಇಷ್ಟೇ ಅಲ್ಲ ಅಮ್ಮಾ! ಇನ್ನೂ ಡಿಸೆಂಬರಿನಲ್ಲಿ ದಿ॥ ಮಾಮನವರಿಗೇ ಸಂಬಂಧಿಸಿದ ಫೋಟೋಗಳು, ಅವರ ಹಸ್ತಪ್ರತಿಗಳು, ಕವನ ಲೇಖನಗಳು, ಜೀವನ ಇನ್ನಿತರ ವಸ್ತುಗಳ ಒಂದು ಪ್ರದರ್ಶನವನ್ನೇ ಜರಗಿಸುವರಂತೆ. ನಾವೂ ಹೋ ಗಬೇಕಮ್ಮಾ!

ತಾಯಿ:– ಎಲ್ಲಿಗೆ ಹೋಗಬೇಕು, ಮಾಮನವರಿದ್ದಲ್ಲಿಗೆ, ಹೌದು, ಅಲ್ಲಿಗೇ ಹೋದರೆ ಮಾತ್ರ ಅವರನ್ನು ಮರೆತು ಬಿಡಬಹುದು. ಇಲ್ಲಿ ಈ ಪ್ರದರ್ಶನ, ಭಾಷಣ ಲೇಖನಗಳಿಂದ ಇನ್ನೂ ಏನೇನನ್ನೋ ಸ್ಮರಿಸಿ ದು:ಖವೇ ಮರುಕಳಿಸುವುದು.

ಮಗಳು:– ಹಾಗಾದರೆ, ಇದನ್ನೆಲ್ಲ ಮಾಡಬಾರದೇನಮ್ಮಾ? ನ್ಯಾಯವಾಗಿ ನಾವೇ ಇದನ್ನೆಲ್ಲ ಮಾಡಬೇಕಿತ್ತು. "ರಾಷ್ಟ್ರ ಕವಿ ಗೋವಿಂದ ಪೈ ಮಂಜೇಶ್ವರ" ಎಂದು ಕೀರ್ತಿ ತಂದಿತ್ತು ಇಲ್ಲಿಗೆ. ನಾವು ಮಾಡಿದ್ದೇನೂ ಇಲ್ಲ. ಅಲ್ಲವೇ ದೊಡ್ಡಮ್ಮಾ?

ತಾಯಿ:– ಹೌದಮ್ಮಾ! ಭಾರಿ ಔತಣ ಉಂಡಮೇಲೆ "ಊಟಮಾಡಿ" ಅಂದರೆ ಉಣ್ಣಲಾಗುತ್ತಿದೆಯೇ?

ಮಗಳು:– ಅಮ್ಮಾ, ನಿನ್ನ ಒಗಟು ನನಗರ್ಥವಾಗಲಿಲ್ಲ!

ತಾಯಿ:– ಹೇಗೆ ಅರ್ಥವಾಗಬೇಕು ಪಾಪ! ನೋಡು ನೀನೇ ಈಗ ಹೇಳಿದೆಯಲ್ಲವೆ "ರಾಷ್ಟ್ರಕವಿ ಗೋವಿಂದ ಪೈ ಮಂ ಜೇಶ್ವರ" ಇದೇ ನಮಗೆ ಭಾರಿ ತೃಪ್ತಿಯ ಔತಣ. ಇನ್ನು ಏನೂ ಮಾಡಬೇಕೆಂದಿಲ್ಲ. ಮಾಡಿದರೂ ಹೊಟ್ಟೆಬಾಕತನ (ಸ್ವಾರ್ಥ) ಎನ್ನಬಹುದು. ಅವರು ನಮ್ಮೊಂದಿಗಿದ್ದಾಗ ಅವರನ್ನು ನೋಡಿ, ಮಾತಾಡಿಯೇ ತೃಪ್ತಿ. ಈಗ ಸ್ಮರಣೆಯಿಂದಲೇ ತೃಪ್ತಿ. ಹೆಸ ರೆತ್ತಿದರೆ ಅಜೀರ್ಣವಾಗಬಹುದೇನೋ!

ಮಗಳು:– ಸ್ಮರಣೆ ಅಂದಿಯಲ್ಲವೇ ಅಮ್ಮಾ? "ಭಂಡಾರಕಾರ್ಸ್ ಆರ್ಟ್ಸ್ ಎಂಡ್ ಸಾಯನ್ಸ್ ಕಾಲೇಜು ಕುಂದಾಪುರ ಅವರೊಂದು ಸ್ಮಾರಕ ಗ್ರಂಥ, ತೈಲಚಿತ್ರ ಅನಾವರಣ, ಮಾಮರ ಸಾಹಿತ್ಯ–ಜೀವನ ಬರೆಯುವುದರಲ್ಲಿ ಸ್ಪರ್ಧೆ, ವಿದ್ಯಾರ್ಥಿವೇತನ ನಿಧಿ ಇನ್ನು ಏನೇನೋ ಮಾಡಲಿರುವರಂತೆ. ನಾವೂ ಏನಾದರೂ ಮಾಡಬೇಕಮ್ಮಾ ನಮ್ಮ ಗೋಂಯ್ದು ಮಾಮ.........

ತಾಯಿ:– ಏನು ಬೇಕಾದರೂ ಮಾಡು. ಬೇಕು ಬೇಡ ಎನ್ನುವವರು ಯಾರೂ ಇಲ್ಲ ಇಲ್ಲಿ.

ಮಗಳು:– ಯಾರೂ ಇಲ್ಲದಿದ್ದರೂ, ಪ್ರಿಯ ಮಾಮರು ಇಲ್ಲೇ ಇದ್ದರಲ್ಲವೆ? ಅವರು ದಿನಾಲೂ ನಮ್ಮ ಅಜ್ಜ ನವರನ್ನು ನೋಡಲು ಬರುತ್ತಿದ್ದರು; ಆಗ ನಮಗೆಲ್ಲಾ ರಸನಿಮಿಷವೇ ಆಗಿದ್ದುವು ಎಂದು ನೀನು ಹೇಳುತ್ತಿದ್ದಿಯಲ್ಲಮ್ಮಾ! ಅದು ಯಾವಾಗ, ಈಗ ಅವರ ಸ್ಮರಣೆಗಾಗಿ ಹೇಳುತ್ತಿಯೇನಮ್ಮಾ? ತಾತ, ಮಾಮರಿಗೆ ಅಷ್ಟು ಕೆಳೆಯೇ, ಪ್ರೀತಿಯೇ, ಸಂಬಂಧವೇ ಏನಿ ತ್ತು ದೊಡ್ಡಮ್ಮಾ?

ತಾಯಿ:– ಸಂಬಂಧವೇನೋ ಇರಬಹುದು. ಆದರೆ ಅದು ಋಣಾನುಬಂಧ ಅಂತಲೇ ಹೇಳಬೇಕು. ಇಲ್ಲವಾದರೆ ನಿನ್ನ ತಾತನವರಿಗೆ ಹೊಟ್ಟೆಯ ಮಕ್ಕಳಿಗಿಂತಲೂ ಮಾಮರಿಗೆ ಹೆತ್ತತಂದೆಗಿಂತಲೂ ಮಿಗಿಲಾದ ಪ್ರೀತಿ ವಾತ್ಸಲ್ಯಗಳು ಎಲ್ಲಿಂದ ಬರ ಬೇಕು ಈ ಕಲಿಕಾಲದಲ್ಲಿ?

ಮಗಳು:– ಇದಕ್ಕೆಲ್ಲ ಮೂಲವೆಲ್ಲಿಂದಮ್ಮಾ ಅವರ ದೈವೀ ಪ್ರೇಮಕ್ಕೆ?

ತಾಯಿ:– ಮೂಲವೋ ಅಗ್ರವೋ, ನಾನರಿಯೆ. ಗಮನಿಸು. ಸುಮಾರು 1911ರಲ್ಲಿ ನಮ್ಮ ಶ್ರೀಮದನಂತೇಶ್ವರ ದೇವಸ್ಥಾನದ ಆಡಳಿತದಲ್ಲಿ ಏನೋ ಪೊಲಿಟಿಕ್ಸ್ ಅಂತಾರಲ್ಲ, ಆಗ ಅನು ಪೋಲಿಟ್ರಿಕ್ಸ್ ಆಯಿತಂತೆ. ನಿನ್ನ ತಾತ, ಮಾಮನವರು

ಕೂಡಿ ಆಗಿನ ಆಡಳಿತೆದಾರರ ಮೇಲೆ ದಾವೆ (case) ಹೂಡಿದರಂತೆ. ಆಡಳಿತ ಸರಿಯಿಲ್ಲವೆಂದು ಅನಿರೀಕ್ಷಿತವಾಗಿ ಸರಕಾರದ ಸಹಾಯದಿಂದ ''Inventry''ಗೆ ಬಂದು ಲೆಕ್ಕಪತ್ರಗಳ ಶೋಧ ನಡೆಯಿತಂತೆ. ಎರಡು ಪಕ್ಷಗಳಲ್ಲಿಯೂ ತುಂಬಾ ಮಂದಿ ಸೇರಿದರು. ಕೇಸು ಮುಂದುವರಿದು ಮದ್ರಾಸು ಹೈಕೋರ್ಟಿನವರೆಗೆ ಹೋಯಿತು. ಏಳೆಂಟು ವರ್ಷಗಳ ವ್ಯವಹರಣೆ ನಡೆದು ಕೊನೆಗೊಂದು ದಿನ ಮದ್ರಾಸಿನಿಂದ ಒಂದು ತಂತಿ ಬಂತು. ನಿನ್ನ ತಾತರಿಗೆ ಅದು ಜಯವಂತೆ. ನಾವು ಆ ತಂತಿಯನ್ನು ವಾಲ್ಮೀಕಿಯ ರಾಮಮಂತ್ರದಂತೆ ಜಪಿಸಿದೆವು. ಅದರನುಸಾರ ಪ್ರತಿಕಕ್ಷಿ ಒಪ್ಪದಿದ್ದರೆ ಕಕ್ಷಿಯೇ (ನಿನ್ನಜ್ಜನವರು) ಒಂದು ಲಕ್ಷದ ಜಾಮಿನು ಕೊಟ್ಟು ದೇವಳದ ಆಡಳಿತೆಯನ್ನು ವಹಿಸಿಕೊಳ್ಳಬೇಕಾಯಿತು. ನಿನ್ನ ತಾತನವರ ಸ್ಥಿರ ಆಸ್ತಿ ಒಂದು ಲಕ್ಷಕ್ಕೆ ಮುಟ್ಟುವುದಿಲ್ಲ ಏನು ಮಾಡಬೇಕು.?

ಮಗಳು:– ಅಯ್ಯೋ, ಹಾಗಾದರೆ ಮತ್ತೆ?

ತಾಯಿ:– ಮತ್ತೆ ಬಿಡುತ್ತಾರೆಯೇ ನಿನ್ನ ಮಾಮನವರು? ತನ್ನ ಆಸ್ತಿಯನ್ನು ಜೋಂಯ್ಟು ಮಾಡಿಕೊಂಡು ನಿನ್ನ ತಾತಂದಿರಾದ ಪದ್ಮನಾಭಬಿಕಾರಿಭಟ್‌ರು ರಿಸೀವರ್‌ರಾದರು. ಆಗ ಇಂದೂ, ಮುಂದೂ(ಶಾಶ್ವತವಾಗಿ) ಅನುಸರಿಸಬೇಕಾದ ಹೊಸ ಆಡಳಿತೆಯ ಸ್ಕೀಮನ್ನು ತಯಾರಿಸಿದರು ನಿನ್ನ ಮಾಮರು. ಇದರಿಂದ "ಛಲದೊಳ್ ದುರ್ಯೋಧನಂ, ನನ್ನಿಯೊಳ್ ಇನತನಯಂ ಗಂಡಿನೊಳ್ ಭೀಮಸೇನಂ" ಎಂಬಿತ್ಯಾದಿ ವರಕವಿ ರನ್ನನು ಒಬ್ಬೊಬ್ಬರಲ್ಲಿ ತೋರಿಸಿದ ಒಂದೊಂದು ಗುಣವನ್ನೂ ನಿನ್ನ ಮಾಮರು ತನ್ನೊಬ್ಬನಲ್ಲಿಯೇ ಇದೆಯೆಂಬುದನ್ನು ಪ್ರತ್ಯಕ್ಷ ತೋರಿಸಿದರು. ಅಲ್ಲಿಂದ ಮುಂದೆ "ಸಹಸ್ರ ಕುಂಭಾಭಿಷೇಕ"ವೆಂಬ ವಿಶಿಷ್ಟವಾದ ಉತ್ಸವವನ್ನು 1920ರಲ್ಲಿ ಯಶಸ್ವಿಯಾಗಿ ಜರಗಿಸಿದರು. ಅನಂತರ ನಮ್ಮ ದೇವಳವು "ಎಂಡೋಮೆಂಟ್"ಸರಕಾರದ ಆಡಳಿತಕ್ಕೆ ಸೇರಿತು. ಇದರಿಂದ ಈ ದೊಡ್ಡದಾದ ತಲೆಹೊರೆಯನ್ನು ಇಳಿಸಿ ದೈವಿಕ ಸತ್ಕಾರ್ಯವೆಂದು ಬಂಧಿಸಲ್ಪಟ್ಟ ಪಾಶದಿಂದ ಇಬ್ಬರೂ ಬಿಡುಗಡೆಯಾದರು. ಆದರೆ ನಿನ್ನ ತಾತ, ಮಾವನವರ ಪ್ರೀತಿ ವಿಶ್ವಾಸಗಳ ಕಟ್ಟು ಮತ್ತೂ ಬಿಗಿಯಾಯಿತು. ಅನಂತರ ತಿಂಗಳಿಗೊಮ್ಮೆಯೋ, ನೆನಪಾದಾಗಲೋ, ಬರವಣಿಗೆಯ ಸೆರೆಮನೆಯಿಂದ ಬಿಡುವಿದ್ದಾಗಲೋ, ತಾತರನ್ನು ಸಂಧಿಸಿ, ಹಿಂದಿನ ವ್ಯವಹಾರದ ಸಿಹಿಕಹಿಗಳನ್ನು ಮೆಲುಕು ಹಾಕಿ ಹೋಗುವ ವಾಡಿಕೆಯನ್ನಿಟ್ಟುಕೊಂಡಿದ್ದರು. ಇದನ್ನೆಲ್ಲ ಕಿಟಿಕಿಯಿಂದ ಇಣಿಕಿ, ಬಾಗಿಲುಗಳ ಎಡೆಯಲ್ಲಿ ಹಲ್ಲಿಯಂತೆ ಅಡಗಿ ನೋಡುವ, ಕೇಳುವ ಕಾಲವಾಗಿತ್ತು ಅದು. ನಮಗೆ ನಿನ್ನ ಮಾಮರ ಎದುರಿನಿಂದ ಹಾದು ಹೋಗುವ ಧಾಡಸು ಇರಲಿಲ್ಲ.

ಮಗಳು:– ದೊಡ್ಡಮ್ಮಾ, ಅವರು ದಿನಾ ನಮ್ಮಲ್ಲಿಗೆ ಬರುವುದು, ನೀವೆಲ್ಲಾ ಸುತ್ತುವರಿದು ಏನೆಲ್ಲಾ ಹರಟೆಕೊಚ್ಚುವದು. ಅದೆಲ್ಲಾ ಯಾವಾಗ?

ತಾಯಿ:– ಯಾವಾಗ ಎಂದು ಹೇಳುತ್ತೇನಮ್ಮಾ. ಕೊಂಚ ತಾಳು, ಮೊದಲು ಇಲ್ಲಿ ಒಂದು ವಿಷಯವನ್ನು ಹೇಳಬೇಕಾಗಿದೆ. ಕೇಳು ! ನಮ್ಮೂರಲ್ಲಿ ಜನಸಂಖ್ಯೆಯೂ ಕಡಿಮೆ, ಮರಣ ಸಂಖ್ಯೆಯೂ ಕಡಿಮೆ, ಅನ್ನುವಾಗ, ಇದ್ದವರು ಪಾರ್ಟಿಪಕ್ಷಗಳನ್ನು ಕಟ್ಟಿಕೊಂಡಾಗ ಸಹಾನುಭೂತಿಗೆ ಸ್ಥಾನವೆಲ್ಲಿದೆ? ಒಮ್ಮೆ ಒಂದು ಮನೆಯಲ್ಲಿ ಒಬ್ಬ ಹೆಂಗಸು ದೈವಾಧೀನಳಾದಳು. ಮುಂಚಿನ ರಾತ್ರಿ 12ಗಂಟೆಗೆ ಸತ್ತ ಹೆಂಗಸಿನ ಶವಕ್ಕೆ ಮರುದಿನ ಮಧ್ಯಾಹ್ನ 12 ಗಂಟೆಯಾದರೂ ಯಾರೂ ಇಲ್ಲ. ಇನ್ನು ವಿಳಂಬ ಮಾಡಲು ಸಾಧ್ಯವಿಲ್ಲ, ಯಾಕಂದರೆ ಆ ಮನೆಯು ದೇವಳದ ಗಡಿವಾಡಿನಲ್ಲಿದ್ದುದರಿಂದ ಪೂಜೆಯಾಗಬೇಕಾದರೆ ಹೆಣ ಮಸಣಕ್ಕೆ ಸಾಗಲೇ ಬೇಕು. ಹೀಗಿತ್ತು ಆಗ; ಈಗಲೂ ಇದೆ. ಆ; ಮನೆಯ ಗಂಡಸೊಬ್ಬರು ಬಂದು ತನ್ನ ಅಸಹಾಯಕತೆಯ ದು:ಖವನ್ನು ತೋಡಿಕೊಂಡು ಗೋಳೋ ಎಂದು ಅತ್ತರು ಸಣ್ಣ ಮಗುವಿನಂತೆ. ಮನೆಯಲ್ಲಿ ಸೊಸೆಯನ್ನು ಕಳಕೊಂಡ ಮುದಿ ಅತ್ತೆ, ತಾಯಿಯನ್ನಗಲಿದ ಇಬ್ಬರು ಮಕ್ಕಳು, ಮುದುಕನಾದ ಮಾವನೊಬ್ಬ, ಬ್ರಹ್ಮಚಾರಿ ಮೈದುನನೊಬ್ಬ, ಇಷ್ಟು ಅವರ ಸಂಸಾರ. ನಿನ್ನ ತಾತನವರು ಸೈಕಲಿನಲ್ಲಿ ಜನ ಕಳುಹಿಸಿದರು ಮಾಮರಿಗೆ. ಬೈರಾಸನ್ನು ಭುಜಕ್ಕೇರಿಸಿ ಓಡಿಬಂದರು ಮಾಮರು. ಅಜ್ಜಿ ಮೊಮ್ಮಕ್ಕಳನ್ನು ಸಮಾಧಾನಿಸಲಿಕ್ಕೆ ಒಬ್ಬ ಮನೆಯಲ್ಲಿ ಕೂತರೆ, ಇನ್ನೊಬ್ಬರು ಶವದೊಂದಿಗೆ ಬಂದರು. ಮಾವ, ತಾತ, ಮೂವರಾದರು. ಇನ್ನೊಬ್ಬನಾದರೂ ಬೇಕಲ್ಲವೇ? ನಿನ್ನ ತಾತರು ಮಾಮರನ್ನು ಕುರಿತು "ನೋಡಿ ತಂದೆ ಜೀವಂತನಾಗಿರುವಾಗ ಮಗನು ಶವಕ್ಕೆ ಭುಜಕೊಡಬಾರದೆಂದು ನಮ್ಮ ಸಂಸ್ಕೃತಿ. ಆದರೆ ನಾನು ಸತ್ತು ನನ್ನ ಮಕ್ಕಳಿಗೆ ಹಕ್ಕು ಬರುವವರೆಗೆ ಈ ಹೆಣವನ್ನು ಇಡಲು ಸಾಧ್ಯವೇ?" ಎಂದು ತನ್ನ ಇಬ್ಬರು ಮಗಂದಿರನ್ನು ಕರೆದುಕೊಂಡು, ನಾಲ್ಕು ಜನರಾಗಿ ಶವಸಂಸ್ಕಾರವನ್ನು ಮುಗಿಸಿದರು. ನಾಲ್ಕಾರು ದಿನಗಳ ಮೇಲೆ ಮಾಮರು ಬಂದರು. ಮಾಮರು-ತಾತರನ್ನು ಕುರಿತು, "ನಿಮ್ಮ ಮಕ್ಕಳಿಗೆ ಅವರ ಹಕ್ಕನ್ನು ಕೊಟ್ಟಿರಿ-ನನಗೊಂದು ಉದ್ಯೋಗಕೊಟ್ಟಿರಿ, ನಾನಿನ್ನು ನಿರುದ್ಯೋಗಿಯಲ್ಲ" ಎಂದು ನಕ್ಕರು. ಅಂದಿನಿಂದ ಎಲ್ಲಿ ಮರಣವಾದರೂ ಕೇಳಿದೊಡನೆ ಬಂದು ನಿನ್ನ ಅಜ್ಜನವರನ್ನೋ ಸೋದರ ಮಾವನವರನ್ನೋ ಕರೆದುಕೊಂಡು ಹೋಗುವ ವಾಡಿಕೆಯನ್ನಿಟ್ಟುಕೊಂಡರು.

1934ರಲ್ಲಿ ಸುಮಾರು, ಕ್ವೆಟ್ಟಾದಲ್ಲಿ ಭಯಂಕರ ಭೂಕಂಪ, ಸಹಸ್ರಾವಧಿ ಜನರು ನಿಧನ ಎಂದು ಪತ್ರಿಕೆಯಲ್ಲಿ ಓದಿ ನಮ್ಮಲ್ಲಿಗೆ ಬಂದು ನಿನ್ನ ತಾತರನ್ನು ಕುರಿತು "ಕ್ವೆಟ್ಟಕ್ಕೆ ಹೋಗಿ ಸರಾಗ ಹೆಣಗಳನ್ನು ಹೊತ್ತು ಕಾಸು ಮಾಡುವ, ಏನು ಚಾರ್ಜು ಮಾಡೋಣ ಹೆಣ ಒಂದಕ್ಕೆ, ದಿನಾ ಎಷ್ಟು ಸಾಗಿಸಬಹುದು" ಎಂದೆಲ್ಲಾ ತಮಾಷೆಯಾಡಿ ಹೋದರು. ಅದೇ ಒಂದೆರಡು ದಿನಗಳಲ್ಲಿಯೇ ನಿನ್ನ ತಾತನವರಿಗೆ ರಕ್ತದ ಒತ್ತಾಟ (Blood Pressure)ವು ತಲೆದೋರಿತು. ಸುಮಾರು 20 ದಿನಗಳವರೆಗೆ ಈಗಲೋ ಇನ್ನಾವಾಗಲೋ ಎಂಬಂತಾಯಿತು ಪರಿಸ್ಥಿತಿ. ಆಗ ದಿನಾ ಸಂಜೆ 4ರಿಂದ 6ಗಂಟೆಯ ತನಕ ಇಲ್ಲಿಗೆ ಬರುವ ರೂಢಿಯೋ ಅಭ್ಯಾಸವೋ ಏನೋ ಇಟ್ಟುಕೊಂಡರು ನಿನ್ನ ಮಾಮರು. ತೀರ್ಥರೂಪರಿಗೆ ವಯಸ್ಸು ಎಪ್ಪತ್ತು ದಾಟಿದೆ. ಮನೆತುಂಬ

ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು. ವೃಧಪ್ಯಕ್ಕೆ ತುತ್ತಾಗಲಿರುವ ನಮ್ಮಮ್ಮ ಕಾಲು ಶತಮಾನದ ಹಿಂದೆಯೇ ಸುಮಂಗಲಿಯಾಗಿ ಸ್ವರ್ಗಸೇರಿದ್ದಾರೆ. ಆದ್ದರಿಂದ ಹೊತ್ತುಹೊತ್ತಿಗೆ ರೋಗಿಯ ಶುಶ್ರೂಷೆ ಮಾಡುವುದು; ಮಂಗಳೂರಿನಿಂದ ದಿನಂಪ್ರತಿ 5.30ರ ಸಾಯಂಕಾಲದ ಟ್ರೈನಿಗೆ ಡಾಕ್ಟರು ಬರುವುದು, ರಾತ್ರಿ 8 ಗಂಟೆಯ ರೈಲಿಗೆ ಹಿಂದೆ ಹೋಗುವುದು. ಶ್ರೀಯುವರನ್ನು ನೋಡಲು ಹಿತೈಷಿಗಳು, ಸಂಬಂಧಿಗಳು ಬರುವುದು; ಬಂದವರಿಗೆ ಯಥಾಶಕ್ತಿ ತಿಂಡಿತೀರ್ಥಗಳ ಮರ್ಯಾದೆ. ಮಾವಿನ ಹಣ್ಣು, ಹಲಸಿನ ಹಣ್ಣು, ಗೇರುಬೀಜ ಸುಲಿಯುವುದು, ಇವುಗಳ ಸಂಸ್ಕಾರ ಎಂದು ಒಬ್ಬರಿಗೂ ಬಿಡುವಿಲ್ಲ. ಕೆಲವೊಮ್ಮೆ ತಂದೆಯವರಿಗೆ ಇಹದ ಗೋಚರವೇ ಇಲ್ಲ, ಕೆಲವೊಮ್ಮೆ ಯದ್ವಾತದ್ವಾ, ಯಾವುದಕ್ಕೂ ನೆಲೆಯಿಲ್ಲ. ಮಾವುರ ಸ್ವರ ಕೇಳಿದೊಡನೆ ಕ್ವಟ್ಟಕ್ಕೆ ಹೋಗುವ ನಪಗರ-ನಮಗೆ ಬೇಸರದಲ್ಲಿ ಸಂತೋಷ; ಈ ಗಲಾಟೆಯಿಂದಾಗಿ ಮನೆಮಂದಿಯೆಲ್ಲಾ ತಮಗೆ ಅರಿವಿಲ್ಲದೇನೇ 4,6,8 ಪೌಂಡುಗಳ ಭಾರವನ್ನು ಹೆಚ್ಚಿಸಿಕೊಂಡರು. ನಿನ್ನಜ್ಜನನ್ನು ದೇವರು ಕೊಂಡುಹೋಗುತ್ತಾನೋ ಎಂದು ಎಣಿಸಿದ್ದೆವು. ಆದರೆ ದಯಾಮಯನಾದ ಆತನು ನಮಗೆ ನಮ್ಮಪ್ಪನನ್ನು ಬಿಟ್ಟುಕೊಟ್ಟನು. ಎಲ್ಲರಿಗೂ ಮಹದಾನಂದ. ಮಾವುನವರ ಆನಂದಕ್ಕೆ ಪಾರವೇ ಇರಲಿಲ್ಲ.

ಮಗಳು:– ನಿಮ್ಮ ಹರಟೆಗಳು ಯಾವಾಗ ನಡೆದುವಮ್ಮ?

ತಾಯಿ:– ಸ್ವಲ್ಪ ಸ್ವಲ್ಪವಾಗಿ ಎಡೆಯೆಡೆಗಳಲ್ಲಿ ತಲೆಯೆತ್ತುತ್ತಿತ್ತು. ಸರಿಯಾದ ರೂಪಕ್ಕೆ ಬರುವಾಗ ಶ್ರೀಯುವರಿಗೆ ಕೊಂಚ ಅರಿವಾಗುತ್ತಾ ಇತ್ತು. ಕೆಲವನ್ನು ಮಾತ್ರ ಹೇಳುತ್ತೇನೆ. "ತಪ್ಪು ಯಾರದು?" ಇದು ನಾಂದಿ. ಬರೆದವರದೋ, ತಿದ್ದಿದವರದೋ, ಓದುವವರದೋ?

ಒಬ್ಬನು -ಗೋಂಯ್ದುಮಾಮ್ಮ ! ನೋಡಿ ಇದು ಸರಿಯಲ್ಲವೇ?

ಕೆಲವಂ ಬಿಲ್ಲವರಿಂದ ಕಲ್ತು॥ ಕೆಲವಂ ಶಾಸ್ತ್ರಿಗಳಂ ಕೇಳುತಂ॥

ಕೆಲವಂ ಮಾಪ್ಳೆಯರಿಂದ ಕಲ್ತು॥ ಕೆಲವಂ ಸ್ವಜ್ಞಾನದಿಂ ನೋಡುತಂ॥

...............................॥ಸರ್ವಜ್ಞನಪ್ಪಂತೆ ಕೇಳ್॥

ಪಲವುಂ........................॥.........ಸೋಮೇಶ್ವರ॥

ಹೀಗಿದ್ದರೆ ಸರ್ವಜ್ಞನೇ ಎಂದರೇನು, ಅಪ್ಪನಂತೆ ಆಗಬಹುದು ಎಂದಲ್ಲವೇ?

ಮಾಮರು:– ಹೌದು, ಹೌದು, ಯಾರ್ಯಾರಿಂದ ಏನೇನು ಕಲಿಯಬೇಕೆಂದು?

ಎರಡನೆಯವನು:– ಬಿಲ್ಲವರಿಂದ ಕಳ್ಳು ತಯಾರಿಸುವುದು, ಶಾಸ್ತ್ರಿಗಳಿಂದ ಸುಳ್ಳು ಲಟಾಯಿಸುವುದು: ಮಾಪ್ಳೆಯವರಿಂದ ಪರದ ನೀತಿ (ವ್ಯಾಪಾರ), ಕೆಲವು ನಮ್ಮ ಸ್ವಂತ ಜ್ಞಾನ ಅಂದರೆ ಅನುಕೂಲ ಸಿಂಧುವನ್ನು ಕಂಕುಳಲ್ಲೇ ಇಟ್ಟುಕೊಳ್ಳುವುದು

ಮಾಮರು;– ಅನುಕೂಲ ಸಿಂಧು? ನನಗೆ ಗೊತ್ತಿಲ್ಲ. ನೋಡಿಲ್ಲ, ಕೇಳಿಲ್ಲ !

ಮೊದಲಿನವ:– ನೀವು ಕೇಳುವುದು. ನೋಡುವುದು ಹೇಗೆ ಗೋಂಯ್ದುಮಾಮ್ಮ? ಅದು ಸ್ವಜ್ಞಾನ, ತನ್ನದೇ !

ಮಾಮರು:– ಅದರಲ್ಲಿರುವ ವಿಷಯಗಳನ್ನಾದರೂ ಹೇಳು ಮಹಾರಾಯ !

ಎರಡನೆಯವ:– ಮನಸ್ಸಿ ಕೆಲಸಗಳನ್ನು ಮಾಡಿ, ಅದಕ್ಕೆ ಬೇಕಾದ ಸೂತ್ರಗಳನ್ನು ಆಗಲೇ ತಯಾರಿಸುವುದು.

ಮಾಮರು:– ಭೇಷ್ ! ಆಶುಕವಿತೆಯೇ?

ತಾಯಿ:– ಮಗಳೇ ! ಮರೆತೆನು. ಏನೆಂದರೆ ಪ್ರಥಮತ: ನಮ್ಮೂರಿನ ಕೆಲವು ಆದರ್ಶ ವ್ಯಕ್ತಿಗಳ ಪರಿಚಯ ಮಾಡಬೇಕಿತ್ತು. ಯಾಕೆಂದರೆ ನಮ್ಮ ಕೂಟದ ಒಬ್ಬೊಬ್ಬರಿಗೂ ಬಿರುದಿನ ಹೆಸರನ್ನಿತ್ತಿದ್ದರು ನಿನ್ನ ಮಾಮರು. ಎಲ್ಲು, ಲಿಂಗ ಈಶ್ವರ, ಪೆದಂಬು ಇತ್ಯಾದಿ.

ಎಲ್ಲು:– ಇವನಿಗೆ ಹಿರಿಯರ ಒಂದು ಸಣ್ಣ ಹಿತ್ತಿಲು ಮನೆಯಿತ್ತಂತೆ. ಒಕ್ಕಲು ಗೇಣಿ ಕೊಡದಿದ್ದುದರಿಂದ ಕೋರ್ಟಿಗೆ ಹೋಗಬೇಕಾಯಿತಂತೆ; ಗೇಣಿ ನಷ್ಟವಾದರೂ ಒಕ್ಕಲು ಹೊರಗೆ. ಆಸ್ತಿ ಸ್ವಾಧೀನವಾಯಿತು. ತಾನೊಬ್ಬ ಕೋರ್ಟು ವ್ಯವಹಾರ ಮಾಡಿದ ದೊಡ್ಡ ಅಸಾಮಿಯೆಂದು ಎಲ್ಲರಿಗೂ, ತಿಳಿಯುವಂತೆ ಆ ರಿಕಾರ್ಡನ್ನು ಕಂಕುಳಲ್ಲಿಟ್ಟೇ ತಿರುಗುತ್ತಿದ್ದನಂತೆ. ಹಾಗೆ ನಾನು "ಎಲ್ಲು" ನಾಮಾಂಕಿತಳಾದೆ. ಕಾರಣವೇನೆಂದರೆ ನಾನು ಆಗ ವಿದ್ವಾನ್ ಪರೀಕ್ಷೆಗೆ ಓದುತ್ತಿದ್ದೆನು. ಪಂಪಭಾರತ, ಜಾವುಂಡರಾಯ ಪುರಾಣ, ಚಿಕ್ಕದೇವರಾಜ ವಿಜಯ, ಗದಾಯುದ್ಧ, ರಸರತ್ನಾಕರ ಇತ್ಯಾದಿ ನನ್ನ ಪಠ್ಯಗಳು. ಇವಕ್ಕೆ ಸಂಬಂಧಪಟ್ಟ ನನ್ನ ಸಮಸ್ಯೆಗಳು, ಸಾರಾಂಶದ ವಿಮರ್ಶೆಯ ಸಣ್ಣ ಹೊತ್ತಗೆಗಳಿದ್ದರೆ. ಇದೆಲ್ಲಾ ಪೂಜ್ಯರ ಮಸ್ತಕ ಭಂಡಾರ, ಪುಸ್ತಕ ಭಂಡಾರಗಳ ಆಶ್ರಯದಿಂದಲ್ಲದೇ ಬೇರೆ ಗತಿಯುಂಟೇ ನನಗೆ? ಕಂಕುಳ ರಿಕಾರ್ಡಿನ "ಎಲ್ಲು" ನಾನು.

ಲಿಂಗ:– ನಮ್ಮೂರಿನ ಸೇರಿಗಾರ ಒಮ್ಮೆ ತಿರುಪತಿಗೆ ಹೋಗಿದ್ದನಂತೆ. ಆಗ ಕಲ್ಲಿಕೋಟೆಯವರೆಗೆ ಮಾತ್ರ ರೈಲು ಬಂದಿತ್ತಂತೆ, ಯಾತ್ರೆಯು ಕಷ್ಟಕರವಾಗಿದ್ದುದೇನೋ ನಿಜ. ಲಿಂಗನಿಗೆ ಈ ವಿಷಯದಲ್ಲಿ ಹೆಮ್ಮೆ ಇರುವುದೂ ಸ್ವಾಭಾವಿಕವೆನ್ನಿ. ಅವನು. ಮಳೆಬೆಳೆಗಳಲ್ಲಿ ವ್ಯತ್ಯಾಸ, ಬಜಾರಿನಲ್ಲಿ ಏರುತಗ್ಗುಗಳು. ಅಥವಾ ಇನ್ನಾವ ಪ್ರಸಂಗವೇ ಆಗಲಿ, ಹೇಗಾದರೂ ಮಾಡಿ "ಯಾನ ತಿರ್ಪತಿಗ ಪೋಯಿನ ವರ್ಸ ಇಂಚಿನೇ ಅತ್ತಾ !" ಅನ್ನಲೇ ಬೇಕವನಿಗೆ ಪಾಪ ! ಹಾಗೆ ಮಾಡಿ ಒಂದು ವಿಷಯದಲ್ಲಿ ಬಾಯಿ ಹಾಕುವವನೊಬ್ಬ ಲಿಂಗ.

ಈಶ್ವರ:– ಒಬ್ಬ ಅವಲಕ್ಕಿ ಕುಟ್ಟಿ ಮಾರುವ ಶ್ರಮ ಜೀವಿ. ಎಲ್ಲ ಅಂಗಡಿಗಳಲ್ಲಿಯೂ ಸಾಲವಂತೆ. ಆದರೆ ಪ್ರತಿ ಒಬ್ಬ ಅಂಗಡಿಯವರ ಹೆಸರೆತ್ತಬೇಕಾದರೆ "ನಾನು ಯಾವೊಬ್ಬ ಮಗನಿಗೂ ಒಂದು ಕಾಸು ಕೊಡಬೇಕಾಗಿಲ್ಲ. ಇಲ್ಲ ಅನ್ನದಂತೆ



ಶ್ರೀ ಮ. ಗೋವಿಂದ ಪೈ ತಮ್ಮ ಪತ್ನಿ ಸೌಭಾಗ್ಯವತಿ ಕೃಷ್ಣಾ ಯಾನೆ ಲಕ್ಷ್ಮೀದೇವಿಯವರೊಂದಿಗೆ



ಎಂ. ಸುಬ್ರಾಯ ಪೈ, ಸೌ। ರತ್ನಬಾಯಿ.

**M. Govind Pai**

requests the pleasure of the company of

Mr. ............................................ & family

on the occasion of the marriage of his brother

**Sriman Subraya Pai**

WITH

**Srimati Rathna Bai**

*(Third daughter of Mr. Bantwal Vaman Prabhu)*

at **BANTWAL** on Sunday the 25th May 1919 at 8·57 A. M.

(Siddharthi-Samvat-Vaishakha-Bahula-Dashami,
Mithuna Lagnam)

MANJESHWAR 14TH MAY 1919

ಶ್ರೀ ಮ. ಗೋವಿಂದ ಪೈಯವರು ತಮ್ಮ ಕಿರಿಯ ಸಹೋದರ ಶ್ರೀ ಸುಬ್ರಾಯ ಪೈಯವರ ವಿವಾಹ ಸಂದರ್ಭದಲ್ಲಿ
ಅಚ್ಚು ಹಾಕಿಸಿದ ವಿವಾಹೋತ್ಸವಾಮಂತ್ರಣ ಪತ್ರಿಕೆ
1919ನೇ ಇಸ್ವಿಯಲ್ಲೇ ಅವರ ಸರ್ವಧರ್ಮ ಸಮನ್ವಯ ಭಾವನೆಯನ್ನು ಕಾಣಬಹುದು

ಕಮ್ಮಿಯವರ ಅಂಗಡಿಗೆ ಮೂರು ರೂಪಾಯಿ ಕೊಡಲಿಕ್ಕಿದೆ. ಇನ್ನಾವ...........ಹೀಗೆ ಹೇಳುತ್ತಾ ಹೋದಲ್ಲಿ ಒಂದುಗಡಿಯುಲ್ಲೂ ಸಾಲವಿಲ್ಲದಿಲ್ಲ ಈಶ್ವರನಿಗೆ. ಅದರಂತೆ ಎಲ್ಲರಂತೆ ಎಲ್ಲರಿಗೂ ಕಿರುಕುಳ ಮಾಡುವವನೊಬ್ಬನಿದ್ದ ನಮ್ಮ ಕೂಟವಲ್ಲಿ. ಅವನು ಉಪಟಳ ಕೊಡದವರೊಬ್ಬರೂ ಇಲ್ಲ. ಅವನಾದರೋ ಪಾಪ! ಒಬ್ಬನ ಪುಸ್ತಕವನ್ನು ಅಡಗಿಸಿಡುವನು, ಇನ್ನೊಬ್ಬನು ಕೂತು ಕೊಳ್ಳುವಲ್ಲಿ ನೀರು ಕಸಹಾಕುವನು, ಮತ್ತೊಬ್ಬನನ್ನು ಅಮ್ಮ ಕೂಗುವರೆಂದು ಓಡಿಸುವನು. ಕೇಳಿವರೆ ಅವನು ಏನನ್ನು ಅರಿಯದ ವನಂತೆ ನಟಿಸುವನು. ಅವನ ಪೀಡೆಗೊಳಗಾದವರೆಲ್ಲ ಮಾಮ ಬಂದಾಗ ದೂರು ಕೊಡುವರು. ಮಾಮರು ನಗುತ್ತಾ ವಿಚಾರಿ ಸಿದಾಗ ಅದೊಂದು ಮಾತ್ರ, ಇದೊಂದು ಮಾತ್ರ, ಈವತ್ತು ಮಾತ್ರ ಎಂದು ಒಪ್ಪಿಕೊಳ್ಳುವನು. ಹೀಗೆ ಅವನಿಗೆ 'ಈಶ್ವರ' ಬಿರುದು.

ಪೆದಂಬು:– ಪೊರೆ ಹೊತ್ತು ಜೀವಿಸುವ ಒಬ್ಬ ಮುಸ್ಲಿಂ ಶ್ರಮಜೀವಿ. ಇನ್ನೂ ಹರೆಯುವನು. ಒಂದು ಪೊರೆಯನ್ನು ಮನೆ ಮುಟ್ಟಿಸಲು ಏನು ಕೊಡಬೇಕೆಂದು ಕೇಳಿದಾಗ ನಾಲ್ಕಾಣೆ ಅನ್ನುವನು. ಎರಡಾಣೆ ಸಾಲದೇ ಎಂದರೆ "ಎಂದ ನಿಂಗಳ್ ಪೆದಂಬು ಮುಂಡನ್?" ಎಂದು ಮುಸುಡಿಗೆ ಹೊಗೆ ಹಾಕುವನು. ತಲೆಹೊರೆ ಕೆಳಗಿಳಿಸಲು ಕೈಕೊಡಬೇಕೇ ಎಂದು ಮನೆಯವರು ಕೇಳಿದಾಗಲೂ ಅದೇ ಮಂತ್ರ. ಬಹುಶಃ ಅವನೊಬ್ಬ ವರಕವಿಯೋ ಮಹಾ ಸಾಹಿತಿಯೋ ಆಗಿರಬೇಕೆಂದು ನಮ್ಮ ನಿರ್ಧಾರ. ಯಾಕೆಂದರೆ ಒಂದನೇ ಪ್ರಕರಣದಲ್ಲಿ ಅವನ ಮಾತಿಗೆ ಎದುರಾಡಬಾರದು, ಕೇಳಿದಷ್ಟನ್ನು ಕೊಡಲೇ ಬೇಕು ಎಂದು ಅರ್ಥವಾಗುತ್ತದೆ. ಎರಡನೇ ಪ್ರಸಂಗದಲ್ಲಿ ಸಹಾನುಭೂತಿ ತೋರಿಸಬೇಕಾದುದು ಕಾರ್ಯದಲ್ಲಿ, ಬಾಯಿಮಾತಿನಿಂದಲ್ಲ ಎಂದು ತಿಳಿಯುತ್ತದೆ. ಅದ ರಂತೆ ಬೇರೆ ಬೇರೆ ಸಂದರ್ಭಗಳಲ್ಲಿ "ಪೆದಂಬು"ಪದಕ್ಕೆ ಅರ್ಥವೈವಿಧ್ಯವೇ ಕಾಣುತ್ತದೆ. ಅಂತೂ ಇಂತೂ ಅವನ ತೊಟ್ಟಿಲ ಹೆಸ ರು ಇಂದಿಗೂ ಯಾರಿಗೂ ಗೊತ್ತಿಲ್ಲ.. ಹೀಗಿದ್ದವನೊಬ್ಬ ನಮ್ಮ ಪೆದಂಬು.

ಮರುದಿನ ಮಾಮರು ಬಂದಾಗ—

ಪೆದಂಬು:– ಗೋಂಯ್ದುಮಾಮ್ಮಾ ! ನಾನು ಒಂದು ಕೇಳ್ತೇನೆ.

ಮಾಮರು:– ಒಂದಲ್ಲ ಹತ್ತು ಕೇಳು, ನಾನು ಪೆದಂಬು ಮಾತಾಡುವುದಿಲ್ಲ.

ಪೆದಂಬು:– ನಾನು ಕೇಳುವದು 'ಗಂಡ ಯಾರಿಗೆ?' ಅಂತ. ನೋಡಿ ಮಾಮ್ಮ, ನಮ್ಮ ವೇದಮೂರ್ತಿ ಜ್ಯೋತಿಷ ಮಾರ್ತಾಂಡರು (ನಮ್ಮ ಜ್ಯೋತಿಷ ಭಟ್ರಿಗೆ ನಾವೇ ಕೊಟ್ಟ ಬಿರುದು) ನಮ್ಮ ನೆರೆಕೆರೆಯ ಶ್ರೀಮತಿ ರಾಮರಾವ್ (ಅವರ ಹೆಂಡತಿ) ಅಲ್ಲವೇ? ಶ್ರೀಮಾನ್ ಲಲಿತಮ್ಮ(ಇವರ ಗಂಡ) ಸರಿಯಲ್ಲವೆ, ಅವರಿಗೆ ಅವರ ಜಾತಕದ ಫಲಾಫಲಗಳನ್ನು ಹೇಳಿದರು.

ಮಾಮರು:– ಜ್ಯೋತಿಷರು ಹೇಳದೆ ಇನ್ನಾರು ಹೇಳಬಲ್ಲರು?

ಪೆದಂಬು:– ಹೌದು, ಗೋಂಯ್ದು ಮಾಮ್ಮಾ ! ಕೇಳಿ ಲಲಿತಮ್ಮನವರಿಗೆ 18 ವರ್ಷದಲ್ಲಿ ಮದುವೆಯಾಗಿಯೂ ಜಲಜ ಹುಟ್ಟಿದಳಂತೆ. ಈಗ ಜಲಜಳಿಗೆ 18 ವರ್ಷ ದಾಟಿತು. ಇನ್ನೂ ಮಗಳ ಮದುವೆ ಯೋಚನೆ ಇಲ್ಲ ರಾಯರಿಗೆ. ತನಗೆ ಕನ್ಯಾದಾನ ಮಾಡುವ ಭಾಗ್ಯವಿದೆಯೇ ಎಂದು ಪ್ರಶ್ನೆ. ಕಾರಣ ಎರಡು ವರ್ಷದಲ್ಲಿ ಲಲಿತಮ್ಮನವರಿಗೆ ಒಂದು ಗಂಡಾಂತರವಿದೆಯಂತೆ.

ಮಾಮರು:– ಕನ್ಯಾಪಿತೃಗಳಿಗೆ ಸಹಜವಿದು, ಮಾತ್ರವಲ್ಲ; ಗಂಡಾಂತರಕ್ಕೆ ಪರಿಹಾರವಿದ್ದಲ್ಲಿ ಮಾಡಬೇಕಲ್ಲವೇ?

ಪೆದಂಬು:– ಗೋ-ಮಾ, ಅಂತರ ಅಂದರೆ ಬೇರೆ ಎಂದು ಅರ್ಥವಲ್ಲವೇ. ದೇಶಾಂತರ ಮತಾಂತರ, ಭಾಷಾಂತರ ಇತ್ಯಾದಿ. ದೂರ ಎಂದೂ ಆಗುತ್ತದೆ. ಮಂಜೇಶ್ವರಕ್ಕೂ ತಲಪಾಡಿಗೂ ನಾಲ್ಕು ಮೈಲು ಅಂತರ. ಅಜಗಜಾಂತರವೆಂದರೆ, ಭೇದ ವ್ಯತ್ಯಾಸ ಅಲ್ಲವೇ?

ಮಾಮರು:– ಒಂದು ಪದಕ್ಕೆ ಹೆಚ್ಚು ಅರ್ಥ ಇರಬಾರದೆಂತಲೋ-ಪೆದಂಬು?

ಪೆದಂಬು:– ಇರಬಾರದೆಂದಲ್ಲ ಗೋ.ಮಾ. ನೋಡಿ ಒಂದು ವರ್ಷದೊಳಗೆ ವರ ಸಿಕ್ಕಿದರೆ ಗಂಡ ಮಗಳಿಗೆ, ಮತ್ತಿನ ವರ್ಷದಲ್ಲಿ ಆದರೆ ಲಲಿತಮ್ಮನವರಿಗೆ ಗಂಡಾಂತರ-ಬೇರೆ ಗಂಡ ಅಥವಾ ಗಂಡ ದೂರ ಆಗುತ್ತಾನೆ. ಆದ್ದರಿಂದ ಗಂಡ ಯಾರಿಗೆ ಮಗಳಿಗೋ ತಾಯಿಗೋ?

ಮಾಮರು:– ಭೇಷ್ ! ಭೇಷ್ ! ಏನು ತಲೆ ನಿಮ್ಮದು. ಒಂದು ವರ್ಷ ಮಗಳಿಗೆ ಮದುವೆ. ಮರು ವರ್ಷ ತಾಯಿಗೆ ಬೇರೆ ಗಂಡನಾದರೆ ಮತ್ತೆ ಗಂಡ ಮಿಸ್ಟರ್ ಲಲಿತಮ್ಮನವರ (ರಾಮರಾಯರ) ತಾಯಿಗೆ-ತಾಯಿಗೆ ಮದುವೆ ಎಂದರೆ ಮೋಸ ದಿವಾಳಿ ಇತ್ಯಾದಿ ವ್ಯಂಗ್ಯಾರ್ಥ ಎಂದು ನಕ್ಕರು ಮಾಮರು. ಆಗ ಅವರ ದೊಡ್ಡ ನಗುವನ್ನು ಕಂಡ ನಮ್ಮ ನಗೆಯ ಉದ್ಘೋಷವು ನಿದ್ದೆಯ ಜೊಂಪಿನಲ್ಲಿದ್ದ ನಿನ್ನಜ್ಜನವರನ್ನು ಜಾಗೃತಿಸಿತು. ಸಿಟ್ಟು ಭಯಂಕರವಾಗಿ ಕಾಣುತ್ತಿತ್ತು. ಆದರೆ ಎದುರಿನಲ್ಲಿದ್ದ ನಗುಮೊಗವನ್ನು ನೋಡಿ ಸಹಿಸಿರಬೇಕು. ಅಷ್ಟರಲ್ಲಿ ದೇವಸ್ಥಾನದಲ್ಲಿ ಬಾಗಿಲು ತೆರೆದ ಘಂಟಾಘೋಷವಾಯಿತು. ಮಾಮರು ಕೈಜೋಡಿಸಿ ತಮ್ಮ ಭಗದಾಲ್ಬ್ಯಕೊಡೆ (ನಮ್ಮ ಬಿರುದು)ಯನ್ನು ಕೈಗೆತ್ತಿ "ಎತ್ತಗಾ ಪದ್ಮಭಟಾ" ಎಂದು ಹೊರಟುಹೋದರು. ಮಾಮರು ಹೆಬ್ಬಾಗಿಲನ್ನು ದಾಟಿದರೋ ಇಲ್ಲವೋ ನಿನ್ನ ತಾತರು-ಎಲ್ಲರನ್ನೂ ಉದ್ದೇಶಿಸಿ. "ಕತ್ತೆಗಳೇ ! ಗೋವಿಂದ ಪೈಯ ವ್ಯಕ್ತಿತ್ವ ತಿಳಿದುಕೊಳ್ಳುವ ಯೋಗ್ಯತೆ ನಿಮ್ಮಲ್ಲಿದೆಯೇ? ಗಂಭೀರವಾಗಿ ಕೂತುಕೊಂಡು ಒಳ್ಳೊಳ್ಳೆ ವಿಷಯಗಳನ್ನು ಕೇಳಿ. ಅವರಿಂದ ತಿಳಿದು ಕೊಳ್ಳದೆ ಏನೇನೋ ಅರ್ಥವಿಲ್ಲದ "ಬರಿಗುಲ್ಲು ನಿದ್ದೆಗೇಡು" ಎಂಬಂತೆ ಹುಚ್ಚರಾಗಿ ವರ್ತಿಸುತ್ತೀರಿ. ನಿಮ್ಮ ಬುದ್ಧಿಗೆ ಏನನ್ನಬೇಕು. ಪೈ ಅಂದರೆ ತುಂಬಿದ ಕೊಡ(ಮಡು) ಹಲವು ಭಾಷೆಗಳ ಒಡೆಯ. ಎಷ್ಟು ವಿದ್ವತ್ತು ! ಎಷ್ಟು ವಿಚಾರ ! ಜ್ಞಾಪಕ ಶಕ್ತಿ. ದೇವರ ಭಕ್ತಿ ಅದ್ವಿತೀಯ. ಈಗ ನೋಡಿಲ್ಲವೇ? ದೇವಳದ ಗಂಟೆ ಕೇಳಿದೊಡನೆ ಕೈಮುಗಿದದ್ದು ! ನಿಮಗೆ ಮೈಮೇಲೆ ಎಚ್ಚರವಿದೆಯೇ? ಇಲ್ಲಿಗೆ ಬರುವುದರಿಂದ ನಮ್ಮಿಂದೇನಾಗಬೇಕು ಅವರಿಗೆ? ನಮ್ಮ ಭಾಗ್ಯದಿಂದ ಪ್ರೀತಿ ವಿಶ್ವಾಸಗಳಿಗೆ ಕಟ್ಟುಬಿದ್ದಿದ್ದಾರೆ. ಮೂರ್ಖ ಶಿಖಾಮಣಿಗಳೇ ! ದೊಡ್ಡ ತೋಳಿಗಾಗುವ ಮರವನ್ನು ಕೀಲಿಗೆ ಉಪಯೋಗಿಸುತ್ತಿದ್ದೀರಿ. ಅವರಿಗೆಷ್ಟು ಬೇಸರವಾಗಿರಬಹುದು. ಪಾಪ ! ಸಹಿಸುತ್ತಾರೆ."

ನಾನು:- ಹೌದು! ಅವರಿಗೆ ಬೇಸರವಾಗಿ ನಾಳೆಯಿಂದ ಇಲ್ಲಿಗೆ ಬಾರದಿದ್ದರೆ ಅದೂ ಕಷ್ಟ.........

ತಾತರು:- ಏನು? ಇಲ್ಲಿಗೆ ಬಾರದಿದ್ದರೆ! ನಿಮ್ಮ ಪಿಶಾಚಿಗಳ ಅಟ್ಟಹಾಸಕ್ಕೆ ಬೇಸರಿಸಿ ನನ್ನನ್ನು ಕಾಣಲು ಬರಲಾರರೆನ್ನುವಿರಾ? ಮಂಕುಗಳೇ!

ನಾನು:- ಯಾರೂ ಚದರಬೇಡಿ. ನಾಳೆ ಗೋ.ಮಾ.ಬಂದಾಗ ನಾವು ಏನು ಮಾಡೋಣ? ಈ ಸಮಸ್ಯೆಯನ್ನು ಹೇಗೆ ಬಿಡಿಸುವುದು?

ಲಿಂಗ:- ಎಲ್ಲರೂ ಇಲ್ಲಿಂದ ಪರಾರಿಯಾಗುವುದು.

ಪೆದಂಬು:- ತಿರುಪತಿಗೋ?

ಈಶ್ವರ:- ನಾವು ಇದನ್ನೆಲ್ಲಾ ಅವರಿಗೆ ಹೇಳೋಣ:

ಪೆದಂಬು:- ಅವರು ಕೇಳದಿದ್ದರೆ. ಕೇಳಿದರೆ ಸತ್ಯವನ್ನೇ ಅಂಬೋಣ. ಒಂದೂ ಬೇಡ ಮೌನ ತಾಳುವುದು. ಆಗ ಕೇಳುತ್ತಾರೆ. ಸತ್ಯಹೇಳಿ ಕ್ಷಮೆ ಬೇಡುವುದು. ಮತ್ತು ಒಬ್ಬೊಬ್ಬರೇ ಪಲಾಯನ ಸೂತ್ರವನ್ನು ಪಠಿಸುವುದು. (ಸಭಾವಿಸರ್ಜನೆ-ತೀರ್ಮಾನ).

ಮರುದಿನ ಸರಿ ನಾಲ್ಕು ಗಂಟೆಗೆ ಮಾಮ ಬಂದೇ ಬಂದರು. ಶ್ಮಶಾನ ಮೌನ. ತೀರ್ಥರೂಪರ ವಿಷಯ ಸಂಶಯ ತಾಳಿ, ಗಾಬರಿಯಾದರು. ಚಾವಡಿಯನ್ನು ಹತ್ತುವಾಗಲೇ "ಪದ್ಮಭಟಾ" ಅಂದರು. "ಬೈಸಗಾ" ಎಂಬ ಸ್ಪಷ್ಟವಾದ ಗಟ್ಟಿಯಾದ ಸ್ವರವನ್ನು ಕೇಳಿ ಸಮಾಧಾನವಾಯಿತು. ಸುತ್ತಲೂ ಒಮ್ಮೆ ಸಿಂಹಾವಲೋಕನ, ಎಲ್ಲ ಮುಖಗಳನ್ನೊಮ್ಮೆ ದಿಟ್ಟಿಸಿ "ಏನು ಮೌನ ವ್ರತವೇ ಎಲ್ಲರಿಗೂ?" ಎಂದರು.

ಲಿಂಗ:- ಹೌದು, ಮೌನಂ ಸರ್ವಾರ್ಥಸಾಧನಂ.

ಪೆದಂಬು:- ಮೌನಂ ಮರಣ ಸಾಧನಂ ಅಂತಲೂ ಇದೆ.

ಮಾಮರು:- ಎಲ್ಲಿದೆ ಅಪ್ಪಾ? ನಾನೀವರೆಗೆ ಕೇಳಿಲ್ಲ. ಇದು ಹೊಸ ಸುಭಾಷಿತ!

ಎಲ್ಲರೂ ನನ್ನನ್ನೇ ನೋಡಿದಾಗ ನಾನು ಸ್ಪೀಕರರಾಗಬೇಕೆಂದು ತಿಳಿಯಿತು.

ನಾನು:- ಹೌದು. ಹೊಸ ಸುಭಾಷಿತ. ಯಾಕೆಂದರೆ ಸಮಗೆಲ್ಲಾ ನಿನ್ನೆ ಅಂತಹ ಹೊಸ ಬಿರುದು ಪ್ರಶಸ್ತಿಗಳು ಸಿಕ್ಕಿದುದಕ್ಕೆ "ಮರಣ ಸಾಧನ"......

ಮಾಮರು:- ಹೊಸ ಬಿರುದುಗಳೇ. ಎಲ್ಲಿಂದ. ಯಾರು ಕೊಟ್ಟರು, ಬಿರುದುಗಳ್ಯಾವುವು?

ನಾನು:- ಬಿರುದುಗಳೇ? ಕತ್ತೆಗಳು. ಮೂರ್ಖ ಶಿಖಾಮಣಿಗಳು. ಪಿಶಾಚಿಗಳು. ಮಂಕುಗಳು......ಎಂದು ಮುಂದರಿಸಿ ಅಕ್ಷರಶ: ಇಡೀ ಪುರಾಣವನ್ನು ಬಿಚ್ಚಿದೆನು. ತೀರ್ಥರೂಪರೂ ಗಮನಕೊಟ್ಟು ಕೇಳುತ್ತಿದ್ದರು.

ಮಾಮರು:- "ಪದ್ಮಭಟಾ" ಎಂತಹ ಸನ್ನಿವೇಶಗಳಲ್ಲಿಯೂ ನಾನು ನಿಮ್ಮನ್ನು ಕಾಣಲು ಬರುತ್ತೇನೆಯೇ ಎಂಬ ನಿಮಗೆ ನನ್ನಲ್ಲಿರುವ ಪ್ರೀತಿ ದೃಢವಿಶ್ವಾಸಗಳಿಗೆ ನಾನು ಮಾರು ಹೋಗಿದ್ದೇನೆ. ಅದನ್ನು ಮಾತಿನಲ್ಲಿ ಹೇಳಲು ನನ್ನ ಶಬ್ದಭಂಡಾರದಲ್ಲಿ ಪದಗಳಿಲ್ಲ(22ಭಾಷೆಗಳಲ್ಲಿಯೂ? ನಮ್ಮ ಮರಮರ). ಇನ್ನೊಂದು ಅರಿಕೆ ಏನಂದರೆ ಈ ಮಕ್ಕಳ ಹರಟೆಗಾಗಿಯೇ ನಾನು ಇಲ್ಲಿಗೆ ಬರುತ್ತೇನೆ. ಈ ಎರಡು ಗಂಟೆಯ ಕಟ್ಟೆ ಪುರಾಣದಿಂದ ನನಗೆ ವಿಶ್ರಾಂತಿ. ಬೆಳಿಗ್ಗೆ 6ಗಂಟೆಗೆ ಹಿಡಿದ ಪೆನ್ನು ಊಟಕ್ಕೆ ಕರೆದಾಗ 10 ನಿಮಿಷ ಊಟದ ಶಾಸ್ತ್ರ ಮುಗಿಸಲು ಅವಕಾಶ ಕೊಡುತ್ತದೆ. ತಿರುಗಿ ಅಪರಾಹ್ನ ಮೂರು ಗಂಟೆಯವರೆಗೆ ತಲೆ ಬಡಕೊಳ್ಳುತ್ತೇನೆ. ಆದರೂ ನನ್ನ ಪತ್ರವ್ಯವಹಾರ ಕವನ.ಲೇಖನಗಳ, ಬರವಣಿಗೆಯು ಮುಗಿಯಿತೆಂದಿಲ್ಲ. ಅದನ್ನೆಲ್ಲವನ್ನು ಇಲ್ಲಿ ಪರಿಹರಿಸಿ ನನ್ನನ್ನು ನಾನು ಮರೆಯುತ್ತೇನೆ ಈ ಮಕ್ಕಳ ಮಧ್ಯೆ. ಆದ್ದರಿಂದ ದಯಮಾಡಿ ಮಕ್ಕಳನ್ನು ಗದರಿಸಬೇಡಿ. ಪ್ರಶಂಸೆ, ವಿಮರ್ಶೆ, ತಮಾಷೆ, ಟೀಕೆ ಏನು ಮಾಡಬೇಕಾದರೂ ವಿಷಯಗಳ ಶ್ರವಣ. ಪಠಣ, ಮನನಗಳು ಬೇಕು. ಅಂತಹ ಶಕ್ತಿಯನ್ನು ಅವರು ಹೆಚ್ಚಿಸಿಕೊಳ್ಳಬೇಕು. ಮತ್ತೆ ಬೇಕಾದಲ್ಲಿ ತಿರುಗಣೆಸಿದರಾಯಿತು. ನನಗೇನೂ ಬೇಸರವಿಲ್ಲ ನಿಮಗೆ ಕರೆಕರೆಯಾಗುವುದೇ?

ತಾತರು:- ನನಗೇನೂ ಕರೆಕರೆಯಿಲ್ಲ. ನನ್ನ ತಲೆ ಖಾಲಿ, ಆದರೆ ನಿಮಗೆ... ...............

ಮಾಮರು:- (ಕೂಟವನ್ನು ಉದ್ದೇಶಿಸಿ) ಆಯಿತಲ್ಲವೇ ನಿಮಗೆ ಸಮಾಧಾನ? ಇನ್ನು ಎಂದಿನಂತೆ ಸಾಗಲಿ ನಮ್ಮ ಪರಿಷತ್ತು. ನಿಮ್ಮ ಈ ಹರಟೆ ಎಲ್ಲವೂ ಒಂದು ದಿನ ಒಂದು ವಿಶೇಷ ಸಾಹಿತ್ಯವೇ ಆಗುವುದು.

ತಾಯಿ:- ನಾಗೂ! ಋಷಿಯಿತ್ತ ವರಪ್ರಸಾದವಲ್ಲವೇ. ಅದು ಮಿಥ್ಯವಾಗುವುದೇ. ಇಂದಿಗೆ ಇದು ವಿಶೇಷ ಸಾಹಿತ್ಯವೇ ಆಯಿತಲ್ಲವೇನೇ? ಸಾಹಿತ್ಯ ತಪಸ್ವಿಯಲ್ಲವೇ ನಿನ್ನ ಮಾನಾ!

ಮಗಳು:- ತಾತನವರು ದಿವಂಗತರಾದಾಗ ಗೋಂವಿಂದಮಾಮರಿಗೆ ಎಷ್ಟು ದು:ಖವಾಯಿತೋ. ಅಲ್ಲವೇನಮ್ಮಾ?

ತಾಯಿ:- ಹೇಳ ಬೇಕೇ ಅದನ್ನು? ಶಂತನು ರಾಜನು ಸ್ವರ್ಗಕ್ಕೆ ಹೋದಾಗ, ಭೀಷ್ಮನು ಅಷ್ಟು ದು:ಖ ಮಾಡಲಿಲ್ಲವೆಂದು ಪ್ರಮಾಣ ಮಾಡಬಹುದು.

1937ನೇ ಇಸವಿ. ಫಾಲ್ಗುಣ ಬಹುಳ ಅಮಾವಾಸ್ಯೆ ರಾತ್ರಿ: ಪಾಡ್ಯ ತಿಥಿ ಪ್ರಾರಂಭ. ಸಂಜೆ ಆರು ಗಂಟೆಯ ಹೊತ್ತಿನಲ್ಲಿ ಮನೆ ಅಂಗಳವನ್ನು ಗುಡಿಸಿ (Senitary) ತಮ್ಮ ಕರ್ತವ್ಯವನ್ನು ಮುಗಿಸಿ. ಅಡ್ಡಾದರು. ಸುಮಾರು ಅರ್ಧ ಗಂಟೆಯಲ್ಲಿ ಒಂದು ಸಡುಕ ಬಂತು. ಹತ್ತಿರ ಕೂತಿದ್ದ ಮಗಳು "ಅಪ್ಪಾ ನಡುಕವೇ. ಕಂಬಳಿ ಹೊದಿಸಬೇಕೇ" ಎಂದು ಕೇಳುತ್ತಾ ಮುಖ ನೋಡಿದಾಗ

ಅವರಿಗೆ ಇಹದ ಪರವೆಯಿಲ್ಲೆಂದು ತಿಳಿಯಿತು. ಎಲ್ಲರೂ ಸುತ್ತುಕಟ್ಟಿ ಬೀಸಣಿಗೆ, ಗಾಳಿ, ನೀರು ಎಂದು ಚೀರಿದೆವು. ಅವರು ನಡುಗುತ್ತಲೇ ಇದ್ದರು. ಸೈಕಲಿನಲ್ಲಿ ಮಾಮರಿಗೆ ಜನ ಕಳುಹಿಸಿದ್ದೂ ಆಯಿತು. ಕಣ್ಣೂರಸುತ್ತ ಬಂದರು. ಆಗ ನಮ್ಮ ದು:ಖ ನೂರ್ಮಡಿಯಾಯಿತು. ಇದನ್ನು ಕೇಳಿ ನಮ್ಮ ಮನೆಯ ಸಮೀಪದ ಮನೆಯ ಶ್ರೀಮಾನ್ ಅನಂತಕೃಷ್ಣರಾಯರು, ತಮ್ಮ ಮನೆಯಲ್ಲಿ ತಂಗಿರುವ ಡಿ. ಎಂ. ಒ. ಹಳದಿಪುರ ಇವರನ್ನು ಕರಕೊಂಡು ನಮ್ಮಲ್ಲಿಗೆ ಧಾವಿಸಿ ಬಂದರು. ಆ ವೈದ್ಯ ಶಿಖಾಮಣಿಯೇ ನಿನ್ನ ತಾತನವರ ಸ್ವರ್ಗಾರೋಹಣವನ್ನು ಸಾರಿದರು. ಆಗಲೇ 8 ಗಂಟೆಗೆ ಮಂಗಳೂರಿನಲ್ಲಿರುವ ಮಕ್ಕಳನ್ನೂ ನೆಂಟರಿಷ್ಟರನ್ನೂ ಕರಕೊಂಡು ಬರಲು ಜನಕಳುಹಿಸಿದ್ದೂ ಆಯಿತು. ಇನ್ನೇನು ಮರುದಿನ ಬೆಳಿಗ್ಗೆ 8–30ಕ್ಕೆ ಮಂಗಳೂರಿನಿಂದ ಮೈಲು ಟ್ರೈನು ಬಂದನಂತರವೇ ಅಂತಿಮ ಕ್ರಿಯೆಗಳು ನಡೆಯಬೇಕು.

ಮಾಮನವರ ರಾತ್ರಿ ಊಟ ಸಂಜೆ 5–30ರೊಳಗೆ. ಆದ್ದರಿಂದ ಹೊಟ್ಟೆ ತುಂಬಿದ್ದವರೆಂದರೆ ಅವರೊಬ್ಬರೇ. ಗಂಟೆ ಒಂಭತ್ತಾಯಿತು. ನಿನ್ನ ಮಾಮರಿಗೆ ಎಲ್ಲರ ಮುಖಗಳನ್ನು ನೋಡಿ ಮರುಕವಾಯಿತು. ಅವರಂದರು. "ನಾನೊಂದು ಹೇಳಬಾರದುದನ್ನು ಹೇಳುತ್ತೇನೆ, ನೀವು ಕೇಳುತ್ತೀರಾ?" "ಹೌದು" ನಾವು ಒಟ್ಟಿಗೆ ಅಂದೆವು. "ಹಾಗಾದರೆ ಕೇಳಿ, ನೀವೆಲ್ಲಾ ನಾಲ್ಕು ಗಂಟೆಗೆ ಮೊದಲೇ ಕಾಫಿ ಶಾಸ್ತ್ರ ಮುಗಿಸಿದವರು. ನಾಳೆ ಹತ್ತು ಗಂಟೆಗೆ ಮೊದಲು ನಿಮ್ಮಪ್ಪನ ಶ್ಮಶಾನ ಯಾತ್ರೆ ಹೊರಡಲು ಸಾಧ್ಯವಿಲ್ಲ. ಈ ನಿಮ್ಮ ದೀರ್ಘ ಉಪವಾಸ, ಪಿತೃವಿಯೋಗದ ದು:ಖ, ರಾತ್ರಿ ಜಾಗರಣ, ಇವುಗಳಿಂದ ನೀವು ಹೀಗೆ ಯಾತನೆ ಪಡುವದು ಅವರ ಆತ್ಮಕ್ಕೆ ತೃಪ್ತಿಯಾಗದು. ಏನಾದರೂ ತೆಗೆದುಕೊಳ್ಳಿ, ಪಾಪಪುಣ್ಯಕ್ಕೆ ನಾನು ಹೊಣೆ" ಅಂದರು. ಕೂಡಲೇ ಯಾರೊ ಅಣ್ಣನೋ, ಅತ್ತಿಗೆಯೋ ಕಾಫಿ ತಯಾರಿಸಿದರು. ತಿ॥ಯವರಿಗೆ ಪ್ರೀತಿಯೆಂದು ನಾನು ಮುತ್ತಿನ ಚೂರು ಲಾಡು, ಮಾಲ್ಪುರಿ ಮಕ್ಕಳಿಗಾಗಿ ಟೋಸ್ಟು, ರಸ್ಕು ಎಲ್ಲಾ ತಂದಿದ್ದೆನು.-ಮರುದಿನ ಯುಗಾದಿ ಹಬ್ಬ. ಬೇರೆ, ಊಟಕ್ಕೆ ಲೇಟು ಎಂದೆಲ್ಲಾ ಗುಣಾಕಾರ ವ್ಯರ್ಥವಾಯಿತು. ನಮಗೆಲ್ಲಾ ಹರ್ಷದ ಯುಗಾದಿ ಅಲ್ಲ, ಶಾಶ್ವತವಾದ ಪಿತೃಯುಗಾದಿಯಾಯಿತು. ಎಲ್ಲವನ್ನೂ ತೆಗೆದುಕೊಂಡು, ಹಾಸಿಗೆಯ ಸುತ್ತಲೂ ಕೂತು, ಮಾಮರನ್ನು ಪಿತೃಸ್ಥಾನದಲ್ಲಿಟ್ಟು, ಪಿತೃ ಕಳೇಬರವನ್ನು ಅಧ್ಯಕ್ಷ ಸ್ಥಾನದಲ್ಲಿಟ್ಟು ಅವರ ಗುಣಗಾನ ಮಾಡುತ್ತ. ನಗುತ್ತ ಅಳುತ್ತ, ಮಾಮರೊಂದಿಗೆ ತಿಂದೆವು. ಕೆಲವರು ಕೂತಲ್ಲೇ ತೂಕಡಿಸಿದರು, ಅಲ್ಲಲ್ಲೇ ಬಿದ್ದುಕೊಂಡರು ಹಲವರು. ಎವೆಮುಚ್ಚದೆ ಹರಿಶ್ಚಂದ್ರನಾಗಿ ಹೆಣ ಕಾದವರು ಮಾಮರು. ಹೇಗೂ ಬೆಳಗು ಮಾಡಿದೆವು. ಮಾಮರು ಮನೆಗೆ ಹೋಗಿ ಜರಿ ಅಂಚಿನ ತನ್ನ ಧೋತಿ. ಶಾಲುಗಳನ್ನು ಕೊಂಡು ಬಂದು. ತಾನೇ ಶವವನ್ನು ಸಿಂಗರಿಸಿ ಶಾಸ್ತ್ರ ಮುಗಿಸಿದ ಮೇಲೆ ತಾನೇ ಭುಜ ಕೊಟ್ಟು ಕೊಂಡೇಹೋದರು.

"ಮುಯ್ಯಿಗೆ ಮುಯ್ಯಿ ತೀರಿತು" ದಾಸವರೇಣ್ಯ ಪುರಂದರರು ಹಾಡಿದಂತೆ. ಮಾಮರು ಪಾರ್ಥಿವ ದೇಹವನ್ನು ಬಿಟ್ಟಂದು ಅವರ ಪ್ರೀತಿಯ, ಎಲ್ಲು, ಲಿಂಗ, ಪೆದಂಬು, ಈಶ್ವರ ಎಲ್ಲರೂ ತಮ್ಮ ಮಾಮರಿಗೆ ಸೇವೆ ಸಲ್ಲಿಸಿ, ಭುಜಕೊಟ್ಟು ತಮ್ಮ ತಾತನ ಋಣವನ್ನು ತೆತ್ತರು.

ಮಗಳು—ದೊಡ್ಡಮ್ಮಾ, ಹರಟೆಗಳು ಮತ್ತು – – – – –

ತಾಯಿ—ಹರಟೆಗಳು ಮತ್ತು ಅಂತೀಯಾ? ಮಧ್ಯದಲ್ಲಿ ಏನೇನೋ ಹುಚ್ಚುಪ್ರಶ್ನೆಗಳು-"ತಾತ ಸತ್ತಾಗ ಮಾಮ ಅತ್ತರೇ, ಎಷ್ಟು ದು:ಖವಾಯಿತೋ ಎಂದು. ನೀನು ಆಗ ಹುಟ್ಟಿದ್ದರೆ ಖಂಡಿತ ನಿನಗೆ "ಬ್ರೇಕ್ ಇನ್ಸ್‌ಪೆಕ್ಟರ್"ಬಿರುದು ದಕ್ಕುತ್ತಿತ್ತು. ಹರಟೆ ಎಲ್ಲಿ ನಿಂತಿದೆ ಹೇಳು.

ಮಗಳು—ನಾನು ಹೇಳುತ್ತೇನಮ್ಮಾ! ತಾತನವರು ನಿಮ್ಮನ್ನು ಜೋರು ಮಾಡಿದರು. ಮರುದಿನ ಮಾಮರು ತಾತರನ್ನು ಆಶ್ವಾಸಿಸಿ, ನಿಮ್ಮ ಹರಟೆಯು ಸಾಹಿತ್ಯವಾಗುವುದೆಂದು ವರವಿತ್ತು ಸಮಾಧಾನಿಸಿದರು.

ತಾಯಿ—ಹೌದು, ವರಸಿಕ್ಕಿದ ಮೇಲೆ ಹೇಳಬೇಕೇ ನಮ್ಮ ಉತ್ಸಾಹಪ್ರೋತ್ಸಾಹಗಳು? ಕೈಕೆ ಮಂಥರೆಯರಿಗಿಂತ ಒಂದು ಕೈ ಮೇಲು. ಮರುದಿನ ನಾಲ್ಕು ಗಂಟೆ ಬೇಗ ಆಗಲಿಲ್ಲವೆಂದು ಸೂರ್ಯನನ್ನು ಬೈದವ್ವೇ ಬೈದದ್ದು ನಮ್ಮ ಕೂಟದವರು. ಆಕಾಶಕ್ಕೆ ಕೈ ಎಟಕುವಂತಿದ್ದರೆ ಅವನ ಫಜೀತಿ ಖಂಡಿತ. ಸುಮಾರು 3–30ಕ್ಕೆ ನಾಲ್ಕೈದು ಮನೆಗಳಿಂದ ಕೂಟದವರು ಕೂಡಿ "ಅಯ್ಯೊವೆ, ಅಯ್ಯೊವೆ" ಬಂದರೇ ಬಂದರೇ ಎಂದು ಪ್ರಾಣೋತ್ಕ್ರಮಣಕ್ಕೆ ಪ್ರಾರಂಭ. ಪ್ರಾಣೋತ್ಕ್ರಮಣ ಅಬದ್ಧ. ಅಪಶಬ್ದವೆನ್ನಬೇಡಿ ದಯಮಾಡಿ. ಏಕೆಂದರೆ ನಮ್ಮ ಸಾಹಿತ್ಯದಲ್ಲಿ ಅವುಗಳಿಗೆ ಸ್ಥಾನವಿಲ್ಲ. ಎಲ್ಲ ಪದಗಳೂ ಸಮಾನ. ಹತ್ತಿಪ್ಪತ್ತು ಮಾರು ಏರನ್ನು ಇಳಿಯಬೇಕು ನಮ್ಮಲ್ಲಿಗೆ ಬರಲಿಕ್ಕೆ. ಅಲ್ಲಿಂದ ಮಾಮರು ತನ್ನ ರುದ್ರಕೊಡೆ-ರುದ್ರನು ಭಗದಾಲ್ಪನಿಗಿಂತ ಪುರಾತನನೆಂದು ಕೂಟದವರ ಪರಿಶೋಧನೆಯನ್ನು ಹಿಡಿದು, ಮೇಲೆ ನಿಂತಾಗ ಕೆಳಗೆ ಮಾರ್ಗದ ಉದ್ದಕ್ಕೂ ಕಾಣುತ್ತದೆ. ಶ್ರವಣ ಬೆಳ್ಗೊಳದ ಗೋಮಟೇಶ್ವರನಂತೆ ಏರಿನ ಅಥವಾ ಚಡಾವಿನ ಮೇಲೆ, ಕಾಲಿನ ಮೆಟ್ಟನ್ನು ಜಾರಿಸಿ, ದೇವಳದ ಕಡೆಗೆ ಕೈಮುಗಿದು ಇಳಿಯುವ ರೂಢಿ ಸರ್ವವಿದಿತ. ಬಿಳಿ ಮೂರ್ತಿ ಇಡೀ ಕಂಡಿತೋ ಇಲ್ಲವೋ. "ಅಯ್ಯೊರೇ" ಎಂದು ಒಂದು ಬೊಬ್ಬೆ. ಆದರೆ ಅವರಿಗೆ ಕೇಳುವಂತಿಲ್ಲ ದೇವರ ದಯೆ. ಕೇಳುತ್ತಿದ್ದರೆ ಕೂಟ ಅಲ್ಲೇ ಇದೆಯೆಂದು ಕೂತುಬಿಡುತ್ತಿದ್ದರೇನೋ!

ಮಾಮರು ಒಳಗೆ ಕಾಲಿಡುತ್ತಲೇ "ಎಲ್ಲು. ಲಿಂಗ. ಪೆದಂಬು. ಈಶ್ವರ" ಎಂದು ಅನ್ವರ್ಥನಾಮಗಳಿಂದಲೇ ನಮ್ಮನ್ನು ಸಂಬೋಧಿಸುವ ಕ್ರಮ. ಇವುಗಳಿಗೆ ಲಿಂಗ. ವಯಸ್ಸು, ವಿದ್ಯೆ ಯಾವುದೂ ಬಗಾವಲ್ಲ, ತಿಳಿದಿರಲಿ.

ಲಿಂಗ—ಗೋ-ಮಾ. ಸಾಹಿತ್ಯ ಅಂದರೆ ಬರವಣಿಗೆಯುಬ್ಬವೇ? ನಮ್ಮ ಸಾಹಿತ್ಯಕ್ಕೆ ಒಂದು ಹೆಸರು ಬೇಕಲ್ಲವೇ?

ಮಾಮರು—ಬೇಕಲ್ಲವೇ, ಮತ್ತೆ? ಸೂಚಿಸಿರಿ ಒಬ್ಬೊಬ್ಬರು ಒಂದೊಂದನ್ನು.

ಲಿಂಗ—ಹಳೆ ಹೊಸ ಕನ್ನಡ ಎಂದಿದೆ. ಅದು ಬೇಡ, ಸುಧಾರಿತ ಸಾಹಿತ್ಯ.

ಪೆದಂಬು—ಮೊದಲೇ ಇದ್ದುದರಲ್ಲಿ ತಿದ್ದುಪಡಿ ಸುಧಾರಣೆ. ಆದರೆ ನಮ್ಮದು ಹೊಸತೇ ಅಲ್ಲವೆ,ಗೋಂಯ್ದುಮಾಮ್ಮಾ

ಎಲ್ಲು—ಘೋರ ಸಾಹಿತ್ಯ.

ಪೆದಂಬು—"ಅಟನಕಸದಳಮಪ್ಪುದೆಂ"ದು ಹೆಸರು ಕೇಳಿಯೇ ಭಯಂಕರ ಬೇಡ ಅಂದರೆ?

ಎಲ್ಲು—ಉನ್ಮತ್ತ ಸಾಹಿತ್ಯ-ತನ್ನ ತನ್ನಷ್ಟಕ್ಕೆ ಹುಟ್ಟಿದ್ದು ಅಥವಾ ಉತ್ಪನ್ನ.

ಮಾಮರು—(ತಲೆದೂಗಿ, ಬಿಳಿ ಮೀಸೆ ಕಚ್ಚಿಕೊಂಡು, ಅಪೂರ್ವ ನಗುವನ್ನು ಬೀರಿ)
ಭೇಷ್ ! ಚಿಂತಿಲ್ಲ. ಆದರೆ ಉನ್ಮತ್ತ ಸಂಸ್ಕೃತಪದ; ಪಾಮರರಿಗೂ ಅರ್ಥವಾಗಬೇಕು.

ಎಲ್ಲು—"ಹುಚ್ಚು ಸಾಹಿತ್ಯ" ಸರಿಯೆಂದು ಒಮ್ಮತದಿಂದ ಪಾಸಾಯಿತು.

ಈಶ್ವರ—ಸಾಹಿತ್ಯ ಪುಸ್ತಕಗಳ ಪ್ರಚಾರವು ಮುನ್ನುಡಿ ಬರೆದವರ ಹೆಸರನ್ನು ಹೊಂದಿಕೊಂಡಿರುವುದಲ್ಲವೇ, ಗೋ-ಮಾಮ್ಮಾ?

ಮಾಮರು—ಹೌದು, ಅಂಥವರಿಂದಲೇ ಬರೆಯಿಸಬೇಕು.

ಎಲ್ಲು—ಅದರ ಮೌಲ್ಯವನ್ನು ತಿಳಿದ ವಜ್ರಪರೀಕ್ಷಕರು ಬೇಕು.

ಪೆದಂಬು—ನೀವೇ ತಿಳಿದವರು ಮಾಮ್ಮಾ. ಇನ್ನಾರಿಗೂ ಇದು ಗೊತ್ತಿಲ್ಲ.

ಮಾಮ—ಅಯ್ಯಪ್ಪ ನಾನು ಪೆದಂಬು ಮಾತಾಡುವುದಿಲ್ಲ ನಾನೇ ಬರೆಯುತ್ತೇನೆ. ನಿಮ್ಮ ಈ ಪುಸ್ತಕಕ್ಕೆ ಮುನ್ನುಡಿ ಬರೆಯುವುದು ನನಗೇನೂ ದೊಡ್ಡ ಕೆಲಸವಲ್ಲ. ಯಾಕೆಂದರೆ ಇದು ಸರಿಯೇ. ಇದು ತಪ್ಪೇ ಎಂಬ ಪ್ರಶ್ನೆಯೇ ಇಲ್ಲ. ಓದಬೇಕಾಗಿಲ್ಲ, ಯೋಚಿಸಬೇಕಾಗಿಲ್ಲ. ನೀವು ಹೇಳಿದ್ದೇ ಸರಿಯೆನ್ನಬೇಕು. ಎನ್ನುವಾಗ ಹಾಗೇ ಬರೆದು ಓದುವವರೂ ಒಪ್ಪಲೇ ಬೇಕು ಎಂದು ಬರೆದರಾಯಿತು.

ಲಿಂಗ—ಹಾಗಾದರೆ ಫುಟ್‌ನೋಟು (Foot note) ಇಲ್ಲ.

ಚಿಕ್ಕಮಗು—ಗೋಂಯ್ದು ಮಾಮ್ಮಾ ! ಕಾಫಿಸಲಿಕ್ಕೆ ಆಗಿದೆಯಂತೆ(ಪೆದಂಬುವಿನ ತಯಾರಿ)

ಎಲ್ಲರೂ—(ಮಾಮರಿಗೆ ಕೇಳ ಬೇಕೆಂದು) ಕಾಫಿಸಲಿಕ್ಕೆ? ದೊಡ್ಡಣ್ಣನವರಲ್ಲವೇ ದಿನಾಲೂ
ಅಕ್ಕಚ್ಚು (ಕಾಫಿ-ತೊಳ್ಕಳ) ಆಗಿದೆ ಎಂದು ಕೂಗುವುದು, ಅವರೆಲ್ಲಿ?

ಮಗು—ಅವರು ಪಾಯ್ಖಾನಿಸಲಿಕ್ಕೆ ಹೋಗಿದ್ದಾರೆ. ಈಗ ಬರ್‍ತೇನಂದಿದ್ದಾರೆ.

ಎಲ್ಲು—ಫುಟ್‌ನೋಟು. ಇದಕ್ಕೆ ಬರೆಯಬಹುದು. ಕಾಫಿಸು = ಕಾಫಿ + ಇಸು ಪ್ರತ್ಯಯ, ಕಾಫಿ ಅಂಕಿತನಾಮಕ್ಕೆ ಹಚ್ಚಿದರೆ ಕೃದಂತ, ತದ್ಧಿತಾಂತ, ಕ್ರಿಯಾಪದವಾಗಿ ವಿಧಿರೂಪ. ಕಾಫಿಸು. ಇವರಂತೆ ಸಣ್ಣಿಸು, ದೊಡ್ಡಿಸು, ಗೌಜಿಸು, ಗಲಾಟಿಸು- - -

ಪೆದಂಬು—ಬೊಬ್ಬಿಸು, ಉಪಕರಿಸು- - -

ಈಶ್ವರ—ಉಪ್ಕರಿಸಲಿಕ್ಕೆ ಗೇರು ಬೀಜ ಸುಲಿದಾಗಲಿಲ್ಲ.

ಲಿಂಗ—ಉಪಕರಿಸು ಅಂದರೆ ಉಪಕಾರ ಮಾಡು ಎಂದು; ಉಪಕರಿ ಮಾಡು ಎಂದಲ್ಲ.

ಈಶ್ವರ—ಅರ್ಥಕ್ಕೆ ತೊಡಕು-ಸಂದಿಗ್ಧಾರ್ಥ.

ಎಲ್ಲು—ಅದೆಲ್ಲಾ ಸಂಧಿ ಮಾಡುವಾಗ ಮಾತ್ರ. ಕಾಫಿಸುವ ಸಂದರ್ಭ ಉಪಕರಿಸು ಎಂದರೆ ಬೀಜದ ಉತ್ಕರಿ (ಬಿಬ್ಬ್ಯಾ ಉಪಕರಿ) ಮಾಡಬೇಕೆಂಬುದೇ !

ಮಾಮರು—ಏ ಪೆದಂಬು ! ಅರ್ಥ = ದ್ರವ್ಯ, ಹಣ ಎಂದಲ್ಲವೇ? ಅರ್ಥಕ್ಕೆ ತೊಡಕು ನಿನ್ನ ತಾತರಿಗೆ 500 ಬೀಜಕ್ಕೆ ಒಂದು ಕಾಲು ರೂಪ್ಯಾ ಖರ್ಚು.

ತಾಯಿ—ನಾಗೂ ! ಇಂತಹ ಕೆಲವು ಪ್ರಸಂಗಗಳಲ್ಲಿ ಈ ಹುಚ್ಚು ಸಾಹಿತ್ಯ ಕೂಟದಲ್ಲಿ ನಿನ್ನ ಮಾಮರು ಎಷ್ಟು ತನ್ಮಯರಾಗುತ್ತಿದ್ದರೆಂದರೆ, ಆಗಿನ ಮುಗುಳ್ನಗು ಅಭೂತಪೂರ್ವ ! ಬೇರೆ ಯಾವೆಡೆಯಲ್ಲಿಯೂ ಅದು ಮಿಂಚುತ್ತಿರಲಿಲ್ಲ. ಪ್ರಾಸವಿಲ್ಲದ ಕವಿತೆ, ಫುಟ್‌ನೋಟು, ಮುನ್ನುಡಿ. ಇಸುಪ್ರತ್ಯಯ ಇದೆಲ್ಲ ತನ್ನದೇ ಎಂದು ಮಂಕು ತಿಮ್ಮನಿಗೂ ತಿಳಿಯುವುದಿಲ್ಲವೇ? ಮಾಮರಿಗೆ ತಿಳಿಯದೇನು? ನಮ್ಮ ಅಣ್ಣನವರು ಕಣ್ಣು ಕೆರಳಿಸಿದರು. ಆದರೆ ಮಾಮರು- - - -

ಮಗಳು—ಅಣ್ಣನವರು ಕಣ್ಣುಕೆರಳಿಸಿದುದೇಕಮ್ಮಾ?

ತಾಯಿ—ಅಷ್ಟೂ ತಿಳಿಯುವುದಿಲ್ಲವೇ? ನಿನಗೆ? ತಾಜಾ ಬೆಪ್ಪುತಕ್ಕಡಿ ! ಮಾಮರಿಗೆ ಸಿಟ್ಟು- - - -

ಮಗಳು—ಮಾಮರಿಗೆ ಸಿಟ್ಟು ಬರುತ್ತಿತ್ತೇನಮ್ಮಾ?

ತಾಯಿ—ಸಿಟ್ಟಿನ ಪ್ರತಾಪ ಬಂದುದು ಒಳ್ಳೇದೇ ಆಯಿತು. ಅದನ್ನು ಮತ್ತೆ ಹೇಳುತ್ತೇನೆ.

ಮಾಮರು—(ಅಣ್ಣನವರನ್ನು ದಿಟ್ಟಿಸಿ) ಓಯ್ ಮಿಸ್ಟರ್ ! ಇದೆಲ್ಲಾ ನನ್ನ ಪೂಜೆ "ಸೂರ್ಪಕರ್ಣಾಯನಮ:, ಲಂಬೋದರಾಯನಮ: ಪತ್ನೀಹೀನಾಯ ನಮ: ಎಂದು ಗಣಪತಿಗೆ ಮಾಡುವುದಿಲ್ಲವೇ? ಹಾಗೆ

ಎಲ್ಲು—"ನಿಂದಾಸ್ತುತಿ ಅಲಂಕಾರ" ಮಾಮರು ಸುತ್ತಲಿರುವ ಎಲ್ಲ ಮುಖಗಳನ್ನೊಮ್ಮೆ ನೋಡಿ ಗಟ್ಟಿಯಾಗಿ ನಗಾಡಿದರು. ಮಕ್ಕಳು ತನ್ನನ್ನು ಟೀಕಿಸಿದಾಗ(ಪ್ರೀತಿಯಿಂದ) ಕೇಳಿದಷ್ಟು ದೊಡ್ಡ ನಗುವನ್ನು ನಾವು ಹಿಂದೆ ಎಂದೂ ಕೇಳಿರಲಿಲ್ಲ. ಇನ್ನು

ಹೇಳ ಬೇಕೇ ನಮಗೆ? ಮಾಮರನ್ನು ಹೇಗಾದರೂ ಮಾಡಿ ನಗಿಸುವ ಹುಚ್ಚು ನಮಗಾದರೆ, ನಮ್ಮ ಶ್ರವಣ, ಪಠಣ, ಮನನ, ವಿಷಯ ಸಂಗ್ರಹ, ಅವುಗಳ ಪ್ರತಿಪಾದನ ಇತ್ಯಾದಿ ಶಕ್ತಿಯನ್ನು ಪ್ರೋತ್ಸಾಹಿಸಬೇಕೆಂಬುದೇ ಮಾಮರ ಹೆಬ್ಬಯಕೆ. ಅಂತೂ ಗಿಲಿಟಿನ ಆಭರಣಕ್ಕೆ ಪೋಲೀಷ್ ಕೊಟ್ಟಂತೆಯೂ, ಸೆಕ್ರಿನ್ ಕಾಫಿಗೆ ಹುಡಿ ಹಾಲು ಹಾಕಿದಂತೆಯೂ ಬೆಳೆಯಿತು ನಮ್ಮ ಹುಚ್ಚು ಸಾಹಿತ್ಯ. ಇಲ್ಲಿಯ ತನಕ "Non-sense" ಈಗ "New sense"

ಮಗಳು—"New sense" "ಹೇಗಮ್ಮಾ?

ತಾಯಿ—ಹೇಗೆಂದರೆ, ನಿನಗೆ ಕೆಲವು ವಿಷಯಗಳ (Headings)ನ್ನು ಮಾತ್ರ ಹೇಳುತ್ತೇನೆ. ಅವು ಹೇಗೆ ಬೆಳೆಯುತ್ತಿದ್ದುವು ಎಂಬ ಕೊಂಚ "Idea"ನಿನಗಾಗಲಿಲ್ಲವೇ ಪೆದ್ದೇ? ನೀನು ಆಗ ಹುಟ್ಟದೇ ಇದ್ದುದೇಕೆ? ಮಾಮರಿಗೆ ಪ್ರತಿದಿನ ಪ್ರಶ್ನೆಗಳ ಸುರಿಮಳೆ, ನಗುವಿನ ಸಂತೆ, ರಸನಿಮಿಷಗಳ ವಾತಾವರಣ, ವೇದಾಂತದಿಂದ ರಾದ್ಧಾಂತ (ವಿತಂಡವಾದ ಪ್ರಬಂಧ)ದ ವರೆಗೆ ಅದು ಇದು ಎಂದೇನು? ಇಡೀ ವಿಶ್ವವನ್ನೇ ಅಳವಡಿಸಿಕೊಂಡ ಪ್ರಶ್ನೆಗಳು ಅವು. ಲಕ್ಷ್ಯಕೊಟ್ಟು ಕೇಳು.

ಗೋಂಯ್ಪುಮಾಮ್ಮಾ—

1 ನಾಲ್ಕು ವೇದಗಳು ಸಮಾನವಲ್ಲವೇ ಅಥರ್ವಣ ವೇದಕ್ಕೆ ಪ್ರಾಧಾನ್ಯ ಕೊಡಲೇ ಬೇಕು.

2 ಅಗಸ್ತ್ಯನು ಸಾಗರವನ್ನು ಆಪೋಷಣೆ ಮಾಡಿದ್ದನ್ನು ನಂಬಬಹುದೇ. ಅಥವಾ ಅದು ಮೇಜಿಕ್ ಆಗಿರಬಹುದೇ?

3 ಹಿರಣ್ಯಾಕ್ಷನು ಭೂಮಿಯನ್ನು ಸುರುಳಿದಾಗ ಸಾಗರವೆಲ್ಲಿತ್ತು, ಅವನೆಲ್ಲಿ ಅಡಗಿದ್ದನು?

4 ಹಿರಣ್ಯಕಶಿಪು ತನ್ನ ಮಗನಿಗೆ ಬುದ್ಧಿ ಕಲಿಸುವುದು ತಂದೆಯ ಕರ್ತವ್ಯವಾಗಿರುವಾಗ. ವಿಷ್ಣುವು ಅವನನ್ನು ಕೊಂದುದು ಶುದ್ಧ ಅನ್ಯಾಯ, ಅಧಿಕಪ್ರಸಂಗ.

5 ಶ್ರೀರಾಮನು ಅಡ್ಡನಿಂತು ವಾಲಿಯನ್ನು ಕೊಂದುದು ಅನುಚಿತ, ವಂಶಕ್ಕೇ ಅಪಕೀರ್ತಿ.

6 ರಾವಣನ ಸೆರೆಯಲ್ಲಿದ್ದ ಸೀತೆಯನ್ನು ಪರಿಗ್ರಹಿಸಿದುದು ಅನುಚಿತವೆಂದಲ್ಲವೇ "ಮಡ್ಡೆಲ ಪಕೀರಣ್ಣ (ನಮ್ಮ ದೋಬಿ)ನ ಆಕ್ಷೇಪ? ರಾಮನ ಅವಿವೇಕಕ್ಕೆ ತುಂಬಿದ ಬಸಿರಿ ಸೀತೆಗೆ ವನವಾಸ! ಆಹಾ, ಏನು ರಾಮರಾಜ್ಯ! ಆಯ್!

7 ಗಾಂಧಿಗೆ ಮಹಾತ್ಮ ಬಿರುದು ಕೊಟ್ಟದ್ದು ಯಾರು; ತಾನೇ ಇಟ್ಟುಕೊಂಡಿರಬೇಕಲ್ಲವೇ?

ಮಾಮರು—ಅದು ಸರಿಯಿಲ್ಲವಾದರೆ "ಪೆದಂಬು ಗಾಂಧಿ" ಎಂದು ನೀವು ಹೇಳಿ.

8 ಋಷಿಗಳಲ್ಲಿ ರಾಜರ್ಷಿ, ಬ್ರಹ್ಮರ್ಷಿ, ದೇವರ್ಷಿ, ಬೇವರ್ಷಿ ನಾಲ್ಕು ಕ್ಲಾಸು. ತ್ರಿಲೋಕ ಸಂಚಾರಿಯಾದ ಮಾತ್ರಕ್ಕೆ ನಾರದನಿಗೆ ಮಹಾಮುನಿ ಅಂದರೆ ಎಲ್ಲೆಲ್ಲಿಯೂ ತಿರುಗಾಡುವ ಬೇವರ್ಷಿಗೆ ಏನನ್ನಬೇಕು,ಗೋಂಯ್ಪುಮಾಮ್ಮಾ?

9 ಡಾರ್ವಿನನ ವಿಕಾಸವಾದವನ್ನು ಸಂತ ರಾಮದಾಸನು ಮೊದಲೇ ಹೇಳಿಲ್ಲವೇ ತನ್ನ ಹಾಡಿನಲ್ಲಿ? "ರಾಮಾ ಕಾಯಲೆ ವಾನರ ದಳ, ಯೇಕಿ. ನಾಂಚವಿ ಸಂತಮೇಳ" ಮನುಷ್ಯರೇ ಮಂಗಗಳೆಂದು ಅವನು ಪುಸ್ತಕ ಬರೆಯದಾದನು ಪಾಪ! ಅದಕ್ಕೆ ಮೊದಲೇ ತ್ರೇತಾಯುಗದಲ್ಲಿಯೇ ಕಲಿಯುಗದ ಬ್ರಹ್ಮಪಟ್ಟವನ್ನು "ಅಕ್ಷಯಸುರಾಂತಕಗೆ ಅಜನಪದವಿಯನಿತ್ತೆ" ಕೊಟ್ಟಾಗ ಮನುಷ್ಯನು ಮಂಗನಿಂದ ಬಂದವನೆಂಬುದಕ್ಕೆ ಬೇರೆ ಆಧಾರಬೇಕೇ?

ಪೆದಂಬು—ಗೋಂಯ್ಪು ಮಾಮ್ಮಾ! ನೋಡಿ, ಕೌರವನ ಸಭೆಯಲ್ಲಿ ದ್ರೌಪದಿಯ ಮಾನಭಂಗದ ಸಂದರ್ಭ "ಸಂದೇಹವೇಕಿನ್ನು, ಕೊಲ್ಲು, ಕಾಯೋ ನೀನು, ಎಂದೆರಡು ಕಣ್ಗಳ ಮುಚ್ಚಿ ಕರಗಳ ಮುಗಿದು, ತಾನಿಂದು ಪ್ರಾಣವ ಬಿಡುವೆನೆಂದು ನಿಶ್ಚೈಸಿ ಮನದಲಿ ಗೋವಿಂದನೆಂದೊದರಿದಳು ತರಳೆ! "ಪ್ರಾಣ ಬಿಡುವುದಾದರೆ ಗೋವಿಂದ ಎಂದು ಒದರಿದಳೇಕೇ ಅಂತ.

ಮಾಮರು—ನಾನು ಹೆಣಹೊರುವ ಉದ್ಯೋಗಿಯೆಂದು ಕೇಳಿರಬೇಕು ಅವಳು—

ಪೆದಂಬು—ಅದು ಮಾತ್ರವಲ್ಲ, "ಇಂತೆನುತ ದ್ರೌಪದಿಯು ಮೊರೆಯಿಡುವ ಧ್ವನಿಕೇಳಿ ಅಂತರಾತ್ಮಕ ಕೃಷ್ಣ ದ್ವಾರಕಾಪುರದಲ್ಲಿ ಕಾಂತೆ ರುಕ್ಮಿಣಿ ಸತ್ಯಭಾಮೆಯರ ಕೂಡೆ॥ಏಕಾಂತಭವನದೊಳಿದ್ದನು "ಹೆಂಡಿರೊಡನೆ ಕೃಷ್ಣನು ಹೋಟೇಲಿನಲ್ಲಿದ್ದನು. ಕೃಷ್ಣ ಭವನ ಎಂಬಂತೆ ಏಕಾಂತ ಭವನ (Private Ltd.) ಅಂದರೆ ಖಾಸಗಿ ಎಂದರ್ಥವಾಗಿರಬೇಕಲ್ಲವೇ? ಸಂತರಾಮದಾಸನು ಹೇಳಿದ್ದನ್ನೇ ಡಾರ್ವಿನನು ಹೇಳಿದ್ದಾನೆ, ಕೃಷ್ಣನು ಮಾಡಿದ್ದನ್ನೇ ಈಗ ಎಲ್ಲರೂ ಮಾಡುತ್ತಾರೆ. ಅದೇನು ಮಹಾ!

ತಾಯಿ—ಹೀಗೆ ಹೇಳುತ್ತಾ ಹೋದರೆ ಈ ಲೇಖನವು ಹನುಮಂತನ ಬಾಲವಾಗಿ, ಗೋವಿಂದ್ರಾಯಣವಾಗುವುದು. ಇನ್ನು ಒಂದೆರಡು ಸನ್ನಿವೇಶಗಳನ್ನು ಹೇಳಿ ಮುಗಿಸುತ್ತೇನೆ.

ಸುಮಾರು 1953ರಲ್ಲು ನಮ್ಮ ಶಾಲೆಯಲ್ಲಿ ಎಸ್.ಎಸ್.ಎಲ್.ಸಿ. ಓದುವ ಕೃಷ್ಣಾನಂದ ಚೌಟ ಎಂದ ವಿದ್ಯಾರ್ಥಿ ಇದ್ದನು. ಓದುವ ಪಾಠದಲ್ಲಿ ಒಬ್ಬ ರಾಜನ ಮಂತ್ರಿಯ ಹೆಸರು ಬಂದೊಡನೆ, ಅವನ ಕಾಲ, ಅವನ ಸಮಕಾಲೀನರು, ಅವನ ಯುದ್ಧಕಾರಣ, ಕಾಲ, ಪರಿಣಾಮ, ಅಂಕೆ ಸಂಖ್ಯೆ ತಿಥಿವಾರ ನಕ್ಷತ್ರವೆಂಬಂತೆ, ಅನಗತ್ಯವಾದರೂ ಹೇಳುವನು. ನನಗಾದರೋ ಅವನ ವಿಶಾಲವಾದ ಓದು, ಜ್ಞಾಪಕ ಶಕ್ತಿಗಳನ್ನು ತಿಳಿದು. ಸಂತೋಷದ ಗುಂಗಿನಲ್ಲಿ "ಏನೋ ಮಾತು ಮಾತಿಗೆ ಪಂಚಾಂಗ ಬಿಚ್ಚುತ್ತೀಯಲ್ಲ. "ಕುಮಾರ ಗೋವಿಂದ ಪೈ" ಆಗಲು ಇಚ್ಛೆಯೇ. ಪ್ರಯತ್ನವೇ?" ಅಂದೆನು. ಕ್ಲಾಸಿನಲ್ಲೇನೋ ತಮಾಷೆಯಾಗಿ ಗುಲ್ಲೆದ್ದಿತು. ಆದರೆ ಅದು ಅವರು ಇನ್ನೂ ಕಣ್ಣೆದುರಿನಲ್ಲಿರುವಾಗ ಹೇಳಬಹುದೇ. ಅನುಚಿತವಲ್ಲವೇ? ಮಾಮರ ಕಿವಿ ಮುಟ್ಟಿದರೆ ಏನೆಂದು ತಿಳಿದುಕೊಂಡಾರು ಎಂಬ ಕೀಟವು ಹಗಲಿರುಳು ನನ್ನನ್ನು ಕೊರೆಯಿತು. ಎಲ್ಲ ಊರುಗಳಲ್ಲಿ ಕಿವಿಯ ಗೋಡೆಗಳಿದ್ದರೆ ನಮ್ಮೂರಿನ ವಾಯುದೇವನಿಗೆ ಮೈಯೆಲ್ಲ ಕಿವಿ, ಕಣ್ಣೂ ಇದೆ. ಪರಿಹಾರ ಏನೆಂಬುದೇ ಯೋಚನೆಗಿಟ್ಟಿತು. ಮೂರನೇ ದಿನ ಥಕ್ಕನೆ

ಆರ್ಕಿಮಿಡೀಸ್ ಆದೆನು. ಹೊಳೆಯಿತು ಮನಸ್ಸಿಗೆ. ಶಾಲಾ ಕರ್ತವ್ಯ ಮುಗಿದೊಡನೆ. ಹುಡುಗನನ್ನು ಕರೆದುಕೊಂಡೇ ಅವರ ಲ್ಲಿಗೆ ಹೋದೆನು. ಮಕ್ಕಳ ಮುಖ ನೋಡಿದಾಗ ಸಂತೋಷದ ಪರಮಾವಧಿ ನಿನ್ನ ಮಾಮರಿಗೆ. ಅವರ ಈ ಧಾರಾಳತನದ ಗುಟ್ಟು ನಮಗೆ ಗೊತ್ತಿದೆಯಲ್ಲ ಇಪ್ಪತ್ತು ವರ್ಷಗಳ ಹಿಂದೆಯೇ. ಸೋದಾಹರಣವಾಗಿ ಸತ್ಯವನ್ನು ಅರಿಕೆ ಮಾಡಿ. ಹುಡುಗನ ಪರಿ ಚಯವನ್ನು ಹೇಳಿ ಕ್ಷಮೆಯಾಚಿಸಿದೆನು. ಹುಡುಗನ ಮುಖವನ್ನು ನೋಡಿ ಒಂದು ಪ್ರೀತಿಪೂರ್ವಕ ಮುಗುಳ್ನಗು ಬೀರಿ ಶಾಲೆ ಯಿಂದ ಸೀದಾ ಬಂದಿರಾ ಎಂದು ಕೇಳಿ ತೀರ್ಥಪ್ರಸಾದ (ಕಾಫಿ ತಿಂಡಿ)ವಾದನಂತರ ನನ್ನ ಕೇಸನ್ನು "Under Observation" ನಲ್ಲಿಟ್ಟುದಾಯಿತು. ಶಿಷ್ಯನನ್ನು ಪೂಜ್ಯರ ಕೈಗೆ ಒಪ್ಪಿಸಿ ಮನೆಗೆ ಬಂದೆನು. ಹುಡುಗನು ಆಗಾಗ್ಗೆ ಹೋಗಿ ಪುಸ್ತಕಗಳನ್ನು ತರುತ್ತಿ ದ್ದನಂತೆ. ಏನೇನೋ ಉಪದೇಶವನ್ನು ಮಾಡುತ್ತಿದ್ದರಂತೆ. ಮೂರು ವಾರಗಳನಂತರ ದಡದಡೆಯ ಎದೆಯಿಂದ ಕಳ್ಳನಂತೆ ಅವ ರಲ್ಲಿಗೆ ಹೋದೆನು. ಅಪರಾಧಿಯ ಮುಖಚರ್ಯೆಯನ್ನು ನೋಡಿ ದಯೆಬಂತೇನೊ, "ಚಿಂತಿಲ್ಲ ನಿನ್ನ ಹುಡುಗ, ಉತ್ತರೋತ್ತರ ಸಾಹಿತ್ಯ ವ್ಯವಸಾಯಿಯಾಗುವನು. ದೇವರು ನಿಮ್ಮನ್ನು ಕಾಪಾಡಲಿ" ಅಂದರು. ಒಂದು ದೀರ್ಘ ಶ್ವಾಸ ಬಿಟ್ಟೆ ನಾನು. ಆ ಹುಡುಗನು ಈಗ ಎಮ್.ಎ. ಪ್ಯಾಸ ಮಾಡಿ ಬೊಂಬಾಯಿಯಲ್ಲಿ ಒಬ್ಬ ಆಫೀಸರನಾಗಿ ಈ ಪಂಚಾಂಗದ (ಸಂಶೋಧನೆ) ಕೆಲಸವನ್ನು ತನ್ನ ಹೊಬ್ಬಿ(Hobbi)ಯಾಗಿಟ್ಟು ಕೊಂಡಿದ್ದಾನೆಂದು ಕೇಳಿ ಪರಮಾನಂದವಾಗುತ್ತದೆ. ಇದೂ ಪೂಜ್ಯರ ವರಪ್ರದಾನವಲ್ಲದೆ ಮತ್ತೇನು?

ಅದೇ ಕಾಲದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಶ್ರೀಯುತ ಬಿ.ಜಿ. ಬಾಳಿಗರೆಂಬ ನನ್ನ ಪಿತೃವರ್ಗದ ಒಬ್ಬ ಜ್ಯೋತಿಷಿಗೆ. ನನ್ನ ಜವಾಬ್ದಾರಿಯಲ್ಲಿ, ಜ್ಯೋತಿಷದ ಒಂದು ಪುಸ್ತಕವನ್ನು ಒಂದು ವಾರದ ಮಟ್ಟಿಗೆ ನಿನ್ನ ಮಾಮರು ಕೊಟ್ಟರು. ಪುಸ್ತಕವನ್ನು ಕೈಗೆ ಕೊಡುವಾಗ "ಓಯ್ ಮಿಸ್ಟರ್ ಬಹಳ ಹಳೇ ಪುಸ್ತಕ. "Smoothly Handle" ಮಾಡಬೇಕು". ಅಂದರು. ಒಂದು ವಾರದೊಳಗೇ ಆತನು ಪುಸ್ತಕದಿಂದ ತನಗೆ ಬೇಕಾದುದನ್ನು ನಕಲಿಸಿ. ಸಂಶಯಗಳನ್ನು ಪೂಜ್ಯರೊಡನೆ ಕೇಳಿ ತಿಳಕೊಂಡು. ಪುಸ್ತಕವನ್ನು ಹಿಂದೆ ಕೊಡುವಾಗ ಸುಮ್ಮನೆ ಹಿಂದೆ ಕೊಡದೆ ಮಹಾತ್ಮ "ಗೋಂಯ್ದು ಮಾಮ್ಮಾ! ನೀವು ಹೇಳಿದಂತೆ "Smoothly Handle" ಮಾಡಿ ದ್ದೇನೆ ನೋಡಿರಿ" ಅಂದನಂತೆ. ಪ್ರಥಮ ಪರಿಚಯಕ್ಕೆ ಮಾತ್ರ ಎಲ್ಲ ಪ್ರಸಂಗಗಳಲ್ಲಿ ನನ್ನ ಆವಶ್ಯಕತೆ ಮತ್ತು ಇತ್ತಂಡದವ ರಿಗೂ ನಾನು ಬೇಕಾಗಿರಲಿಲ್ಲ, ತಿಳಿಯಿತೆ? ಅದೇ ಅವರ ವಿಶ್ವಪ್ರೇಮದ ಲಕ್ಷಣ. ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು. ಎವೆ ಯಿಕ್ಕದೆ ಎರಡು ನಿಮಿಷ ದಿಟ್ಟಿಸಿ "ಪುಸ್ತಕವನ್ನು ಹಾಗೇ ತಂದುಕೊಟ್ಟ ವಿಷಯದಲ್ಲಿ ಮನಸ್ಸಿನಲ್ಲಿ ಬೇಸರವಿದ್ದರೆ ಮಿಸ್ಟರ್. ಹೇ ಗೇ ಬೇಕೋ ಹಾಗೆ ಮಾಡಿ ಕೊಡು" ಎನ್ನುತ್ತಾ ಆತನ ಕೈಯನ್ನು ಎಳೆದು ಪುಸ್ತಕವನ್ನು ಆತನ ಕೈಯಲ್ಲಿಟ್ಟು ಪ್ರೀತಿಪೂರ್ವಕವಾದ ಒಂದು ನಗುವನ್ನು ಸೂಸಿದರಂತೆ. "ಮಾಮರು ಇಷ್ಟು ರಸಿಕರೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಮಹಾನ್ ವ್ಯಕ್ತಿಯೆಂದು ಮಾತ್ರ ಎಣಿಸಿದ್ದೆನಕ್ಕಾ" ಅಂದನಾತ.

1948–49ರಲ್ಲಿ ನಮ್ಮ ದೇವಸ್ಥಾನದಲ್ಲಿ ಗಮಕವಾಚನವನ್ನು ಜರಗಿಸಿದ್ದರು. ದೇವಳದ ಅಧಿಕಾರಿಗಳಾದ ಶ್ರೀಮಾನ್ ಕೆ.ಪಿ.ಕಾಮತರು ಮೈಸೂರಿನಿಂದ ಭಾರತ ಕೃಷ್ಣರಾಯರೆಂದೇ ಹೆಸರಾಂತ. ನಮ್ಮ ಪೂಜ್ಯ ಗುರುಗಳಾದ ಶ್ರೀ ಕೃಷ್ಣಗಿರಿ ಕೃಷ್ಣರಾ ಯರನ್ನು ಆಹ್ವಾನಿಸಿದ್ದರು. ಅವರು ತಮ್ಮೊಂದಿಗೆ ಗಮಕಿಯೂ. ಕನ್ನಡ ಜ್ಞಾನಿಯೂ ಆಗಿರುವ ಶ್ರೀಮಾನ್ ಅಶ್ವತ್ಥನಾರಾಯಣನೆಂಬ ತಮ್ಮ ಶಿಷ್ಯರೊಬ್ಬರನ್ನು ತಮ್ಮ ನೆರವಿಗಾಗಿ ಕರಕೊಂಡು ಬಂದಿದ್ದರು. ಒಂದು ತಿಂಗಳ ಅವಧಿಯಲ್ಲಿ ಅವರಿಗೆ ಪೂಜ್ಯ ಪೈಗಳ ನಿಕಟ ಪರಿಚಯ ಒದಗಿತು. ಮತ್ತೊಂದು ಸಲ ಶ್ರೀ ಅಶ್ವತ್ಥನಾರಾಯಣ ದಂಪತಿಗಳು ಇಲ್ಲಿಗೆ ಬಂದರು. ತರುಣ ದಂಪತಿ ಗಳು ಪೂಜ್ಯ ಪೈಗಳನ್ನು ಕಾಣಲು ಹೋಗಿ ಕಾಲ್ಬಿಡಿದು ಆಶೀರ್ವಾದ ಪಡೆದು. ಮರಳಿದ ಅಲ್ಪಾವಧಿಯಲ್ಲಿಯೇ ಸಂತಾನಪ್ರಾಪ್ತಿ ಯಾಯಿತು–ಆಗುತ್ತಲೇ ಇದೆ. ಮಾತ್ರವಲ್ಲ ಅನಿರೀಕ್ಷಿತವಾಗಿ ತನ್ನ ಉಪಾಧ್ಯಾಯ ವೃತ್ತಿಯಲ್ಲಿಯೂ ಅಭಿವೃದ್ಧಿ ಪಡೆದು. ಪತಿ ಪತ್ನಿಯರು ಪೂಜ್ಯರಲ್ಲಿ ದೇವತ್ವವನ್ನೇ ಕಂಡರು. ಅಂದಿನಿಂದಲೂ ನನಗೆ ಪತ್ರ ಬರೆಯುವಾಗ "ಪರಮ ಪೂಜ್ಯರಿಗೆ. ನನ್ನ ನನ್ನ ವಳ. ವಂದನೆಗಳರ್ಪಿಸಬೇಕೆಂದು ಬರೆಯುವ ನಿಯಮವನ್ನು ಇಟ್ಟುಕೊಂಡಿದ್ದರವರು. ಒಮ್ಮೆ ಆ ಕಾರ್ಡು ನಮ್ಮ ಪೆದಂಬುವಿನ ಕಣ್ಣಿಗೆ ಬಿತ್ತು.

ಪೆದಂಬು:—ಅಕ್ಕಾ! ನೀನೀಗ ಗೋಂಯ್ದುಮಾಮರಲ್ಲಿಗೆ ಇದನ್ನು ಹೇಳಲು ಹೋಗಬೇಕು, ಅಲ್ಲವೇ?

ನಾನು:—ಅಲ್ಲವೇ ಎಂದೇನು? ವಿಶ್ವಾಸಘಾತ ಮಾಡಲೇನಮ್ಮ. ಅ. ನಾರಾಯಣನಿಗೆ; ಯಾಕೆ?

ಪೆದಂಬು:—ನಾನೂ ಬರುತ್ತೇನೆ. ನೋಡಕ್ಕ ಅಷ್ಟು ದೂರ ಇದ್ದವರಿಗೆ ಮಾಮರಲ್ಲಿ ಎಷ್ಟು ಪೂಜ್ಯಭಾವನೆ! ನಮಗೆ ಮಾಮರೆಂದರೆ" ಹಿತ್ತಲು ಗಿಡ ಮದ್ದಲ್ಲ"ಎಂಬಂತಾಗಿದೆ.

ಅಂದು ಸಂಜೆ ಸರಿ ನಾಲ್ಕು ಗಂಟೆಗೆ ನಾವಿಬ್ಬರೂ ಹೋದೆವು; ಕ್ಷೇಮಸಮಾಚಾರ: ತೀರ್ಥಪ್ರಸಾದ ಎಲ್ಲ ಮುಗಿಸಿದ ಬಳಿಕ ಪ್ರಾರಂಭಿಸಿದ ನಮ್ಮ......

ಪೆದಂಬು:—ಗೋಂಯ್ದು ಮಾಮ್ಮ! ಪರಮ ಅಂದರೆ ಏನರ್ಥ?

ಮಾಮರು:—ಶ್ರೇಷ್ಠ. ಪರಮ. ಹಂಸ. ಪರಶಿವ. ಪರಮಾತ್ಮಾ. ಒಟ್ಟಿನಲ್ಲಿ ದೊಡ್ಡದೆಂಬರ್ಥ.

ಪೆದಂಬು:—ಪೂಜ್ಯ ಅಂದರೆ?

ಮಾಮರು:—ಪೂಜ್ಯ ಅಂದರೆ ಪೂಜಿಸಲು ತಕ್ಕುದು. ಗುರುಹಿರಿಯರು ಇತ್ಯಾದಿ.

ಪೆದಂಬು;—ಹಾಗಾದರೆ ಮಾಮ್ಮಾ 10ರಿಂದ 10ಹೋದರೆ ಪೂಜ್ಯ ಅಂದರೆ?

ಮಾಮರು:—ಹೌದು. ಪೂಜ್ಯ. ಶೂನ್ಯ. ಸೊನ್ನೆ. ಏನಿಲ್ಲ ಇತ್ಯಾದಿ.

ಪೆದಂಬು:—ಹಾಗಾದರೆ, ಪರಮಪೂಜ್ಯರೆಂದರೆ ದೊಡ್ಡ ಸೊನ್ನೆಯೆಂದಾಯಿತಲ್ಲವೇ ಗೋಂಯ್ಪು ಮಾಮ್ಮಾ !

ಮಾಮರು:—ಆಯಿತಲ್ಲ ಎಂದೇನು? ಸಿದ್ಧಾಂತ ಮಾಡಿಯೇ ಬಿಟ್ಟಿದ್ದೀಯಲ್ಲ ನೀನು?

ಪೆದಂಬು:—(ನನ್ನ ಪುಸ್ತಕಗಳೆಡೆಯಿಂದ ಕಾರ್ಡನ್ನು ಕೈಗೆ ಕೊಟ್ಟು) ಇಲ್ಲಿದೆ ಗೋಂಯ್ಪು ಮಾಮ್ಮ !

ಮಾಮರು:—(ಗಟ್ಟಿಯಾಗಿ ನೆಗಾಡಿ), ಎಲಾ, ಇನ್ನೂ ನಿನ್ನ ಪೆದಂಬು ಬಿಡಲಿಲ್ಲ.

ಆಗ ಮಾಮರು ಹತ್ತು ಹದಿನೈದು ವರ್ಷಗಳ ಹಿಂದಿನ ನಮ್ಮ ಹುಚ್ಚು ಸಾಹಿತ್ಯವನ್ನು ಅಕ್ಷರಶ: ಪುನರಾವರ್ತಿಸಿ ಆ ರಸನಿಮಿಷಗಳನ್ನು ಜ್ಞಾಪಿಸಿ, ನಿನ್ನ ತಾತರನ್ನು ಸ್ಮರಿಸಿ ಪಿಪಿ ಕಪಿ ಬೆರಸಿದ್ದ ದೀರ್ಘವಾದೊಂದು ನಗೆಯನ್ನು ಹೊರಸೂಸಿ, "ಹೌದು ನಾನೊಂದು, ದೊಡ್ಡ ಸೊನ್ನೆ ಈ ಪ್ರಪಂಚದಲ್ಲಿ" ಎಂದರು. ಅವರು ಜ್ಞಾಪಿಸಿದ ಒಂದು ಸುವರ್ಣ ಏನೆಂದರೆ—ನಾನು 1935ರಲ್ಲಿ ವಿದ್ವಾನ್ ಪರೀಕ್ಷೆಯಲ್ಲಿ ತೇರ್ಗಡೆಸಿದ್ದೇನೆಂದು ಕೇಳಿ, ಮಾಮರು ನಮ್ಮನ್ನು ಅಭಿನಂದಿಸಲು ಬಂದರು. ತೀರ್ಥರೂಪರನ್ನು ಉದ್ದೇಶಿಸಿ—

ಮಾಮರು:—ಹೌದ್ರೀ ಭಟ್ರೇ ! ನಿಮ್ಮ ಮಗಳು ವಿದ್ವಾನ್ ಆದುದಕ್ಕೆ ನಮಗೆ, ಗೊತ್ತಿದೆಯಲ್ಲಾ ! ಸ್ಪೆಶಲ್ ಟೀ ಪಾರ್ಟಿ. ದಿನಾಲೂ ಕುಡಿಯುವ ಕಾಫಿ ಇದಕ್ಕೆ ಲಗಾವಿಲ್ಲ.

ನಿನ್ನಜ್ಜರು:—"ವಯ್ಯಾ" ಹೌದು. ಆದರೆ ಇವಳು ಕಲ್ತು ಪಾಸಾಗಿದ್ದಾಳೋ. ಪರೀಕ್ಷಕರಿಗೆ ಕೈತಣ್ಣಗೆ ಮಾಡಿ ವಿದ್ವಾನ್ ಆಗಿದ್ದಾಳೋ ಎಂದು……

ಮಾಮರು:—(ನನ್ನ ಮುಖವನ್ನು ನೋಡಿ ) ಕೇಳಿದೆಯಾ ನಿನ್ನ ತಂದೆ ಹೇಳಿದುದನ್ನು?

ನಾನು:—ಒಳ್ಳೇ ಸುವರ್ಣ ಸಂದರ್ಭ (ಮೊರಾರ್ಜಿ ಸುವರ್ಣವಲ್ಲ) ಅವರು ಹೇಳಿದುದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಾಲ್ಕು ಜನ ಪರೀಕ್ಷಕರಿಗೆ ಒಂದೊಂದೂ ಹಸುರು ನೋಟು ಕೊಡಬೇಕಾಯ್ತು ಕೈ ತಣ್ಣಿಸಲಿಕ್ಕೆ. ಮದ್ರಾಸಿಗೆ ಹೋಗಿ ಬರಲು ನೂರರ ಮೇಲೆ ಖರ್ಚಾಯಿತು. ಇಷ್ಟನ್ನು ಈಸಿ ಕೊಟ್ಟರೆ ತಮ್ಮ ಉಪಕಾರವನ್ನು ಸತ್ತರೂ ನಾನು ಮರೆಯುವುದಿಲ್ಲ.

ಮಾಮರು:—ನನಗೇನು ಕೊಡುತ್ತೀಯಾ ಹೇಳು.

ನಾನು:—ಎಷ್ಟು ಎಂತ ನನ್ನ ಕೈಗೆ ಬರಲಿ ! ಆ ಮೇಲೆ ದಾಮಾಶಯದಲ್ಲಿ ಕಮಿಶನ್, ಡಿಸ್ಕೌಂಟು ಎಲ್ಲ ಕೊಡಲೇ ಬೇಕಲ್ಲ.

ಮಾಮರು:—ಕೇಳಿದಿರಾ? ದುಡ್ಡು ಹೊರಗೆ ಬರಲಿ. ನನಗೂ ನಾಲ್ಕು ಕಾಸು ಸಿಕ್ಕುವ ಚಾನ್ಸು.

ತೀರ್ಥರೂಪರು:—ಹೌದಯ್ಯ ! ಈ ದುಡ್ಡು ಸಿಕ್ಕಿದ ಉಪಕಾರ ಸತ್ತರೂ ಮರೆಯುವುದಿಲ್ಲವೆಂದಳಲ್ಲ ! ಯಾರು ಸತ್ತ ಮೇಲೆ ಎಂದಾಗಲಿ. ಈ ವಹಿವಾಟಿನಲ್ಲಿ ನಾಲ್ಕು ಜನ ಪರೀಕ್ಷಕರು, ಮೂರು ಮಂದಿ ನಾವೂ ಇದ್ದೇವೆ. ಅಲ್ಲವೇ?

ಮಾಮರು:—ಭೇಷ್, ಸುರುವಿಗೆ ಆ ಸಂದೇಹ, ಈಗ ಈ ಸಂಶಯ ದುಡ್ಡು ಹೊರಗೆ ತೆಗೆಯದಂತೆ, ಪೋಂಯ್ಪನ್ನೇ ತಿರುಗಿಸಿದರಿ ಅಲ್ಲವೇ?

ಇದೆಲ್ಲವನ್ನು ಮೆಲುಕು ಹಾಕುವುದೆಂದರೆ ನಿನ್ನ ಮಾಮರಿಗೆ ಅದೆಷ್ಟು ಸಂತೋಷ. ಆಯ್ಯೋ; ಆ ದಿನಗಳು ಇನ್ನು ಬರಲಿವೆಯೋ ಎಂದು ದು:ಖವಾಗುತ್ತದೆ. ಇವಲ್ಲದೆ ಇನ್ನೂ ಯಾವ ಭಾಷೆಗೂ ಎಟಕದ ಕೇವಲ ಕೊಂಕಣಿ ಭಾಷೆಗೆ ಮಾತ್ರ ಮೀಸಲಾಗಿರುವ ಎಷ್ಟೋ ಹರಟೆಗಳಿವೆ. ಇಲ್ಲಿ ಅವುಗಳ ಆವಶ್ಯಕತೆಯೂ ಇಲ್ಲ. ಒಂದನ್ನು ಉದಾಹರಿಸುತ್ತೇನೆ. ಕೇಳು. ಶ್ರೀಮಾನ್ ರಂಗನಾಯಕರೆಂಬೊಬ್ಬ ವೃದ್ಧ ಪಿತಾಮಹರು, ಮಾಮರ ಅಜ್ಜ ಶ್ರೀ ನರಸಿಂಹ ಶ್ಯಾನುಭಾಗರಲ್ಲಿದ್ದರು. ಅವರ ಕುಲಗೋತ್ರದ ಗೋಜಿಗೆ ಹೋಗುವುದು ಬೇಡ. ಅಂತೂ ಪ್ರತಿ ಪ್ರಾತ:ಕಾಲ ಶ್ಯಾನುಭಾಗರ ತೋಟದಿಂದ ಹೂ ಕೊಯ್ದು ದೇವಸ್ಥಾನಕ್ಕೆ ಕೊಂಡು ಹೋಗುವುದು ಅವರ ಕೆಲಸ. ದಾರಿ ಉದ್ದಕ್ಕೂ ಹರಿಭಕ್ತಿಸಾರ, ದ್ರೌಪದೀ ವಸ್ತ್ರಾಪಹರಣ, ಗಜೇಂದ್ರಮೋಕ್ಷ ಇತ್ಯಾದಿಗಳನ್ನು ರಾಗದಿಂದ ಬಾಯಿಪಾಠ ಹಾಡುತ್ತ ಹೋಗುವುದು ಅವರ ವಾಡಿಕೆ. ಹರಿಭಕ್ತಿಸಾರದ ಪ್ರತಿಶ್ಲೋಕವೂ "ನಮ್ಮನನವರತ" ಎಂದು ಕೊನೆಗೊಳ್ಳುವುದಷ್ಟೇ ! ಕೆಲವು ತುಂಟ ಹುಡುಗರು ನಾಯ್ಕರನ್ನು ಕೆರಳಿಸುವುದಕ್ಕೆ ಒಂದು ಶ್ಲೋಕವನ್ನು ಹಾಡುವರು. ಶ್ಲೋಕವಾದರೋ ಹುಳುಕಿನದೇ ಆಗಬೇಕು "ಹೆತ್ತ ಮಗಳನು ಮದುವೆಯಾದವ

ನುತ್ತಮನು ಗುರುಪತ್ನಿಗಳುಪಿದ<br>
ಚಿತ್ರಜನ ಮಾವನು ಕೃತಘ್ನನು ನಿನಗೆ ಮೈದುನನು॥<br>
ಹೊತ್ತತಪ್ಪಿಸಿ ಕಾಮದಲಿ ಮುನಿ<br>
ಪೋತ್ತಮನ ಮಡದಿಯನು ನೆರೆದವ<br>
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ"

ನಮ್ಮನನವರತ ಎಂಬುದನ್ನು ಹೀಗೆ ಹೇಳಿದನೊಬ್ಬ "ಅಮ್ಮ ಆನ್‌ವರತ" ಅಂದರೆ ಅಮ್ಮನನ್ನು ಅಪ್ಪ ಕೊಂಡು ಹೋಗುತ್ತಾನೆ ಎಂದರ್ಥ. ಹೀಗೆ ಹೇಳಿ ಸುಮ್ಮನಿರುತ್ತಾರೆಯೇ ನಮ್ಮ ಮಕ್ಕಳು? ಒಬ್ಬ ಅಜ್ಜರನ್ನು ಕರೆದು ಹೇಳಿಯೇ ಬಿಟ್ಟನು.—

ಮಗಳು:—ಅಮ್ಮ ! ಪಾಪ ! ಅಜ್ಜರಿಗೆ ಜಮದಗ್ನಿಯ ಆವೇಶ ಬಂದಿರಬೇಕು. ಅಲ್ಲವೇ?

ತಾಯಿ:—ಅಜ್ಜ ರೇಗಿದರೆ, ಮಕ್ಕಳನ್ನು ಬೈದರೇ ! ಇಲ್ಲ. ಎಲ್ಲರನ್ನು ಉದ್ದೇಶಿಸಿ "ಮಕ್ಕಳೇ ! ಅಮ್ಮನನ್ನು ಅಪ್ಪ ಕೊಂಡು ಹೋದುದರಿಂದಲೇ ನೀವು ಹುಟ್ಟಿದಿರಿ. ಈಗ ಬೇರೊಬ್ಬರು ನಿಮ್ಮಮ್ಮನನ್ನು ಕೊಂಡು ಹೋಗದಂತೆ ಕಾಪಾಡುವ ಕರ್ತವ್ಯ

ನಿಮ್ಮದು. ಚಿರಾಯುವಾಗಿ" ಅಂದರು. ಈ ಸನ್ನಿವೇಶವನ್ನು ಕೇಳಿದ ನಿನ್ನ ಮಾಮರಿಗೆ ವೃದ್ಧನ ರಸಿಕತೆಯನ್ನು ನೋಡಿ ಅವರಲ್ಲಿ ಗೌರವಾದರಗಳು ಹುಟ್ಟಿದುವು. "ಗೊತ್ತೇ? ಭೇಷ್, ರಂಗ ನಾಯ್ಕ !" ಅಂದರು.

ಒಮ್ಮೆ ಮಾಮರು ನಮ್ಮಲ್ಲಿಗೆ ಬಂದಾಗ (House of Lords, House of Commons) ಅಂದರೇನು; ಅವರ ಸ್ಥಾನಮಾನಗಳಾವುವು? ಎಂಬ ವಿಚಾರ ನಡೆಯಿತು.

ಲಿಂಗ:—ಇವರೆಲ್ಲಾ ದೊಡ್ಡ ಮನುಷ್ಯರು-ಶ್ರೀಮಂತರು, ವಿದ್ಯಾವಂತರು, ರಾಜಕಾರಣಿಗಳು.........

ಈಶ್ವರ:—ಗೊಂಯ್ಬು ಮಾಮ್ಮಾ ! ದೊಡ್ಡವರೆಂದರೆ, ಉದ್ದ, ತೋರ, ಡೊಳ್ಳು ಹೊಟ್ಟೆ, ಭೀಮ.........

ಮಾಮರು:—ಆಗಬಹುದಪ್ಪ ! ನಾನರಿಯೆ, ನಾನೆರಡೂ ಅಲ್ಲ.

ಪೆದಂಬು:—ಗೋಂಯ್ಬು ಮಾಮ್ಮಾ ನಿಮಗೆ ಯಾರಿಗೂ ಗೊತ್ತಿಲ್ಲ, ನಾನು ಹೇಳುತ್ತೇನೆ. "ಫಾಲ್ಸು, ಫಟಿಂಗು, ಲುಚ್ಚ, ನೀಚ, ಬಚ್ಚಾಲು, ತಾಯ್ಗಂಡು, ಮಾಪ್ರಚೋತು, ಕೇಡಿ. ಚೋರು, ಚಾಂಡಾಲು, ಪರ್ದೇಶಿ, ಭಿಕ್ನಾಶಿ, ಮಾರಿ; ನಸ್ರಾಣಿ

ಮಾಮರು:—ಅಯ್ಯಯ್ಯೋ ! ಇವರ ಪುಸ್ತಕ ಇದೆಯೇ. ನೀನು ಇವನ್ನು "ವಿಷ್ಣು ಸಹಸ್ರನಾಮ" ಪಾರಾಯಣ ಮಾಡುತ್ತೀಯಾ? ಅಂತೂ ನೀನು ಹೇಳಿದುದರಲ್ಲಿ ಸತ್ಯಾಂಶವಿದೆ. ಎಲ್ಲರೂ ನಂಬಬೇಕು. ಆಧಾರಗಳೂ, ಸಾಕ್ಷ್ಯಗಳೂ ಇವೆ.

ಈಶ್ವರ:—ಅಲ್ಲಿ ಹೋಗಬೇಕಾದರೆ ಎಷ್ಟು ಕಷ್ಟವಿದೆ ಗೊತ್ತೇ? ಛಲ,ಬಲ,ಬುದ್ಧಿ.........

ಪೆದಂಬು:— ಛಲ, ಮಣ್ಣು, ಎಲ್ಲವೂ ಬೇಕು. ಅಸ್ನು. ಇವರ ಛಲವೇನು ಮಹಾ "ಛಲದೊಳ್ ಹರ್‌ಹಿಟ್ಲರಂ ಬಲದೊಳ್ ವಿದ್ಯುಚ್ಛಕ್ತಿಯುಂ-ಭೋಜನದೊಳ್ ಬಕಾಸುರಂ॥ ಶಯನದೊಳ್ ಕುಂಭಕರ್ಣಂ-ಸ್ಮರಣದೊಳ್........." ಇವರವೆಲ್ಲಾ ಭಜನೆ ಬೇಕು, ಪಾರ್ಲಿಮೆಂಟಿಗೆ ಮೆಂಬರಾಗಲಿಕ್ಕೆ, ಅಲ್ಲವೇ ಗೋಂಯ್ಬು ಮಾಮ್ಮಾ?

ಮಾಮರು:— ಮಿಸ್ಟರ್ ಪೆದಂಬು ಬಾ ಇಲ್ಲಿ. ಸೆಕಂಡ್ ಕೊಡು ನನಗೆ, ಜಾಣ......

ತಾಯಿ:—ನಾಗು ! ನಿನ್ನ ಮಾಮರ ಕೊನೆಯ ಒಂದು ಹಾಸ್ಯವನ್ನು ಕೇಳು. 1962ರಲ್ಲಿ ಒಮ್ಮೆ ನಾನು ಅವರಲ್ಲಿಗೆ ಹೋದಾಗ ಎರಡು ಜತೆ ನೂತನ ವಧೂವರರು. ಪೂಜ್ಯರ ಕಾಲ್ಪಿಡಿದು, ಆಶೀರ್ವಾದ ಪಡೆಯಲು ಅಲ್ಲಿಗೆ ಬಂದಿದ್ದರು. ಅಂದು ನಾನು ಅಚ್ಚ ಹಳದಿ ಸೀರೆಯನ್ನು ಉಟ್ಟಿದ್ದೆನು. ಮಾಮರು ತೀರ್ಥ ಪ್ರಸಾದಕ್ಕೆ ಓರ್ಡರ್ ಕೊಡಲು ಒಳಗೆ ಹೋಗಿದ್ದರು. ನನ್ನನ್ನು ನಮ್ಮವರೇ ಆಗಿರುವ ಆ ವಧುಗಳು ಸ್ವಾಗತಿಸಿ, ಒಬ್ಬಳು. "ಅಕ್ಕಾ ಈ ಹಳದಿ ಬಣ್ಣ ನಿನಗೇತಕ್ಕೆ ಮೆಚ್ಚಿತು?" ಅಂದಳು. ಇದು ಬುದ್ಧನ ಅಹಿಂಸಾ ತತ್ವದ ಪ್ರತೀಕ ಅಂದೆನು. ಅಷ್ಟರಲ್ಲಿ ಹೊರಗೆ ಬಂದರು ನಿನ್ನ ಮಾಮರು. ಆ ಹುಡುಗಿಯು ಇದನ್ನು ಕೇಳಿಯೇ ಬಿಟ್ಟಳು ಮಾಮರನ್ನು. ಆ ಕ್ಷಣವೇ "ಹೌದು, ಹೌದು, ಬುದ್ಧನು ಒಂದು ತುಂಡನ್ನು ಇವಳಿಗೆ ಕೊಟ್ಟು. ತಾನೊಂದನ್ನು ಉಟ್ಟನು." ಅಂದರು. ನನ್ನನ್ನು ಸುಮ್ಮನೇ ಬಿಟ್ಟರೇ? ಇಲ್ಲ. "ಹೌದೋ ! ಬುದ್ಧನು ಪ್ರಥಮ ತಾನುಟ್ಟನೋ, ನಿನಗೆ ಕೊಟ್ಟನೋ?" ಎಂದರು. ಆಗ ನಾನಂದೆ."ನನಗೆ ಸುರುವಿಗೆ ಕೊಟ್ಟು ಅವ್ಮಾ ! ಎರಡು ಸಾವಿರದ ಐನೂರು (2500) ವರ್ಷಗಳ ಮುಂದೆ ನಾನಿರಲಾರೆ. ನೀನಿರುವಿ ಆಗ ಇದನ್ನುಟ್ಟು ನನ್ನ ಅಹಿಂಸಾ ತತ್ವವನ್ನು ಎಲ್ಲರಿಗೂ ಸಾರಬೇಕು, ಎಂದು ಕಂಬನಿದುಂಬಿ ಅಪ್ಪಣೆಸಿದನು" ಎಂದೆನು. ಎಲ್ಲರೂ ನಗೆಗಡಲಿನಲ್ಲಿ ತೇಲಾಡಿದರು. ಅಷ್ಟರೊಳಗೆ ತಿಂಡಿ ಪ್ಲೇಟುಗಳು ಹೊರ ಬಂದುವು. ಕಾಫಿಯ ಬಸಿಗಳು ಬರುತ್ತಾ ಇದ್ದುವು. ನಾನು "ಕೃಷ್ಣಾರ್ಪಣ" ಎಂದು ತಿನ್ನಲು ಪ್ರಾರಂಭಿಸಿ, "ತಿನ್ನಿರೋ. ಅವರು ನಮ್ಮನ್ನು ಕೇಳಿ ಕೊಳ್ಳುವ ತನಕ ಸುಮ್ಮನಿರಬಾರದು. ಅದೂ ಒಂದು ತರದ ಹಿಂಸೆ, ಮಾತ್ರವಲ್ಲ ಪ್ಲೇಟು ಕಪ್ಪುಗಳಲ್ಲಿ ಅವಶೇಷ ಇಡುವುದೂ ಅದನ್ನು ತೆಗೆಯುವವರಿಗೆ ಹಿಂಸೆ, ಕ್ಲೀನ್ ಮಾಡಿ ಇಡೋಣ" ಎಂದು ಮಾತು ಮುಗಿಸುವಷ್ಟರಲ್ಲಿ "ಬುದ್ಧನು ಧನ್ಯ, ಇಂತಹ ಶಿಷ್ಯೆಯನ್ನು ಪಡೆದುದು ಅವನ ಯಾವುದೋ ಒಂದು ಜನ್ಮದ ಸುಕೃತ ! ಎಷ್ಟು ಶ್ರದ್ಧೆಯಿಂದ ಅಹಿಂಸಾ ವ್ರತವನ್ನು ಆಚರಿಸುತ್ತಾಳೆ. ತಿನ್ನುವುದರಲ್ಲಿ ಮಾತ್ರವೆಂದು ಕಾಣುತ್ತದೆ ಅಲ್ಲವೇ?" ಎಂದರು. ನನ್ನ ಮುಖವನ್ನು ನೋಡಿ ನಿನ್ನ ಮಾಮರು. "ಹೌದು, ನಾವು ಭಿಕ್ಷುಗಳು(ಭಿಕಾರಿಗಳು)" ಎಂದು ಸುಮ್ಮನಾದೆನು. ಇಂತಹ ಸನ್ನಿವೇಶಗಳಲ್ಲಿ ಕಾಣಬೇಕು ಅವರ ರಸಿಕತೆಯ ತನ್ಮಯದ ಮುಗುಳ್ನಗು ಇನ್ನು ಈ ಭಾಗ್ಯ ನಮಗುಂಟೇ ಮಗೂ, ಈ ಜನ್ಮದಲ್ಲಿ?

ಮಗಳು:—ಅಮ್ಮಾ, ಒಂದು ಪ್ರಶ್ನೆ ಕೇಳಲೋ? ಹೆದರಿಕೆಯಾಗುತ್ತದೆ.

ತಾಯಿ:—ಈಗ ಕೇಳು. ಒಂದು ಪ್ರಕರಣ ಮುಗಿದ ಮೇಲಲ್ಲವೇ ಮತ್ತೊಂದು?

ಮಗಳು:—ಮಾಮರಿಗೆ ಸಿಟ್ಟು ಬರುತ್ತಿತ್ತೇ, ದೊಡ್ಡಮ್ಮಾ?

ತಾಯಿ:—ಕೇಳು, ಇದು 1927ರಲ್ಲಿ ನಾನು ಮಂಗಳೂರಿನಿಂದ ಮನೆಗೆ ಬಂದಾಗ ಮಾಮರ ಧರ್ಮಪತ್ನಿ ಕೃಷ್ಣಾಬಾಯಮ್ಮನವರನ್ನು ಕಾಣುವ ಪದ್ಧತಿ. ಅದರಂತೆ ಅವರಲ್ಲಿಗೆ ಹೋದಾಗ, ಮನೆಗೆ ಬಂದ ನನ್ನನ್ನು ಸ್ವಾಗತಿಸಿ ಯೋಗಕ್ಷೇಮಗಳನ್ನು ವಿಚಾರಿಸಿ ಕಾಫಿಯ ಆತಿಥ್ಯವೂ ತಯಾರಾಯಿತು. ಮಾಮರು ಪುಸ್ತಕಗಳನ್ನೂ ಸುತ್ತಲೂ ಹರಡಿ. ಮಧ್ಯದಲ್ಲಿ ಯೋಗಿಯಂತೆ ಇಹದ ಗೋಚರವೇ ಇಲ್ಲದೆ ಇದ್ದರು. ಇಷ್ಟರಲ್ಲಿ ಅವರ ಮಲತಿ. ಬಾಣಸಿಗಿ ಒಡೆಯನಿಗೆ ಕಾಫಿ ತಯಾರಾಗಿದೆ ಎಂದು ಹೇಳಿದರು. ಪೈಗಳು ಆಗ ಪೈಗಳೇ ಆಗಿದ್ದರು. ಹೊಕ್ಕು ಬಳಕೆ ಅಷ್ಟು ಇರಲಿಲ್ಲ. ಒಳಗೆ ಬಂದು ಗಬಕ್ಕನೆ ಕಳ್ಳಬೆಕ್ಕಿನಂತೆ ಬೇಕಾದಷ್ಟನ್ನು ನುಂಗುತ್ತಾ. ನನ್ನನ್ನು ನೋಡಿ "ನೀನ್ನೆ ಬಂದೆಯಾ. ಪ್ರಭುಮನೆಯಲ್ಲಿ ಎಲ್ಲರೂ ಕ್ಷೇಮವೇ?" ಎಂದು ಹಿಂದೆ ನೋಡದೆ ಕೈತೊಳೆದು ಸಿಂಹ ಗವಿಯನ್ನು ಹೊಕ್ಕಿತು. ಆಗ ನಾನು ಅಮ್ಮಾವ್ರನ್ನು ಕುರಿತು 'ಈ ಬರವಣಿಗೆಯಿಂದ ನಿಮ್ಮನ್ನು ಮಾತಾಡಿಸಲು ಅವಕಾಶವಿಲ್ಲ ನಿಮ್ಮವರಿಗೆ. ಯಾವಾಗಲೂ ಹೀಗೆಯೇ?' ಎಂದು ಕೇಳಿದೆನು.

ಅಮ್ಮಾವ್ರು:—ಯಾವಾಗಲೂ ಹೀಗಲ್ಲ. ಈಗ ನಾಲ್ಕೈದು ದಿನಗಳಿಂದ ನಮ್ಮೊಳಗೆ ಮಾತು ಕತೆಯಿಲ್ಲ. ಎಲ್ಲ ಯಾಂತ್ರಿಕ.

ನಾನು:—ಎಲ್ಲ ಯಾಂತ್ರಿಕ! ಅಯ್ಯೋ ದೇವಾ ಅದೇಕೆ?

ಅಮ್ಮಾವ್ರು:— ಅದೇಕೆಂದರೆ ನಿಮ್ಮ ಪೈಗಳಿಗೆ ಕೋಪ, ಸಿಟ್ಟು!

ನಾನು:—ಸಿಟ್ಟಿನ ಪೈಗಳು ನಮಗೆ? ಇರಲಿ. ಆದರೆ ಅವರಿಗೆ ಸಿಟ್ಟು ಬರುವುದಿದೆಯೇ?

ಅಮ್ಮಾವ್ರು:—ಸಿಟ್ಟಿನ ಅವತಾರ, ಮೂರ್ತಿ ಎಂದು ಪ್ರಸಿದ್ಧಿ ಪಡೆದ ವರಮುನಿ ದುರ್ವಾಸ ಜಮದಗ್ನಿಯರು ಈಗ ಇದ್ದಿದ್ದರೆ, ತಮ್ಮ ಸ್ಥಾನವನ್ನು ನಿಮ್ಮ ಪೈಗಳಿಗೆ ಬಿಟ್ಟುಕೊಟ್ಟು, ಶೇಕ್‌ಹ್ಯಾಂಡ್ ಕೊಟ್ಟು ಪಲಾಯನ ಸೂತ್ರವನ್ನು ಪಠಿಸುತ್ತಿದ್ದರು.

ನಾನು:—ಇಷ್ಟು ರಸಿಕತೆಯುಳ್ಳ ನಿಮ್ಮಲ್ಲಿಯೂ ನಮ್ಮ ಪೈಗಳಿಗೆ ಕೋಪವೇ? ಅಂತಹ ಮಹತ್ಕಾರಣವೇನೆಂದು ಕೇಳಲೇ? (ಅಮ್ಮನೂ ಐದಾರು ಭಾಷೆಗಳ ಒಡತಿ.)

ಅಮ್ಮಾವ್ರು:—ಕಾರಣವೇನು? "ಏನಿಲ್ಲ, ಯಾರಿಗೂ ಹೇಳಬೇಡ" ಅಂತಾರಲ್ಲ ಅಷ್ಟೇ ಕೇಳು ಬೇಕಾದರೆ. ನಮ್ಮ ಅಡಿಗೆ ಮಾಯಿ ಬೆಳಿಗ್ಗೆ ಇಲ್ಲಿ ಕೆಲಸ ಹೆಚ್ಚು ಇರುವಾಗ ನೆರೆಮನೆಯಲ್ಲಿ ಚಕ್ಕಂದ ಹೊಡೆದು ಕೂತರೆ ಏನು ಮಾಡಬೇಕು ನೋಡು. ಈ ಮಗುವನ್ನು ಕಳುಹಿಸಿ ಕರೆಸಿದೆ. ಅಮ್ಮ, ಏನು ಲೊಟ್ಟೆ ಹೊಡೆಯುತ್ತಿದ್ದಳು ಅಲ್ಲಿ ಎಂಬದು ಕೇಳಿದಾಗ, ಅಮ್ಮ "ಲೊಟೆ ಲೊಟ್ಟೆ ಮಾತಾಡಲಿಲ್ಲ. ಅಮ್ಮ ಮಾತಾಡಿದ್ದು-"ಯಾವಾಗಲೂ ಸಂಕಟ ಆಗಿದ್ದವರು ಬೇಗ ಸಾಯಬೇಕು" ಎಂದು ಈ ಆರು ವರ್ಷದ ಮಗು ಹೇಳಿತು. ಈ ಮಾತು ನನಗೇ ಅನ್ವಯಿಸುತ್ತದೋ ಇಲ್ಲವೋ ನೀನೇ ಹೇಳು. ನಾನಲ್ಲವೇ ಇಲ್ಲಿ ನರಳುವದು ಹೀಗೆ ಹೇಳಬಹುದೇ ನಮ್ಮಲ್ಲಿಯೇ ಇರುವಾಗ! ಎಂದು ನಿಮ್ಮ ಪೈಗಳನ್ನು ಕೇಳಿದೆನು. ರೋಗಿಗಳಿರುವಲ್ಲಿ ಹಾಗೆ ಹೇಳಬಾರದು ಎಂದು ಅವರಿಗೆ ಬುದ್ಧಿ ಹೇಳದೆ "ಸತ್ಯವಲ್ಲವೇ ಆ ಮಾತು?" ಎಂದರು. ಹಾಗಾದರೆ ನಾನು ಸಾಯಬೇಕು ಎಂದು ಇವರಿಗೂ ಇಚ್ಛೆ ಇದೆ ಎಂದು ಬೇರೆ ಹೇಳಬೇಕೇ. ಏನನ್ನುತ್ತೀಯಾ ನೀನು?

ನಾನು:— ಸತ್ಯವಾದುದು "ಬಾಲಾದಪಿ ಶುಕಾದಪಿ" ಎಂಬ ತತ್ತ್ವವನ್ನು ಅವರು ಪ್ರತಿಪಾದಿಸಿದರು. ಅಷ್ಟೇ! ಅಲ್ಲದೆ...

ಅಮ್ಮಾವ್ರು:—ಅಲ್ಲದೆ ಗಿಲ್ಲದೆ ಬೇಡ ನಿನ್ನದು, ತತ್ವವನ್ನು ಪ್ರತಿಪಾದಿಸಿದರು ಅವರು. ಅದನ್ನು ಅನುಮೋದಿಸುತ್ತೀ ನೀನು. ಅವರ ಮಾತೇ ವೇದವಾಕ್ಯವೆಂದು ನಂಬುವ ನಿಮ್ಮ ಮನೆಯವರಿಗೆ ತಮ್ಮನ್ನು ಮಾರಿಕೊಂಡಿದ್ದಾರೆ. ಆದ್ದರಿಂದ ನಿಮ್ಮಾ ಪೈಗಳು ಅನ್ನುವದು ನಾನು"

ತಾಯಿ:—ಮಗಳೇ ಅದೇ ವರ್ಷ ಅವರು ತಮ್ಮ ಪೂಜ್ಯ ಪತಿಯನ್ನು ಆಜನ್ಮವಿಧುರನನ್ನಾಗಿ ಮಾಡಿ, ತಾನು ಶಾಶ್ವತ ಸುಮಂಗಲಿಯಾಗಿ ಪರಂಧಾಮವನ್ನು ಐದಬೇಕೇ? ನಿನ್ನ ಮಾಯಿಯವರು ಹೀಗೇ ಇದ್ದರು ಎಂದು ಹೋಲಿಸಲು ನಮ್ಮೂರಿನಲ್ಲಿ ಅಂತಹ ರೂಪವತಿ ಹೆಂಗಸು ಇಲ್ಲವಲ್ಲಾ ಎಂದು ದು:ಖವಾಗುತ್ತದೆ. ಅವರ ನಗು ಒಂದು ಅನುಪಮ, ರೂಪ ಅದ್ವಿತೀಯ. ರೋಗ ಭಯಂಕರ. ಗೂರುಬ್ಬಸ. ಇಂತಹ ನಿನ್ನ ಮಾಯಿಯನ್ನು ನೀನು ಚಿತ್ರದಲ್ಲಿಯೇ ನೋಡಮ್ಮ. ಅವರ ಮನೆಯಿಂದ ಹೊರಡುವಾಗ ನಾನು "ಅಕ್ಕಾ, ಇನ್ನು ಮುಂದೆ ನಮ್ಮ ಪೈಗಳು' ಸಿಟ್ಟಿನಿಂದ ಮೌನ ತಾಳಿದಾಗ ನೀವು ಮಾತಾಡಿಸಬೇಕೆಂದು ನಾನು ನಿಮ್ಮನ್ನು ಬೇಡಿಕೊಳ್ಳಲೇ.? ಅಂದೆನು. "ಬೇಡ ಬೇಡ. ಖಾರದ ಸುಣ್ಣಕ್ಕೆ ತಿಳಿ ಬಿಡಬೇಕಾದರೆ ಅದನ್ನು ಕದಡಿಸಬಾರದು. ಇದು ನನ್ನ ಮರ್ಜಿ. ನೀನು ಹೋಗು" ಎಂದರು. ಇದೇ ನಮ್ಮ ಕೊನೆಯ ಮಾತುಗಳು. ಈಗ ಕಣ್ಮರೆಯಾದ ನಿನ್ನ ಮಾವ ಮಾಯಿಯವರ ನೆನಪಾದಾಗ ನಾನು ಬರೆಯಲೂ ಮಾತಾಡಲೂ ಆರೆನು. ಕೋಪ ದು:ಖಗಳಿಗೆ ತಿಳಿಬಿಡಬೇಕಾದರೆ ಕದಡಿಸಬಾರದೆಂಬ ಸಾಯನ್ನನ್ನು ನಿನ್ನ ಮಾಯಿಯವರು ಹೇಳಿದ್ದಾರಲ್ಲವೇ? ಮರೆತೆಯಾ ಅಷ್ಟು ಬೇಗ?

ಮಗಳು:—ದೊಡ್ಡಮ್ಮಾ! ಹಾಗಾದರೆ ಇದಕ್ಕೊಂದು ಉಪಸಂಹಾರ?

ತಾಯಿ:—ಖಂಡಿತ ಬರೆಯುವುದಿಲ್ಲ. ಯಾಕಂದರೆ ಇದನ್ನು ಓದಿದವರು ನಮ್ಮನ್ನು ಬೈದು ಶಪಿಸುವುದು ಸತ್ಯ. ಕಡಾಖಂಡಿತ.

ಮಗಳು:—ಯಾಕಮ್ಮ ಬೈಯುವುದು?

ತಾಯಿ:—ಅಷ್ಟೂ ತಿಳಿಯದೆ ನಿನಗೆ ಮಂಕೇ? ನಿನ್ನ ಗೋವಿಂದ ಮಾಮರ ಪೂಜ್ಯತೆ. ಸರಳತೆ. ಸೌಜನ್ಯ. ಲೋಕಮಾನ್ಯತೆ. ಭಗವದ್ಭಕ್ತಿ. ದೇಶಪ್ರೇಮ ಅನುಪಮವಾದ ಬಹುಭಾಷೆಗಳ ಬಹುಮುಖ ವಿದ್ವತ್ತು ಇವನ್ನರಿಯದವರಾರಮ್ಮಾ? ಇಂತಹ ಮಹಾ ವ್ಯಕ್ತಿಯನ್ನು ಇವರು ವಿಕಟಕವಿ ತೆನ್ನಾಲಿರಾಮಕೃಷ್ಣ. ಚಾರ್ಲಿಚಾಪ್ಲಿನ್ ಮುಂತಾದವರ ಪಂಕ್ತಿಯಲ್ಲಿ ಇರಿಸಿದ್ದಾರೆ. ನಮ್ಮ ಹುಚ್ಚು ಸಾಹಿತ್ಯ ಸಂಘದ ಅಧ್ಯಕ್ಷ. ಮುನ್ನುಡಿಗಾರರನ್ನಾಗಿ ಮಾಡಿದುದು ಕೇವಲ ಇವರ ಸ್ವಕಪೋಲಕಲ್ಪಿತ ಎಂದು ಗಂಡ ಪ್ರಮಾಣ ಮಾಡಲು ಸೇಕಡಾ ನೂರು ಮಂದಿಯೂ ಸಿದ್ಧರೇ? ಆದರೆ ಇದೆಲ್ಲ ನಡೆದದ್ದೇ. ಮುರ್ರೂರು ಮಾತಿಗೂ ಸತ್ಯ. ಇದನ್ನು ಪೂಜ್ಯ ದಿವಂಗತರು ಸಂದರ್ಭಾನುಸಾರ ಆಗಾಗ್ಗೆ ಪುನರಾವರ್ತಿಸಿದುದರಿಂದ." ನಿಮ್ಮ ಈ ಹರಟೆಯು ಒಂದು ದಿನ ವಿಶೇಷವಾದ ಸಾಹಿತ್ಯವಾಗುವುದು" ಎಂಬ ವರಪ್ರದಾನವೇ ಸಾಕ್ಷಿ. ಅವರ ಪೂಜ್ಯತೆ ಪವಿತ್ರತೆಗಳಿಗೂ ಇದೊಂದು ಸಾಕ್ಷಿ.

ಮಗಳು:—ಅಮ್ಮಾ! ಸಾಕ್ಷಿಗಳು ಎರಡು ಬೇಕಲ್ಲವೇ? (Witness) 1.2. ಎಂತ ಪತ್ರಿಕೆಗಳಲ್ಲಿಯೂ ಬರೆಯುತ್ತಾರಲ್ಲ. ವರಕವಿ ಕಾಳಿದಾಸನೂ ದುಷ್ಯಂತ ಶಕುಂತಳೆಯರ ಗಾಂಧರ್ವ ವಿವಾಹಕ್ಕೆ ಇಬ್ಬರು ಸಖಿಯರು ಸಾಕ್ಷಿ.

ತಾಯಿ:—ಹೌದು. ಇಬ್ಬರು ಸಖಿಯರು ಸೂರ್ಯ ಚಂದ್ರರ ಸ್ಥಾನದಲ್ಲಿ-ಆಕಾಶದಲ್ಲಿ ಅಲ್ಲ-ಅಪ್ಪಪ್ಪಾ! ನೀವು ಹುಡುಗಿಯರು ಏನು ಮಾಡಲೂ ಹಿಂಜರಿಯುವವರಲ್ಲ. ಅದಿರಲಿ! ಅದೇ ದುಷ್ಯಂತ ಮಹಾರಾಜನನ್ನು ತನ್ನ ಅರ್ಧಸಿಂಹಾಸನದಲ್ಲಿ

ಕುಳ್ಳಿರಿಸಿ ಸುರ ಸ್ತ್ರೀಯರು ಹೂಮಳೆಗರೆದು, ಗಂಧರ್ವಿಯರು, ಅವನ ಕೀರ್ತಿಯನ್ನು ಹಾಡಿ ಗೌರವಿಸಿದಾಗ, ಇಂದ್ರನ ಮಗ ಜಯಂತನಿಗೆ ಅಸೂಯೆ ಹುಟ್ಟಿತೆಂದು ಅದೇ ನಿನ್ನ ಕಾಳಿದಾಸನು ಹೇಳಿಲ್ಲವೇ? ನಿನ್ನ ತಾತನವರು, ನಿನ್ನ ಮಾಮನವರನ್ನು ಹೊಗಳಿ, ನಮ್ಮನ್ನೆಲ್ಲಾ ಬೈದಾಗ ಯಾರೊಬ್ಬನೂ ಅಸೂಯೆ ಪಡಲಿಲ್ಲ. ಕಾಳಿದಾಸನ ಮಾತಿನ ಬೆಲೆ.........

ಮಗಳು:—ಮಾತಿಗೆ ಬೆಲೆ ಇದ್ದೇ ಇದೆ ದೊಡ್ಡಮ್ಮಾ! ಅದು ವ್ಯಕ್ತಿಯನ್ನು ಹೊಂದಿಕೊಂಡಿದೆ. ಜಯಂತನು ಸ್ವಾರ್ಥಿ, ಆತ್ಮಪೂಜೆ ಬೇಕಿತ್ತವನಿಗೆ, ಅಸೂಯೆ ಹುಟ್ಟಿತು. ಮಾಮರು ಹಾಗೇನಮ್ಮಾ? ಸ್ವಾರ್ಥ, ಮುಖಸ್ತುತಿ, ತನ್ನ ಪೂಜೆ, ಪ್ರಶಂಸೆ, ಕೀರ್ತಿ, ಬಿರುದು ಅವರ ಷಡ್ವೈರಿಗಳು ಇವೇ ಅಲ್ಲವೇ? ಅವರ ಮಾತುಗಳಲ್ಲಿ ಅವರೇ ಹೇಳಿಲ್ಲವೇ? "ನಾನು ಹೇಳುವವನಲ್ಲ ಕೇಳುವವನು, ಮಾಡಿಸುವವನಲ್ಲ, ಮಾಡುವವನು" ಎಂದು ಇನ್ನೊಂದು ಕಡೆ ಆತ್ಮಸುಖಕ್ಕಾಗಿ ತಾನು ಬರೆಯುವುದು!! "ಗಿಳಿವಿಂಡಿನಲ್ಲಿ-"ಒಂದು ಕ್ಷಣ ನೀವು ನನ್ನ ಹೃದಯದಲ್ಲಿ ಕೂತರೆ, ನನ್ನವುಗಳಾಗುವಿರಾ ಏನೋ" ಎಂದು ಒಟ್ಟಾರೆ ಸಣ್ಣ ಕ್ಲಾಸಿನಲ್ಲಿ ಓದುವಾಗ ಸರ್ವನಾಮ ಪ್ರಕರಣದಲ್ಲಿ ನಾನು, ನನ್ನನ್ನು ನನ್ನಿಂದ, ನನಗೆ ಎಂದು ವಿಭಕ್ತಿಯಲ್ಲಿ ಓದಿರಬಹುದು. ಆದ್ದರಿಂದ ಅವರ ನಿರ್ಮಲವಾದ ಮನಸ್ಸು, ಅಭೂತ ಭೂತದಯೆ ಇದರಿಂದ ಅವರ ಸುತ್ತಲಿನ ವಾತಾವರಣವೇ, ನಿಸ್ವಾರ್ಥ, ನಿರ್ಮತ್ಸರ್ಯವಾಗುತ್ತಿತ್ತು ಎಂದು ಹೇಳಬಹುದಲ್ಲವೇನಮ್ಮಾ?

ತಾಯಿ:—ಹೇಳಬಹುದೆಂದೇನು, ಹೇಳಲೇಬೇಕು. ಇದು ನಗ್ನ ಸತ್ಯ. ಯಾಕೆ ಅಂತೀಯಾ ನಮ್ಮ ಹುಚ್ಚು ಸಾಹಿತ್ಯದ ಆ ಸ್ವರ್ಣ ನಿಮಿಷಗಳಲ್ಲಿ, ರಸ ನಿಮಿಷಗಳಲ್ಲಿ ನಮ್ಮಲ್ಲಿಯ ಆಳುಗಳೂ ಕೂಡ ಅವರನ್ನು ಕಂಡ ಕೂಡಲೇ "ಪೈಗುಳು ಬತ್ತೀರ" ಎಂದು ಮುಖ ಕುಂಬಳಕಾಯಿ ಮಾಡುವರು. ಒಮ್ಮೆ ನಾನು ಕೇಳಿಯೇ ಬಿಟ್ಟೆನು. "ಪೈಗಳು ಬಂದರೇನು, ಬಾರದಿದ್ದರೇನು? ನಾವು ಮಾತಾಡುವುದು, ನಗುವುದು ಹಾಡುವುದು, ನಿಮಗೇನು ಗೊತ್ತಾಗುತ್ತದೆ. ನಾವು ಹುಚ್ಚರಂತೆ ಮಾಡುತ್ತೇವೆ ಎಂದೋ, ನಿಮಗೆ ಸಂತೋಷ?" ಎಂದು. "ಹೌದು ಮಕ್ಕಳೆಲ್ಲಾ ಸುತ್ತುಹಾಕಿ, ಮೈಯಿಡೀ ಕಣ್ಣಾಗಿ ಮಾಡಿ "ಗೋಂಯ್ಚು ಮಾಮ್ಮಾ, ಗೋಂಯ್ಚು ಮಾಮ್ಮಾ" ಎಂದು ಕುಣಿಯುವಾಗ, ಎಲ್ಲರ ಮುಖಗಳನ್ನು ನೋಡಿ ಅವರು ನಗುವಾಗ ನಮಗೂ ಸಂತೋಷವಾಗುತ್ತದೆ. ಮತ್ತೆ ಮಕ್ಕಳೆಲ್ಲಾ ಎಲ್ಲಿದ್ದಾವೆ?" ಅಂದರು. ನೆರೆಕರೆಯ ಕೆಲವು ಪ್ರಾಯದವರೂ ಬಂದು ನಮ್ಮ ಸಭೆ ಕೂಟವಲ್ಲಿ ಭಾಗವಹಿಸಿ, ಮಾಮನವರು ಹಿಂತಿರುಗಿದ ಮೇಲೂ ನಿರಕ್ಷರಿಗಳಾಗಿದ್ದರೂ, ತಮ್ಮ ಅನುಭವದ ಬೆಲ್ಲವನ್ನು ನಮ್ಮ ರಸಕ್ಕೆ ಹಾಕಿ, ನಮಗೆ ಮರು ದಿನ ಬುತ್ತಿಕಟ್ಟಿಕೊಟ್ಟು ಹೋಗುವರು. ಒಮ್ಮೆ ಒಬ್ಬ ಹುಡುಗನು ಯಾಕೆ ಸದ್ಯ: ಮದುವೆ ಮಾಡಿಕೊಳ್ಳುವುದಿಲ್ಲವಂತೆ, ಎಂಬ ಪ್ರಶ್ನೆ ಬಂತು. ಆಗ ಒಬ್ಬರು "ಏನಂದರೆ ಅವನಿಗೆ ಬೊಂಬಾಯಿಯಲ್ಲಿ ಕೆಲಸ, ತಿಂಗಳಲ್ಲಿ ಇಪ್ಪತ್ತು ದಿನ ಹೊರಗೆ ಟೂರಂತೆ ಯೌವನಸ್ಥ ಹುಡುಗಿಯನ್ನು ಬಿಟ್ಟು ಹೋದರೆ ಚಿಂತೆ, ಅಲ್ಲದೆ ಹುಡುಗಿಗೆ ಅಡಿಗೆ ಮಾಡಲೂ ಗೊತ್ತಿಲ್ಲವಂತೆ" ಅಂದರು.

ಪೆದಂಬು:—ಕೂಡಲೇ, ಗೋಂಯ್ಚು ಮಾಮ್ಮಾ! ಅವನಿಗೆ ತಲೆಯಿಲ್ಲ. ಇಪ್ಪತ್ತು ಮೂವತ್ತು ವರ್ಷದ ಅಡಿಗೆಯ ಸರ್ವಿಸಾದ, ಒಬ್ಬ ಮುದುಕಿಯನ್ನು ಮದುವೆಯಾದರೆ ಊಟಕ್ಕೂ ತೊಂದರೆಯಿಲ್ಲ. ಟೂರಿಗೆ ನಿಶ್ಚಿಂತೆಯಿಂದ ಹೋಗಬಹುದು. "ಹಳೆ ಕೈ ಊಟಕ್ಕೆ, ಹೊಸ ಕೈ ನೋಟಕ್ಕೆ" ಎಂದು ಗಾದೆಯಿದೆಯಲ್ಲವೇ?

ಮಾಮರು:—ನಿನ್ನ ತಲೆ ಎಲ್ಲಿದೆ ನೋಡು ಪೆದಂಬು!

ಮಗಳು:—ಯಾಕಮ್ಮಾ ಹಾಗೆಂದರು ಮಾಮರು? ಅಲ್ಲಿದ್ದ ಪ್ರಾಯಸ್ಥರಿಗೆ ಬೇಸರ......

ತಾಯಿ:—ಈ ಜೋಟುದ್ದ ಹದಿನಾಲ್ಕು ವರ್ಷದ ಹುಡುಗನು ಏನೆಂದರೂ ಎಲ್ಲರೂ ನಗುವವರೇ! ಮಾಮರಿಗಂತೂ ಅವನನ್ನು ನೋಡಿದಷ್ಟು ತೃಪ್ತಿಯಿಲ್ಲ. ಕಾರಣವಿಷ್ಟೆ! ವಾಕ್ಯ ಮುಗಿಯುವುದರೊಳಗೆ ಏನಾದರೊಂದು ಉತ್ತರ ಇದೆಯೆಂಬುದೇ!

ಮಗಳು:—ದೊಡ್ಡಮ್ಮಾ, ಎಲ್ಲಿದೆ ಇನ್ನೊಂದು ಸಾಕ್ಷಿ?

ತಾಯಿ:—ಅಯ್ಯೋ ಮಲಾಮತಿ! "ಮುಗಿಯದ ಯುದ್ಧ" ಎಂತ ಯಾರದೋ ಒಂದು ಕತೆ ಪುಸ್ತಕದಂತೆ ಆಯಿತಲ್ಲ ನಿನ್ನ ಮುಗಿಯದ ಪ್ರಶ್ನೆ! ಇನ್ನು ಪ್ರಶ್ನೆಗಳನ್ನು ಕೇಳಬೇಡ. ನಿನಗೆ ಬೇಕಾದುದು ಎರಡನೇ ಸಾಕ್ಷಿ ಅಲ್ಲವೇ? ನಿನ್ನ ಮಾಮರು ಕಣ್ಮರೆಯಾಗುವ ಹಿಂದಿನ ದಿನ 5–9–63 ಗುರುವಾರ ಇನ್ನೂ "**Oxygen**" ನಳಿಗೆಯ ದ್ವಾರಾ ಕೊನೆಯುಸಿರುಗಳನ್ನು ಎಳೆಯುತ್ತಿರುವಾಗ ನಾನು ನೋಡಿದ ವೈಶಿಷ್ಟ್ಯವೆಂದರೆ "ಗೋಂಯ್ಚು ಮಾಮ್ಮಾ, ಅಜ್ಜಾ" ಈ ಎರಡೇ ಪದಗಳು ಅವರ ಕಿವಿಯನ್ನು ಮುಟ್ಟುತ್ತಿದ್ದುವು ಎಂಬುದು ಖಾತ್ರಿ. ಆಗ ಮಾತ್ರ ಕಣ್ಣುಗಳು ತುಸು ಬಿರಿದು ತುಟಿಗಳ ಎಡೆಗಡೆಯಿಂದ ಮುಗುಳ್ನಗು-ಮಿಂಚಿನ ಕಿಡಿಯೊಂದು ಮಿಂಚಿ ಮಾಯವಾಗುತ್ತಿತ್ತು. ಈ ಪ್ರಯೋಗವನ್ನು ನಾನು ಐದಾರುಬಾರಿ ನಡೆಸಿದೆನು. ಇವು ಕೇವಲ ಮಕ್ಕಳಲ್ಲಿ ಅತಿ ಚಿಕ್ಕ ಮಗು, ಪಂಡಿತರಲ್ಲಿ ಮಹಾ ಪಂಡಿತ, ಜ್ಞಾನಿಗಳಲ್ಲಿ ದಿವ್ಯಜ್ಞಾನಿ, ದೇಶಪ್ರೇಮಿಗಳಲ್ಲಿ ಅಗ್ರೇಸರ. ಇಂತಹ ಮಹಾನ್ ವ್ಯಕ್ತಿಯು ಹುಚ್ಚರಲ್ಲಿ ತಾಜಾ ಹುಚ್ಚನಾಗುವುದೇನೂ ವಿಶೇಷವಲ್ಲ. ಮಹಾತ್ಮಾಗಾಂಧಿ ಹೀಗಂದಿದ್ದಾರೆ-"ಹುಚ್ಚನಿಂದ ವಿದ್ವಾಂಸರು ಎಷ್ಟೋ ವಿಷಯಗಳನ್ನು ಕಲಿಯುತ್ತಾರೆ. ನಾನೂ ಕಲಿತಿದ್ದೇನೆ" ಎಂದು. ಈಗ ನಾನು ಒಬ್ಬರಿಂದ ಕಲಿತುದನ್ನು ಹೇಳುತ್ತೇನೆ. ಆದರೆ ಇಲ್ಲಿ ಇಬ್ಬರೂ ಹುಚ್ಚರೇ! ನಮ್ಮ ನೆರೆ ಹಳ್ಳಿಯಲ್ಲಿ ಒಬ್ಬ ದೊಡ್ಡ ಗುತ್ತೆದಾರ ಭೈರಣ್ಣ ಸೆಟ್ಟಿ ಎಂಬವರಿದ್ದರು. ಅವರು ಬಡವರ ಬಂಧು. ತನ್ನ ಮನೆಯಲ್ಲಿ ಮಗು ಹುಟ್ಟಿದ ಹಬ್ಬ, ಸಂಕ್ರಾಂತಿ, ಅಷ್ಟಮಿ, ಸತ್ಯನಾರಾಯಣ ಪೂಜೆ ಇತ್ಯಾದಿ ಸಂದರ್ಭದಲ್ಲಿ ಒಕ್ಕಲುಗಳಿಗೆ ಮಾತ್ರವಲ್ಲ, ಇಡೀ ಹಳ್ಳಿಗೇನೇ ಬೈರಣ್ಣನವರಲ್ಲಿ ಪರಮಾನ್ನ. ಬಡಿಸುವವರ ಹಿಂದೆಯೇ ತಾನೂ, ಹೋಗುತ್ತ ಎಲ್ಲರಿಗೂ ಒತ್ತಾಯಿಸಿ, ಪಾಯಸ, ಲಾಡುಗಳನ್ನು ತಿನ್ನಿಸುವರು. ಸಿಹಿ ತಿಂಡಿ ಅಂದರೆ ಬೆಲ್ಲ ಸಕ್ಕರೆಗಳ

ಪಾಕವೇ! ಆಗ ಬೇಕವರಿಗೆ. ಯಾಕೆಂದರೆ ಬಡವರು ಸಿಹಿ ತಿನ್ನಬೇಕು, ಸಂತೋಷಪಡಬೇಕು. ನನ್ನ ಮನೆ ಬೆಳಗಲು ಬಡವರ ತೃಪ್ತಿಯೇ ದೇವರು ಬೆಳಗುವ ಜ್ಯೋತಿ ಎಂದು ನಂಬಿದ್ದರು. ಭೂಮಿಯ ಋಣ ತೀರಿತು. ನಶ್ವರ ದೇಹವನ್ನು ಬಿಟ್ಟರು ಬೈರಣ್ಣ ನವರು. ರಾಜನಿಂದ ರಂಕನವರೆಗೆ ಅವನ ಕರೆಯೋಲೆಗೆ "Sorry" ಎಂದವರಿದ್ದಾರೆಯೇ? ಬೈರಣ್ಣನವರು ವೈಕುಂಠಕ್ಕೆ ಹೊ ಗಬೇಕಾದರೆ, ಇಲ್ಲಿ ವೈಕುಂಠ ಸಮಾರಾಧನೆ ಮಾಡಬೇಕಲ್ಲವೇ? ಮಾಡಿದರೆನ್ನಿ. ಅವರ ಪ್ರೀತಿಯಿಂದ ಒತ್ತಾಯಿಸಿ ತಿನ್ನಿಸುವವರಿದ್ದಾ ರೆಯೇ? ಬೇಡ. ಪಾಯಸವಾದರೋ ಸಪ್ಪೆ. ಇದನ್ನೆಲ್ಲ ನೆನಸಿ ಕೆಳಗಿನ ಬೈಲು ಸೋಮಪ್ಪ ಅಣ್ಣರಿಗೆ ದು:ಖ ತಡೆಯಲಾಗಲಿಲ್ಲ. ಪಾಪ! ಬಿಕ್ಕಿ ಬಿಕ್ಕಿ "ಅಣ್ಣೆರಿತ್ತಿಂಡ ಈ ಪಾಯ್ಸ ಇಂಚನಾ! ತಿನ್ನ...............ಪಾ.............ತಿನ್ನ... (ಅಣ್ಣರಿದ್ದರೆ ಈ ಪಾಯಸ ಈ ರೀತಿದ್ದಾಗಿರುತ್ತಿತ್ತೇ? ತಿನ್ನು ತಿನ್ನು ಎಂದು ಒತ್ತಾಯಿಸುತ್ತಿದ್ದರು.) ಎಂದು ಅತ್ತನಂತೆ.

ನಾನು ಈಗ ಸೋಂಪಣ್ಣನಾಗಿದ್ದೇನೆ. ನಮ್ಮ ಈ ರಸಾಯನವು ಸಪ್ಪೆಯಾಗಿದೆ. ನಿನ್ನ ಪೂಜ್ಯ ಮಾಮನವರು ನಮ್ಮ ಪಾಲಿಗೆ ಪರಮಪೂಜ್ಯರೇ. ದೊಡ್ಡ ಸೊನ್ನೆಯೇ ಆಗಿದ್ದಾರೆ. ಅವರು ಇದ್ದಿದ್ದರೆ ವಿಷಯಗಳನ್ನು ಸರಿಯಾಗಿ ತಿದ್ದಿ, ಬಿಟ್ಟುಹೋ ದುದನ್ನು ಸೇರಿಸುವಂತ ತಿಥಿವಾರ, ನಕ್ಷತ್ರ, ದಿನಾಂಕ ಆ ಇಸವಿ ಸಂವತ್ಸರಗಳನ್ನು "Accurate" ಮಾಡಿಕೊಡುತ್ತಿದ್ದರು. ಬಿಳಿಮೀಸೆ. ಕಚ್ಚಿಕೊಂಡು ಮುಗುಳ್ನಗು ಸೂಸುತ್ತಿದ್ದರು. ಇದನ್ನೆಲ್ಲ ಮರೆಯುವದೆಂತು. ನಾವು ತಮಾಷೆಗಾಗಿ, ಅವರ ಬರೆಹ ಗಳ ಅನುಕರಣೆ ಮಾಡಿದಾಗ "ಇದೆಲ್ಲ ನನ್ನ ಪೂಜೆ ಎಂದರು................

ಮಗಳೇ ಕೇಳು ವರಕವಿಗಳಾದ ಪಂಪ. ರನ್ನಜನ್ನರ ಕಾವ್ಯಗಳೆಂಬ ಬೇರುಗಳನ್ನು ಗುದ್ದಿ ಕಷಾಯಮಾಡಿ ಅದ್ವಿತೀಯ ನಾಟಕಕಾರರಾದ ಕಾಳಿದಾಸ, ಉಮರಖಯ್ಯಾಮ. ಶೇಕ್ಸಪಿಯರ ಇವರ ನಾಟಕಗಳೆಂಬ ವನಸ್ಪತಿಯ ಸೊಪ್ಪನ್ನು ಜಜ್ಜಿ ರಸ ಹಿಂಡಿ ಪ್ರಾಚೀನ ಶಾಸನ ಸೋಧನೆಗಳ ಮೇಲ್ಪುಡಿಯಿಂದ ಬಹು ಭಾಷೆಗಳ ಕಲ್ಕನ್ನು ಕಲ್ಕ ಕಡೆದು ತಯಾರಿಸಿ, ದೇಶಪ್ರೇಮದ ಸುಗಂಧವನ್ನು ಅರೆದು ಭಗವದ್ಭಕ್ತಿಯ ಸುವರ್ಣ ಹುಡಿ ಮಿಶ್ರವಾದ ಈ ಗೋವಿಂದ ಪ್ರಾಶವನ್ನು ಒಂದೇ ಒಂದು ಚಮಚೆಯನ್ನು ಸೇವಿಸಿದರೆ ಚ್ಯವನ ಪ್ರಾಶದಿಂದ ತಾರುಣ್ಯ, ಗೋವಿಂದ ಪ್ರಾಶದಿಂದ ಅಮರತ್ವ ನಿಸ್ಸಂದೇಹ.

ಮಗಳು:—ಅಮ್ಮಾ! ಒಂದೇ ಒಂದು ಮಾತು, ಪ್ರಶ್ನೆಯಲ್ಲ. ಈಗ ನೀನು ಹೇಳಿದ್ದು ಅರ್ಥವಾಗಲಿಲ್ಲ.

ತಾಯಿ:—ಹೇಗೆ ಅರ್ಥವಾಗಗೇಕು, ಪೆದ್ದೇ! ನೀನು ಆ ವಾತಾವರಣದಲ್ಲಿ ಹುಟ್ಟುತ್ತಿದ್ದರೆ ಅರ್ಥವಾಗುತ್ತಿತ್ತು. ಈ ಅನರ್ಥ ವಾತಾವರಣದಲ್ಲಿ ಹುಟ್ಟಿದ ಯಾರಿಗೂ ಅರ್ಥವಾಗಲಿಕ್ಕಿಲ್ಲ, ನಮ್ಮ ಭಾಷೆ. ಇನ್ನು ಮಾಮರ ಭಾಷೆಯೂ ಹಾಗೆ, ಅಡಿ ಬರೆಹ ಕೊಟ್ಟೂ ಅರ್ಥವಾಗುವುದಿಲ್ಲವೆಂದು ನಿನ್ನಂತೆಯೇ ಹೇಳುವವರದೇ ಹೆಚ್ಚು ಸಂಖ್ಯೆ. ಅವರ ದೇಶ ಪ್ರೇಮದ ಆಳ, ಭೂತ ದಯೆಯ ಔನತ್ಯ. ಅವರ ವಿಷಯಗಳ ಮನನ ಮತ್ತು ಜ್ಞಾಪಕ ಶಕ್ತಿ, ಇವೆಲ್ಲ ಅವರ ಕವನ. ಚತುರ್ದಶಪದಿಗಳಿಂದ (Sonnet) ತಿಳಿಯುತ್ತದೆ. "ಪರಮಾತ್ಮನಾರೆಂದು" ಎಂಬ ಹಾಡಿನಿಂದ ಇಡೀ ವಿಶ್ವದಲ್ಲಿಯೇ ವಿಶ್ವನಾಥನನ್ನು ಕಾಣುವ ಭಕ್ತಿ ಇವುಗಳಿಂದ ಯಾವುದಾದರೊಂದನ್ನು ಸಾಧಿಸಿದವನು ಅಮರನಾಗುವುದೇನು ಮಹಾ! ಅವರ ದೇಶಪ್ರೇಮದ ಒಂದು ನಿದರ್ಶನವನ್ನು ಹೇಳು ತ್ತೇನೆ. ನಾನೊಮ್ಮೆ ಅವರನ್ನು ಕಾಣಲು ಹೋದಾಗ ಕಣ್ಣು ಕೆಂಪಗೆ ಮಾಡಿ ಕೂತಿದ್ದರು. ಏನೂ ಬರವಣಿಗೆ ಸಾಗುವುದಿಲ್ಲವೆಂದು ಬೇಸರಿಸಿದರು. ಕಾರಣವನ್ನು ಕೇಳಿದಾಗ "ತಲೆಗೆ ಎಣ್ಣೆ ಇಲ್ಲದೆ" ಅಂದರು.

ನಾನು:—ಯಾವ ಎಣ್ಣೆ, ಎಳ್ಳೆಣ್ಣೆಯೇ, ಭೃಂಗಾಮಲಕವೇ. ಸಾಯ್ಬೇವಿಯೇ ಮಂಜಿಷ್ಠಾದಿ.........

ಮಾಮರು:—ಎಣ್ಣೆ ಇದೆ. ತಲೆಗಿಟ್ಟರೆ ಸೀಗೆಬೇಡವೇ? ನಮ್ಮ ವರ್ತನೆಯ ಅಂಗಡಿಯಲ್ಲಿಲ್ಲವಂತೆ.

ನಾನು:—ಅಯ್ಯೋ. ನನ್ನೊಡನೆ ಹೇಳಲಿಲ್ಲವೇಕೆ? ನನಗೆ "ಹೋಲ್ ಸೇಲ್ ಏಜನ್ಸಿಯಿದೆ "ಓಲ್ ಇಂಡಿಯಾ"ದಲ್ಲಿ ಇಲ್ಲಿಯೇ ಗುಡ್ಡೆಕೇರಿಯಲ್ಲಿ ಸಿಕ್ಕುತ್ತದೆ. ಸೇರಿಗೆ ಒಂದೂವರೆ ರೂಪಾಯಿ. ನೊರೆಕಾಯಿ, ಸೀಗೆ, ಪುರುಗುಸು ಸೊಪ್ಪು ಎಲ್ಲಾ ಬೆರ ಸಿದ ರೆಡಿಮೇಡ್.

ಮಾಮರು:—ನಾಳೆ ತರಿಸಿ ಕಳುಹಿಸುತ್ತೀಯಾ? ದುಡ್ಡು ತೆಗೆದುಕೊಳ್ಳಬೇಕು.

ನಾನು:—ದುಡ್ಡು ಕೊಡದೆ ಅವರು ಕೊಡುವುದೇ ಇಲ್ಲ. ನನಗೆ ಕಮಿಶ್ಶನ್, ಡಿಸ್ಕೌಂಟ್, ಲಾಭ ನಷ್ಟ ಒಂದೂ ಬೇಡ

ಮಾಮರು:—ಯಾಕೆ ಬೇಡ ತೆಗೆದುಕೋ ಸೇಕಡಾ ಎಷ್ಟೆಂದು.

ನಾನು:—ಹಾಗೆ ವ್ಯಾಪಾರ ಇಲ್ಲಿ ಮಾಡಿದರೆ ನನಗೆ ಸೋಲು. ಇಲ್ಲವಾದರೆ ಸೀಗೆ ಚೆನ್ನಾಗಿದೆಯೇ ಎಂದು ಕೇಳಲು ಒಮ್ಮೆ ಮುಗಿಯಿತೇ ಎಂದು ಕೇಳಲು ಮತ್ತೊಮ್ಮೆ. ಎಷ್ಟು ತರಬೇಕು ಎಂದು ಕೇಳಲು ಮಗದೊಮ್ಮೆ. ಹೀಗೆ ಆಗಾಗ್ಗೆ ಬಂದು ತೀರ್ಥಪ್ರಸಾದ ತೆಗೆದುಕೊಂಡು.........

ಮಾಮರು:—ಓಹೋ! ಹಾಗೆಯೇ! ಈಗ ನಾನು ಪೆದಂಬು ಮಾತಾಡಬೇಕಾಗಿದೆ, ಹಾಗಾದರೆ ನಮ್ಮೊಳಗೆ "ಭಾಷೆ" ಬೇಡ. (ಅಪೂರ್ವ ನಗುವಿನ ಮಿಂಚು)

ತಾಯಿ:—ಮಗೂ! ಕಣ್ಣೂರಿ ಸಹಿಸಬಲ್ಲರು. ಸಾಬೂನು ಮೈಗೆ ಹಚ್ಚಲೊಲ್ಲರು. ಅರೆಬಿದ್ದೆ ಬಟ್ಟೆಯನ್ನಾದರೂ ಉಪ ಯೋಗಿಸುವರು. ಮಿಲ್ಲು ಬಟ್ಟೆ ಮುಟ್ಟಲಾರರು. ಖದ್ದರೇ ಬೇಕು. "ಸ್ವಾತಂತ್ರ್ಯ ಸಿಕ್ಕಿತಲ್ಲವೇ. ಇನ್ನೇಕೆ ನಮಗೆ ಈ ವ್ರತಗಳು ಅಂದರೆ ರೇಗುವರು. ಮಗೂ. ಸಾಕಮ್ಮ! ನಿನ್ನ ಮಾಮರ ಅಪಾರ ಮಹಿಮೆಯನ್ನು ಚುಟುಕಾಗಿ ಹೇಳಲೇ. ಪ್ರಾತ:ಕಾಲ. ಸಂಧ್ಯಾ ಕಾಲ, ಎರಡು ತಣ್ಣೀರು ಸ್ನಾನ. ಮಳೆ, ಚಳಿ. ಸೆಖೆ. ಎಂಬುದಿಲ್ಲ. ದೀಪಾವಳಿಯೊಂದು ಬಿಸಿನೀರು ಮುಟ್ಟಿದ್ದಿಲ್ಲ. ಸ್ನಾನವಾದೊ ಡನೆ ಒಂದು ಗಂಟೆ ಸ್ತೋತ್ರ ಪಠಣ. ದೀಪ ಬೆಳಗಿತೆಂದರೆ ತಿರುಗಿ ಸ್ತೋತ್ರಪ್ರಾರಂಭ. ರಾತ್ರಿ ನಿದ್ರೆ ಬರಬೇಕಾದರೆ ವಿಷ್ಣು ಸಹಸ್ರ

ಸ್ವತಂತ್ರವಾಗಬೇಕು" ಎಂಬುದೊಂದೇ ವೇಣುವಿನ ಉತ್ಕಟೇಚ್ಛೆ. ಸ್ವಾತಂತ್ರ್ಯ ಬಂದ ಮೇಲೆ ಪರಿಸ್ಥಿತಿ ವಿಷಮವೇ ಆಗಬಹುದು. ತ್ಯಾಗಿಗಳ ತ್ಯಾಗದ ಫಲವನ್ನು ಕಬಳಿಸಲು ಗೋಮುಖವ್ಯಾಘ್ರ ಅಧಿಕಾರಲಾಲಸ ಸುಖಲೋಲುಪ ಆಡಂಬರ ಪ್ರಿಯ ಸ್ವಜನ ಪಕ್ಷ ಪಾತಿ ಗುಂಪು ಕಟ್ಟುವ ಮನೋಭಾವದ ಆಷಾಢಭೂತಿಗಳು ಹುಟ್ಟಿಕೊಳ್ಳಬಹುದು. ಆದರೂ ಮೊದಲು ಬಿಡುಗಡೆಯಾಗಬೇಕು, ಎಂಬುದು ವೇಣುವಿನ ಮಹಾತ್ವಾಕಾಂಕ್ಷೆ. ಆ ಆಸೆಗಾಗಿ ಅವನು ಪ್ರಾಣವನ್ನು ಕೊಡುತ್ತಾನೆ.

ಇನ್ನುಳಿದ ಪಾತ್ರಗಳೆಂದರೆ ಜಾಹ್ನವಿ: ಆಕೆ ಏನೂ ಅರಿಯದ ಮುಗ್ಧ ಪ್ರೇಮ ಮೂರ್ತಿ. ವೇಣುವಿಲ್ಲದ ಜಗತ್ತನ್ನು ಊಹಿಸಿಕೊಳ್ಳಲೂ ಸಹ ಆಕೆಗೆ ಕಷ್ಟ. ವೇಣು ಸತ್ತ ದು:ಖವನ್ನು ಸಹಿಸಲಾಗದೆ ಆಕೆ ಭಾವಿಗೆ ಬಿದ್ದು ಸಾಯುತ್ತಾಳೆ.

ಸುಪರಿಂಟೆಂಡೆಂಟ್ ಸಾವೇಜ್ (Savage) ಹೆಸರಿಗೆ ತಕ್ಕಂತೆ ನಿಜವಾಗಿ ರಾಕ್ಷಸ. ಅವನು ಭಾರತವನ್ನು ಆಳಿದ ನೀಚ ಆಂಗ್ಲರ ಪ್ರತೀಕ. ಅವನಲ್ಲಿ ಬರಿಯ ದುರ್ಗುಣಗಳೇ ಹೊರತು ಒಂದಾದರೂ ಸುಗುಣವಿಲ್ಲ. ಆಂಗ್ಲರು ಇರುವುದೇ ಬಣ್ಣ ದವರನ್ನು ಆಳಲಿಕ್ಕೆ, ಅದಕ್ಕಾಗಿ ಯಾವ ಅಧರ್ಮವನ್ನು ಬೇಕಾದರೂ ಮಾಡಬಹುದು. ಧರ್ಮ, ಅಧರ್ಮ, ದೇವರು ನೀತಿ ಎಲ್ಲ ಕೈಯಲ್ಲಾಗದವರ ವೇದಾಂತ. ಲೋಕದಲ್ಲಿ ಅಧರ್ಮವೇ ಗೆಲ್ಲುತ್ತದೆ ಎಂಬುದೇ ಅವನ ಸಿದ್ಧಾಂತ. ತಾವು ನಾಶ ಮಾಡಲು ಬಂದಿರುವ ವೇಣುಗೋಪಾಲನ ಮನೆಯಲ್ಲಿ ಹಾಲನ್ನು ಕುಡಿಯಲು ರಾಮುದಯಾಲ ತಿರಸ್ಕರಿಸಿದರೂ, ಸುಪರಿಂಟೆಂಡೆಂಟ್ "ಹಾಲು ಚೆನ್ನಾಗಿದೆ" ಎಂದು ಕುಡಿದು, ಕೊನೆಗೆ ಅದೇ ಮನೆಯಲ್ಲಿ ವೇಣುವನ್ನು ಕೊಲ್ಲಿಸುತ್ತಾನೆ. "ವೇಣುವಿನ ತಾಯಿ ತನ್ನ ತಾಯ ಜ್ಞಾಪ ಕವನ್ನು ತರುತ್ತಾಳೆ" ಎಂದು ಹೇಳಿಕೊಂಡೇ ಆ ನೀಚನು ಆಕೆಯನ್ನು ಕೊಲ್ಲಲು ಪಿಸ್ತೂಲು ಎತ್ತುತ್ತಾನೆ. ಆಕೆಯನ್ನು ಚಿತ್ರ ಹಿಂಸೆಗೆ ಒಳಪಡಿಸುತ್ತಾನೆ. ಅವನು ಯಾವ ಸುಳ್ಳು ಹೇಳಲಿಕ್ಕೂ ಹಿಂತೆಗೆಯುವುದಿಲ್ಲ. ಜಾಹ್ನವಿಯಂತಹ ಕೃತ್ರಿಮವರಿಯದ ಹುಡುಗಿಗೆ, ತನ್ನ ಮಗಳ ಆಣೆಯಿಟ್ಟು ವೇಣುವನ್ನು ಕೊಲ್ಲುವದಿಲ್ಲವೆಂದು ವಾಗ್ದಾನಮಾಡಿ ಅನಂತರ ಅವನನ್ನು ಕೊಲ್ಲಿಸುತ್ತಾನೆ. ಸುಪರಿಂಟೆಂಡೆಂಟನಿಗೆ ಕಾನೂನು, ಧರ್ಮ, ದಯೆ, ನಿಯಮ ಯಾವುದೂ ಇಲ್ಲ. ಗಂಗಾಧರನನ್ನೂ ವೇಣುಗೋಪಾಲನನ್ನೂ ದಸ್ತ ಗಿರಿ ಮಾತ್ರ ಮಾಡಲು ಅವನಿಗೆ ಅಧಿಕಾರವಿದ್ದಿತಾದರೂ ಅವರಿಬ್ಬರನ್ನೂ ಗುಂಡಿಟ್ಟು ಕೊಲ್ಲಿಸುತ್ತಾನೆ. "ಭಾರತದಲ್ಲಿರುವ ಪ್ರತಿಯೊಬ್ಬ ಬೆಳ್ಳನೂ ಸಾರ್ವಭೌಮ. ಅವನಿಗೆ ಮನಸ್ಸು ಬಂದಂತೆ ಅವನು ಮಾಡಬಹುದು" ಎಂಬುದೇ ಸುಪರಿಂಟೆಂಡೆಂಟನ ಸಿದ್ಧಾಂತ. ಚರ್ಚಿಲ್‌ರಿಗಿದ್ದಂತೆ "ಬೆಳ್ಳರು ಎಂದಿಗೂ ಭಾರತದಲ್ಲಿಯೇ ಇರುತ್ತಾರೆ" ಎಂಬುದು ಅವನ ನಂಬಿಕೆ.

ಅಸಿಸ್ಟೆಂಟ್ ಸುಪರಿಂಟೆಂಡೆಂಟನು ಯೋಗ್ಯ, ಸುಸಂಸ್ಕೃತ, ದೈವಭಕ್ತ, ಅನ್ಯಾಯಮಾಡಲು ಸ್ವಲ್ಪವೂ ಒಪ್ಪನು. ಅವ ನು ಧೀರ. ತನ್ನ ಪ್ರಾಣಾಪಾಯವನ್ನೂ ಲಕ್ಷಿಸದೆ ಸುಪರಿಂಟೆಂಡೆಂಟನ ಪ್ರಾಣವನ್ನು ಅನೇಕ ಸಲ ಉಳಿಸಿದ್ದಾನೆ. ಅವನೂ ಉ ತ್ಕಟ ಸ್ವಾತಂತ್ರ್ಯ ಪ್ರೇಮಿ. ಆದರೆ ಸರ್ಕಾರದ ಉಪ್ಪನ್ನು ತಿನ್ನುತ್ತಿರುವುದರಿಂದ ಸರ್ಕಾರಕ್ಕೇ ತುಂಬ ನಿಷ್ಠ. ಆದರೆ ಕ್ರೂರಿಯೂ ಅಸಂಭಾವಿತನೂ ಉದ್ಧತನೂ ಆದ ಬೆಳ್ಳ ಸುಪರಿಂಟೆಂಡೆಂಟನಲ್ಲಿ ಆತನಿಗೆ ಪೂರ್ಣ ತಿರಸ್ಕಾರ. ಅದನ್ನು ಅವನು ತೋರಿಸಿಯೂ ತೋರಿಸುತ್ತಾನೆ. ಅವನು ಹಾಸ್ಯಪ್ರಿಯನೂ ಹೌದು. ವೇಣುವನ್ನು ಕೊಂದ ಹೆಡ್‌ಕಾನ್‌ಸ್ಟೆಬಲ್ ಗುಲಾಮಅಲಿ (ಅವನು ಕಾಂಗ್ರೆ ಸ್ಸಿನವರನ್ನು ಬೆಳ್ಳರು ದ್ವೇಷಿಸುತ್ತಿದ್ದುದಕ್ಕಿಂತ ಹೆಚ್ಚಾಗಿ ದ್ವೇಷಿಸುತ್ತಿದ್ದನು) ಕಾರಿನ ಅಪಘಾತದಲ್ಲಿ ಸತ್ತನೆಂದು ತಿಳಿದಾಗ ರಾಮು ದಯಾಲನು "ಏನು ಸತ್ತನೇ? ಅಯ್ಯೋ, ಒಂದೇ ಒಂದು ಗಳಿಗೆ ಮುಂಚೆ ನಾವು ಕಾರಿನಲ್ಲಿ ಹೋಗುವಾಗ ಕೊತ್ವಾಲನು ಅವ ನನ್ನು ಒಮ್ಮೆಗೆ ಇನ್‌ಸ್ಪೆಕ್ಟರ್ ಪದವಿಗೆ ಏರಿಸಿದ್ದರಲ್ಲ" ಎನ್ನುತ್ತಾನೆ. ಎಲ್ಲ ಸುಗುಣಗಳನ್ನು ನಾಶಮಾಡುವ ಪರಸೇವೆಯಲ್ಲಿ ಕೆಲವು ದೇಶಭಕ್ತ ಪೋಲೀಸ್ ಅಧಿಕಾರಿಗಳು ಇದ್ದಿದ್ದರೆ, ರಾಮುದಯಾಲ ಅವರ ಪ್ರತೀಕವೆನ್ನಬಹುದು.

ಹೀಗೆ ಈ ನಾಟಕದಲ್ಲಿ ಪಾತ್ರಗಳ ರಚನೆ ನಿರ್ದುಷ್ಟವಾಗಿ ಪರಿಪೂರ್ಣವಾಗಿದೆ. ಸಾವೇಜ್ ಎಂಬ ಹೆಸರು ಸೂಪ ರಿಂಟೆಂಡೆಂಟನಿಗೆ ಅನುಗುಣವಾಗಿದೆ. ತಾಯಿ ಯಶೋದೆ; ಮಗ ವೇಣುಗೋಪಾಲ; ಜಾಹ್ನವಿ ಹಾಡುವಾಗಲೆಲ್ಲ "ಯಶೋದೆಯು ಕಂದ, ರಾಧೆಯು ಗೋವಿಂದ, ಮಧುರೆಗೆಂದು ನೀಸರಿವನ್ನ, ನಾಡಿದೆ ಮರಳುವೆನೆಂದೆನ್ನ ಬಂದೆಯಾತುರುಗಳ ಮೇಸಿ ಗೋವಿಂದ" ಎಂದು ಕೃಷ್ಣನನ್ನು ಕುರಿತೇ ಹಾಡುತ್ತಾಳೆ.

### ಈ ನಾಟಕದ ಸಂವಿಧಾನ

ಇದು ಭಾರತದ ಜಗತ್ಪ್ರಸಿದ್ಧ ಸ್ವಾತಂತ್ರ್ಯದ ಹೋರಾಟಕ್ಕೆ ಅರ್ಹವಾದ ಕೃತಿ. ಇದರ ಹೊರ ಆಕಾರ ಏಕಾಂಕ ನಾ ಟಕದಂತೆ ಕಂಡರೂ ಇದು ಮುಖ್ಯವಾಗಿ ಕಾವ್ಯ, ವಚನ ಕಾವ್ಯ. ಗೋವಿಂದ ಪೈ, ಪ್ರಮುಖವಾಗಿ ಕವಿ. ಇದರ ಸಂವಿಧಾನದಲ್ಲಿ ಅಷ್ಟೊಂದು ಕ್ಲಿಷ್ಟತೆಯಿಲ್ಲ. ದೇವರಿಗೂ ಯಮನಿಗೂ ಸಹ ಹೆದರದೆ, ಹಿರಣ್ಯ ಕಶಿಪುವಿನಂತೆ ತನ್ನ ಬಿಳಿದೊಗಲಿನ ಮತ್ತು ಆಯುಧಗಳ ಕಾರಣದಿಂದ ತಾನೇ ಸರ್ವೇಶ್ವರನೆಂದು ಭಾವಿಸಿ, ಭಾರತೀಯರನ್ನು ಹುಳಗಳಂತೆ ಆಟಕ್ಕಾಗಿ ಕೊಲ್ಲಿಸುತ್ತಿದ್ದ ಕೊಬ್ಬಿದ ಹಂದಿಯಂತಿದ್ದ ಒಬ್ಬ ಉದ್ಧತ ಬೆಳ್ಳ, ತಾನು, ಇಬ್ಬರು ಭಾರತೀಯ ಯುವಕರನ್ನು ಅನ್ಯಾಯವಾಗಿ ಕೊಲ್ಲಿಸಿ ಅವರಿಂದ ಸ್ವಾಧೀ ನಪಡಿಸಿಕೊಂಡ ಪಿಸ್ತೂಲಿನಿಂದ ಆಕಸ್ಮಿಕ ಮರಣವನ್ನು ಹೊಂದುತ್ತಾನೆ. ಅದು ವಿಧಿಯ ಒಂದು ವಿಕಟ ಹಾಸ್ಯ.

ಗೆಲುವನಕ ನುಣುಚಿ ತಲೆ ಮರಸಿಹನೆ ಜಾಣ
ಹೇಡಿಯವನಲ್ಲ ರಣಕಲೆಯೊಳತಿಧೂರ್ತ
ಅಟ್ಟಿಬಹ ಹಗೆಯನವ ನೊರಗಿಸದೆ ಮಾಣ
ಸಾಯೆ, ಸೆರೆಯಲಿ ಕೊಳೆಯೆ ಬಾಳಾಯ್ತು ವ್ಯರ್ಥ

ಎಂದು ವೇಣು ಹಾಡಿದ್ದರೂ ಆ ಕಾರ್ಯವನ್ನು ಅವನು ಮಾಡಲಾರದೆ ಹೋದ. ನಿರ್ಜೀವವಾದ ಅವನ ಪಿಸ್ತೂಲು ಅವನಿಗಾಗಿ ಸೇಡು ತೀರಿಸಿಕೊಂಡಿತು. ವೇಣುವಿನ ತಾಯಿ, ಕೋಪದಿಂದಲೂ ಉದ್ವೇಗದಿಂದಲೂ ಹೇಳಿದ "ನನ್ನ ಮಗನ ಕೊಲೆಯನ್ನು ಮುಟ್ಟಿದವ ನಾಳೆಯ ನೇಸರನ್ನು ನೋಡದೆ ಹೋಗುವ" ಎಂಬ ಉದ್ವೇಶರಹಿತವಾದ ಶಾಪ, ನಿಜವೇ ಆಗಿಹೋಗುತ್ತದೆ. ಸೂಪರಿಂಟೆಂಡೆಂಟರನ್ನು ಕೊಂದ ಗುಂಡಿನ ಸದ್ದು ಕೇಳಿ ಬೆಚ್ಚಿಬಿದ್ದ ಡ್ರೈವರನ ಕೈತಪ್ಪಿ ಕಾರು ಒಂದು ಮರಕ್ಕೆ ಢಿಕ್ಕಿ ಹೊಡೆದು ಮುಂದಲ ಗಾಜಿನ ತೂತಿನಲ್ಲಿ ತಲೆಸಿಕ್ಕಿ ಗುಲಾಮ್ ಆಲಿ ಸಾಯುತ್ತಾನೆ. ಹೀಗೆ ವೇಣುಗೋಪಾಲನನ್ನು ಕೊಂದವನೂ ಕೊಲ್ಲಿಸಿದವನೂ ಒಂದು ಆಕಸ್ಮಿಕದಿಂದ ಮರುದಿನದ ನೇಸರನ್ನು ನೋಡುವುದಿಲ್ಲ. ಇವರಲ್ಲಿ ವಿಧಿಯ ಕೈವಾಡವಿರುವುದನ್ನು ಕವಿ ಸೂಚಿಸಿದ್ದಾರೆ. ವೇಣು ಆತುರದಲ್ಲಿ ಬಾರು ಮಾಡಿದ್ದ ಪಿಸ್ತೂಲನ್ನು ಮರೆತುಹೋದುದರಿಂದ ಪೋಲೀಸಿನವರಿಗೆ ಅವನು ಅಲ್ಲಿಯೇ ಇರಬೇಕೆಂಬ ಸಂಶಯ ಬರಲಾಯಿತು. ಆ ಪಿಸ್ತೂಲು ಕೊತ್ತವಾಲನ ಕಣ್ಣಿಗೆ ಅನ್ಯಾಯವಾಗಿ ಬಿದ್ದಿತಲ್ಲ ಎಂದು ವೇಣುವಿನ ತಾಯಿ ಹೆದರಿ ಚಿಂತಾಕ್ರಾಂತಳಾದಳು. ಆ ಪಿಸ್ತೂಲನ್ನು ಸೂಪರಿಂಟೆಂಡೆಂಟನು ತನ್ನ ಕಿಸೆಯಲ್ಲಿ ಹಾಕಿಕೊಂಡದ್ದು ವಿಧಿಯ ಪ್ರೇರಣೆ. ಹಾಗೆ ಅವನು ಮಾಡಿದುದರಿಂದ ತನ್ನ ಕಿಸೆಯಲ್ಲಿದ್ದ ಮದ್ದಿನ ಚೀಲಕ್ಕೆ ತಾನೇ ಬೆಂಕಿ ಹಚ್ಚಿಕೊಂಡಂತಾಯಿತು. ಧೀರನಾದ ವೇಣುಗೋಪಾಲನ ಕೈಲಿ ಪಿಸ್ತೂಲು ಇದ್ದು, ಅವನನ್ನು ಸೆರೆಹಿಡಿದಿದ್ದರೆ, ಅವನು ಕೆಲವಾದರೂ ಬೆಳ್ಳರನ್ನು ಯಮಸದನಕ್ಕೆ ಅಟ್ಟದೆ ಕೈಸೆರೆಯಾಗುತ್ತಿರಲಿಲ್ಲ. ಅವನು ಯಾವಾಗಲೂ ಬಾರುಮಾಡಿದ ಪಿಸ್ತೂಲನ್ನು ಕೈಯಲ್ಲಿ ಹಿಡಿದಿರುತ್ತಿದ್ದನು. ಆಟಕ್ಕಾಗಿ ಅಲ್ಲ. ಅವನಿಲ್ಲದಿದ್ದರೂ ಅವನ ಆಯುಧವೇ ಅವನು ಮಾಡಬೇಕಾದ ಕಾರ್ಯವನ್ನು ಮಾಡಿತು ಎಂಬ ಸೂಚನೆ ಇಲ್ಲಿ ಇಲ್ಲದಿಲ್ಲ.

## ಈ ನಾಟಕದ ಶೈಲಿ

ಈ ನಾಟಕದ ಭಾಷೆಯಲ್ಲಿ ಒಂದು ಅಪೂರ್ವವಾದ ಸೊಬಗು ಇದೆ; ಸೊಗಸಾದ ಕಾವ್ಯದ ನವಿರು ಹೊಗರು ಇದೆ ನಾಣ್ಣುಡಿಗಳೂ ಗಾದೆ ಮಾತುಗಳೂ ಹೋಲಿಕೆಗಳೂ ಮಾತಿನ ಚಮತ್ಕಾರವೂ ಕೇಸರಿಬಾತಿನಲ್ಲಿ ಸಿಕ್ಕುವ ದ್ರಾಕ್ಷಿ ಬಾದಾಮಿಗಳಂತೆ ಮಾತು ಮಾತಿಗೆ ದೊರೆಯುತ್ತವೆ. ಇವನ್ನು ನೋಡಿದರೆ ನಿಜವಾದ ಕವಿಯ ಕೈಯಲ್ಲಿ, ಕನ್ನಡ ಭಾಷೆ ಎಷ್ಟು ಸಂಪದ್ಯುಕ್ತವೂ ಹೃಷ್ಟಪುಷ್ಟವೂ ತೇಜಸ್ವಿಯೂ ಸುಗಂಧಪೂರಿತವೂ ಶಕ್ತಿಯುತವೂ ಆಗಿದೆಯೆಂಬುದು ಗೊತ್ತಾಗುತ್ತದೆ. ಅನೇಕ ಕ್ಲಿಷ್ಟವಾದ ಗಂಭೀರವಾದ ಸೂಕ್ಷ್ಮವಾದ ಭಾವಗಳನ್ನು ಕವಿ, ಸುಲಭವಾದ ಕನ್ನಡದಲ್ಲಿ ಮಗುವಿನ ಮಾತಿನಂತೆ ಸರಳವಾಗಿ ವಿವರಿಸಿದ್ದಾರೆ. ಇಲ್ಲಿಯ ಭಾಷೆ ಉದ್ದಕ್ಕೂ ಕಾವ್ಯವೇ. ವೇಣು ಸತ್ತಾಗ ವೇಣುವಿನ ತಾಯಿಯೂ ಜಾಹ್ನವಿಯೂ ಸಲ್ಲಿಸುವ ಅಶ್ರುತರ್ಪಣ ಗಂಭೀರವಾದ ಮಾರ್ಮಿಕವಾದ ಭಾವಗೀತಾರೂಪದ ಚರಮಶ್ಲೋಕಗಳೇ.

ಹೋಲಿಕೆಗಳನ್ನು ಹೇಳುವುದರಲ್ಲಿ ಗೋವಿಂದ ಪೈಗಳದು ಅಪೂರ್ವ ಪ್ರತಿಭೆ: "ಹಸುವಿನ ಕೆಚ್ಚಲನ್ನು ಒದ್ದೆ ಕೈಯಿಂದ ಹಿಂಡುವಂತೆ ಪ್ರತಿಕೂಲವಾದ ಕಾಲವನ್ನು ಅಹಿಂಸೆಯ ನೆರವಿನಿಂದ ಒಲಿಸಿಕೊಳ್ಳಲಿಕ್ಕೆ ಪ್ರಯತ್ನಿಸುತ್ತಾರೆ, ಮಹಾತ್ಮರು"; "ಕುದುರೆ ಓಡುವಾಗ ಯಾವ ಕಾಲನ್ನು ಮುಂದಿಡಬೇಕೆಂದು ಯೋಚಿಸದಂತೆ"; "ಅಪಾಯಗಳಲ್ಲಿ ನುಗ್ಗುವುದೆಂದರೆ ಬಾತುಕೋಳಿಗೆ ನೀರಾಟದಂತಾಗಿದೆ ನಮಗೆ"; "ಏಳು ನೆಲೆಗೆ ಒಂದು ಬತ್ತಿಯಂತೆ ಒಬ್ಬನೇ ಮಗ"; "ಮೂಗಿನಿಂದ ಉಣಿಸಿದರೆ ಹೊಟ್ಟೆ ತುಂಬೀತೆ?"; "ಅಡವಿಯ ದೊಣ್ಣೆ ಬಡವನ ತಲೆ"; "ಬೀದಿಯ ಬಾಗಿಲಿನಲ್ಲಿ ಇರಿಸಿದ ಮನೆಯ ದೀಪದಂತೆ ಬೀದಿಹೋಕರಿಗೆ ದಂಗುಬಡಿಸಲಿಕ್ಕವೆ ಮನೆಯೊಳಗೆ ಕತ್ತಲೆಯೇ"; "ನಮ್ಮ ಈಗಿನ ಕೆಲಸವೆಂದರೆ ತಗಣೆಯಂತೆ ಊರೋದು ನಾರೋದು. ಜಾರೋದು"; "ಮಾರಿಗೆ ನುಸುಲುಂಡಿ ಬೇಕೆಂದಿಲ್ಲ"; "ಬಹುಕಾಲದಿಂದ ಬರೆ ಒಳ್ಳೆಯಂತಿದ್ದ ನಾವು. ಆಂಗ್ಲರ ತೊತ್ತಳದ ಧೂಳನ್ನು ಮೆದ್ದು. ಮೆದ್ದೀಗ ಕನ್ನಡಿಹಾವಾಗಿದ್ದೇವೆ"; "ನೆಲದಲ್ಲಿ ಒಜ್ಜಿದ ಹರಿಗೋಲಿನಂತೆ"; "ಕಿರಿಚಾಡುವ ತಿರುಗಣೆಗೆ ಎಣ್ಣೆ ಮುಟ್ಟಿಸುವಂತೆ"; "ಮರಣಕ್ಕೆ ಅಂಜುವುದೆಂದರೆ ಗುರಿಗೆ ಗುಂಡು ಅಂಜಿದಂತೆ"; "ಕಗ್ಗತ್ತಲೆಗೆ ಅಂಜದ ಕಿರುಬ ಮರದ ನೆರಳಿಗೆ ಅಂಜೀತೆ?"; "ಆತನನ್ನು ಹುಡುಕಾಡುವಲ್ಲಿ ಬೆಕ್ಕಿನಂತೆ ನೋಡಬೇಕು, ನಾಯಿಯಂತೆ ಕೇಳಬೇಕು, ಹಾವಿನಂತೆ ಹರಿಯಬೇಕು, ಮೊಸಳೆಯಂತೆ ಹಿಡಿಯಬೇಕು"; "ಸಂಕಲೆಯ ತ್ರಾಣ. ಅದರ ಪ್ರತ್ಯೇಕ ಗೊಣಸಿನಲ್ಲಿ ಇರುವಂತೆ"; "ಸಲಾಕಿಯ ಡೊಂಕನ್ನು ಸಾಗುಬಡಿಯಲಿಕ್ಕೆ ಆ ಸಲಾಕಿಯೋ, ಅಲ್ಲ ಸುತ್ತಿಗೆಯೋ?"; "ಕೋವಿಗಾರನು ಬಳಲುವನಲ್ಲದೆ ಕೋವಿ ಬಳಲುವುದೆ?"; "ಒಳ ಅಂಗಿ ತನಗೆ ಎಷ್ಟೇ ಹತ್ತೆಯಾದರೂ ತೊಗಲಿನಷ್ಟು ಹತ್ತೆಯೇ?"; "ಊಟದ ತುರುವಿಗೆ ಉಣ್ಣದ ಕರು";

ಗೋವಿಂದ ಪೈಗಳು ಅನೇಕ ಕಡೆ ಇಂಗ್ಲಿಷಿನಲ್ಲಿರುವಂತೆ ನಾಮವಾಚಕಗಳನ್ನು ಕ್ರಿಯಾಪದವಾಗಿ ಮಾಡಿದ್ದಾರೆ. ಚೌಕಟ್ಟಿಸು, ವೆಚ್ಚಿಸು, ಗವಸಣಿಸು, ಭಗೀರಥಿಸು. ನೀಲಿಸು(ನೀಲಿ ಬಣ್ಣ ಹಾಕು) ಕುತೂಹಲಿಸು. ಸಂಕೋಚಿಸು. ಶಿಲಾಕ್ಷರಿಸು, ಮೆತ್ತಗಿಸು, ಅನುಕೂಲಿಸು, ಪ್ರಪಂಚಿಸು, ಆರೈಸುತ್ತಿರು(ಆರೈಕೆ ಮಾಡು) ಮುಂತಾದುವು. ಇನ್ನು ಕೆಲವೆಡೆ ಹತ್ತಾಹತ್ತಿ, ಕತ್ತಾಕತ್ತಿ, ಮುಖಾಮುಖಿ, ಗುಂಡಾಗುಂಡಿ, ನಾವರಸು ನೀವಾಳುತನ. ಮರಕಡುಕರು, ನೀರುಹೊರಕರು ಮುಂತಾದ ಪ್ರಯೋಗಗಳನ್ನು ಮಾಡಿದ್ದಾರೆ. ಇನ್ನೂ ಕೆಲವು ಕಡೆ ಆಂಗ್ಲ ಗಾದೆ ನುಡಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. "ಮರಿಗೆ ಮೆಟ್ಟಿಸು" (To kick the Bucket); ಮೀನು ನಮ್ಮ ಬಲೆಗೆ ಬಂತು (all is fish that comes to our nest); ಜ್ಞಾನಸಂತರ್ಪಣೆ (Feast of reason); ತುರುಮು (Troop); ಬೆಕ್ಕಿನ ಪಂಜ (Cat's palm); ತಾಗುಡಿ (Ambush); ಕಾಡವರಟೆಯ ಬೇಟೆ ( wild goose chase); ಚಕ್ಕಡಿ ಬಂಡಿಯನ್ನು ನಕ್ಷತ್ರಕ್ಕೆ ತಗಲುಹಾಕು (to hitch one's wagon to a star); ಹೋತನ್ನು ಕರೆ (Milk Ram) ಇವೆಲ್ಲವೂ ಬೇರೆ ಭಾಷೆಯಿಂದ ಕನ್ನಡಕ್ಕೆ ಅನುವಾದಿತಗಳಾದ ಪದಸಮೂಹಗಳಾದರೂ ಕವಿಯ ಪ್ರತಿಭೆ

ಯಿಂದ ಅವು ವಿಚಿತ್ರವಾಗಿ ಕಾಣದೆ ಕನ್ನಡಕ್ಕೆ ಸ್ವಾಭಾವಿಕವಾಗಿ ಹೊಂದಿಕೊಂಡಿವೆ.

ಪ್ರತಿ ಪುಟವಲ್ಲಿಯೂ ಉದ್ಗ್ರಂಥಕ್ಕೆ ಅನುಗುಣವಾದ ಭಾವನೆ ಮತ್ತು ಶೈಲಿಯ ಸೌಷ್ಟವವುಳ್ಳ ಈ ನಾಟಕದಲ್ಲಿ ಅಲ್ಲಲ್ಲಿ ಸೊಗಸಾದ ವಾಕ್ಯ ರತ್ನಗಳು ಕಣ್ಣಿಗೆ ಬೀಳುತ್ತವೆ. ದೇಶಸೇವಕರು ಪೋಲೀಸಿನವರ (ಇರುಳುಗಣ್ಣರು) ಕಣ್ಣು ತಪ್ಪಿಸಿ ಅಡಗಿರುತ್ತಿದ್ದುದನ್ನು ವೇಣುವು "ಹೆಗ್ಗಣದ ಹೋರುಗಳಂಥಾ ನೆಲಮಾಳಿಗೆಗಳಲ್ಲಿ ಹಗಲು ಬೆಕ್ಕು ನಿದ್ರೆ, ಇರುಳು ಶಿವಜಾಗರ ಮಾಡುತ್ತ ಶಬ್ದ ಮಾತ್ರದಿಂದ ಕಾಣಿಸುವ ಬಿಲಕನ್ನೆಯರ ಸಹವಾಸದಲ್ಲಿ ಅಜ್ಞಾತವಾಸದಲ್ಲಿದ್ದೆವು" ಎಂದು ವಿವರಿಸುತ್ತಾನೆ. "ಜೂಜುಗಾರನಿಗೆ ತನ್ನದಾಯದ್ದೇ ಅಲ್ಲದೆ ಬೇರೆ ಹಂಬಲವಿಲ್ಲ."; ಆಂಗ್ಲರು "ತಮಗೆ ಒಪ್ಪಿದವರ ಕೈಗೆ ಚಿನ್ನದ ಸಂಕಲೆ ಒಪ್ಪದವರಿಗೆ ಕಬ್ಬಿಣದ ಸಂಕಲೆ ತೊಡಿಸಿದರು"; "ನೂರೈವತ್ತು ವರುಷಗಳಿಂದ ನಾವು ಈ ಪೂತನಿಯ (ಆಂಗ್ಲಾಡಳಿತ)ಮೊಲೆಯುಂಡು ಬದುಕಿದೆವಾದರೂ ನಮ್ಮ ಮನುಷ್ಯತ್ವವನ್ನು ಕಳಕೊಂಡೆವು"; "ಸಾಯಲಿಕ್ಕೆ ಅಂಜುವವರು ಸ್ವತಂತ್ರರಾಗಲಿಕ್ಕೆ ಉಂಟೆ?"; "ಈ ಸಂಗತಿ ಈಕೆ ಸುಳ್ಳಿನ ಗೂಡೊಲೆಯಿಂದ ನಮಗೆ ಈಗಲೀಗ ಹಿರಿದಿತ್ತ ಸುಡುರೊಟ್ಟಿ"; "ಬಾಯ ನಾತವನ್ನು ಮೂಗು ಅರಿಯದು"; "ಸುಪರಿಂಟೆಂಡೆಂಟನು ಬೆಳ್ಳರು ಭಾರತದಲ್ಲಿರುವುದನ್ನು ಹೀಗೆ ಸಮರ್ಥಿಸಿಕೊಳ್ಳುತ್ತಾನೆ "ಯಾರೂ ತಿದ್ದಹೋಗುವುದು ತಮ್ಮನ್ನಲ್ಲ, ಪರರನ್ನು. ಹಾಗೂ ಬಲಾಢ್ಯರೇ ಬಲಹೀನರ ತಿದ್ದುಗಾರರು"; ವೇಣುಗೋಪಾಲ ಸತ್ತಾಗ ಯಶೋದೆಯು "ಹೊಳೆ ಬತ್ತಿದ ಮೀನು ತಳದ ಒಳಗಣ ನೀರಿನಲ್ಲಿ ಕಾಲಕ್ಷೇಪಿಸುವಂತೆ ಆ ನೆನವಿನಲ್ಲಿ ಆ ಪ್ರೀತಿಯಲ್ಲಿ ಆಯುಸ್ಸಿನ ಉಳಿತಾಯವನ್ನು ಸಲ್ಲಿಸೋಣ" ಎನ್ನುತ್ತಾಳೆ.

ಈ ಕೃತಿಯ ಸೊಬಗನ್ನು ಮನದಟ್ಟು ಮಾಡಿಕೊಡಬೇಕಾದರೆ ನಾವು ಪುಟಗಟ್ಟಲೆ ಉದ್ಧರಿಸಬೇಕು. ಜಾಹ್ನವಿ ಬಾವಿಗೆ ಬಿದ್ದು ಸಾಯುವಾಗ ಹೇಳುವ ಹಾಡು ಮುಂದಲದು.

ಬಾಳಲೇಕೋ ನಿನ್ನನಗಲಿ ಹೇಳೊ ಮೋಹನ (ಪಲ್ಲವಿ)
ಸುಮ್ಮನಲ್ತೆ ಬರಡಾವಿನದೆಂತೊ ದೋಹನ (ಅನು)

ಹೆಡಗೆ ತೆರೆದ ಹಾವೋಲೇದೆ
ನನ್ನೆದೆ ನೀ ಕೊಳಲನೂದೆ
ಬಂದೆನದರ ಸುಧೇಯ ಸೇದೆ
ಕಾದೆ ಮೋಹನ ॥೧॥

ತನು ಮನ ಕಣ್ಣಾಗೆ ಕಾದೆ
ಸುಖದ ಕನಸನೆನಿಸೋ ಮೇದೆ
ತೋರಿತಟ್ಟನೆಲ್ಲಿ ಗಾದೆ?
ಮಾದೆ ಮೋಹನ? ॥೨॥

ತಾಳೆನಿನ್ನೀ ವಿರಹಬಾಧೆ
ಕರೆವಳಿಮುನೆ ದಯಾಗಾಧೆ
ಹೋದಪಳಿದೊ ನಿನ್ನರಾಧೆ
ಹೋದೆ ಮೋಹನ ॥೩॥

ಕೊನೆಯಲ್ಲಿ ಇದೇ ನಾಟಕದಲ್ಲಿ ಕವಿ ಹಾಡಿರುವ ಸ್ವರಾಜ್ಯದ ಗೃಹಶಾಂತಿ ಮಂತ್ರದೊಂದಿಗೆ ಈ ಪ್ರಬಂಧವನ್ನು ಮುಗಿಸೋಣ.

ರಾಜಮಕುಟ ರಾಜದಂಡ ಧರಣಿಗುರುಳಿ ಬೀಳಲಿ
ಸ್ವತಂತ್ರತೆ, ಸಮಾನತೆ ಸೋದರತೆ ಸದಾ ಬಾಳಲಿ
ಒಂದು ರಾಷ್ಟ್ರ ಒಂದು ಜನತೆ
ಒಂದು ದೇವರೊಂದು ಮನತೆ
ಧರ್ಮಬಿಡದೆ ನಡೆದ ಘನತೆ
ಎಂದಿಗೆಮ್ಮದಾಗಲಿ
ಭಾರತದ ಯಶ: ಪತಾಕೆ ಚೂಣಿಯೊಳಗೆ
ಭಾರತದ ಪತಾಕೆ ಜಗದ ಚೂಣಿಯೊಳಗೆ ಸಾಗಲಿ
ತಾಯಿಳೆಯಲಿ ಪರರಿಗೆ ನಾವೂರಲೀಯೆವಡಿಯನ್ನು
ಬಯಸೆವಾವು ಪರರ ಸೂಜಿ ಮೊನೆಯ ನೂರುವೆಡೆಯನು

ಕಲೆಗಳ ಹೊಸ ಸೃಷ್ಟಿ ಮಾಡಿ
ಜ್ಞಾನದ ಹೊಂಗನಿಯ ತೋಡಿ
ಜಗಕದಂ ಯಥೇಷ್ಟ ನೀಡಿ
ಇಳೆಯ ಕೆಳೆಯ ತಾಳ್ವೆವು
ನಮ್ಮೊಳೆ ಪರರೆಂದು ನಮ್ಮ ಬಳಗವೆಂದು ಬಾಳ್ವೆವು.
ಜಾತಿಭೇದ ಬಲಿತೆ ಕಣಾ ಅನ್ಯರ ತೊತ್ತಾದೆವು
ಇನ್ನದನ ಚಿರಂಕೀಳೆವು ಅಳಿದಕಟಾ ಹೋದೆವು.

ಈ ನಾಟಕದಲ್ಲಿಯ ಸಂಗತಿಗಳೆಲ್ಲ ನಡೆದು ಮುಗಿದು ಹೋಗುವುದು ಐದು ಗಂಟೆ ಕಾಲದಲ್ಲಿ. ಈ ಚಿಕ್ಕ ಅವಕಾಶದಲ್ಲಿ ಕವಿ ಭಾರತದ ಪ್ರಪಂಚವನ್ನೇ ಇಲ್ಲಿ ತೋರಿಸಿದ್ದಾರೆ. ಭಾರತದ ಎಂದಿನ ಇತಿಹಾಸ, ಬಲ ದೌರ್ಬಲ್ಯ, ಭಾರತ ಅಸ್ವತಂತ್ರವಾಗಲು ಕಾರಣ, ಮಹಾತ್ಮರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮ; ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ನಾವು ಅನುಸರಿಸಬೇಕಾದ ಮಾರ್ಗ, ಇವನ್ನು ಕವಿ ಬಹು ಚೆನ್ನಾಗಿ ಹೇಳಿದ್ದಾರೆ. "ಮಹಾತ್ಮರ ಪಂಗಡದಲ್ಲಿ ಅವರಂತೆ ಅನಾಸಕ್ತಿಯುಳ್ಳವರೂ ಮಹತ್ವಾಕಾಂಕ್ಷೆಯಿಲ್ಲದವರೂ ಬೇರೆ ಯಾರೂ ಕಾಣುವುದಿಲ್ಲ............ಗೆಲುವಿನದಾಗಲಿ ಬಿಡುಗಡೆಯದಾಗಲಿ ನಿನ್ನೆಗಿಂತ ನಾಳೆ ತಾನೆ ವಿಷಮತರ............ನಮ್ಮ ಮುಖಂಡರು ಭರತನಂತೆ ರಾಜದಂಡವನ್ನು ಒಲ್ಲದವರೆಗೆ ಭಾರತಕ್ಕೆ ಬಿಡುಗಡೆ ಇದ್ದೂ ಇಲ್ಲ. ಸ್ವರಾಜ್ಯವೆಂದರೆ ಆಂಗ್ಲರ ಕೈಯಿಂದ ಆಧಿಕಾರವನ್ನು ಕಿತ್ತುಕೊಂಡು ಅದನ್ನು ಇಲ್ಲಿಯ ಧನಾಂಧರ ಹಾಗೂ ಬಲಾಂಧರ ದುರುಪಯೋಗಕ್ಕೆ ಒಪ್ಪಿಸುವುದಲ್ಲ. ಆದರೂ ಬೆಳ್ಳರು ಹೊರಗೆ ಹೋಗುತ್ತಲೇ ಸಹಜವಾಗಿ ಅವರ ಪೊಜ್ಜೆಯಲ್ಲಿ ಕೂಡಲೆ ಕಾಲೂರುವವರೆಂದರೆ ಇವರೇ.........ದೈವಯೋಗದಿಂದ ಚುಕ್ಕಾಣಿ ನಿಸ್ಪೃಹರಾದ ಉದಾರಿಗಳ ಕೈಗೆ ಹೋಗಿ ನಮ್ಮ ನಾವೆ ಸುಗಮವಾಗಿ ಮುಂದುವರಿಯಲಿಕ್ಕಿದೆಯೋ ಈಗ ಊಹಿಸಲಿಕ್ಕೆ ಎಡೆಯೆ. ಹೇಗಾದರೂ ಮೇಘದ ಕಾಳರಾತ್ರಿಯ ಅಂಧಕಾರವಂತೆ ಗ್ರಹಣದ ಅಂಧಕಾರ ಚಿರಕಾಲ ಬಾಳೀತೆ? ಹೆಚ್ಚಾಗಿ ಚಿಕ್ಕಂದಿನಲ್ಲಿ ಆಗದೆ ಹೋದ ಹಲ್ಲು ಮೊಳೆತದ ಬೇನೆ ಬಾರದೆ ಇದ್ದೀತೆ? ಬಂದರೆ ಚಿರಕಾಲ ಬಾಳೀತೆ?"

ಈ ಆಶಾಭಾವನೆಯೊಂದಿಗೆ ಈ ನಾಟಕ ಕೊನೆಯಾಗುತ್ತದೆ.



ರಾಷ್ಟ್ರಕವಿಗಳು ಚಿರನಿದ್ರೆಯಲ್ಲಿ . . .

ತಾ. 6—9—1963.

**ಶೋಕತಪ್ತ ಭಾಷ್ಪಾಂಜಲಿ**



"ಇನ್ನಿನಿಸು ನೀ ಕಾವ್ಯರ್ಷಿ ಬದುಕ ಬೇಕಿತ್ತು"

## ಅಂತಿಮ ಸ್ನಾನ



" ನ ಚೈನಂ ಕ್ಲೇದಯಂತ್ಯಾಪೋ "

## ಅಂತಿಮ ಯಾತ್ರೆ



" ಮರಣ ವೃಕ್ಷದೊಳಮೃತ ಫಲದಂತೆ "

## ಚಿತಾರೋಹಣ



" . . . ನೈನಂ ದಹತಿ ಪಾವಕ "

# ಮಹಾತ್ಮರ ಮರಣ

ಶ್ರೀ ಜಿ. ವರದರಾಜ ರಾವ್

ಮಹಾತ್ಮರ ಜನನ, ಜೀವನಗಳು ಎಷ್ಟು ಮಹತ್ವ ಪೂರ್ಣವೋ ಅವರ ಮರಣವೂ ಅಷ್ಟೇ ವಿಶಿಷ್ಟವಾದುದು. ಯಾವುದೋ ಒಂದು ಧ್ಯೇಯಕ್ಕಾಗಿ ಬದುಕಿ ಬಾಳಿದ ಹುತಾತ್ಮರು ಸಾವಿಗೆ ಅಂಜುವುದಿಲ್ಲ. ಅದು ಯಾವ ರೂಪದಲ್ಲಿಯೇ ಬರಲಿ, ಅದನ್ನು ನಗುನಗುತ್ತ ಸ್ವಾಗತಿಸುವರು. ಮೃತ್ಯುವಿನ ಶೀತಲ ಸ್ಪರ್ಶದಿಂದ ಅಂಥವರ ಬದುಕು ಅಮರವಾಗುವುದೇ ವಿನಾ ಎಂದೆಂದಿಗೂ ಕೊನೆಗಾಣುವುದಿಲ್ಲ. ಇಂಥ ಅಪೂರ್ವವಾದ ಸಾವಿನ ಮಹತ್ವವನ್ನು ಕವಿ ಹೃದಯ ಬಹುಚೆನ್ನಾಗಿ ಗ್ರಹಿಸಬಲ್ಲುದು. ಅವರ ವೈಭವ ವೈಶಿಷ್ಟ್ಯಗಳನ್ನು ವರಕವಿ ಬಹು ಪರಿಣಾಮಕಾರಿಯಾಗಿ ವಿವರಿಸಬಲ್ಲನು. ಇಂಥ ಒಂದು ಪ್ರಯತ್ನವನ್ನು ಶ್ರೀಮಾನ್ ಗೋವಿಂದಪೈಗಳವರು ತಮ್ಮ "ಗೊಲ್ಗೊಥಾ" ಮತ್ತು "ವೈಶಾಖಿ" ಎಂಬ ದೀರ್ಘ ಕವನಗಳಲ್ಲಿ ಮಾಡತೊಡಗಿ ಅಪೂರ್ವವಾದ ಸಿದ್ಧಿಯನ್ನು ಗಳಿಸಿದ್ದಾರೆ.

ಈ ಎರಡು ಕೃತಿಗಳು ಕನ್ನಡಕ್ಕೆ ಬಹು ವಿಶಿಷ್ಟವಾದ ಕಾಣಿಕೆಗಳು. "ಗೊಲ್ಗೊಥಾ" ಯೇಸುವಿನ ಕಡೆಯ ದಿನವನ್ನು ಚಿತ್ರಿಸಿದರೆ "ವೈಶಾಖಿ" ಬುದ್ಧನ ಕಡೆಯ ದಿನವನ್ನು ಚಿತ್ರಿಸುತ್ತಿದೆ. ಎರಡು ವಸ್ತುವೂ ಕನ್ನಡಕ್ಕೆ ತೀರ ಹೊಸತಾದುದು. ಅವುಗಳ ಹಿರಿಮೆಯನ್ನು ಹೇಳಲು ಹೊರಟಿರುವ ಕವಿ ಯಾವ ಮತಪ್ರಚಾರಕ್ಕೂ ಕಟ್ಟುಬೀಳದೆ ಆ ಮಹಾತ್ಮರಿಬ್ಬರ ಸಾವು ಎಷ್ಟು ಅರ್ಥಪೂರ್ಣವಾದುದೆನ್ನುವುದನ್ನು ಸಮರ್ಥಿಸುವುದನ್ನೇ ಮುಖ್ಯ ಗುರಿಯಾಗಿ ಉಳ್ಳವರು. ಒಂದರಲ್ಲಿ ಪಾಶ್ಚಾತ್ಯ ದೇಶದ ಮತಪ್ರವರ್ತಕನ ಮೇಲ್ಮೆ ಮೈವೆತ್ತಿ ಕಂಡುಬಂದರೆ, ಇನ್ನೊಂದರಲ್ಲಿ ಪೌರ್ವಾತ್ಯ ಮಹಾಪುರುಷನ ತುಂಬುಬದುಕಿನ ಪರಿನಿರ್ವಾಣದ ಪ್ರಾಶಸ್ತ್ಯ ಸ್ಫುಟವಾಗಿ ವಿಶದವಾಗುತ್ತದೆ. ಈ ರಚನೆಗಳಲ್ಲಿ ವಿದಿತವಾಗುವ ಕವಿಯ ಪಾಂಡಿತ್ಯ ಮತ್ತು ಪ್ರತಿಭೆಗಳು ಅಸದೃಶವಾದುವು. "ಗೊಲ್ಗೊಥ"ವನ್ನು ಬರೆದ ಹಲವಾರು ವರ್ಷಗಳ ತರುವಾಯ "ವೈಶಾಖಿ"ಯನ್ನು ಬರೆದದ್ದರಿಂದ ಇವುಗಳಲ್ಲಿ ಪರಸ್ಪರ ಸಂಬಂಧವನ್ನು ನಾವು ಗುರುತಿಸಬಹುದು. ವಿಷಯ ಬೇರೆ ಬೇರೆಯಾಗುವುದಲ್ಲದೆ, ಸಂವಿಧಾನವನ್ನು ನಿರೂಪಿಸುವ ಮನಸ್ಸು ಒಂದೇ ಆಗಿರುವುದರಿಂದ ಈ ಎರಡು ಕವಿತೆಗಳನ್ನು "ಅವಳಿ ಕವಿತೆಗಳು" (Companion Poems)ಎಂದು ಕರೆದರೂ ತಪ್ಪಾಗಲಾರದು.[1] ಕವಿಯ ದೃಷ್ಟಿ ಈ ಇಬ್ಬರು ಮಹಾತ್ಮರ ಸಾಧನೆ, ಸಿದ್ಧಿಗಳ ಕಡೆಗೆ ಹೇಗೆ ಹರಿದಿದೆ, ಅವುಗಳನ್ನು ಎಷ್ಟರಮಟ್ಟಿಗೆ ಯಶಸ್ವಿಯಾಗಿ ಚಿತ್ರಿಸಿದೆ ಎನ್ನುವುದನ್ನು ತೌಲನಿಕವಾಗಿ ವಿಚಾರ ಮಾಡುವುದೇ ಈ ಪ್ರಬಂಧದ ಮುಖ್ಯ ಗುರಿ.

## — 1 —

"ಗೊಲ್ಗೊಥಾ" ಎಂಬ ಹೆಸರೇ ಕನ್ನಡಿಗರ ಕುತೂಹಲವನ್ನು ಕೆರಳಿಸುತ್ತದೆ. ಈ ಪದ ಯೇಸುವನ್ನು ಶಿಲುಬೆಗೇರಿಸಿದ ಸ್ಥಳವನ್ನು ನಿರ್ದೇಶಿಸುತ್ತದೆ. ಆ ಎಡೆಯಲ್ಲಿ ಯೇಸುವಿಗೆ ಉಂಟಾದ ಸಂಕಟಕರವಾದ ಪ್ರಸಂಗವನ್ನೂ, ಅದನ್ನು ಹಸನ್ಮುಖದಿಂದ ಸಹಿಸಿಕೊಂಡು ಲೋಕಕಲ್ಯಾಣಕ್ಕಾಗಿ ತನ್ನ ಪ್ರಾಣವನ್ನೇ ಪಣವನ್ನಾಗಿ ಇಟ್ಟ ಆ ಮಹಾತ್ಮನ ಮಹಾತ್ಯಾಗವನ್ನೂ, ಈ ಕೃತಿ ವಿವರಿಸುವುದರಿಂದ ಈ ಶೀರ್ಷಿಕೆ ಬಹು ಅರ್ಥವತ್ತಾಗಿದೆ.

ಯೇಸುವಿನ ಕಡೆಯ ದಿನದ ಉದಯದಿಂದಲೇ ಕವಿತೆ ಮೊದಲಾಗುತ್ತದೆ. ಇಲ್ಲಿನ ತನಕ ಯೇಸುವಿಗಾದ ಅನ್ಯಾಯಕ್ಕಾಗಿ ಕವಿಯ ಮನಸ್ಸು ಮರುಗಿ ಮೊಟ್ಟಮೊದಲಿನಲ್ಲಿಯೇ ಮುಂದೆ ಆಗಲಿರುವ ದುರಂತಕ್ಕೆ ತಕ್ಕಂತೆ ವಾತಾವರಣವನ್ನು ಕಲ್ಪಿಸುವಲ್ಲಿ ಉದ್ಯುಕ್ತವಾಗುತ್ತದೆ. ಮೂರನೆಯ ಜಾವದ ಕೋಳಿ ಕೂಗಿದ್ದಾಯಿತು. ಯೆಹೂದ್ಯರು ಯೇಸುವನ್ನು ಪಿಲಾತನಿಗೆ ಒಪ್ಪಿಸಿಕೊಡುವ ಸಂದರ್ಭವನ್ನು ಕಣ್ಣಾರೆ ನೋಡಲಾರೆನೋ ಎಂಬಂತೆ ಚಂದ್ರನು ಮುಳುಗುತ್ತಿದ್ದಾನೆ. ಸೂರ್ಯನಿಗಂತೂ ಸಹಿಸಲಾರದ ಧರ್ಮಸಂಕಟ. ಮರ್ತ್ಯಲೋಕದಲ್ಲಿ ಈ ದುಷ್ಕೃತ್ಯ ನಡೆಯುತ್ತಿರುವಾಗ, ದೇವಲೋಕದಲ್ಲಿಯಾದರೋ ತಮ್ಮ ಕುಮಾರನು ಮತ್ತೆ ಹಿಂತಿರುಗಿ ಬರುವನೆಂಬ ಸಂಭ್ರಮ. ಯೆಹೂದ್ಯರು ತಮ್ಮ ಹಿತೈಷಿಯನ್ನು ತಾವೇ ಕೈಯಾರೆ ರೋಮಕರಾಜನ ಪ್ರತಿನಿಧಿಯಾದ ಪಿಲಾತನಿಗೆ ಒಪ್ಪಿಸಿಕೊಡುತ್ತಾರೆ. ಮುಂದೆ ಏನಾದೀತೋ ಎಂಬ ಆತಂಕವನ್ನು ಮುಂದೊಡ್ಡಿ ಮಾನ್ಯ ಕವಿಗಳು ಈ ಕೃತಿಯನ್ನು ಬಹು ನೂತನ ರೀತಿಯಲ್ಲಿ ಮೊದಲು ಮಾಡಿರುತ್ತಾರೆ.

ಪರಕೀಯನಾದರೂ ಪಿಲಾತನಿಗೆ ಯೇಸುವನ್ನು ಕಂಡಕೂಡಲೇ ಮನಸ್ಸು ಕರಗುತ್ತದೆ. ಅವನಿಗೆ ಯೇಸುವಿನ ಮಹತ್ವವನು ತಿಳಿಯುವ ಶಕ್ತಿ ಸಾಲದು. ತನ್ನ ಮುಂದೆ ನಿಂತಿದ್ದ ಆ ಮಹಾನುಭಾವನನ್ನು ಕಂಡು ಬೆರಗಾಗುತ್ತಾನೆ. ಈ ಸನ್ನಿವೇಶವನ್ನು ನಿಮಿತ್ತವಾಗಿ ಮಾಡಿಕೊಂಡು ಕವಿಗಳು ಯೇಸುವಿನ ಮಹಿಮಾತಿಶಯಗಳನ್ನೂ, ಆತನ ಮೂರ್ತಿವೈಭವವನ್ನೂ ಬಹು ಸೊಗಸಾಗಿ ಸಂಗ್ರಹಿಕೊಡುತ್ತಾರೆ. ಸಾಮಾನ್ಯರ ಕಣ್ಣಿಗೆ ಆತನು ವೃಥಾ ಹೊತ್ತು ಹೋಗದೆ ತನ್ನ ಜೀವನವನ್ನು ಪೋಲು ಮಾಡುತ್ತಿರುವಂತೆ ತೋರಿಬರಬಹುದು. ಆದರೆ ವಾಸ್ತವವಾಗಿ ಆತನ ಹಿರಿಮೆಯೇನೆಂದರೆ,

1. ಭಿನ್ನಭಿನ್ನ ಮನೋಧರ್ಮಗಳನ್ನು ಚಿತ್ರಿಸುವ ಇಂಗ್ಲಿಷಿನ ಮಿಲ್ಟನ್ ಕವಿಯ L'allegro ಮತ್ತು Il Penseroso ಕವನಗಳನ್ನೂ, ಟೆನಿಸನ್ ಕವಿಯ Ulysses ಮತ್ತು Lotus-eaters ಎಂಬ ಕವನಗಳನ್ನೂ ಇಲ್ಲಿ ನೆನೆಯಬಹುದು.

............ಲೋಕವಿವಸಮನೆ
ಲೋಕರುದ್ಧಾರಣವೆ ಮನೆವಾರ್ತೆ, ಪಾಪದಿಂ
ಪಾಪಿಗಳನೆತ್ತಿ ಬಾಳ್ವಿಯತೆತ್ತ ಬೆಸದರೀ
ತನಬಳಗವಿಳಿಯ ಹೇರಿದ ಭಾರ ಹೊರುವ ಸಂ
ಕಷ್ಟಗಳ ಮರುವದಾಂಟಿಸಿ ಪಾರಗಾಣಿಸುವ
ಒಂಟಿ ಇವನೆಂದಾ ಪಿಲಾತನಕಟರಿವನೇ?

ಎಂಬ ಕವಿಗಳ ಉದ್ಗಾರದಲ್ಲಿ ಅಡಕವಾಗಿದೆ. ರಾಜಾಧಿರಾಜರುಗಳ ಸಂಪತ್ತಿಗೆ ಮನಸೋಲದ ಮಗ್ದಲದ ಮರಿಯಳು ಈತನ ಕರುಣೆಗೆ ಮಾರುಹೋಗಿ ತೊತ್ತಾದಳೆಂದರೆ ಇನ್ನು ಹೇಳುವುದೇನಿದೆ? ಇಂಥ ಒಂದೆರಡು ಹೇಳಿಕೆಗಳಿಂದ ಕವಿಗಳು ಯೇಸುವಿನ ವ್ಯಕ್ತಿತ್ವದ ಪ್ರಭಾವವೆಂತಹುದೆಂಬುದನ್ನು ಉಜ್ವಲವಾಗಿ ನಿರೂಪಿಸಿರುತ್ತಾರೆ.

ಮೂವತ್ತೆರಡರ ಆ ಯುವಕ ತನ್ನ ದಿವ್ಯ ತೇಜಸ್ಸಿನಿಂದ ಹೇಗೆ ಬೆಳಗುತ್ತಿದ್ದನು ಎಂಬುದನ್ನು ಕವಿಗಳು ಕಣ್ಣಿಗೆ ಕಟ್ಟುವಂತೆ ಕಡೆದಿಟ್ಟಿರುತ್ತಾರೆ. ಎರಡು ಸಾವಿರ ವರ್ಷಗಳು ಉರುಳಿದರೂ ಯೇಸುವಿನ ಆ ಮೂರ್ತಿತೇಜ ಇಂದಿಗೂ ಅಚ್ಚಳಿಯದಂತಿದೆಯಂತೆ !

ಎರಡು ಸಾವಿರ ಕೈಯ ಕಾಲನಳಸದ ಚೆಲುವ
ನರನೊ ನಾರಿಯೊ ಪೇಳಲಸದಳಂ !-ಹೆಣ್ಣಿಗೆಯ
ನಯನದಿ ಭವಿಷ್ಯಮಂ ತಿವಿವ ಪುರುಷನ ದೃಷ್ಟಿ.
ಹೆಣ್ಣೆದೆಯ ಮಾರ್ದವದಿ ಗಂಡಿನ ಮನೋದಾರ್ಢ್ಯ,
ತಾಯಲಲ್ಲೆಯೋ. ತಂದೆಯಕ್ಕರೆಯ ಜಂಕಣೆಯೊ !
ಇಹಪರದ ನಡುವೆ ನೆಟ್ಟನೆಯ ನಿಶ್ರೇಣಿಯೆನೆ
ನಿಂದಿಹನ ನೋಡ ! ದಿವ್ಯಜ್ಞಾನದೇಕಾಂತ
ದಾಡುಂಬೊಲವೊ ಪೃಥುಲಮವಲಿನ ಲಲಾಟವದೊ
ನೋಡ ! ಮಾರನ ತರಿದ ನಿಡುವಾಳೊ ನಾಸಿಕವೊ
ನೋಡ ! ಮೊಗತುಳುಕುವಾ ತಂಬೆಳಕೊ ಪ್ರೇಮಾಂಬು
ನಿಧಿಯನುಬ್ಬರಿಸುವಮೃತಾಂಶು ಕಾಂತಿಯೊ ನೋಡ !

ಈ ನಿರೂಪಣೆಗೆ ಮನಸೋಲದವರಾರು? ಮಹಾತ್ಮ ಯೇಸುವಿನ ಈ ಆಕಾರವನ್ನು ಕಂಡು ಮಾರುಹೋಗದವರಾರು? ಈ ದಿವ್ಯ ಸ್ವರೂಪವನ್ನು ಕಂಡ ಪಿಲಾತನಿಗೆ ಮುಂದೆ ತಾನು ಏನು ಮಾಡಬೇಕೆಂದು ತೋಚದೆ, ಯೇಸುವನ್ನು ಕರೆತಂದವರನ್ನು ಕುರಿತು "ಈತನೊಳಾವ ತಪ್ಪಿವನನೇಕೆ ತಂದಿರಿ?" ಎಂದು ಪ್ರಶ್ನಿಸಿದನು. ಆ ಯಾಜಕರಾವರೋ ನಿಮಿಷವೂ ತಡಮಾಡದೆ ಯೇಸುವಿನ ಮೇಲೆ ತಮಗಿದ್ದ ಆಕ್ರೋಶವನ್ನೆಲ್ಲ ತೋಡಿಕೊಂಡರು. ತಮ್ಮ ಧರ್ಮದಲ್ಲಿ ಮರಣದಂಡನೆಗೆ ಅವಕಾಶವಿಲ್ಲದ್ದರಿಂದ ಯೇಸುವನ್ನು ಪಿಲಾತನಿಗೆ ಒಪ್ಪಿಸಿಕೊಟ್ಟಿದ್ದರು. ಕೈಸರನಿಗೆ ತೆರಿಗೆಕೊಡದಂತೆ ಯೇಸುವು ಬೋಧಿಸುತ್ತಿರುವನಲ್ಲದೆ ತಾನೇ ಯೆಹೂದ್ಯರ ಅರಸನೆಂಬುದಾಗಿ ಹೇಳಿಕೊಳ್ಳುತ್ತಿದ್ದಾನೆಂದು ಅವನ ಮೇಲೆ ರಾಜದ್ರೋಹ ಮತ್ತು ಧರ್ಮದ್ರೋಹದ ಅಪರಾಧಗಳನ್ನು ಹೊರಿಸಿದ್ದರು.

ಪಿಲಾತನು ಯೇಸುವನ್ನು ಕುರಿತು ಯಾಜಕರ ಅಪವಾದಕ್ಕೆ ಏನನ್ನುವುದಾಗಿ ಕೇಳಲು ಆ ಮಹಾನುಭಾವನು ಸಮಾಧಾನದಿಂದ ಉತ್ತರವೀಯುವನು. "ನನ್ನ ರಾಜ್ಯವಿದಲ್ಲ ಈ ಲೋಕದಿಂದ ಬೇರೆಡೆಯೇ ಇದೆ." ಪಿಲಾತನು "ನೀನಂತೆನಲು ಅರಸನೇ" ಎಂದು ಮತ್ತೆ ಪ್ರಶ್ನಿಸಲು, ಯೇಸುವು "ಕಾಲವದನೆ ನಿನ್ನಿಂದ ತಿರಿತಿರಿಗಿ ನುಡಿಸುವುದೈಸೆ? ನನ್ನ ರಾಜತೆಗೊಂದೆ ಸತ್ಯವನಿತರ ಸಾಕ್ಷಿ ! ಸತ್ಯವೆನ್ನಯ ರಾಜ್ಯ ! ಸತ್ಯವನ್ನೀಡೇರಿಸುವ ರಾಜನಾಂಗಡಾ !" ಎಂದು ಉತ್ತರವಿತ್ತನು. ಇಂಥ ದೇವದೂತನಲ್ಲಿ ಯಾರು ತಾನೆ ಅಪರಾಧವನ್ನು ಕಾಣಬಲ್ಲರು? ಅಸಹಾಯಕನಾದ ಪಿಲಾತನು "ಇದೋ ಯೆಹೂದ್ಯರೇ. ಇವನೊಳೇನುಮಪರಾಧಮಂ ಕಾಣೆ. ತಾನರಸೆಂದರೇನು? ತನ್ನಯ ರಾಜ್ಯಮೀಲೋಕವಲ್ಲವೆನೆ, ಸಾರ್ವಭೌಮನಿಗೆಂತು ಪ್ರತಿಯೋಗಿಯಹನಿವಂ? ವಿಧಿಸೆ ಮರಣವನಿವಗೆ ಕಿರಿದಾನುಮಪರಾಧವೆಲ್ಲಿ?" ಎಂದು ಧರ್ಮಸಂಕಟದಿಂದ ಪರಿತಪಿಸಿದನು. ಪಸ್ಕ ಹಬ್ಬದ ದಿನವಾದುದರಿಂದ ಅಪರಾಧಿಗೂ ಕ್ಷಮಾಪಣೆ ನೀಡಲು ಅವಕಾಶವಿದೆಯೆನ್ನಲು, ಅಲ್ಲಿ ಸೇರಿದ್ದ ಆ ಯಾಜಕರು ಒಬ್ಬ ಬರಬ್ಬನಿಗೆ ಕ್ಷಮೆ ನೀಡಲು ಸಮ್ಮತಿಸಿದರೇ ವಿನಾ ಪೂಜ್ಯನಾದ ಯೇಸುವಿಗೆ ಆ ವಿನಾಯಿತಿಯನ್ನು ತೋರಲು ಒಪ್ಪಲಿಲ್ಲ. ಪಿಲಾತನಿಗೆ ಇನ್ನು ಯೇಸುವನ್ನು ದಂಡಿಸುವುದು ಅನಿವಾರ್ಯವಾಯಿತು. ಯಾಜಕರ ಬಲಾತ್ಕಾರಕ್ಕೆ ಸಿಕ್ಕಿಬೀಳಬೇಕಾಯಿತು. ತನ್ನ ಹೆಂಡತಿ ಬಂದು ಎಚ್ಚರಿಸಿದರೂ ಉಪಯೋಗವಾಗಲಿಲ್ಲ. ಸ್ವಕೀಯರೇ ಕೈಬಿಟ್ಟ ಆ ಮಹಾತ್ಮನನ್ನು ಶಿಲುಬೆಗೇರಿಸುವುದಾಗಿ ನಿಶ್ಚಯಿಸಿದನು. "ನಿರಪರಾಧಿಯ ರಕ್ತಕಿದುಗೊ ಹೊಣೆ ನಾನಲ್ಲ" ಎಂಬಂತೆ ನೀರನ್ನು ತರಿಸಿ ತನ್ನ ಕೈ ತೊಳೆದುಕೊಂಡನು. ಇತರರು ಅದರ ಫಲಾಫಲ ನಮ್ಮ ಪಾಲಿಗಿರಲಿ. "ತಮ್ಮ ಮಕ್ಕಳ ಮೇಲಿವನ ರಕ್ತವಿರಲಿ" ಎಂದು ಕೂಗಿ ಹೇಳಿದರು. ಪಿಲಾತನು ಯೇಸುವಿಗೆ ಮರಣದಂಡನೆಯನ್ನು ವಿಧಿಸಿದನು. "ಯೆಹೂದ್ಯರ ರಾಜ ನಜರೇತಿನವನೇಸು" ಎಂಬ ಒಂದು ಹಲಗೆಯನ್ನು ಬರೆದು ಶಿಲುಬೆಗೆ ತೂಗುಹಾಕುವಂತೆ ಅಪ್ಪಣೆ ಮಾಡಿದನು. ಜನಗಳಾದರೋ ಅದಕ್ಕೊಂದು ತಿದ್ದುಪಡಿ ಬಯಸಿ "ಯೆಹೂದ್ಯರ ರಾಜನೇ ಯೇಸುವೆಂದು ಬರೆಸದೆ ಯೆಹೂದ್ಯರ ರಾಜ ತಾನೆಂದನೀತನೆಂದನಿತೆ ಬರೆಸಾ !" ಎಂದು ಬೇಡಿಕೊಂಡರು. ಒಂದು ಸಾರಿ ಬರೆದುದನ್ನು ಪಿಲಾತನು ಅಳಿಸಲೊಪ್ಪದೆ ತೆರಳಿದನು. ಈ ಮೂಲಕ ಯೇಸುವಿಗೆ ಸಲ್ಲಬೇಕಾಗಿದ್ದ ಸನ್ಮಾನ ಪರೋಕ್ಷವಾಗಿ ಸಂದಂತೆಯೇ ಆಯಿತು.

ಆಜ್ಞಾಧಾರಕರಾದ ಆಳುಗಳು ಯೇಸುವನ್ನು ವಧ್ಯಸ್ಥಾನಕ್ಕೆ ಕರೆದೊಯ್ದರು. ಮುಳ್ಳಿನ ಕಿರೀಟವನ್ನಿಟ್ಟರು. ಮಾನಮುಚ್ಚುವಷ್ಟು ಬಟ್ಟೆಯನ್ನು ಮಾತ್ರ ಮೈಮೇಲೆ ಕವಿಸಿದರು. ಮೈಮೇಲೆಲ್ಲ ಬಾಸುಂಡೆಗಳು ಬರುವಂತೆ ಬಾರಿಸಿದರು. ಅವನೊಂದಿಗೆ ಮತ್ತಿಬ್ಬರು ಕಳ್ಳರನ್ನೂ ಶಿಲುಬೆಗೇರಿಸಲು ಕರೆದೊಯ್ದರು. ಯೇಸುವಾದರೋ ಅವರ ಆ ಕ್ರೌರ್ಯಕ್ಕೆ ತುಟಿ ಪಿಟಕ್ಕೆನ್ನಲಿಲ್ಲ. ಆದರೆ ತನ್ನ ಸುತ್ತುಗಟ್ಟಿದ್ದ ಹೆಂಗಸರನ್ನು ಕಂಡು "ಯೆರೂಸಲೇಮು ದುಹಿತೆಯರಿರಾ! ನನಗೆ ಗೋಳಾಡದಿರಿ; ನಿಮಗಾಗಿ ನಿಮ್ಮ ಮಕ್ಕಳಿಗಾಗಿ ಗೋಳಾಡಿ!" ಎಂದು ಉಸುರಿದನು.

ಶಿಲುಬೆಗೇರಿಸುವ ಸಮಯ ಸನ್ನಿಹಿತವಾಯ್ತು. ಆ ದಿನ ವಸಂತ ಪೂರ್ಣಿಮೆಯ ಶುಕ್ರವಾರ. ಮಟಮಟ ಮಧ್ಯಾಹ್ನವಾದರೂ ಸೂರ್ಯನ ಕಾಂತಿ ಮಂದವಾಗಿದೆ. ದೊಡ್ಡದಾದ ಒಂದು ಕಪ್ಪು ಮೋಡ ಆಕಾಶವನ್ನೆಲ್ಲ ಚಾಚಿ ಆವರಿಸಿಕೊಂಡಿದೆ, ಸೋಹನ ಕಾಲದಾ ಪ್ರಳಯ ಕಾಲದ ಮೇಘದಂತೆ ಮುಚ್ಚಿಕೊಂಡಿದೆ. ಗಾಳಿಗೂ ಉಸಿರು ಕಟ್ಟುವಂತಾಗಿದೆ. ಗಿಡಮರಗಳೆಲ್ಲವೂ ಸ್ತಬ್ಧವಾಗಿವೆ. ಹಕ್ಕಿಗಳು ಮೂಕವಾಗಿವೆ. ಜನರಾದರೋ ಮಿಡಿತೆಗಳಂತೆ ಗುಂಪುಕೂಡಿ ಗೊಲ್ಗೊಥ ಗಿರಿಗೆ ಹೊರಟಿದ್ದಾರೆ. ಏರ್ಪಾಡಾಗಿದ್ದಂತೆ, ಮೂರು ಶಿಲುಬೆಗಳನ್ನು ಬೆಟ್ಟದ ಮೇಲೆ ನೆಟ್ಟಿದ್ದಾಯಿತು. ಅಕ್ಕ ಪಕ್ಕಗಳಲ್ಲಿ ಇಬ್ಬರು ಕಳ್ಳರ ಮಧ್ಯೆ ಯೇಸುವನ್ನು ಶಿಲುಬೆಗೇರಿಸಿದರು. ಆ ಹೃದಯ ವಿದ್ರಾವಕವಾದ ದೃಶ್ಯವನ್ನು ಬರಿಯ ಮಾತುಗಳಲ್ಲಿ ಚಿತ್ರಿಸುವುದಾದರೂ ಹೇಗೆ? ಕವಿಗಳು ಉಪಮಾನಗಳ ಮೂಲಕ ಬಹು ಮಾರ್ಮಿಕವಾಗಿ ನಿರೂಪಿಸುತ್ತಾರೆ.

> ..................................ಹದ್ದುಬಿಗಿ
> ಹಿಡಿದ ಲಾವಿಗೆಯಂತೆ, ಪಡುವಣದಿ ಬಿಳಿಯ ಬಿದಿ
> ಗೆಯ ತಿಂಗಳಂತೆ, ಬಿಲ್ಲಿಗೆ ತೊಟ್ಟ ಸರಳಂತೆ,
> ಮರಣವೃಕ್ಷದೊಳಮೃತಫಲದಂತೆ...... ...

ಯೇಸುವು ಕಂಡುಬಂದನೆಂದು ಹೇಳುತ್ತಾರೆ. ಶಿಲುಬೆಯಲ್ಲಿ ತೂಗಾಡುತ್ತಿರುವ ಆ ಹುತಾತ್ಮನನ್ನು ಮರಣವೆಂಬ ವೃಕ್ಷದಲ್ಲಿ ಬಿಟ್ಟ ಅಮೃತ ಫಲದಂತೆ ಇದ್ದನೆಂದು ಹೇಳುವ ಮಾತು ಒಂದಕ್ಕೊಂದು ವಿರೋಧವೆನ್ನಿಸಿದರೂ ಸ್ವಾರಸ್ಯದ ದೃಷ್ಟಿಯಿಂದ ಪರಿಶೀಲಿಸಿದರೆ ಅದು ಅತ್ಯಂತ ಉಜ್ವಲವೆನ್ನಿಸುತ್ತದೆ. ಅಜರಾಮರವಾದ ಕೀರ್ತಿಯನ್ನು ಗಳಿಸಿರುವ ಯೇಸುವಿನ ವ್ಯಕ್ತಿತ್ವಕ್ಕೆ ಈ ಹೇಳಿಕೆ ಕಳಶವಿಟ್ಟಂತಿದೆ.

ಎಂಥ ಸಂಯಮಿಯಾದರೂ ಚಿತ್ರಹಿಂಸೆಯನ್ನು ಎಲ್ಲಿಯವರೆಗೆ ಸಹಿಸಿಯಾನು? ಯೇಸುವಿಗೂ ಯಾತನೆ ಸಹಿಸಲಸಾಧ್ಯವಾಯಿತು. ಆದರೂ ಆ ಸಂಕಟವನ್ನು ಹೇಗೋ ನುಂಗಿಕೊಂಡು, ಮಗುವಿನ ಮುಖವನ್ನು ಕಂಡೊಡನೆಯೇ ತಾಯಿ, ತನಗಾಗಿದ್ದ ಬೇನೆಯನ್ನು ಮರೆಯುವಂತೆ, ತನ್ನವರ ಸಲುವಾಗಿ ಹಂಬಲಿಸತೊಡಗಿದನು. "ಕ್ಷಮಿಸಿವರನೆಲೆ ತಂದೆ! ತಾವೇನನೆಸಗಿದಪೆವೆಂದರಿಯರಿವರು" ಎಂಬುದಾಗಿ ಅಂದು ಆತನಾಡಿದ ಈ ವಾಕ್ಯಗಳು ಇಂದಿಗೂ ಜಗತ್ಪ್ರಸಿದ್ಧವಾಗಿವೆ. ಈ ಔದಾರ್ಯ ಮಾನವನ ಕಲ್ಪನೆಗೂ ಮಿಗಿಲಾಗಿದ್ದು ಯೇಸುವಿನ ಹೃದಯದ ಆಳ ಅಗಲಗಳನ್ನು ತಿಳಿಯುವುದಕ್ಕೆ ಈ ಒಂದು ಹೇಳಿಕೆಯೇ ಸಾಕು. ಇಷ್ಟಾದರೂ ಆ ಜನತೆಗೆ ಆತನಲ್ಲಿ ಅಭಿಮಾನ ಮೂಡುವುದಕ್ಕೆ ಬದಲಾಗಿ ಆತನನ್ನೇ ಮತ್ತೆ ಮತ್ತೆ ಹಂಗಿಸಿದರು. "ಹಾ! ನಮಗಾಗಿ ಕ್ಷಮೆಯಯಾಚಿಸುವುದಂತಿರಲಿ: ನೀ ದೇವಸುತನಾಗಿದ್ದರೀ ಶಿಲುಬೆಯಿಂದಿಳಿದು ಬಾರ ನೋಡುವ," "ಅನ್ಯರಂ ರಕ್ಷಿಸಿದಿವಂ ತನ್ನ ತಾನೇ ರಕ್ಷಿಸಲಾರನಾದನೆ? ಯೆಹೂದ್ಯರರಸಂತೆ! ತಾನಿಳಿತರಲಿ ಸಿಲುಬೆಯಿಂದೊಡನೆ ನಂಬುವೆವಿವನ! ದೇವರೊಳೆ ಭರವಸಿಗನಂತೆ! ಕಾಂಬೆವು ದೇವರೀತನಂ ರಕ್ಷಿಸಲಿ! ದೇವಸುತ ತಾನೆಂದನಲ್ತ!" ಎಂದು ಪರಿಪರಿಯಾಗಿ ಅಲ್ಲಗಳೆದರು. ಇಂಥ ಪರಿಸ್ಥಿತಿಯನ್ನು ಯೇಸುವು ಎದುರಿಸಬೇಕಾಯಿತು. ಅವನಲ್ಲಿ ಈಗ ಧಾರಾಳವಾಗಿದ್ದುದು ಒಂದೇ ಒಂದು. ಅದೇ ದಯೆ! ಯೇಸುವು ಒಂದು ಬಿರುನುಡಿಯನ್ನೂ ಆಡಲಿಲ್ಲ. ಈ ಮಾತುಗಳನ್ನು ಕಿವಿಗೊಟ್ಟು ಕೇಳಿದನೋ ಇಲ್ಲವೋ ತಿಳಿಯದು. ಅವನ ಜೀವ ಈ ವೇಳೆಗಾಗಲೇ ಭಗವಂತನಿಗೆ ಅರ್ಪಿತವಾಗಿತ್ತು. ಸುತ್ತಲೂ ಹಗಲಿನಲ್ಲಿಯೇ ಕತ್ತಲೆ ಕವಿದು ಬಂದಿತು. ಮಿಸ್ರದೊಂಬತ್ತನೆಯ ಮಾರಿಯಂತೆ ಅದು ಎಲ್ಲರಿಗೂ ಭಯವನ್ನುಂಟು ಮಾಡಿತು ಎಂದು ಅಪೂರ್ವವಾದ ಒಂದು ಸಾದೃಶ್ಯವನ್ನು ಕವಿಗಳು ಇಲ್ಲಿ ಕೊಟ್ಟಿರುತ್ತಾರೆ. ಶಿಲುಬೆಯಲ್ಲಿದ್ದ ಯೇಸುವು "ಎಲೀ! ಎಲೀ! ಲಮ್ಮಾಸಬಕ್ಥಾನಿ? (ದೇವರೇ! ದೇವರೇ! ಯಾಕೆನ್ನ ಕೈಬಿಟ್ಟೆ") ಎಂದು ಕಡೆಯಬಾರಿಗೆ ನುಡಿದು ಭಗವಂತನ ಎಡೆಗೆ ನಡೆದನು.

ಯೇಸುವಿನ ಆತ್ಮ ಹೇಗೆ ತೆರಳಿತೆಂಬ ಕಲ್ಪನೆಯನ್ನು ಕವಿಗಳ ಮಾತಿನಲ್ಲೇ ಪರಿಭಾವಿಸುವುದು ಸೂಕ್ತ.

> "ತಂದೆಯೆ! ಮಮಾತ್ಮವಂ ನಿನ್ನ ಕೆಯ್ಗೊಪ್ಪಿಸುವೆ!"
> ಎಂದು ಗಗನದಿ ಯೇಸು ಕಣ್ಣೂರಿ, ತುದಿಬೆಟ್ಟ
> ದಿಂ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ,
> ಸುಗ್ಗಿಯೆಡೆಗೆಯ್ದುವಾ ಬಾಸಕ್ಕಿಯಂತೆ, ದಿನ
> ಮುಖದೊಳಿರುಳಿನ ಸೊಡರು ನೇಸರಂಬುಗುವಂತೆ,
> ಕ್ಷಿತಿಜದಿಂ ಸಿಡಿದು ಮೇಲ್ನೆಗೆವ ಮಿಂಚಂತೆ, ಯೇ
> ಸುವಿನಾತ್ಮಮೊಡನೆ ಬೆಳಕಿನ ಬೀಡಿಗಯ್ದೆ, ನಿಲು
> ನೇಸರುಗಳೆಡೆಗಯ್ದೆ, ಕಣ್ಮುಗಿದು ತಲೆಬಾಗಿ
> ತನ್ನ ಪಡೆದೆರವನೊಡೆಯಂಗೆ ಮರಳೀವಂತೆ
> ತನ್ನ ತಂದೆಗೆ ಯೇಸುವಸುವನೊಪ್ಪಿಸಿದಂ."

ಇಲ್ಲಿನ ಒಂದೊಂದು ಹೋಲಿಕೆಯೂ ಯೇಸುವಿನ ಜೀವಕ್ಕೆ ದೊರೆತ ಮುಕ್ತಿಯ ಸ್ವರೂಪವನ್ನು ಚಿತ್ರಿಸುತ್ತದೆ. ಆತ್ಮದ ಆವೇಗ ಬಿಡುಗಡೆಯನ್ನು ಪಡೆದಿದ್ದಕ್ಕಾಗಿ ಅದಕ್ಕೆ ಆಗುವ ಆನಂದ, ಅದರ ಕಾಂತಿ ಮತ್ತು ಸಾರ್ಥಕತೆಗಳನ್ನು ಇಲ್ಲಿ ಮನಗಾಣಬಹುದು.

ಅವರೆಗೆ ಆವರಿಸಿದ್ದ ಭಯಂಕರ ವಾತಾವರಣ ಕ್ರಮಕ್ರಮವಾಗಿ ಕಡಿಮೆಯಾಗುತ್ತ ಬಂದಿತು. ರೋಮಕ ಶತಾಧಿಪತಿಯೂ ಹುತಾತ್ಮನಾದ ಯೇಸುವಿಗೆ ತಲೆಬಗ್ಗಿಸಿ ತನ್ನ ಗೌರವವನ್ನು ಸಲ್ಲಿಸದಿರಲಿಲ್ಲ. ಕವಿದಿದ್ದ ಕತ್ತಲೆ ತನಗೆ ತಾನೇ ಸರಿಯಿತು. ಪಶ್ಚಿಮ ದಿಗಂತದಲ್ಲಿ ಮುಳುಗುತ್ತಿದ್ದ ಸೂರ್ಯದೇವನು ಸಿಲುಬೆಯಲ್ಲಿ ತೂಗಾಡುತ್ತಿದ್ದ ಯೇಸುವನ್ನು ನಿಟ್ಟಿಸಿ, "ಧರ್ಮ ಪತಾಕೆಯಂತೆ ನಡು ಸಿಲುಬೆಯಲ್ಲಿ ಚಾಚಿದ ಪರಾರ್ಕನಂ ಕಂಡು ತಾನಸ್ತಮಿಸಿದ"ನಂತೆ ! ನಿಮಿಷ ಮಾತ್ರದಲ್ಲಿ ಆ ಎಡೆ ನಿರ್ಜನವಾಯಿತು; ನೀರವವಾಯಿತು. ಕಾವಲುಗಾರನು ತನ್ನ ಸರದಿ ಎಂದು ಮುಗಿದೀತೋ ಎಂದು ಎದುರುನೋಡುತ್ತಿದ್ದಾನೆ. ಜನಜಂಗುಳಿಯೆಲ್ಲ ಕಣ್ಮರೆಯಾಗಿದ್ದರೂ, ದೂರದಲ್ಲಿ ಉದುಂಬರದ ನೆರಳಲ್ಲಿ ಮಗ್ದಲದ ಮೇರಿಯು ಮಾತ್ರ ತನ್ನ ಒಡೆಯನನ್ನು ಬಿಟ್ಟು ಹೋಗಲಾರದೆ ಸಿಲುಬೆಯ ಮೇಲೆ ನೆಟ್ಟನೋಟದಿಂದ ಕುಳಿತಿದ್ದಳು. ಸೂರ್ಯನನ್ನು ಬೀಳ್ಕೊಟ್ಟ ಜಗತ್ತು ಚಂದ್ರನನ್ನು ಬರಮಾಡಿಕೊಂಡಿತು. ಉದಿಸಿ ಬರುತ್ತಿದ್ದಂತೆಯೇ ಚಂದ್ರನು ಯೇಸುವಿಗೆ ಬೀಳ್ಕೊಡೆಯನ್ನು ಹಿಡಿದು ಆ ಮಹಾನುಭಾವನ ಯಶಸ್ಸನ್ನೇ ಬೆಳದಿಂಗಳಿನಂತೆ ಹರಿಸತೊಡಗಿರುವಂತೆ ಕಂಡುಬಂದಿತು. ಆ ಶುಭ್ರವಾದ ಜ್ಯೋತ್ಸ್ನೆಯು ಯೇಸುವಿನ ಅಕ್ಕರೆಯಂತೆ, ಆತನ ನಿತ್ಯ ಜೀವನದ ಧವಳಿಮೆಯಂತೆ, ಆತನ ಅಮೃತತ್ತ್ವದಂತೆ ಸುತ್ತಲೂ ವ್ಯಾಪಿಸಿತು. ಹುತಾತ್ಮನ ಮರಣಕ್ಕೆ ಅದು ಮಂಗಳವನ್ನು ಹಾಡಿ ಹರಸಿದಂತಿತ್ತು.

— 2 —

ಯೇಸುಕ್ರಿಸ್ತನ ಕಡೆಯ ದಿನವನ್ನು ಕಂಡ ಕವಿಯ ದರ್ಶನಕ್ಕೆ ಭರತಖಂಡದಲ್ಲಿ ಬದುಕಿ ಬಾಳಿ ಸಮಸ್ತ ಜಗತ್ತಿಗೇ ಅಹಿಂಸೆಯ ಮಹತ್ವವನ್ನು ಸಾರಿ ಹೇಳಿದ ಭಗವಾನ್ ಬುದ್ಧದೇವನ ಪರಿಪೂರ್ಣವಾದ ಜೀವನದ ಮಹಾ ನಿರ್ವಾಣದತ್ತ ಮನಸ್ಸು ಸೆಳೆಯುವುದು ಸ್ವಾಭಾವಿಕವೇ ಸರಿ. ಅಲ್ಲಿನ ದುರಂತದಿಂದ ತೊಯ್ದ ಕಣ್ಣಿಗೆ ಪ್ರಶಾಂತವಾಗಿ ಜೀವವನ್ನು ಭಗವಂತನಿಗೆ ಸಮರ್ಪಿಸಿದ ಮಹಾತ್ಮನ ಮರಣ ಅಷ್ಟೇ ಹಿರಿದಾದದ್ದು. ಅಲ್ಲಿನ ರೌದ್ರತೆಗೂ ಇಲ್ಲಿನ ಸೌಮ್ಯತೆಗೂ ಅಜಗಜಾಂತರವೆಂದು ಹೇಳಲೇಬೇಕಾಗಿಲ್ಲ. ಎಂದಿನಂತೆಯೇ ಪೂಜ್ಯ ಗೋವಿಂದಪೈಗಳು ಕನ್ನಡಕ್ಕೆ ಹೊಚ್ಚ ಹೊಸತಾದ ಬೌದ್ಧ ಸಾಹಿತ್ಯದ ಸಾರವನ್ನೆಲ್ಲ ಸಂಗ್ರಹಿಸಿ, ಈ ನೀಳ್ಗವಿತೆಯ ಮೂಲಕ ನೀಡಿರುತ್ತಾರೆ. ಪಂಕ್ತಿ ಪಂಕ್ತಿಯಲ್ಲಿಯೂ ಅವರ ಪಾಂಡಿತ್ಯದ ಪರಿಚಯವಾಗುತ್ತದೆ. ಅದರೊಂದಿಗೆ ಅವರು ಹಿಡಿದೆತ್ತಿ ತೋರುವ ತಥಾಗತನ ಭವ್ಯವ್ಯಕ್ತಿತ್ವವೂ ತನಗೆ ತಾನಾಗಿಯೇ ಬೆಳೆಯುತ್ತ ಹೋಗುತ್ತದೆ.

ಪ್ರಕೃತ ಕವಿತೆಯ ಹೆಸರೂ ಗೊಲ್ಗೊಥದಷ್ಟೇ ಅರ್ಥಪೂರ್ಣವಾದದ್ದು. ಬುದ್ಧನ ಜೀವನದಲ್ಲಿ ವೈಶಾಖ ಶುಕ್ಲ ಪೂರ್ಣಿಮೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಆತನು ಜನಿಸಿದ್ದು, ಬೋಧಿಯನ್ನೂ ಪಡೆದದ್ದು ಮತ್ತು ಪರಿನಿರ್ವಾಣನಾದದ್ದು ವೈಶಾಖ ಶುಕ್ಲ ಪೂರ್ಣಿಮೆಯಂದು. ಆದ್ದರಿಂದ ಕವಿಗಳು ಬುದ್ಧನ ಕಡೆಯ ದಿನದ ಈ ಹುಣ್ಣಿಮೆಗೆ ಪ್ರಾಶಸ್ತ್ಯವನ್ನಿತ್ತು ತಮ್ಮ ಕವಿತೆಯನ್ನು "ವೈಶಾಖಿ" ಎಂದು ಕರೆದಿರುವರು.

ದೇಶದೇಶಗಳಲ್ಲಿ ಸಂಚರಿಸಿ ಬೋಧೆ ಮಾಡುತ್ತ ಬಂದ ಬುದ್ಧನು ಪಾವೆಗೆ ಬಂದೊಡನೆಯೇ ಆತನಿಗೆ ತನ್ನ ಆಯು ಮುಗಿಯಲಿದ್ದು, ಕುಶಿನಾರಕ್ಕೆ ತೆರಳಿ ಅಲ್ಲಿ ಪರಿನಿರ್ವಾಣವನ್ನು ಪಡೆಯಬೇಕೆಂದು ಪ್ರೇರಣೆಯಾಗುತ್ತದೆ. ಈ ಅಲೌಕಿಕ ಗುಣದಿಂದಲೇ "ವೈಶಾಖಿ"ಯ ಕವನದ ಕಥೆ ಮೊದಲಾಗುತ್ತದೆ. ಬುದ್ಧನು ಕಮ್ಮಾರಚುಂದನ ಮನೆಯಲ್ಲಿ ಸ್ವೀಕರಿಸಿದ "ಸೂಕರ ಮದ್ದವ"ವೇ ಆತನ ಅನಾರೋಗ್ಯಕ್ಕೆ ಕಾರಣವಾಗುತ್ತದೆ. ಎಂಭತ್ತು ವರ್ಷದ ಆತನಿಗೆ ತನ್ನ ಜೀವನದಲ್ಲಿ ಮಾರನು ಬಂದು ಮೇಲಿಂದ ಮೇಲೆ ಪ್ರತಿಭಟಿಸಿ ನಿಂತುದೂ ಅವನನ್ನು ಗೆದ್ದು ಆವರೆಗೆ ತನ್ನ ಕಾರ್ಯದಲ್ಲಿ ತೊಡಗಿ ಕೃತಾರ್ಥನಾದುದೂ ನೆನಪಿಗೆ ಬರುತ್ತದೆ. ತನ್ನ ಪ್ರಿಯ ಬಂಧುವೂ ಶಿಷ್ಯನೂ ಆದ ಆನಂದನನ್ನು ಕರೆದು ಕುಶಿನಾರದತ್ತ ಪ್ರಯಾಣ ಸಾಗುವಂತೆಯೂ ಮಾರನೆಯ ದಿನವೇ ತನ್ನ ಪರಿನಿರ್ವಾಣ ಆಗಲಿರುವುದೆಂದೂ ಹೇಳಿದನು. ಆ ದಿನವನ್ನೇ ಎದುರು ನೋಡುತ್ತಿದ್ದ ಬುದ್ಧನಿಗೆ ಸಾವು ಭಯಂಕರವೆನಿಸುವುದಿಲ್ಲ. ಅದಕ್ಕೆ ಬದಲಾಗಿ ಅದು ಶುಭಪ್ರದವೆನ್ನಿಸುತ್ತದೆ.

............................ಮತ್ತೆ ಕೇಳಾನಂದ
ಕಾದ ಕಬ್ಬಿಣಕಿತ್ತ ನೀರಂತೆ, ನಿದ್ದೆಯಿಂ
ತಿಳಿದವನ ಕನಸಾರುವಂತೆ, ಕಪ್ಪುರ ಸುಟ್ಟು
ಬೂದಿಲ್ಲದಂತೆ, ತನಿವಾಲ ನೊರೆಯಂತೆ ಪರಿ
ನಿರ್ವೃತಿಸುವಂ ಸುಗತನಿದೊ ಹಳೆಯ ಪಂಜರದ
ಸಡಲಿದ ಸಲಾಕೆಯಂತೆ ನಿಮಿತ್ತ ಮಾತ್ರವೀ
ರುಜೆಯದಕೆ. ಆನಂದ, ವಯಸೆನ್ನ ಪರಿಪಕ್ವ
ವಾಯ್ತು, ನೋಡಿಂದೆ ತುಂಬಿತು ವರುಷವೆಂಬತ್ತು.
ಸಂದುದಾಯುಷ್ಯ. ಹೆಚ್ಚಿನ ಜೋಕೆಯಿಂ ತಥಾ
ಗತನ ದೇಹಂ ಹರಕು ಬಂಡಿಯೆನೆ ಕುಲುಕುತಿದೆ.
ಎಂದಿಗೆ ಗಡಾ ನಿರೋಧ ಸಮಾಧಿಯಲಿ ವಿಹರಿ
ಪನೊ ಸುಗತನವನ ದೇಹಕ್ಕೆ ನೆಮ್ಮದಿಯಂದೆ.

ಎಂಬುದಾಗಿ ಅಂತ್ಯಕ್ಷಣವನ್ನು ಹೃತ್ಪೂರ್ವಕವಾಗಿ ಹಾರೈಸಿ ಆನಂದನೊಂದಿಗೆ ಹೇಳಿಕೊಂಡನು. ತುಂಬು ಬದುಕಿನ ಈ ಭಾವನೆ ಬೋಧಪ್ರದವಾಗಿದೆ. ಭಿಕ್ಷುಗಳನ್ನು ಕುರಿತು "ಭಿಕ್ಷುಗಳೆ, ಶೀಲಂ. ಸಮಾಧಿ.ಪ್ರಜ್ಞೆ, ವಿಮುಕ್ತಿ ಈ ಚತುರ್ಧರ್ಮದನುಬೋಧಿಯಾಗುವುದೆ ಭವಭವಕೆ ನೀಸುತಲಿರುವ ಭವತೃಷ್ಣೆಯುಚ್ಛಿನ್ನವಾಗಿ ಬಳಿಯಂ ಪುನರ್ಭವವಿಲ್ಲ. ಕೇಳಿರೈ ವ್ಯಯಧರ್ಮವೆಲ್ಲ ಸಂಸ್ಕಾರವದರಿಂ ಸಾವಧಾನಿಸಿರಿ. ಇಂದೆ ನಿಮ್ಮಿಂದಗಲಿ ಪೋಪೆ. ನೀವಪ್ರಮತ್ತರೆ, ಜಾಗ್ರತರೆ, ಸುಶೀಲರೆ, ಸಮಾಹಿತರೇ ಆಗಿರಿ, ಚಿತ್ತವಂ ದಮಿಸಿಕೊಳ್ಳಿರಿ, ಯಾವಾತನೀ ಉಪದೇಶವಂ ತಪ್ಪದಿಂತು ಕೈಗೊಳುವನಾತಂ ಸಂಸೃತಿಯ ತೇರಿ ದು:ಖವಂ ಕೊನೆಗೊಳಿಸುವಂ" ಎಂದು ಹಿತೋಪದೇಶವಂ ಹೇಳಿ ಮುಂದೆ ನಡೆದನು. ಈ ಸನ್ನಿವೇಶವೇ ಪ್ರಶಾಂತ ಧ್ವನಿಪೂರ್ಣವಾಗಿದೆ. ನಿರಪರಾಧಿಯಾದ ಯೇಸುವನ್ನು ಆತನ ಜನರೇ ಸೆಳೆದುಕೊಂಡು ಬಂದು ಪಿಲಾತನ ಕೈಗೆ ಶಿಕ್ಷೆ ವಿಧಿಸಲೆಂದು ಒಪ್ಪಿಸಿಕೊಡುವ ಆ ಕಠೋರವಾದ ಸಂದರ್ಭವನ್ನು ಚಿತ್ರಿಸಿದ ಲೇಖನಿಯೇ ಇಲ್ಲಿ ತನ್ನವರೆಲ್ಲರ ಪ್ರೀತಿ ವಿಶ್ವಾಸಗಳಿಂದ ತಣಿದು ಅವರಿಗಾಗಿ ಕಡೆಯ ಮಾತನ್ನು ಹೇಳಿ ತನ್ನ ಸಾವನ್ನು ತಾನಾಗಿಯೇ ಎದುರುಗೊಳ್ಳಲು ಹೋಗುತ್ತಿರುವ ಹುತಾತ್ಮನ ಮನೋಧರ್ಮವನ್ನು ಬಹು ಗಹನವಾಗಿ ರೂಪಿಸುವುದನ್ನು ಕಾಣಬಹುದು.

ಪ್ರಭಾತ ಕಾಲದ ಮುನ್ಸೂಚನೆಯ ಪ್ರಕೃತಿಯ ವ್ಯಾಪಾರದ ವಿವರವಾದ ವರ್ಣನೆ ಬರಲಿರುವ ಪರ್ವದಿನಕ್ಕೆ ತಕ್ಕ ಪೀಠಿಕೆಯಂತಿದೆ. ಪಯಣ ಬೆಳೆಸಿದ್ದ ತಥಾಗತನಿಗೆ ಸ್ವಲ್ಪ ಆಯಾಸವಾಯಿತು. ಅಲ್ಲಿಯೇ ಗಿಡದಡಿಯಲ್ಲಿ ಕ್ಷಣಕಾಲ ವಿಶ್ರಮಿಸಿಕೊಳ್ಳಲು ಅಪೇಕ್ಷಿಸಿದನು. ಬಾಯಾರಿಕೆಯಾಗಲು ನೀರನ್ನು ತರುವಂತೆ ಆನಂದನಿಗೆ ಹೇಳಿದನು. ಸಮೀಪದ ತೊರೆಯ ನೀರು ಆಗ ತಾನೆ ಕದಡಿ ಬಗ್ಗಡವಾಗಿತ್ತು. ಆನಂದನು ಒಡೆಯನಿಗೆ ಎಷ್ಟು ಸಮಾಧಾನ ಹೇಳಿದರೂ ಆತನಿಗೆ ದಾಹವನ್ನು ಸಹಿಸಲಾಗಲಿಲ್ಲ. ನಿರ್ವಾಹವಿಲ್ಲದೆ ಆನಂದನು ತೊರೆಯ ಸಮೀಪಕ್ಕೆ ಬಂದು ನೋಡಲು, ಅದು ಆ ವೇಳೆ ಸ್ವಚ್ಛವಾಗಿ ಕಂಗೊಳಿಸಿತು. ಆನಂದನಿಗೆ ಅದು ತನ್ನ ಪ್ರಭುವಿನ ಪವಾಡವಿರಬೇಕೆನ್ನಿಸಿತು. ಕ್ಷಿಪ್ರವಾಗಿ ನೀರನ್ನು ತಂದುಕೊಟ್ಟನು. ಬುದ್ಧನು ದಣಿವಾರಿಸಿಕೊಂಡು ಪದ್ಮಾಸನಾಸೀನನಾಗಿ ಕುಳಿತಿದ್ದರೆ "ಡಿಂಡೀರ ಪಿಂಡದಿ ಮರಾಲ ಮಂಡಿಸಿದಂತೆ" ತೋರಿ ಬರುತ್ತಿತ್ತು. ಬುದ್ಧನ ಆ ತೇಜೋಮಯವಾದ ಮೂರ್ತಿ ಸ್ವರೂಪವನ್ನು ಕವಿಯ ಕಣ್ಣು ತನ್ನ ಕಲ್ಪನಾ ಬಲದಿಂದ ಕಂಡು ಅಲ್ಲಿಯೇ ನಟ್ಟನೋಟದಿಂದ ನಿಬ್ಬೆರಗಾಗುವುದು. ಯೇಸುವಿನ ಆ ಭವ್ಯ ಸ್ವರೂಪಕ್ಕೆ ತನ್ನ ಕಾಣಿಕೆಯನ್ನು ಸಮರ್ಪಿಸಿದಂತೆಯೇ ಇಲ್ಲಿಯೂ ತನ್ನ ವಚನಾಂಜಲಿಯನ್ನು ಬೊಗಸೆ ಬೊಗಸೆಯಾಗಿ ಸಮರ್ಪಿಸುವುದನ್ನು ಕಾಣಬಹುದು. ಈ ನಿರೂಪಣೆಗೆ ಕವಿಯ ವಾಣಿಯನ್ನೇ ಮರೆಹೋಗುವುದು ಮೇಲು.

ಬಾರೆನ್ನ ಮನಸೆ ನೋಡಲ್ಲಿ ಮರದಡಿಯಲ್ಲಿ
ಕುಳಿತಿಹ ತಥಾಗತನ! ನಸುಕಿನಲಿ ನಸು ಮುನ್ನ
ಮಸುಕಿದಾ ಸುಗತನನ್ನೀಗ ನೆಟ್ಟನೆ ನೋಡ!
ವರುಷವೆಂಬತ್ತಂತೆ, ಇಂದೆ ತುಂಬಿತ್ತಂತೆ-
ತೊಗಲನಿತು ಸಡಲಿಲ್ಲ, ನವಿರನಿತು ನರೆತಿಲ್ಲ,
ದನಿಯಣಂ ಕುಗ್ಗಿಲ್ಲ, ಹುರಿಯಣಂ ಬಗ್ಗಿಲ್ಲ,
ಕಣ್ಣಾಲಿ ಬೆಳೆತಿಲ್ಲ, ಹಲ್ಲೊಂದು ಜಗುಳಿಲ್ಲ.
ನೋಡ ಸಂಧ್ಯಾವರ್ತ ತರುವಂತೆ ಮಧ್ಯವೋ
ನ್ನತನ ಜಂಬೂಫಲದ ಧವಲ ದೇಹಚ್ಛವಿಯ!
ಶೈವಲಾಚ್ಛನ್ನ ಕಾಸಾರದಂತಾನನಂ
ನೋಡೆನಿತು ಗಂಭೀರ! ನೋಡ ಮೋಡದ ಮರೆಯ
ಮಿಂಚಂತೆ ದೃಗ್ವಿಶಯದಾಚೆ ನಿಟ್ಟಿಪ ಮುಕುಲ
ನೇತ್ರವಂ! ಕರ್ಣಗಳೊ ಎನಿತೋ ಪ್ರಶ್ನೆಗಳೊಗುವ
ಆನೆಬಾಗಿಲೊ ನೋಡ! ನಾಸಿಕವೋ ಮಾರನಂ
ಸೋವ ಕಹಳೆಯೋ ನೋಡ! ಬಾಯೊ ವಾಗ್ವಾಹ್ನವಿಯ
ನಂತ ಕಾಲದೆ ಹುಯ್ವ ಸಾಗರದ್ವಾರವದೊ
ನೋಡ! ನೋಡ ವಿಶಾಲ ವೃಕ್ಷವೋ ವಿಭಾತದಾ
ಪಾಟಲಾಭ್ರವೊ! ನೋಡ ನ್ಯಗ್ರೋಧ ಶಿಖೆಯೊ ಆ
ಜಾನುಬಾಹುವೊ! ನೋಡ ವಿಪುಲಾಂಕವೊ ಕಕುತ್ತೆ
ಯಂತರೀಪವೊ! ನಿಶೀಥದ ಶಶಾಂಕಾತಪವೊ
ಬ್ರಹ್ಮಚರ್ಯದ ಶೀತಲೋಜಸ್ವಿತೆಯೊ ನೋಡ!
ಕಣ್ತಣಿಯೆ ನೋಡ, ಕಣ್ಗುಡಿದು ನೋಡಿಂದೆ ಈ
ಜ್ಞಾನದೀ ಧ್ಯಾನದೀ ಶಾಂತಿಯಿ ಕಾಂತಿಯಿ
ಅರ್ಹಂತವೀ ಧರ್ಮವಿನಯ ವಿದ್ಯಾಚರಣ
ಸಂಪನ್ನವೀ ಅನುತ್ತರವೀ ಪುರುಷದಮ್ಯ

ಸಾರಥಿಕವೀ ಸುಗತವೀ ದೇವಮಾನುಷ್ಯ
ಶಾಸ್ತೃವೀ ಸಂಬುದ್ಧವೀ ಲೋಕವೇತ್ತೃವೀ
ಭಗವಂತವೀ ದಯೈಕಾಲೋಕವೀ ಅಪರ
ಭಾನುವಾಳ್ದಪನು ನಿಬ್ಬಯಲೊಳಗೆ ನೋಡ !

ಈ ನಿಡಿದಾದ ವರ್ಣನೆ ಬುದ್ಧದೇವನ ಸಮಗ್ರ ವ್ಯಕ್ತಿತ್ವವನ್ನು ಎಷ್ಟು ಅರ್ಥಗರ್ಭಿತವಾಗಿ ಚಿತ್ರಿಸುತ್ತದೆಯೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಸೂರ್ಯನೊಂದಿಗೆ ಸ್ಪರ್ಧಿಸಿ ಮತ್ತೊಬ್ಬ ಸೂರ್ಯನೇ ಉದಿಸಿಬಂದಂತೆ ತೋರಿಬಂದಿತು ಎಂಬ ಕಡೆಯ ಸಾಲಂತೂ ಆ ಮಹಾನುಭಾವನ ಮಹಿಮೆಗೆ ಮಕುಟವಿಟ್ಟಂತಿದೆ.

ಇಂತು ಗಿಡದಡಿಯಲ್ಲಿ ಮಂಡಿಸಿದ್ದ ಬುದ್ಧನನ್ನು ಪುಕ್ಕುಸನೆಂಬಾತನು ಕಂಡು "ಸಕಲ ದೇವತೆಗಳುಂ ಮನುಜರುಂ ಸುಖವನಿಚ್ಛಿಸಿ ಮಂಗಲದ ಕಲ್ಪನೆಯ ಮಾಡುತಿಹರೈಸೆ? ಅದರೊಳುತ್ತಮವಾವ ಮಂಗಲಂ? ಪೇಳ ಭಗವಂತ" ಎಂದು ಪ್ರಶ್ನಿಸಿದನು. ಪ್ರಶಾಂತಮೂರ್ತಿಯಾದ ಬುದ್ಧನು ಮನುಷ್ಯರು ನಡನುಡಿ, ಆಚಾರವಿಚಾರಗಳಲ್ಲಿ ಪರಿಶುದ್ಧವಾಗಿ ಬದುಕುವುದೇ ಅತ್ಯಂತ ಶ್ರೇಷ್ಠವಾದುದೆಂದೂ ಪ್ರಪಂಚದ ಕಷ್ಟ ಕಾರ್ಪಣ್ಯಗಳಿಗೆ ಕುಗ್ಗದೆ "ನಿಂದಾಸ್ತವಂ. ಯಶೋಪಯಶ, ಸುಖದು:ಖ, ಲಾಭಾಲಾಭ"ಗಳನ್ನು ಸಮನಾಗಿ ಭಾವಿಸಿ ಬಾಳುವುದೇ ಮಂಗಲವೆಂದೂ ಸವಿಸ್ತಾರವಾಗಿ ತಿಳಿಯಹೇಳಿದನು. ಬುದ್ಧನ ವಾಣಿಗೆ ಆ ಪುಕ್ಕಸನ ಹೃದಯ ತಣಿದು,

"ಭಗವಂತ, ಬರಿಯ ಕಣಜದಿ ಗೋಣಿ ದವಸವಂ
ಸುರಿವಂತೆ, ಬಿಟ್ಟಬಂಡಿಗೆ ಎತ್ತುಗಳ ಹೂಡ
ಲೆಳೆವಂತೆ, ಬರಿಗೆಯ್ಯ ಬಣಜಿಗಗೆ ಬಂಡವಳ
ವರೆದಂತೆ, ಪಾಂಥಗಿರುಳಲಿ ಸತ್ರ ತೋರ್ದಂತೆ
ಕೃತಕೃತ್ಯನಾದೆನುತ್ತಮ ಮಂಗಲಂಗಳೀ
ಬೋಧೆಯಿಂದಿನ್ನು ಭಗವಂತನಿಗೆ ಶರಣೆಂಬೆ,
ಧರ್ಮಕಾಂ ಶರಣೆಂಬೆ, ಸಂಘಕಾಂ ಶರಣೆಂಬೆ"

ಎಂದು ಹೇಳಿ ಧನ್ಯನಾದನು. ವ್ಯಾಪಾರಿಯಾದ ಆತನ ಬಾಯಲ್ಲಿ ಬರುವ ಉಪಮಾನಗಳು ಅವನ ಮನೋಧರ್ಮಕ್ಕೆ ತಕ್ಕಂತಿವೆ. ಕಡೆಯಲ್ಲಿ ಹೊಂಗೆಲಸದ ಎರಡು ಉತ್ತರೀಯಗಳನ್ನು ಕೊಟ್ಟನು. ಅದರಲ್ಲಿ ಒಂದನ್ನು ಬುದ್ಧನಿಗೂ ಇನ್ನೊಂದನ್ನು ಆನಂದನಿಗೂ ಹೊದಿಸಲಾಯಿತು. ಬುದ್ಧನಿಗೆ ಹೊದಿಸಿದ್ದ ಆ ಹೊಂಬಟ್ಟೆ "ಸಂಧ್ಯಾರುಣಂ ಕೌಮುದಿಸುವಂತೆ, ಪಾರದಂ ತಗುಳ್ದ ಹೊನ್ನಂತೆ, ಹೊಟ್ಟುದುಗಿದಾ ಸೆಲ್ಲಂತೆ ಕಳೆಗುಂದೆ" ಆನಂದನಿಗೆ ಆಶ್ಚರ್ಯವಾಯಿತು. ಯಾಕೆ ಹಾಗಾಯಿತೆಂದು ಭಗವಾನ್ ಬುದ್ಧನನ್ನೇ ಕೇಳಿದ. ಅದಕ್ಕೆ ಬುದ್ಧನು "ಅಂತೆಯೆ ಕಣಾನಂದ, ಆವತ್ತಿಗೊಮ್ಮೆ ಸಂಬೋಧಿವಡೆದಂದು ಮೇಣೀವತ್ತಿಗೊಮ್ಮೆ ನಿರುಪಧಿಶೇಷ ನಿರ್ವಾಣವಡೆವಂದು ಕೇಳ್ತಥಾಗತನ ಮೆಯ್ವಣ್ಣವಿಂತೆರಡು ಸೂಳಾನಂದ ಅವದಾತವಾಗುತಿದೆ ಪರಿಶುದ್ಧವಾಗುತಿವೆ" ಎಂದು ತನ್ನ ದೇಹದ ಧರ್ಮವೇ ಆ ಹೊಂಬಟ್ಟೆಯ ಕಾಂತಿ ವ್ಯತ್ಯಾಸಕ್ಕೆ ಕಾರಣವೆಂದು ತಿಳಿಯಹೇಳಿದನು. ಈ ಸಣ್ಣಪುಟ್ಟ ಸಂಗತಿಗಳು ಎಷ್ಟೆಷ್ಟು ಸೋಜಿಗವೊ ಅಷ್ಟೇ ಅರ್ಥಪೂರ್ಣವಾಗಿವೆಯೆನ್ನಲು ಅಡ್ಡಿಯಿಲ್ಲ.

ಬುದ್ಧನ ಪ್ರಯಾಣ ಮತ್ತೆ ಮುಂದುವರಿಯಿತು. ಕಕುತ್ಥಾ ನದಿಯಲ್ಲಿ ಮಿಂದು ಬಂದು ಸನಿಹದಲ್ಲಿಯೇ ಇದ್ದ ಆಮ್ರವನದಲ್ಲಿ ತಂಗಿದನು. ಆಗ ಬುದ್ಧನಿಗೆ ಭಿಕ್ಷುಗಳನ್ನು ಕುರಿತು ಒಂದು ಎಚ್ಚರಿಕೆಯ ನುಡಿಯನ್ನು ಹೇಳಬೇಕೆನ್ನಿಸಿತು. ತನ್ನ ಮರಣಕ್ಕೆ ಚುಂದನ ಮನೆಯ ಊಟವೇ ಕಾರಣವಾಯಿತೆಂದು ಜನ ಎಲ್ಲಿ ಆತನನ್ನು ನಿಂದಿಸುವರೋ ಎಂದು ಶಂಕೆಯುಂಟಾಯಿತು. ಅದಕ್ಕಾಗಿ "ದೂರದಿರಿ ಮೇಣ್ಮರುಗಲೀಯದಿರಿ ಚುಂದನನ್ನವನ ಸೂಕರ ಮದ್ದವಂ ತಥಾಗತಗಿಂತು ಕೊನೆಯ ಕೂಳಾಯ್ತೆಂದು, ಮೃಗವನಿಕ್ಕುವ ಶಬರನಂಬುವಂ ಜರೆಯದಿರಿ, ಬೇಸಗೆಗೆ ಕೊಳ ಬತ್ತೆ ಶಫರಿಯುಂ ಶಪಿಸದಿರಿ. ಜರಠ ಶಕಟಂ ಕುಸಿಯೆ ಹೋರಿಯಾ ಹಳಿಯದಿರಿ" ಎಂದು ತಿಳಿಸಿದನು. ತನ್ನ ನಿರ್ವಾಣಕ್ಕೆ ನಿಮಿತ್ತವಾದ ಆ ಆಹಾರವೇ ತನಗೆ ಮಿಗಿಲಾದುದೆಂದು ಅದನ್ನು ಮನವಾರೆ ಮೆಚ್ಚಿದನು. ಬುದ್ಧನ ಈ ಉದಾರ ದೃಷ್ಟಿಗೆ ಯಾರಾದರೂ ತಲೆದೂಗಬೇಕಾದುದೇ ಸರಿ.

ಮಧ್ಯಾಹ್ನದ ಸೂರ್ಯ ನಡುಬಾನನ್ನು ದಾಟಿ ಪಶ್ಚಿಮದ ಕಡೆಗೆ ನಡೆಯುತ್ತಿರಲು ಬುದ್ಧನು ಕುಶಿನಾರದ ಬಳಿಯಲ್ಲಿದ್ದ ಸಾಲವನಕ್ಕೆ ಬಂದು ಅಲ್ಲಿ ಉತ್ತರಾಭಿಮುಖವಾಗಿ ತಲೆಯಿಟ್ಟು ಪವಡಿಸಿದನು. ಆತನಿಗೆ ಪ್ರಕೃತಿಯೇ ಆತಿಥ್ಯವನ್ನು ಸಲ್ಲಿಸುತ್ತಿರುವಂತೆ ಕೆಲವು ಅಪೂರ್ವ ಘಟನೆಗಳಾದುವು.

............................ಆ ಯಮಕ ಸಾಲಮಕಾಲ
ಪುಷ್ಪಿತಂ ಪುಷ್ಪವೃಷ್ಟಿಯ ತಥಾಗತನಲ್ಲಿ
ಕರೆದು ಪೂಜಿಸೆ, ದಿವ್ಯ ಮಂದಾರ ಸುಮವಂತ
ರಿಕ್ಷದಿಂದಾತನಲಿ ಸುರಿದು ಪೂಜಿಸೆ, ದಿವ್ಯ
ಚೂರ್ಣಚಂದನವಂಬರದಿನೆರಚಿ ಅವನಮೆ
ಯ್ಯೊಡಿ ಪೂಜಿಸೆ, ದಿವ್ಯ ತೂರ್ಯವಾಕಾಶದಲಿ
ಮೊಳಗಿ ಪೂಜಿಸೆ, ದಿವ್ಯ ಸಂಗೀತ ಗಗನವಂ
ತೀವಿ ಕೇಳಿಸಿ ತಥಾಗತನ ಪೂಜಿಸಲು......

ಬುದ್ಧ ದೇವನಿಗಾದರೋ ಈ ಅಲೌಕಿಕ ಸತ್ಕಾರ ಸನ್ಮಾನಗಳು ಹಿರಿದೆನಿಸಲಿಲ್ಲ. ಅವನು ಆನಂದನನ್ನು ಕುರಿತು ಇವುಗಳಿಗಿಂತಲೂ ತನ್ನ ಅನುಯಾಯಿಗಳು ನೇಮ ನಿಷ್ಠೆಗಳಿಂದ ನಡೆದುಕೊಂಡರೆ ಅದೇ ತನಗೆ ಹೆಚ್ಚು ಪ್ರಿಯವೆಂದು ಹೇಳಿದನು. ಬುದ್ಧನಿಗೆ ಪ್ರಶಸ್ತಿ ಪಡೆಯ ಬೇಕೆಂಬ ಆಸೆಯಿಲ್ಲ. ತನ್ನ ಆಪ್ತರು ತನ್ನ ಮಾತನ್ನು ಮರೆಯದಂತೆ ಸದಾಚಾರದಿಂದ ನಡೆದರೆ ಅದೇ ತನಗೆ ಪರಮ ಶ್ರೇಯಸ್ಸು ಎಂದು ಭಾವಿಸಿದ್ದನು. ಆನಂದನು ತನ್ನ ಗುರುವಿನೊಡನೆ ಹಲವಾರು ಪ್ರಶ್ನೆಗಳನ್ನು ಕೇಳಿದನು. ಭಗವಂತನ ತರುವಾಯ ಭಿಕ್ಷುಗಳ ಸಂದರ್ಶನ ವಿನ್ನು ಅಲಭ್ಯವಾಗುವುದೆಂದು ಅವನು ಚಿಂತಿಸಿದನು. ಅದಕ್ಕೆ ಬುದ್ಧ ದೇವನು "ಆನಂದ, ಭಿಕ್ಷುಗಳ ಕಂಡಲ್ಲ, ಶ್ರದ್ಧಾಳುವೆಲ್ಲಿದೊ ತಥಾ ಗತಂ ಜನಿಸಿದನೊ, ತಾನೆಲ್ಲಿ ಸಂಬೋಧಿ ಹೊಂದಿದನೊ, ಮೊದಲೆಲ್ಲಿ ಧರ್ಮ ಚಕ್ರಂ ಪ್ರವರ್ತಿಸಿದನೋ ಎಲ್ಲಿ ಪರಿನಿರ್ವಾಣ ಪಡೆದ ಪನೋ ಆ ದರ್ಶನೀಯ ನಾಲ್ವಾಣಗಳ ಚಾರಿಕದಿ ಕಾಲವಂ ಕಳೆಯೆ ಮರಣಾತ್ಪರಂ ಸಗ್ಗದಲಿ ಹುಟ್ಟುವಂ" ಎಂದು ಸಮಾಧಾನ ಹೇಳಿ ದನು. ಆನಂದನು ಹೆಂಗಸರನ್ನುಕಂಡರೆ ಅನುಸರಿಸಬೇಕಾದ ರೀತಿಯೇನೆಂದು ಕೇಳಿದನು. ಈ ಸಂಭಾಷಣೆ ಸಾರ್ವತ್ರಿಕ ಸಂದೇಶವನ್ನು ಒಳ ಗೊಂಡಿದೆ.

| | |
|---|---|
| ಆನಂದ: | "ಭಗವಂತ, ಹೆಂಗಸರೊಡನೆ ಎಂತು ವರ್ತಿಸಲಕ್ಕು?" |
| ಬುದ್ಧ: | "ಕೇಳಾನಂದ ನೋಡದಿರಿ" |
| ಆನಂದ: | "ಭಗವಂತ, ನೋಡಬೇಕಾಗೆ ನಾವೇಂ ಗೆಯ್ಯಲಕ್ಕು?" |
| ಬುದ್ಧ: | "ಆನಂದ ಅವರೊಡನೆ ಮಾತಾಡದಿರಿ" |
| ಆನಂದ: | "ಅವರೆ ನಮ್ಮೊಡನೆ ಮಾತಾಡೆ ಏನೆಸಗಲಕ್ಕು ಭಗವಂತ?" |
| ಬುದ್ಧ: | "ಆನಂದ, ಅಂತಾಗೆ ಹಿರಿಯರುಂ ತಾಯೆಂದು, ಸರಿಯರನ್ನಕ್ಕತಂಗಿಯರೆಂದು, ಕಿರಿಯರುಂ ಕೂಸೆಂದು ಭಾವಿಸುತ ಕಟ್ಟೆಚ್ಚರಿರಿ" |

ಈ ಹಿತೋಕ್ತಿ ಎಷ್ಟು ಹೃದಯಂಗಮವಾಗಿದೆ. ಬುದ್ಧನ ಲೋಕಾನುಭವ ಇಲ್ಲಿ ಹದವಾಗಿ ಕೂಡಿ ಬಂದಿದೆ. ಆನಂದನು ಬುದ್ಧನ ಶರೀರವನ್ನು ಹೇಗೆ ಸಂಸ್ಕರಿಸಬೇಕೆಂದು ಕೇಳಿದನು. ಗುರುದೇವನಾದರೋ ಆ ಬಗ್ಗೆ ಅಷ್ಟು ಹಚ್ಚಿಕೊಳ್ಳದೆ "ಆನಂದ, ಸುಗತನ ಶರೀರಕಂತಿಮ ಪೂಜೆ ಸಲಿಸೆ ಪೇಚಾಡದಿರಿ; ಸುಗತನಲ್ಲಿ ಶ್ರದ್ಧಾಳುವೆನಿತೊ ಬ್ರಾಹ್ಮಣರೆನಿತೊ ಕ್ಷತ್ರಿಯರು ಬಂದದಂ ನೆರವೇರಿಸುವರು" ಎಂದು ನುಡಿದು "ನೀವಾವರೆ ಸದರ್ಥದಲಿ ಘಟಸಿರಿ, ಸದರ್ಥವನ್ನನುಯೋಜಿಸಿರಿ, ಸಾವಧಾನಿಸಿರಿ, ಉದ್ಯೋಗಿಸಿರಿ" ಎಂದು ಅವರ ನಡೆನುಡಿಗಳ ಕಡೆಗೆ ಮತ್ತೆ ಮತ್ತೆ ಗಮನ ಸೆಳೆದನು. ಒಂದು ಸಂಘವನ್ನೋ ಸಂಸ್ಥೆಯನ್ನೋ ಕಟ್ಟಿದಂಥವನಿಗೆ ಇರಬೇಕಾದ ಹಂಬಲವೇ ಇದು. ನಾಯಕನ ತರುವಾಯ ಅದು ಅಕ್ಷರಶ: ಅನಾಯಕವಾಯಿತೆಂಬ ಅಪಖ್ಯಾತಿಗೆ ಗುರಿಯಾಗದೆ ತಾನು ತೋರಿದ ಆದರ್ಶ ಊರ್ಜಿತ ವಾಗಲೆಂಬುದೇ ಹಿರಿಯ ಬಯಕೆ. ಬುದ್ಧನ ಮಾತಿನ ಅಂತರಾರ್ಥವೇ ಇದು. ಆನಂದನಿಗಾದರೋ ಎಷ್ಟೇ ಸಮಾಧಾನ ಮಾಡಿ ಕೊಂಡರೂ ತಥಾಗತನ ಅಂತಿಮ ಕಾಲ ಸಮೀಪಿಸುತ್ತಿರುವುದನ್ನು ನೆನೆದು ಉಕ್ಕಿ ಬರುವ ದು:ಖವನ್ನು ತಡೆಯಲಾಗಲಿಲ್ಲ. ಕಣ್ಮರೆ ಯಾಗಿ ನಿಂತು ಅಳುತ್ತಿದ್ದ ಆತನನ್ನು ಬರಮಾಡಿಕೊಂಡು "ಯಾವುದಕ್ಕೆ ಹುಟ್ಟಿದೆಯೋ ಇರವಿದೆಯೋ ಬೆಳವಿದೆಯೋ ನಾಶಧರ್ಮಕೆ ಸಾಜದಿಂದದೀಡಾಗಿರಲು ನಾಶವದಕಿಲ್ಲದಿರೆ ಶಕ್ಯವೇನಾನಂದ? ಮರುಗದಿರು, ದೀರ್ಘಕಾಲದ ಮನೋವಾಕ್ಕಾಯ ಮೈತ್ರದಿ ತಥಾಗತನಿಗತಿನಿಕಟನಹೆ, ಪುಣ್ಯವಂತನಹ" ಎಂದು ಸಮಾಧಾನ ಹೇಳಿದನು. ಭಗವಂತನು ಪ್ರಖ್ಯಾತವಾದ ಎಡೆಯನ್ನೂ ಆರಿಸದೆ ಸಾಮಾನ್ಯವೆನಿಸಿದ ಆ ಕುಶಿನಾರಕ್ಕೆ ಏಕೆ ಬಂದನೆಂದು ಆನಂದನು ಪರಿತಪಿಸಲು ಆ ಊರಿನ ಪೂರ್ವಚರಿತ್ರೆಯನ್ನು ಹೇಳಿ ಅದಕ್ಕೂ ಸಂತೈಸಿದನು. ಅನಂತರ ಬುದ್ಧನು ಆನಂದನನ್ನು ಕುರಿತು "ನೀನಿನ್ನು ಕುಶಿನಾರವನ್ನಯ್ದಿ......ಅಲ್ಲಿಯ ಮಲ್ಲರಿಗೆ ಇಂದು ರಾತ್ರಿ ಯಂತಿಮ ಯಾಮದಲಿ ತಥಾಗತನ ಪರಿನಿರ್ವಾಣವಾಗಲಿಹುದೆಂದರುಹಿ ಬಾರ! ಆನಂದನು ಅಂತೆಯೇ ಬಂದು ಹೇಳಲು ಆ ಊರಿನ ಜನವೆಲ್ಲ ಗುಂಪು ಗುಂಪಾಗಿ ಅಲ್ಲಿಗೆ ಬಂದು ಸೇರಿದರು.

ಬುದ್ಧನ ಕಡೆಗಾಲವನ್ನು ನೋಡಲಾರನೋ ಎಂಬಂತೆ ಸೂರ್ಯನು ಕ್ಷಣ ಕ್ಷಣಕ್ಕೂ ಅಸ್ತಂಗತನಾಗುತ್ತಿದ್ದನು. ಒಟ್ಟು ಪ್ರಕೃ ತಿಯೇ ಆತನಿಗೆ ತನ್ನ ಸಹಾನುಭೂತಿಯನ್ನು ತೋರುತ್ತಿರುವಂತೆ ಭಾಸವಾಯಿತು. ಚಂದ್ರನಾದರೋ "ಅಂದಿಗಿದೆ ವೈಶಾಖ ಪೂರ್ಣಿಮೆಗೆ ಜನಿಸಿ ಮೇಣಿಂದಿಗಿದೆ ವೈಶಾಖ ಪೂರ್ಣಿಮೆಯೊಳಿರುಳು ಪರಿನಿರ್ವಾಣ ಹೊಂದುವೆನ್ನಾತನನ್ನಿರುಳುದ್ದ ಕೊನೆಗೊಮ್ಮೆ ಕಣ್ದೀವೆ ಕಾಂಬೆನಿಂ ದೆನೆ ಮಂಜು ಕಂಬನಿಯ ಮಿಡಿಯುತ್ತ ತೊಡೆಯುತ್ತಲಿದೊ" ಉದಿಸಿಬಂದನು. ಸಾಲವನಕ್ಕೆ ಬಂದು ಸೇರಿದ ಮಲ್ಲರನ್ನು ಆನಂದನು ಬೇರೆ ಬೇರೆ ಗುಂಪುಗಳನ್ನಾಗಿ ಮಾಡಿ ಪರಿಚಯ ಮಾಡಿಕೊಟ್ಟನು. ಬುದ್ಧದೇವನು ಅವರೆಲ್ಲರನ್ನೂ ಸಂಬೋಧಿಸಿ ದೀರ್ಘವಾಗಿ ಉಪದೇಶವಿ ತ್ತನು. ಅಹಿಂಸೆಯ ಹಿರಿಮೆ, ಸದಾಚಾರದ ಮೇಲ್ಮೆ, ಕರ್ತವ್ಯನಿಷ್ಠೆ, ಸ್ವಧರ್ಮ ಪಾಲನೆ, ಪರಧರ್ಮಸಹಿಷ್ಣುತೆ, ಇವೇ ಮೊದಲಾದ ವಿಚಾರ ಗಳನ್ನು ತಿಳಿಯಪಡಿಸಿದನು. ಬಂದಿದ್ದವರೆಲ್ಲರೂ ಆ ಬೋಧೆಯನ್ನು ಕೇಳಿ ಕೃತಾರ್ಥರಾದರು.

"..........................................ಭಗ
ವಂತ, ಮಳೆಗರೆಯೆ ಕೊಳಗಳ ಹಾಂಸೆ ಹೋಹಂತೆ
ಬರಿಯ ದೋಣಿಯೊಳಗೆ ಕಣೆ ತೀವಂತೆ, ನೆಲಹತ್ತಿ
ದಂಬಿಯಿಂ ನೀರ ಮೊಗೆದಂತೆ, ನೂರಾರು ಜಲ
ಕುಂಭದಲಿ ತರಣಿ ನೆರೆವಂತೆ, ಬಡಬಗ್ಗನಿಗ
ಯಾಚಿತಂ ಕಾಲೆಡವಿ ನಿಧಿಯೊದವಿದಂತೆಮಗೆ

ಭಗವಂತನಿಂದ ಧರ್ಮಂ ತಿಳಿದು ಜ್ಞಾನ
ವಳಿದುದೈ ಜಯ ಜಯಾ!"

ಎಂದು ಕೃತಜ್ಞತೆಯನ್ನು ಸಮರ್ಪಿಸಿ ತೆರಳಿದರು.

ಈ ವೇಳೆಗೆ ಇರುಳಿನ ಮೊದಲನೆಯ ಜಾಮ ಸರಿಯಿತು. ಅದೇ ಊರಿನಲ್ಲಿದ್ದ ಸುಭದ್ರನೆಂಬ ಪರಿವ್ರಾಜಕನು ಬುದ್ಧದೇವನ ಪರಿನಿರ್ವಾಣದ ಗಳಿಗೆ ಸನ್ನಿಹಿತವಾಗಿದೆಯೆಂದು ಕೇಳಿದೊಡನೆಯೇ ಉಪದೇಶವನ್ನು ಪಡೆಯಲು ಧಾವಿಸಿ ಬಂದನು. ಆನಂದನಿಗಾದರೋ ಗುರುದೇವನಿಗೆ ಎಲ್ಲಿ ಆಯಾಸವಾದೀತೋ ಎಂದು ಆತಂಕ. "ಕಾಡಬೇಡೈ ತಥಾಗತನ, ಗೆಳೆಯ ಸುಭದ್ರ, ದಣಿದಿಹಂ ಭಗವಂತ" ಎಂದು ಕೇಳಿಕೊಂಡನು. ಸುಭದ್ರನಾದರೋ ಮತ್ತೆ ಮತ್ತೆ ಗೋಗರೆದನು. ಇವರಿಬ್ಬರ ಸಂಭಾಷಣೆ ಬುದ್ಧನ ಕಿವಿಗೆ ಬೀಳಲು ಕೂಡಲೇ ಆನಂದನನ್ನು ಕರೆದು "ಆನಂದ, ತಳುವದೆ ಸುಭದ್ರಗೆ ತಥಾಗತನ ಕಾಣಿಸಾ. ಯಾವುವಂ ಕೇಳುವನೋ ನನ್ನನಾತನದೆಲ್ಲ ಜಿಜ್ಞಾಸೆಯಿಂದಲ್ಲದೆನ್ನ ಕಾಡುವ ನಲ್ಲ, ಕಾಂಬೊಡನೆ ಕಣ್ಣು ಬಾಂದಳವನೊಳಕೊಳುವಂತೆ, ಹಚ್ಚುವುದೆ ದೀವಿಗೆಯ ಬೆಳಕು ಮನೆದೀವಂತೆ, ಜಾಳಿಗೆಯ ತೆರೆವೊಡನೆ ಗಾಳಿ ಯೊಳವೊಗುವಂತೆ, ನನ್ನ ಮಾತನ್ನವಂ ಗ್ರಹಿಸುವಂ ಕ್ಷಣದೊಳು" ಎಂದು ತನ್ನ ಅನುಮತಿಯಿತ್ತನು. ಅನಂತರ ಸುಭದ್ರನಿಗೆ ಬುದ್ಧನ ಸಂದ ರ್ಶನವಾಯಿತು. ಆತನು ಹೆಸರಾಂತ ಶ್ರಮಣ ಬ್ರಾಹ್ಮಣರನ್ನೆಲ್ಲ ನಿರ್ದೇಶಿಸಿ ಅವರೆಲ್ಲರೂ ಎಷ್ಟರ ಮಟ್ಟಿಗೆ ಜ್ಞಾನಿಗಳು ಎಂದು ಮಾತೆತ್ತಿ ದನು. ಆಗ ಬುದ್ಧನು "ಸಾಕದಂತಿರಲಿ, ಕಿರಿದರೊಳೀಗ ಧರ್ಮವನ್ನುಪದೇಶಗೆಯ್ವೆ, ಕೇಳ ಸುಭದ್ರ" ಎಂದು ಹೇಳತೊಡಗಿ ಆತನಿಗೆ ದೃಷ್ಟಿ ಸಂಕಲ್ಪ, ವಚನ, ಕರ್ಮ, ಆಜೀವ, ವ್ಯಾಯಾಮ, ಸ್ಮೃತಿ, ಸಮಾಧಿ ಮೊದಲಾದ ಅಷ್ಟಾಂಗಗಳನ್ನೂ ನಾಲ್ಕು ಆರ್ಯ ಸತ್ಯಗಳನ್ನೂ ಬೋಧಿಸಿ ಆ ರೀತಿ ನಡೆದರೆ "ರಾಗ-ಮೋಹ-ದ್ವೇಷವಳಿದು ನಿರ್ವಾಣವೆಂಬಚ್ಯುತ ಪದಂ ಪಡೆವೆ" ಎಂದು ತಿಳಿಯಪಡಿಸಿದನು. ಸುಭದ್ರನು ಸಂತುಷ್ಟ ನಾಗಿ "ಇನ್ನಿದೊ ಭದಂತ, ಭಗವಂತನಿಗೆ ಶರಣೆಂಬೆ, ಧರ್ಮಕಾಂ ಶರಣೆಂಬೆ, ಸಂಘಕಾಂ ಶರಣೆಂಬೆ," ಎಂದು ಅನನ್ಯ ಶರಣಾಗತನಾಗಿ ಶ್ರಾವಕ ವ್ರತವನ್ನು ಸ್ವೀಕರಿಸಿದನು. ಬುದ್ಧದೇವನ ಕಟ್ಟಕಡೆಯ ಶ್ರಾವಕನೇ ಸುಭದ್ರನೆಂಬುದಾಗಿ ಆತನ ಹಿರಿಮೆ ಮಿಗಿಲೆನ್ನಿಸಿತು. ಈ ಮೇಲ್ಮೆಯನ್ನು ಕವಿಗಳು ಬಹು ಅರ್ಥಗರ್ಭಿತವಾಗಿ ನಿರೂಪಿಸಿರುತ್ತಾರೆ.

....................................ಸಂಧ್ಯಾರ್ಕ
ನಂತಿಕದೆ ಕೆಂಗಲಿಪ ಶುಕ್ರನೆನೆ, ದೀಪಿಕಾ
ಸ್ತಂಭದಿಂ ಕರದೀಪ ಹಚ್ಚಿತೆನೆ, ಭಗವಂತ
ನಂತಿಕದೆ ಪಡೆದಂ ಪ್ರವ್ರಜ್ಯೆಯ ತಥಾಗತನ
ಕೊನೆಯ ಸಾಕ್ಷಾಚ್ಛ್ರಾವಕಂ ಗಡ ಸುಭದ್ರಂ.

ಅನಂತರ ಬುದ್ಧ ದೇವನು ಅಲ್ಲಿದ್ದ ಶಿಷ್ಯ ಸಮೂಹವನ್ನು ಕಂಡು

..............................ಆನಂದ
ಮುಗಿದುದೈ ಶಾಸ್ತನ ಪ್ರವಚನಂ, ನಮಗಿನ್ನು
ಶಾಸ್ತನಿಲ್ಲೈ ಎಂದು ನಿಮ್ಮೊಳಗೆ ಕೆಲವರಿಗೆ
ತೋರಬಹುದಾದೊಡಂತೆಣಿಸದಿರಿ. ಆನಂದ
ಯಾವಧರ್ಮವನಾವ ವಿನಯವಂ ಕಲಿಸಿಹೆನೊ
ಪ್ರಜ್ಞಾಪಿಸಿಹೆನೊ ನಿಮಗಾ ಧರ್ಮವಾ ವಿನಯ
ವನ್ನೆ ನನ್ನತ್ಯಯದ ಬಳಿಕ ನಿಮ್ಮಯ ಶಾಸ್ತ
ನೆಂದು ಬಗೆಯಿರಿ.........................................
"ಭಿಕ್ಷುಗಳೆ, ಬುದ್ಧನಂ ಧರ್ಮವಂ ಸಂಘವಂ
ಮಾರ್ಗವಂ ಕುರಿತು ನಿಮ್ಮೊಳಗಾರಿಗಾದೊಡಂ
ಶಂಕೆಯಿರೆ, ವಿಮತಿಯಿರೆ ಕೇಳಿ ನೀವದನೀಗ
ಶಾಸ್ತನಕಟೆಮ್ಮ ಸಮ್ಮುಖದೊಳಿರೆ ಕೇಳಿಲ್ಲ
ವಲ್ಲ! ಎಂದಿದೋ ಮತ್ತೆ ಮರುಗದಿರಿ"

ಎಂದು ಮತ್ತೆ ಮತ್ತೆ ಕೇಳಿದನು. ಎಲ್ಲರೂ ಮಾತನಾಡದೆ ಸುಮ್ಮನಿದ್ದರು. ಕಟ್ಟಕಡೆಗೆ ಭಗವಂತನೆ

ಭಿಕ್ಷುಗಳೆ ಪೇಳ್ವೆ ವ್ಯಯಧರ್ಮವೀ ಸಂಸ್ಕಾರ,
ಸಾವಧಾನದೊಳೆ ಉದ್ಯೋಗಿಸಿರಿ

ಎಂದು ತನ್ನ ಬೋಧೆಯನ್ನು ಹೇಳಿ ಮುಗಿಸಿದನು. ಅದೇ ಆತನ ಹಂಸಗೀತೆ.

ಬುದ್ಧದೇವನ ಕಟ್ಟಕಡೆಯ ಕ್ಷಣ ಸಾರಿ ಬಂದಿತು. ರಾತ್ರಿಯ ಕಡೆಯ ಯಾಮದಲ್ಲಿ ಸುತ್ತಲೂ ನೀರವತೆ ಆವರಿಸಿತ್ತು. ಚಂದ್ರನು ಕ್ರಮಕ್ರಮವಾಗಿ ಅಸ್ತಂಗತನಾಗುತ್ತಿದ್ದನು. ಉತ್ತರಾಭಿಮುಖವಾಗಿ ತಲೆಯಿಟ್ಟು ಪವಡಿಸಿದ್ದ ತಥಾಗತನನ್ನು ಶುಭ್ರ ಜ್ಯೋತ್ಸ್ನೆ ಆವರಿಸಿ ಆತನ ದಿವ್ಯ ಮೂರ್ತಿಯನ್ನು ಮತ್ತಷ್ಟು ಪವಿತ್ರವನ್ನಾಗಿ ಮಾಡಿತ್ತು. ಭಗವಂತನು ಧ್ಯಾನ ಮುದ್ರೆಯಲ್ಲಿದ್ದಂತೆಯೇ ಕ್ರಮ ಕ್ರಮವಾಗಿ ಆತ ನ ಜೀವತಾನವು ದಿವ್ಯ ಸಂಗೀತದ ಆರೋಹಣ ಅವರೋಹಣಗಳ ಗತಿಯಂತೆ ಮೇಲೇರಿ ಕೆಳಕ್ಕಿಳಿದು "ನೀರ ಬುದ್ಬುದದಂತೆ, ಕರಗುರುಳ್ವ ತೆರೆ

ಯುತೆ, ಉಮರ್ವ ತಾರಗೆಯುಂತೆ. ಸುರಿನು ಬರಿದಪ ಪೋಡದನುತೆ, ಬತ್ತಿಯುಮೊಣ್ಣೆ ಮುಗಿದ ದೀವಿಗೆಯುಂತೆ, ಕ್ಷಿತಿಜದಿಂ ಸಿಡಿದ ಮಿಂಚುಬರ ದೊಳಣೆವಂತೆ ಭಗವಂತನೊಡನೆ ಪರಿನಿರ್ವಾಣವಡೆದಂ."

ಪ್ರಕೃತಿಯ ವ್ಯಾಪಾರವೇ ಒಂದು ಕ್ಷಣ ತಲ್ಲಣಿಸಿ ತಟಸ್ಥವಾದಂತಾಯಿತು. ಬುದ್ಧನ ಆ ಮಹಾ ಪರಿನಿರ್ವಾಣವನ್ನು ಬ್ರಹ್ಮ, ದೇವೇಂದ್ರ, ಅನುರುದ್ಧ, ಮತ್ತು ಆನಂದ ಮೊದಲಾದ ಒಬ್ಬೊಬ್ಬರೂ ಹಾಡಿ ಹರಸಿದರು. ಹಲವರು ಬುದ್ಧನ ಪರಿನಿರ್ವಾಣಕ್ಕಾಗಿ ಪರಿತಪಿ ಸಲು, ವೀತರಾಗಿಗಳಾದ ಆತನ ಅನುಯಾಯಿಗಳು ಅವರಿಗೆ ಸಮಾಧಾನ ಹೇಳಿದರು. ಪಶ್ಚಿಮ ದಿಗಂತದಲ್ಲಿ ಚಂದ್ರನು ಬುದ್ಧನ ಪ್ರಶಸ್ತಿಯ ನ್ನು ಸಾರಿ ಹೇಳುವ ದೀಪದ ಮಲ್ಲಿಯಂತೆಯೂ, ಶ್ವೇತ ಫಲಕದಂತೆಯೂ ಧರ್ಮೋಪದೇಶದ ಪವಿತ್ರ ಸ್ವರೂಪವನ್ನು ಸ್ಮರಿಸುವಂತೆಯೂ ತೋರಿಬಂದು, ನಕ್ಷತ್ರಗಳ ಅಶ್ರಾವ್ಯ ಸಂಗೀತದೊಂದಿಗೆ ಮುಳುಗಿ ಕಣ್ಮರೆಯಾಗುತ್ತಿದ್ದನು.

— 3 —

ಕನ್ನಡ ಸಾಹಿತ್ಯಕ್ಕೆ ಈ ಎರಡು ಕೃತಿಗಳು ಎಂದೆಂದಿಗೂ ಅಪೂರ್ವವೂ ನಿತ್ಯ ನೂತನವೂ ಆದುವು. ಗೋವಿಂದ ಪೈಗಳ ಬರಹ ದಲ್ಲಿ ಪಾಂಡಿತ್ಯಕ್ಕೆ ಅಗ್ರಸ್ಥಾನವೆನ್ನುವುದು ಸುವಿದಿತವಾಗಿದೆ. ಈ ಎರಡು ರಚನೆಗಳಲ್ಲಿಯೂ ಆ ಪಾಂಡಿತ್ಯದ ಪ್ರಭಾವವನ್ನು ಸ್ಪಷ್ಟವಾಗಿ ಕಾಣ ಬಹುದು. ಅವರು ಆರಿಸಿಕೊಂಡಿರುವ ಎರಡು ವಿಷಯಗಳೂ ಅತ್ಯಂತ ಪ್ರಾಚೀನವಾಗಿರುವುದಲ್ಲದೆ ಅನೇಕ ಶತಮಾನಗಳ ಸಾಂಪ್ರದಾಯಿಕ ಭಾವನೆಗಳಿಂದ ಪರಿಪುಷ್ಟಿಯಾದುವು. ಯೇಸುವನ್ನಾಗಲಿ, ಬುದ್ಧನನ್ನಾಗಲಿ ಜನರು ಅವತಾರ ಪುರುಷರೆಂದೂ ದೈವಾಂಶ ಸಂಭೂತರೆಂದೂ ಪೂಜ್ಯ ಭಾವನೆಯಿಂದ ನೋಡುವುದನ್ನು ಎಂಥ ಲೇಖಕನೂ ಮರೆಯುವಂತಿಲ್ಲ. ಆದ್ದರಿಂದ ಕವಿಗಳು ಆಯಾ ಮಹಾಪುರುಷರಿಗೆ ಸಂಬಂಧಿ ಸಿದ ಮೂಲ ಗ್ರಂಥಗಳನ್ನೂ ಅವಲೋಕಿಸಿರುವುದಲ್ಲದೆ[2] ಈ ಇಬ್ಬರ ಮಹಾತ್ಮ್ಯೆ ಜನರ ಮನಸ್ಸಿನಲ್ಲಿ ಎಂತು ಪಡಿಮೂಡಿದೆಯೋ ಆ ಮೇಲ್ಮೆಗೆ ಇನಿತಾದರೂ ಲೋಪಬಾರದಂತೆ ತಮ್ಮ ಕೃತಿಯಲ್ಲಿ ಚಿತ್ರಿಸಿರುತ್ತಾರೆ. ಈ ಸಲುವಾಗಿಯೇ ಇಲ್ಲಿನ ವಾತಾವರಣದಲ್ಲಿ ಸೋಜಿಗ ವಿದೆ, ಅಲೌಕಿಕವಿದೆ, ಪವಾಡದ ಸೋಂಕೂ ಇದೆ.

ಈ ಎರಡರಲ್ಲಿ ಇಂದಿನ ಮನೋಧರ್ಮಕ್ಕೆ "ಗೊಲ್ಗೊಥ"ವೇ ಹೆಚ್ಚು ಪ್ರಿಯವೆನ್ನಿಸುವುದು ಸಹಜವೇ ಸರಿ. ಇಂದಿನ ವಿಮ ರ್ಶಕರೊಬ್ಬರು[3] ಅಭಿಪ್ರಾಯಪಡುವಂತೆ ಪರಿಣಾಮದ ದೃಷ್ಟಿಯಿಂದ ನೋಡುವುದಾದರೆ "ಗೊಲ್ಗೊಥ"ಕ್ಕೇ ಹೆಚ್ಚಿನ ಮಾನ್ಯತೆ ದೊರೆ ಯುವುದು ಸ್ವಾಭಾವಿಕ. ಇದಕ್ಕೆ ಕವಿಯ ನಿರೂಪಣೆಯಲ್ಲಿ ಗುಣದೋಷಗಳನ್ನು ಕಾಣುವುದಕ್ಕಿಂತ, ಆಯಾ ವಸ್ತುವೇ ಬಹುಮಟ್ಟಿಗೆ ಕಾರಣವೆನ್ನಬೇಕು. ಏಕೆಂದರೆ ಯೇಸುವಿನ ಮರಣ ಒಂದು ದುರಂತದ ಕಥೆ. ಅಲ್ಲಿ ಸಾವಧಾನಕ್ಕೆ ಎಡೆಯಿಲ್ಲ. ಯಾಜಕರ ಒತ್ತಾಯ ಹೇಳ ತೀರದು. ಪಿಲಾತನ ಒಳತೋಟಿ ಬಹು ಮಾರ್ಮಿಕವಾಗಿದೆ. ಯೇಸುವಿಗಂತೂ ಮಾತಿಗೆ ಅವಕಾಶವೇ ಇಲ್ಲ. ಪದ್ಯದಲ್ಲಿನ ಒಟ್ಟು ವಾತಾ ವರಣವೇ ಅತ್ಯಂತ ಹೃದಯವಿದ್ರಾವಕವಾದ ಘಟನೆಗೆ ತಕ್ಕಂತೆ ಮನಕರಗಿಸುವಂತಿದೆ. "ವೈಶಾಖಿ"ಯ ದೃಷ್ಟಿಯಾಗಲಿ, ಘಟನೆಯಾಗಲಿ "ಗೊಲ್ಗೊಥ"ಕ್ಕೆ ಸಂಪೂರ್ಣವಾಗಿ ಬೇರೆಯೆನಿಸಿದೆ. ಬುದ್ಧದೇವನಿಗಾದರೋ ಎಂಭತ್ತು ವರ್ಷಗಳು ತುಂಬಿವೆ. ಆತನಿಗೆ ಸಾವು ಸಹಜ ಧರ್ಮವಾಗಿ ತೋರಿಬರುತ್ತದೆ. ಸ್ವತಃ ಅದಕ್ಕೆ ಅಣಿಯಾಗತೊಡಗಿದ್ದಾನೆ. ತನ್ನ ಜೀವಮಾನದ ಆ ಕಡೆಯ ದಿನವನ್ನು ಆದಷ್ಟು ಸಂತೋಷ ದಿಂದ ಕಳೆದು, ಇತರರಿಗೆ ಹಿತೋಕ್ತಿಗಳನ್ನು ಹೇಳಿ ಕೃತಾರ್ಥನಾಗಬೇಕೆಂದು ಸಂಕಲ್ಪಿಸಿದ್ದಾನೆ. ಇಲ್ಲಿ ರಭಸಕ್ಕೆ ಅವಕಾಶವಿಲ್ಲ; ಉದ್ರೇಕ ಉದ್ವೇಗಗಳಿಗೆ ಆಸ್ಪದವಿಲ್ಲ. ಹೆಜ್ಜೆ ಹೆಜ್ಜೆಗೂ ಉಪದೇಶಗಳನ್ನು ನೀಡುತ್ತ ಕಡೆಯ ಕ್ಷಣವನ್ನು ಬಂದು ಮುಟ್ಟುತ್ತಾನೆ. ಈ ಪರಿನಿರ್ವಾಣ ವೆನ್ನುವುದು ಮಹಾಜ್ಯೋತಿಯೊಂದು ಬಹುಕಾಲ ಜಗತ್ತನ್ನು ಬೆಳಗಿ ಅನಂತರ ತನ್ನ ಸರದಿ ಮುಗಿಯುತ್ತ ಬಂದಂತೆ, ಸತ್ವವನ್ನೂಡುವ ತೈಲ ಕಡಮೆಯಾದಂತೆ ತನಗೆ ತಾನಾಗಿಯೇ ಶಾಂತವಾಗುವುದನ್ನು ಹೋಲುತ್ತದೆ. ಯೇಸುವಿನ ಮರಣವಾದರೋ ಅನಿರೀಕ್ಷಿತವಾದ ಬಿರುಗಾಳಿಯಿಂದ ಬೆಳಗುತ್ತಿರುವ ಕುಡಿ ಆರಿ ಹೋದಂತೆ.

ಈ ಎರಡು ಕೃತಿಗಳನ್ನೂ ಒಬ್ಬ ಕವಿಯೇ ಬರೆದಿರುವುದರಿಂದ ಇವುಗಳಲ್ಲಿ ಪರಸ್ಪರ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು. ಪದ್ಯಗಳ ಆದಿ, ಮಧ್ಯ ಮತ್ತು ಅಂತ್ಯಗಳು ಒಂದು ಇನ್ನೊಂದರ ಪ್ರತಿಬಿಂಬವೆಂಬಂತೆ ರಚಿತವಾಗಿರುವುದನ್ನು ನೋಡಬಹುದು. ಇಲ್ಲಿನ ಛಂದೋ ಪ್ರಕಾಶವೂ ಒಂದೇ ಆಗಿದೆ. ಆದರೆ, ಉಪಮಾನಗಳನ್ನು ಹೇಳುವಲ್ಲಿ, ವಿವರಗಳನ್ನು ತಂದು ಜೋಡಿಸುವಲ್ಲಿ, ಸನ್ನಿವೇಶದ ಪರಿ ಣಾಮವನ್ನು ಚಿತ್ರಿಸುವಲ್ಲಿ ಆಯಾ ಮಹಾತ್ಮರ ವೈಶಿಷ್ಟ್ಯಕ್ಕೆ ತಕ್ಕಂತೆ ವೈವಿಧ್ಯವೂ ಇದೆಯೆನ್ನುವುದನ್ನು ಮರೆಯುವಂತಿಲ್ಲ.

ಮಹಾತ್ಮರಿಬ್ಬರ ಅಂತ್ಯದ ಈ ಘಟನೆಯನ್ನು ಕವಿಗಳು ಮತಪ್ರಚಾರಕರ ದೃಷ್ಟಿಯಿಂದ ಬರೆದುದಿಲ್ಲವಷ್ಟೆ. ಅವರಿಬ್ಬರ ಬದುಕಿ ನಲ್ಲಿ, ಬೋಧೆಯಲ್ಲಿ, ಸಾವಿನಲ್ಲಿ ಕಂಡುಬರುವ ಸಾರ್ವತ್ರಿಕವಾದ ಗುಣವನ್ನು ಮನಗಂಡು ಅದನ್ನು ಬಹು ಉಜ್ವಲವಾಗಿ ಸಮರ್ಥಿಸಿರು ತ್ತಾರೆ. ಆದ್ದರಿಂದ ಇಲ್ಲಿ ಆಯಾ ಮತಕ್ಕೆ, ಧರ್ಮಕ್ಕೆ ಸಂಬಂಧಿಸಿದ ಉಪದೇಶ, ಉಪಾಖ್ಯಾನಗಳಿದ್ದರೂ ಅವು ಆ ಮಹಾವ್ಯಕ್ತಿಗಳ ಪಾತ್ರ ನಿರೂಪಣೆಗೆ ಪೋಷಕವಾಗಿ ಬಂದು, ಕಾವ್ಯದ ರಸಾಸ್ವಾದನೆಗೆ ಪೂರಕವಾಗಿವೆ. ಗೋವಿಂದ ಪೈಗಳು ಈ ಸಿದ್ಧಿಯನ್ನು ಹೇಗೆ ಸಾಧಿಸಿದ್ದಾ ರೆನ್ನುವುದನ್ನು ಮನಗಾಣಲು ಈ ಎರಡು ಕವಿತೆಗಳನ್ನೂ ಮೇಲಿಂದ ಮೇಲೆ ಓದಿ ತಣಿಯುವುದೊಂದೇ ಸುಲಭ ಮಾರ್ಗ! ಕನ್ನಡಕ್ಕೆ ಇಂಥ ಅಮರವಾದ ಅಮಳ ಕವಿತೆಗಳನ್ನು ನೀಡಿದ ಕವಿಗಳಿಗೆ ನಾವು ಸರ್ವದಾ ಋಣಿಗಳಾಗಿರಬೇಕಾದದ್ದೇ ಸರಿ.[4]

2. ಜಿ. ಪಿ. ರಾಜರತ್ನಂ ಅವರ "ಕವಿ ಗೋವಿಂದ ಪೈ" ಪು. 43, 45 ಮತ್ತು 53.
3. ಎಸ್. ಅನಂತನಾರಾಯಣ ಅವರ "ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ" ಪುಟ 362.
4. ಇದೇ ರೀತಿಯಾದ ಪೌರಾಣಿಕ ಘಟನೆಗಳನ್ನು ಆರಿಸಿಕೊಂಡು ಶ್ರೀ ಪು. ತಿ. ನರಸಿಂಹಾಚಾರ್ ಅವರು ಬರೆದಿರುವ "ಮಹಾ ಪ್ರಸ್ಥಾನ" ಎಂಬ ನೀಳ್ಗವಿತೆಗಳ ಸಂಕಲನವನ್ನೂ ನೋಡಬಹುದು.

# ಕಾವ್ಯ-ದುರ್ಗದ ಲೋಕೋಕ್ತಿಗಳು

ಶ್ರೀ. ರಾಮಚಂದ್ರ, ಉಚ್ಚಿಲ

ಯಕ್ಷಗಾನ ಕವಿ ಪಾರ್ತಿಸುಬ್ಬನ ಕೃತಿಯೂದ ಅಂಗದ ಸಂಧಾನದಲ್ಲಿ "ಏನಪ್ಪಾ ರಾವಣೇಂದ್ರ, ನೀನಾ ಜಾನಕಿಯನ್ನು ಕಾಣದಂತೆ ಕದ್ದು ತರಬಹುದೇನ್ಮಾ" ಎಂಬೊಂದು ಪದ್ಯವಿದೆ. ಈಗ್ಗೆ ಮೂರು ವರ್ಷಗಳ ಹಿಂದೆ–ಇದನ್ನು ಬರೆದವನು ಕುಂಬಳೆಯ ಪಾರ್ತಿಸುಬ್ಬನೇ ಅಲ್ಲವೇ—ಎಂಬ ಒಂದು ಚರ್ಚೆ ಎದ್ದು ಅದಕ್ಕೆ ಪಕ್ಷ ಪ್ರತಿಪಕ್ಷಗಳು ಹುಟ್ಟಿಕೊಂಡಿದ್ದುವು. ಪೂಜ್ಯ ಗೋವಿಂದ ಪೈಯವರೊಡನೆ ನಾನು ಈ ವಿಚಾರವನ್ನು ಹೇಳಿದಾಗ ಅವರು ಮೇಲಿನ ಪದ್ಯವನ್ನು ಉದಾಹರಿಸಿ "ಪಾರ್ತಿ ಸುಬ್ಬನಂಥ ಜನಪದ ಕವಿ ಮಾತ್ರ 'ಪಡಸಾಲೆಯಲ್ಲಿ ಕುಳಿತು ಪಟ್ಟಾಂಗ ಹೊಡೆಯುವಂಥ, ಅಂಗದನ ನಡೆನುಡಿಗಳಿಗೆ ತಕ್ಕುದಾದಂಥ' ಇಂಥ ಮಾತುಗಳನ್ನು ಬರೆಯಬಲ್ಲ. ಇದು ಒಂದಲ್ಲ, ಅವನ ಪ್ರಸಂಗಗಳ ಉದ್ದಕ್ಕೂ ಇಂಥವು ಹೇರಳವಾಗಿವೆ. ಅವನ "ಪಂಚವಟಿ"ಯಲ್ಲಿ ಏನು ಹೊಡೆಯಿತು ಮಾರಿ ತಂಗಿ ನಿನಗೆನುತಾ" ಎಂಬ ಇನ್ನೊಂದು ಸೊಲ್ಲಿದೆ. ರಾವಣನ ದೌಷ್ಟ್ಯ ಸ್ವಭಾವಕ್ಕೆ "ಈ ಮಾರಿ ಹೊಡೆಯಿತು" ಎಂಬ ಆಡು ಮಾತಿನ ಹೊಂದಿಕೆ ಎಷ್ಟು ಚೆನ್ನಾಗಿದೆ! ಕವಿಯೂದವ ತನ್ನ ಆಡು ಮಾತಿನಿಂದ, ಪಡೆನುಡಿಯಿಂದ ತನ್ನ ಕಾವ್ಯಕ್ಕೆ ಜೀವ ತುಂಬುತ್ತಾನೆ........." ಎಂದು ಹೇಳಿದರು.

ಪಾರ್ತಿ ಸುಬ್ಬನ ಶೈಲಿ. ಪಡೆನುಡಿ, ಲೋಕೋಕ್ತಿಗಳ ಬಗೆಗೆ ಅವರು ಹೇಳಿದ ಮೇಲಿನ ಮೌಲಿಕ ಅಭಿಪ್ರಾಯ ಅವರ ಕವಿತೆಗಳಿಗೆ, ಕಾವ್ಯಗಳಿಗೆ ಅಷ್ಟೇ ಅನ್ವಯಿಸುತ್ತವೆ. ಅವರ ಕಾವ್ಯ ದುರ್ಗಮವೆಂಬುದು ಸತ್ಯ. ಆದರೆ ಆ ದುರ್ಗವನ್ನೇರುವ ಸಾಹಸ ಮಾಡಿದವರು ತಮ್ಮ ಸಾಹಸಕ್ಕೆ ತಕ್ಕ ಫಲವನ್ನು ದೊರಕಿಸಿಕೊಂಡು ಕೃತಾರ್ಥರಾಗುತ್ತಾರೆ. ಅವರಲ್ಲಿ ಬರುವ ಸಾಮತಿಗಳು, ಲೋಕೋಕ್ತಿಗಳು ಕವಿ ಬೆಳೆದು ಬಂದ ಆವರಣದ ಗಾಳಿ ನೀರನ್ನೂ ಉಂಟು ಮಾಡಿಸುವ ಚಿತ್ರದ ಬಣ್ಣ ಬಾಳಿಕೆಯ ಬಣ್ಣ ಎಂಬ ಸ್ಪಷ್ಟ ಕಲ್ಪನೆ ನಮಗೆ ಆದಾಗಲೆಲ್ಲ ಆ ಔಚಿತ್ಯಜ್ಞಾನಕ್ಕೆ. ಅದರ ಹಿಂದಿರುವ ಅನುಭವ, ಅಭ್ಯಾಸ. ಋಜುತ್ವಕ್ಕೆ ನಾವು ಮಾರುಹೋಗುತ್ತೇವೆ.

ಪೈಯವರ ಕವಿತೆ "ತಪಸ್ಸಿನಿಂದ ತೇದಿದ ಕವಿತೆ" ಎಂಬುದನ್ನು ಅವರ ಆತ್ಮೀಯರಾದ ಶ್ರೀ ಜಿ. ಪಿ. ರಾಜರತ್ನಂರವರು ಒಂದು ಕಡೆ ಹೇಳಿದ್ದಾರೆ. "ಗೊಲ್ಗೊಥಾ," "ವೈಶಾಖಿ" ಮತ್ತು "ಹೆಬ್ಬೆರಳು" ಈ ಮಾತಿಗೆ ಸಾಕ್ಷಿ. ನಮ್ಮ ಜೈನ ಕವಿಗಳು ಒಂದೆಡೆ ಲೌಕಿಕವನ್ನೂ ಇನ್ನೊಂದೆಡೆ ಜಿನಾಗಮವನ್ನೂ ಬೆಳಗಲು ಎರಡೆರಡು ಕಾವ್ಯಗಳನ್ನು ರಚಿಸಿದರು. ಪೂಜ್ಯ ಗೋವಿಂದ ಪೈಯವರು ಆ ಹಾದಿಯಲ್ಲಿ ನಡೆದ ಮೊತ್ತ ಮೊದಲ ಆಧುನಿಕರು. ಜೈನರು ಜಿನಾಗಮಕ್ಕೆ ಮನಸ್ಸೋತುದು ನ್ಯಾಯ. ಇವರು ಕ್ರೈಸ್ತಾಗಮಕ್ಕೆ, ಬೌದ್ಧಾಗಮಕ್ಕೆ ಮನಸ್ಸೋತು ಹೊಸ ಆದರ್ಶವನ್ನು ಬೆಳಗಿಸಿದುದು ನಮ್ಮ ಹೆಮ್ಮೆ.

"ಗೊಲ್ಗೊಥಾ"ದಲ್ಲಿ ಧರ್ಮಾಧಿಕಾರಿಯೂದ ಪಿಲಾತನ ಮುಂದೆ ಯೇಸುವನ್ನು ತಂದು ನಿಲ್ಲಿಸುತ್ತಾರಷ್ಟೆ. ಪಿಲಾತ ಯೇಸುವನ್ನು ನಿಟ್ಟಿಸಿದ:

"ಸತ್ವಮೂರ್ತಿಯು ಸತ್ವ: ಸತ್ಯ ವಿಗ್ರಹನ ಸತ್ಯ. ನಿತ್ಯ ಸುಂದರ ಆತ್ಮ ಸೌಂದರ್ಯ" ಇವನ್ನು ಆ ಪಿಲಾತನೇನು ಕಾಣಲಾಪ? ಪಿಲಾತನ ಅಜ್ಞಾನಕ್ಕೆ, ದುರದೃಷ್ಟಕ್ಕೆ ಕನಿಕರಿಸಿ

"ಜ್ಞಾನ ವೃಕ್ಷದ ಬಳಿಯೆ ವೆಂಟಣಿಸಿ ಕುಳಿತು ಅದರ ಫಲವ
ಮೆಲಲಾರದೆ ಅದನು ಅಕ್ಕಜದೊಳೀಕ್ಷಿಸುವ ಹಳೆಯ ಹಾವು"

ಎಂದು ಕವಿ ಕವನಿಸಿದರು. ಈ ಲೋಕೋಕ್ತಿಯನ್ನು ನಾವು ಅನೇಕ ಬಾರಿ ಕೇಳಿರಬಹುದು. ಆದರೆ ಇದರ ಪೂರ್ಣ ಸೌಂದರ್ಯ ಹೃದ್ಯವಾಗುವುದು ಇಲ್ಲಿ. ಸತ್ಯಕ್ಕೆ, ಸತ್ವಕ್ಕೆ ಪಿಲಾತ ಎಷ್ಟು ಸಮೀಪವಾಗಿದ್ದಾನೆ. ಆದರೆ ಎಷ್ಟು ದೂರ! ಈ ಮಾತು ಸೃಷ್ಟಿಸಿದ ಚಿತ್ರದಿಂದ ದೇವಾತ್ಮಜಾತ ಯೇಸುವಿನ ಮರೆಯಲಾಗದ ಮೂರ್ತಿ ನಮ್ಮೆದೆಯಲ್ಲಿ ಮೂಡುತ್ತದೆ. ಈ ಮೂರ್ತಿಯ ಪ್ರಕಾಶವನ್ನು ಕೆಳಗಿನ ಸಾಲುಗಳು ಇನ್ನಷ್ಟು ಬೆಳಗಿಸುತ್ತವೆ. ಯೆಹೂದ್ಯರ ಮಧ್ಯದಲ್ಲಿರುವ ಯೇಸು:

"ಲೋಕದುರು ಪಾಪವಂ ಹೊತ್ತ ಕುರಿಮರಿ, ಗಿಡುಗಗಳ ನಡುವೆ
ತೊಡರಿದ ಕಪೋತಕ. ಅವನದು ಹೆಣ್ಣಿಗೆಯ ನಯನ, ಅದರಲ್ಲಿ
ಭವಿಷ್ಯವನ್ನು ತಿವಿದ ಪುರುಷನ ದೃಷ್ಟಿ; ಎದೆಯಲ್ಲಿ ಹೆಣ್ಣೆದೆಯ
ಮಾರ್ದವ, ಗಂಡಿನ ಮನೋದಾರ್ಢ್ಯ. ದಿವ್ಯಜ್ಞಾನದ ಆಡುಂಬೊಲವಾದ
ಪೃಥುಲ ಲಲಾಟ! ಮೊಗದಲ್ಲಿ ಪ್ರೇಮಾಂಬು ನಿಧಿಯನುಬ್ಬರಿಸುವ
ಅಮೃತಾಂಶು ಕಾಂತಿ! ಜಗತ್ಪ್ರೇಮದ ಈ ಶೋಭೆ, ಶಾಂತಿ, ಮಹಿಮೆ,
ಜಿತಾತ್ಮತೆ, ತಪಶ್ಶಕ್ತಿ ಇವು ಮತ್ತೇನೂ ಅಲ್ಲ ಮನುಜ ದೇವತನದ
ಸುಧಾಸಿಂಧು!"

ಪಿಲಾತ ಕೈಸರನ ಧರ್ಮಾಧಿಕಾರಿ. ಅವನ ಹೊಣೆ ಹಿರಿದಾದ ಹೊಣೆ. ಆತ ಯೆಹೂದ್ಯರ ದೂರನ್ನು ಕಡೆಗಣಿಸಲಾರ. ಅವರು ಯೇಸುವಿನ ಬಗೆಗೆ "ಕುರಿ ಮರಿಯ ಕಂಡುಬ್ಬಿ ತೋಳಗಳ ಗುಂಡೂಳುವಂತೆ" ಹುಚ್ಚೆದ್ದಿದ್ದಾರೆ. ಯೇಸುವಿನ ದರ್ಶನ ಮಾತ್ರ ದಿಂದಲೆ ಪಿಲಾತನ ಎದೆಯಲ್ಲಿ ಆತ ನಿರಪರಾಧಿ ಎಂಬ ಭಾವನೆ ಮೊನೆದೋರಿದೆ. "ಧರ್ಮಾಂಧರೀ ಯೆಹೂದ್ಯರಿವರಿಗೀ ಯೇಸುವಿನೊಳಿ ರುವ ಧರ್ಮಾಸೂಯೆಗೆ ಆನ್ ದುಡುಕೆ ಗಂಡೋಲಿಗಳ (ಗಂಡು ಎರಳೆ) ಗೂಡಿಗೆಸೆದ ಕಲ್ಲಂತಾಗದಿರದು" ಎಂದು ಅವನು ಹಿಂದು ಮುಂದು ಯೋಚಿಸುತ್ತಾನೆ. ಯೆಹೂದ್ಯರು ತಮ್ಮ ಮತ್ಸರವನ್ನು ಸಾಧಿಸಲು "ನಮ್ಮ ಜೋಕೆಯುಂ ಬಗೆಯದೊಡೆ, ನಿನ್ನ ಜೋಕೆಯನೆ ಮುಂಗಾದುಕೊಳು ಜೀಯಾ" ಎಂದಾಗ ಪಿಲಾತ ಅವರ ಅಸೂಯೆಯ ಛಾಯೆಯನ್ನು "ಚಿನ್ನದೊರೆಯಿಂ ಮಿಸುಕುವಸಿಧಾರೆ" ಎಂದು ಗುರುತಿಸುತ್ತಾನೆ. ಆ ಸ್ವಜನ ಘಾತಕರು "ನಮ್ಮ ನೊಗದಿಂ ತಮ್ಮ ಬಿಡುಗಡೆಗೆ" ಆತುರರಾದುದೂ ಅವನ ಒಳ ಮನಸ್ಸಿಗೆ ಗೋಚರಿ ಸುತ್ತದೆ. ಆದರೇನು? ಯೇಸುವಿಗೆ ತಾನು ತೋರಿದ ದಯೆಯ ಈ ದೂರನ್ನು ನೀಚ ಯೆಹೂದ್ಯರು ಕೈಸರನಲ್ಲಿಗೊಯ್ದರೆ ಚಂಚಲ ಚಿತ್ತನಾದ ರಾಜ ತನ್ನ ಅಧಿಕಾರವನ್ನು ಕಿತ್ತುಕೊಳ್ಳುತ್ತಾನೆ– ಎಂಬ ಸ್ವಾರ್ಥಕ್ಕಾಗಿ ಪಿಲಾತ "ಹಳಗಿಪಡೆ ಹುಲಿಯ ಹಸಿವೆಗೆ ಹಸುವ ನೀದಂತೆ ಇವರ ನೆತ್ತರ ತೃಷೆಗೆ ನಿರ್ದೋಷಿ ಈತನನ್ನೀಯುವುದೆ ನಿಶ್ಚಯಂ" ಎಂದು ತೀರ್ಮಾನಿಸುತ್ತಾನೆ. ಇಲ್ಲಿ ಬರುವ ಉಕ್ತಿ ವೈಶಿಷ್ಟ್ಯ ಗಳ ಮಾರ್ಮಿಕತೆ ಪಿಲಾತ ಮತ್ತು ಯೆಹೂದ್ಯರ ಅಂತರಂಗ ಬಹಿರಂಗಕ್ಕೆ ರಾವುಗನ್ನಡಿ ಹಿಡಿದಿದೆ. ತಪಸ್ಸು ಬೇರೆ, ಸಿದ್ಧಿ ಬೇರೆ. ಅವೆರಡೂ ಒಂದರಲ್ಲಿ ಫಲಿಸಿದಾಗ ಅದನ್ನು ಉಣ್ಣುವ ನಾವು ಭಾಗ್ಯವಂತರು.

ಯೇಸುವನ್ನು ರಾಣುವೆಯರು ಬೆತ್ತದಿಂದ ಬಡಿದಾಗ ಬಾಸುಳೆಗಳಿಂದ ನೆತ್ತರು ಒಡಮೂಡಿತು. ಯೇಸು "ಮಾ" ಎನ ಲಿಲ್ಲ. "ಕಾಗೆಗಳ ಕೊತ್ತಳಂ ಕುಕ್ಕುವೆಳಕುಕಿಲಂತೆ, ಕೆಂಡಗಳ ಕೋವೆಯಲಿ ಕಾವ ಕಾಂಚನದಂತೆ, ಮಂಜು ಮುಸುಕಿರುವ ಬೈಗಿನ ಬೆಳ್ಳಿ ಯಂತೆ" ಎಲ್ಲ ಹಿಂಸೆಯನ್ನವನು ಸಹಿಸಿದನು. ಕಪಾಲ ಸ್ಥಾನವೆನ್ನುವ "ಗೊಲ್ಗೊಥಾ" ಗಿರಿಯಲ್ಲಿ ಸಿಲುಬೆಗೇರಿಸಲು ಅವನನ್ನು ಕರೆ ತರುವಾಗ ನೋಡಿದ ಜನಪದ ಎದೆಬಡಿದುಕೊಂಡು ಗೋಳಾಡಿತು. ಯೇಸು "ನನಗೆ ಗೋಳಾಡದಿರಿ, ನಿಮಗಾಗಿ ನಿಮ್ಮ ಮಕ್ಕಳಿ ಗಾಗಿ ಗೋಳಾಡಿ ! ಇದೊ ಬರುತ್ತಲಿವೆ ದಿನಂ !" ಎಂಥ ದಿನಗಳವು? "ಬಂಜೆಯರು ಧನ್ಯರು; ಹೆರದ ಬಸಿರ್ಗಳೆನಿತು ಧನ್ಯ; ಹಾಲೂಡಿ ಸದ ಮೊಲೆಗಳು ಧನ್ಯ" ಎಂಬ ದಿನಗಳು. "ಹಸುರೆಲೆಯೊಳು ಇಂತಾಗೆ, ತರಗೆಲೆಯೊಳೇನಾಗದಿಹುದು" ಎಂಬ ಎಚ್ಚರಿಕೆ ! ವಸಂತ ಪೂರ್ಣಿಮೆಯ ಭೃಗುವಾರದ ಆ ದಿನ ಗಾಳಿ ಸೂಸದೆ ಇಳೆ ಉಬ್ಬಸದೋಳೇದುತ್ತಿತ್ತು. ಮನೆಯೊಳು ಉಸಿಕನೆ ಸಂತಮಿರತಕ್ಕ ಜನಪದಂ ಧಗೆಯ ಹೆಬ್ಬಾವಂತೆ ತಿಂತಿಣಿವರಿದು ಶಲಭ ಸಮೂಹದಂತೆ ಗೊಲ್ಗೊಥಾ ಗಿರಿಗೆ ಬಂತು. ಯೇಸುವಿನ ಕೈಕಾಲ್ಗಳಿಗೆ ಮೊಳೆ ಜಡಿವರು. ಆ ಚಿತ್ರವನ್ನು ಮೂಡಿಸಲು ಕಾವ್ಯವನ್ನು ಹಾಡಿದರೆ ಸಾಲದು, ಬಾಳಬೇಕು. ಬಾಳಿದ ಅನುಭವ ಇಲ್ಲಿ ಒಡಮೂಡಿತು:

"ಹದ್ದು ಬಿಗಿವಿಡಿದ ಲಾವಿಗೆಯಂತೆ; ಪಡುವಣದಿ ಬಿಳಿಯ ಬಿದಿಗೆಯ ತಿಂಗಳಂತೆ
ಬಿಲ್ಲಿಗೆ ತೊಟ್ಟ ಸರಳಂತೆ, ಮರಣ ವೃಕ್ಷದೊಳಮೃತ ಫಲತೂಗುವಂತೆ, ಸಾವಿರ ಚೇಳು
ಗಳು ಒಮ್ಮೆಗೆ ಕಡಿವ ಯಾತನೆಯನ್ನು ಮಗು ತಾಯ ಮೊಗನೋಡೆ ಆಕೆ ಬೆಸಲ
ಅಳಲನು ಓತು ಸೈರಿಸುವಂತೆ, ತನ್ನ ತೊರೆದರ್ಭಕರ ಹಂಬಲಿಸುವ ಮುಮೂರ್ಷು
ತಾಯಂತೆ, ತನ್ನ ಕಡಿದವರ್ಗೆ ತಣ್ಣೆಳಲೀವ ಮರದಂತೆ, ತನ್ನಳಲನು ಅವರ
ಹಂಬಲದಿ ಮರೆತು, ಕ್ಷಮಿಸಿವರನೆಲೆ ತಂದೆ ತಾವೇನನೆಸಗಿದಪೆವೆಂದರಿಯರಿವರು"

"ಋಷಿಯಾಗದವ ಕವಿಯಾಗಲಾರ" ಎಂಬ ಮಾತಿನ ಸತ್ಯಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಡ. ಇಲ್ಲಿಯ ಶ್ರದ್ಧೆ. ವಿಶ್ವಾಸ, ಪ್ರೇರಣೆ ಗಳಿಗೆ ತಮ್ಮವೇ ಆದ ಹಿರಿಮೆ ಇದೆ; ಅನುಭವವಿದೆ. ಇವುಗಳ ರಸಸ್ರೋತದಲ್ಲಿ ಕವಿ ನಮ್ಮನ್ನು ತೇಲಿಸಿ ನಮ್ಮನ್ನೇ ನಾವು ಮರೆಯು ವಂತೆ ಮಾಡಿದ್ದಾರೆ.

ಯೇಸು ತನ್ನ ತಂದೆಗೆ ಆಸುವೊಪ್ಪಿಸಿದಾಗ "ದು:ಖವಾರ್ತೆಯಂ ಜಗಕೆಲ್ಲ ಕೇಳಿಸುವ ಮರಣದುಂದುಭಿಯಂತೆ ಭೂಮಿ ಗಡ ಗಡನೆ ನಡುಗಿತು. ತನ್ನೆದುರಿನೊಳೆ ಪಡುವೊಗಂಗೊಂಡು ಧರ್ಮ ಪತಾಕೆಯಂತೆ ನಡು ಸಿಲುಬೆಯಲಿ ಚಾಚಿದ ಅಪರಾರ್ಕನಂ ಕಂಡು ರವಿತಾನಸ್ತಮಿಸಿದನು. ಕತ್ತಲೆಯ ದಾಪೆಯಿಂ ಹಿಂಡೆದ್ದ ಕೊಕ್ಕರೆಗಳಂತೆ ನೆರೆದವರೆಲ್ಲ ಮನೆಗೆ ತೆರಳಿದರು..... ಕೀರ್ತಿಯ ಹಾಲ ಹೊನ ಲಂತೆ. ತಾನನ್ನೆಗಂ ಬೀರಿದ ಅಕ್ಕರೆಯ ಬಲೆಯಂತೆ, ಬೋಧಿಸಿದ ನಿತ್ಯ ಜೀವನದ ಧವಳಿಮೆಯಂತೆ ಎತ್ತಲುಂ ಬೆಳದಿಂಗಳು, ಎತ್ತಲುಂ ಶಾಂತಂ !" ಇದಕ್ಕೆ ವಿವರಣೆ ಬೇಡ.

"ಗೊಲ್ಗೊಥಾ" ಕಾವ್ಯದ ಉಕ್ತಿ ವೈಶಿಷ್ಟ್ಯಗಳನ್ನು ತಿಳಿದು ಕೊಳ್ಳಲು ಬೈಬಲ್, ಅದರ ವ್ಯಾಖ್ಯಾನಗಳ ಸಾಧಾರಣ ಪರಿಚಯ ಅವಶ್ಯವಾದರೆ , "ಹೆಬ್ಬೆರಳು" ತಿಳಿದುಕೊಳ್ಳಲು ಕನ್ನಡ ಮತ್ತು ತುಳುವಿನ ಪಡೆನುಡಿ, ರೂಢಿ, ಲೋಕೋಕ್ತಿಗಳ ಪೂರ್ಣ ಪರಿಚಯವಿರ ಬೇಕಾದುದು ಅನಿವಾರ್ಯ. ಭಿಲ್ಲರ ಯುವಕ ಏಕಲವ್ಯನ ಕಥೆ ಹೆಬ್ಬೆರಳು. ಚಿಕ್ಕಂದಿನಲ್ಲೇ ಅವನ ತಂದೆ ತೀರಿ ಹೋಗಿದ್ದಾನೆ. ಸಾಕು ತಂದೆ ಹಿರಣ್ಯಧನ್ವ ಅವನನ್ನು ಮಗನಂತೆ ಸಾಕಿದ. ಏಕಲವ್ಯನ ಸಾಹಸ ಭಿಲ್ಲ ಯುವಕರಿಗೆ ಮೀರಿದ ಸಾಹಸ. ಆತ ಹಾರುವ ಹಕ್ಕಿ ಯನ್ನು ಬಾಣದಿಂದ ಕಾಲ ಬುಡಕ್ಕೆ ಕೆಳಗಿಳಿಸುವಂಥ ಬಿಲ್ಲಾಣ; ಈದಿಹ ಕೇಸರಿಯ ಮೊಲೆ ಮರಿಗಳನ್ನು ಎಳತಂದು ಪಳಗಿಸುವ ಧೀರ; ಸೆಳೆ ನೀರಿನ ಕುಲ್ಲೆಯೊಳು ಸಂಚರಿಸುವ ಎಳೆಸಸಿಲೆ (ಮೀನು) ಯನ್ನು ಒಂದೇ ಭಲ್ಲೆಯೊಳು ಇಕ್ಕಡಿಗೆಯ್ಯುವ ಚತುರ; ಗೆಳೆಯರ ಕೈಯಲ್ಲಿರುವ ಸಣ್ಣ ನೆಲ್ಲಿಯನ್ನು ಅಸಿಯಲಿ ಕಿಪ್ಪುಗಲದೆ ಕೊಯ್ಯುವ ಕುಶಲಿಗ. ಆದರೆ ಇಷ್ಟರಿಂದ ಅವನಿಗೆ ತೃಪ್ತಿ ಇಲ್ಲ. "ಇನಿತೆಲ್ಲವಂ ತಂದೆಯಿಂ ಕಲಿತೆ, ಇನ್ನೆನಿತೊ ಕಲಿಯಲಿಹುದೆನಗೆ" ಎಂದು ಅವನ ಮನ ಕಡುಗುತಿದೆ. ಇದನ್ನು "ಮರಿ ಹುಲಿಗೆ ಸಾಜದ ಬಣ್ಣ ಬಹಮುನ್ನ ಬಸಿರು ನೋಪಂತೆ" ಎಂದು ಅವನೇ ಸಮರ್ಥಿಸಿಕೊಳ್ಳುತ್ತಾನೆ. "ಸಾಜದ ಬಣ್ಣ" ಬರುವಾಗ ಉಂಟಾದ ಅವನ ಬಸಿರು ನೋವು ಆಚಾರ್ಯ

ದ್ರೋಣರ ಖ್ಯಾತಿಯನ್ನು ಕೇಳಿತು. "ಅವನೆಗಡ ಬಿಲ್ಲಾಯ್ತರಲ್ಲಿ ಪಿನಾಕಿ, ಗಡ ಭಾರ್ಗವಂ, ಅವನೊಳೆ ಕಲಿಯಬೇಕಸ್ತ್ರವಿದ್ಯೆಯಂ" ಎಂಬ ಹಿರಿಹಿಗ್ಗಿನಿಂದ ಸಾಕು ತಂದೆಯೊಡನೆ ಅಪ್ಪಣೆ ಕೇಳುತ್ತಾನೆ. ಅನಾರ್ಯರ, ಭಿಲ್ಲ ಸಂಪ್ರದಾಯದ ಜಾಡಿನಲ್ಲಿ ಓಡಾಡಿದ ಭಿಲ್ಲ ನಾಯಕ ಹಿರಣ್ಯಧನುವಿಗೆ ಆರ್ಯರಿಗೆ–ಬ್ರಾಹ್ಮಣರಿಗೆ ಭಿಲ್ಲರ ಬಗೆಗಿರುವ ಕುತ್ಸಿತ ದೃಷ್ಟಿಗಳ ಅನುಭವವಿದೆ. "ಅವರು ಬ್ರಾಹ್ಮಣರು ಆರ್ಯರು; ನೀನು ಭಿಲ್ಲ ಅನಾರ್ಯ. ಹದ್ದು ಕಬ್ಬಕ್ಕಿ ಮರಿಯಂ ಗುಬರಿಪುದೆ?" ಎನ್ನುತ್ತಾನೆ ಆತ. ಬ್ರಾಹ್ಮಣರಲ್ಲಿ ಭಿಲ್ಲರಿಗೆ ಆಶ್ರಯ ಸಿಕ್ಕಲಾರದು. ನನ್ನ ಮಾತನ್ನು ಮೀರಿದೆಯಾದರೆ "ಎಕ್ಕಲಂ ಗೆಣಸು ಗೂರುವಂತೆ ನಿನ್ನ ಜಾಡಿಸದೆ ಬಿಡ" ಎಂಬ ಎಚ್ಚರಿಕೆಯನ್ನು ಕೊಡುತ್ತಾನೆ. ತಂದೆ ಮಕ್ಕಳ ಔಚಿತ್ಯಪೂರ್ಣ ಸಂಭಾಷಣೆಗೆ ಅವರ ಸಾಹಚರ್ಯದ ಹಂದಿ, ಹುಲಿಗಳ ಸ್ವಭಾವ ವೈಚಿತ್ರ್ಯದ ಹೋಲಿಕೆ. ತಾನು ಚಿತ್ರಿಸುವ. ಸನ್ನಿವೇಶಗಳ ಜೀವಂತತನಕ್ಕೆ ಈ ಬಗೆಯ ಶಬ್ದ ಚಿತ್ರಗಳ ಆವರಣವನ್ನು ಹೊಂದಿಸುವ ಕುಸುರಿ ಕೆಲಸ ಶ್ರೀ ಪೈಯವರ ಕಾವ್ಯದುರ್ಗದ ಕಲಶ.

ಏಕಲವ್ಯ ದ್ರೋಣರಲ್ಲಿ ಕಲಿಯುವೆನೆಂಬ ತನ್ನ ಹಟವನ್ನು ಬಿಡಲಾರ. ಹಿರಣ್ಯಧನು "ನೀನಿನ್ನೂ ಸಣ್ಣವ. ಕರು ಕೊಣಕೆ ಕಂಬದಾ ಕೆಳಗಂತೆ, ಜೇನನೀಂಟುವೆ ಅಕಟ ಹುಳದ ಕೊಂಡಿಯ ಮರೆವೆ; ನೇರ ನೀರಲಿ ಜಿಗುಳೆಯಂತೆ ಕೊಂಕುವರಿಯದಿರು! ಎಳೆಯಲೊಲ್ಲದ ಎತ್ತು ಮಿಣಿಯ ಮೇಲ್ಬೀಳ್ವಂತೆ ಬರಿದೆ ದೂರದಿರೆಮ್ಮ! ಎಮ್ಮ ಪಾಳೆಯದಿ ನಿನಗೆ ಮಿಗಿಲಾರಿಲ್ಲ. ಬಿದಿರ ಮೆಳೆಯಲಿ ಗಂಡು ಬಿದಿರಾಗು" ಎಂದು ನಾಲ್ಕಾರು ಮಾತುಗಳಿಂದ ಮಗನ ಛಲವನ್ನು ಕದಲಿಸಲು ಯತ್ನಿಸುತ್ತಾನೆ. ಕಂಬಕ್ಕೆ ಕಟ್ಟಿದ ಕರು ಜಿಗಿದರೆ ಎಷ್ಟು ಜಿಗಿದೀತು. ಜೇನು ತುಪ್ಪ ಸವಿದರೆ ಮುಗಿಯಲಿಲ್ಲ, ಹುಳ ಚುಚ್ಚುತ್ತದೆ ಎಂಬುದನ್ನೂ ಮರೆಯಬೇಡ. ನಮ್ಮ ಬಾಳು ನೇರವಾಗಿ ಹರಿಯುವ ನೀರಿನಂತೆ ಋಜುವಾಗಿದೆ. ಅದರಲ್ಲಿ ಜಿಗುಳೆಯಂತೆ ಕೊಂಕಾಗಿ ನಡೆಯದಿರು. ಭಿಲ್ಲರ ಬಿದಿರು ಮೆಳೆಯಲ್ಲಿ ಇರುವ ಹೆಣ್ಣಿಗರಲ್ಲಿ ಗಂಡು ಬಿದಿರಾಗಿ ಬಾಳು. ಎತ್ತು ಎಳೆಯಲಾರದೆ ಹಗ್ಗದ ಮೇಲೆ ಬೀಳುವಂತೆ ನಮ್ಮನ್ನು ಮತ್ತೆ ದೂರಬೇಡ—ಎನ್ನುವ ಹಿರಣ್ಯಧನು ತನ್ನ ಸಾಮತಿಗಳಿಂದ ಸೃಷ್ಟಿಸುವ ಪ್ರಪಂಚ ಶುದ್ಧ ದೇಶೀ ಸಾಮತಿ ಪ್ರಪಂಚ. ಈ ಸಾಮತಿಗಳು ಏಕಲವ್ಯ, ಹಿರಣ್ಯಧನ್ವರ ಜೀವನಕ್ಕೆ ಎಷ್ಟು ಹತ್ತಿರವೋ ಕನ್ನಡದ ರೈತರ ಜೀವನಕ್ಕೂ ಅಷ್ಟೇ ಹತ್ತಿರವಾಗಿವೆ. ಇಲ್ಲಿ ಪಾತ್ರ ಸನ್ನಿವೇಶ. ಕಾವ್ಯ, ಕವಿ ಹೀಗೆ ಎಲ್ಲರೂ ಸಂಸ್ಕೃತಿಯ ಉಸಿರನ್ನು ಮಿಡಿಯುತ್ತಾರೆ.

ಪ್ರಯತ್ನ ಶೀಲನಾದ ಏಕಲವ್ಯ ತನ್ನ ನಿಶ್ಚಯದಿಂದ ಕದಲಲಿಲ್ಲ. "ಎಸೆವ ದಾಯವನೆಸೆವ, ದುಗಬೀಳ್ಕೆ ತಿಗಬೀಳ್ಕೆ" ಎನ್ನುವ ಅವನಿಗೆ ಜೀವನವೆಂಬುದು ಒಂದು ರೀತಿಯ ಜೂಜು ಎಂದು ತಿಳಿದಿದೆ. ದಾಳವನ್ನು ಎಸೆಯೋಣ, ಎರಡು ಬೀಳಲಿ. ಮೂರು ಬೀಳಲಿ–ಯತ್ನಿಸಿ ನೋಡೋಣ ಎಂದಾಗ ತಂದೆ "ಕನದ ಬತ್ತಕೆ ಗ್ರೋಣಿಯೂಂಪೆ" ಆ ದ್ರೋಣನು "ತಲೆಗೆ ಕೈಯೂಗಿಸದಿರಂ ನಿನ್ನ" ಎಂದು ಕೊನೆಯ ಬಾಣ ಬಿಡುತ್ತಾನೆ. ಅದನ್ನು ಅಲಕ್ಷಿಸಿ "ಅಂತಾತನೆಸಗಲು ಎನ್ನ ಕಲಿಕೆಗೆ ಅದೆ ಓನಾಮ"ವೆಂಬ ಮಗನ ಛಲದಲ್ಲಿ ತಂದೆ "ನೂತುದೆಲ ಹಂಚಿಯೊಯ್ತು; ನಿನ್ನಲಿ ಸೋತೆ; ಬಂಡೆಯ ಸೀಳೆ ಸೀಸದುಳಿಯೆ? ನುಡಿದ ಮಾತನೆ ಹಿಡಿವೆ! ಮುತ್ತುಗಕೆ ಮೂರೆ ಎಲೆ" ಎಂದು ಸೋಲೊಪ್ಪುತ್ತಾನೆ. ಹಟದ ಬಂಡೆಯನ್ನು ಸೀಳಲು ಯತ್ನಿಸಿ ತಂದೆಯ ಸೀಸದ ಉಳಿ ಮೊಂಡಾಯಿತು! ಮಗ ನುಡಿದ ಮಾತನ್ನು ಹಿಡಿದು ಮುತ್ತುಗಕ್ಕೆ ಮೂರೆ ಎಲೆ ಎಂದು ಚಂಡಿ ಹಿಡಿದ. ಇದು ವರೆಗೆ ನೂತುದೆಲ್ಲ ಮತ್ತೆ ಮತ್ತೆ ಉಂಡೆಯಾಯಿತು! ತಂದೆ ಮಕ್ಕಳ ಉತ್ತರ ಪ್ರತ್ಯುತ್ತರಗಳು ಓದುವವರನ್ನು ಅವರ ಎದೆಗೆ ಸನಿಯವಾದ ಆವರಣದಲ್ಲಿ ಮುಳುಗಿಸಿ ಮೈಮರೆಸಿತು.

ಅದುವರೆಗೆ ಈ ಸಂಭಾಷಣೆಗೆ ಮೂಕ ಸಾಕ್ಷಿಯಾಗಿದ್ದ ಗೊಂದಳದವರು ಮನಸ್ಸಿಲ್ಲದ ಮನಸ್ಸಿನಿಂದ ಮಗನನ್ನು ಹರಸಿ ಕಳುಹಿಸಿದ ಹಿರಣ್ಯಧನ್ವನಿಗೆ ಸಮಾಧಾನ ಹೇಳುತ್ತಾರೆ: "ನಿಷಾದರಾಣ್ಮ, ಜಗದಿ ಮೂವಿಧದ ನರರಿಹರು. ಮೊದಲವರು ಎಕ್ಕದಂತೆ ಹೂವುಂಟು–ಹಣ್ಣಿಲ್ಲ, ಗಳಪವೇ ವಿನಾ ಕೆಲಸವೆನೆ ಹಿಡಿಪತ್ತಿ! ಎರಡನೆಯವರು ಈಳೆಯಂತೆ. ಹೂವೇ ಹಣ್ಣಾದ ತೆರದಿ ಮಾತೊಡನೆ ಮಾಟವಿದೆ! ಮೂರನೆಯವರು ಅತ್ತಿಯಂತೆ, ಹೂವಿಲ್ಲ ಹಣ್ಣೈಸೆ. ಕೆಲಸವಲ್ಲದೆ ಮಾತನೊಲ್ಲರು! ಈತನೊ ಕೆಲಸಗಾರ! ಕಿರುಮೆಣಸಂತೆ ಕಾರವಹನೀತ! ಮಾತಿನೊಳವಂ ಹಿಡಿವ ಗೆರಸೆಯಲ್ಲದೆ ಬಿಡುವ ಜರಡೆಯಲ್ಲ" ಏಕಲವ್ಯನ ಛಲಕ್ಕೆ. ತರ್ಕಕ್ಕೆ. ಹುಮ್ಮಸ್ಸಿಗೆ ಒಳ್ಳೆಯ ಭಾಷ್ಯ. ಅವನ ಮಾತು ಜೊಳ್ಳು ಕಾಳಲ್ಲ, ಹಿಡಿವ ಗೆರಸೆಯಂತೆ. ಎಕ್ಕದ ಮರದಂತೆ ಹಣ್ಣಿಲ್ಲದ ಹೂವೇಕೆ? ಕಿತ್ತಳೆಯ ಹೂವೇ ಹಣ್ಣಾಗುವಂತೆ ಮಾಟದ ಮಾತೇಕೆ? ಹೂವಿಲ್ಲದ ಅತ್ತಿಯ ಹಣ್ಣಿಂತೆ ಮಾತಿಲ್ಲದ ಕೆಲಸಗಾರರು ಬೇಕು. ಕಿರುಮೆಣಸು ಗಾತ್ರದಲ್ಲಿ ಎಷ್ಟು ಸಣ್ಣದು. ಅದರ ಖಾರ ಕಣ್ಣೀರು ಬರಿಸುವುದಿಲ್ಲವೆ? ಇಂಥವರೆ ಬಾಳ ಹೋರಾಟದಲಿ ಗೆದ್ದು ಬರುವವರಂತೆ. ಸಂದರ್ಭಕ್ಕೆ ಸ್ವಭಾವಕ್ಕೆ, ಗೌರವಕ್ಕೆ ತಕ್ಕ ಹೋಲಿಕೆ ಜೀವಂತ ಕಾವ್ಯವನ್ನು ಹಾಡುವುದೆಂದರೆ ಹೀಗೆ.

ದ್ರೋಣ ಮತ್ತು ಏಕಲವ್ಯರ ಸಂಭಾಷಣೆಯ ವೈವಿಧ್ಯವೇ ಬೇರೆ. ದ್ರೋಣರಂತೂ ಯಜ್ಞ ಶಾಲೆಗಳ ಹೋಮಧೂಮದ ಸಂಸ್ಕೃತಿಯ ರುಚಿಯುಂಡ ಆಚಾರ್ಯರು. ಧನುರ್ವಿದ್ಯೆಯಂಥ ಪಂಚಮ ವೇದವನ್ನೂ ಅನಾರ್ಯ ಕಿಶೋರನಿಗೆ ಕಲಿಸಸಲ್ಲದು ಎಂಬ ಮಡಿವಂತಿಕೆ ಅವರದಾದರೆ ಅವರ ಮಡಿಯನ್ನು ಏಕಲವ್ಯ "ಬೆಂಕಿ ತಳೆಯದೆ ಹೊಗೆಯ? ಬೆಟ್ಟ ತಾಳದೆ ಹುಲ್ಲ? ಗಂಗೆಗೆರೆದಾ ಹೆಂಡ ಗಂಗೆಯಾಗದೆ ದೇವ?" ಎನ್ನುವ ಸಹಜ ಸರಳೋಕ್ತಿಗಳಿಂದ ಪ್ರಶ್ನಿಸುತ್ತಾನೆ. ಅವನ ಪ್ರಶ್ನೆ ಅಲಕ್ಷಿಸುವ ಪ್ರಶ್ನೆಯಲ್ಲ. ದ್ರೋಣರು ಹೇಳುವಂತೆ "ಅರಣಿಯಿಂ ಸಿಡಿತರುವ ವಿಸ್ಫುಲಿಂಗಗಳಂತೆ" ಅವು ಸಿಡಿದು ಬರುತ್ತಿದ್ದವು. ಆದರೆ ಆಚಾರ್ಯ ದ್ರೋಣರೇನು ಸಾಮಾನ್ಯರೆ? "ಅಗ್ನಿ ಧೂಮದಿಂದಾರುತಿದೆ, ಪರ್ವತಂ ತೃಣದಿಂದ ದಾವಕೀಡಾಗುತಿದೆ, ಗಂಗೆಯಿಂದೆಸಗಿದಾ ಮದಿರೆಯಂ ಪಾನಿಪರೆ? ಭಿಲ್ಲರಿಗೆ ಆರ್ಯರಾ ಸಂಗತಿಯೆ?" ಎಂದು ಅವರು ಪ್ರಶ್ನೆಗಳನ್ನೆಲ್ಲ ಖಂಡಿಸಿದಾಗ ಏಕಲವ್ಯ ಖಿನ್ನನಾಗುತ್ತಾನೆ. "ಗೋವಿಂದ ಪೈಗಳ ಕವನಗಳು ಓದಿದರೆ ಕಿವಿ ತುಂಬ ಇರುತ್ತವೆ. ಅರ್ಥ ಮಾಡಿ ಕೊಂಡರೆ ಮನಸ್ಸು ತುಂಬಿ ಬರುತ್ತವೆ" ಎಂದು ಹೇಳಿದ ಸಹೃದಯ ವಿಮರ್ಶಕರ ಮಾತು ಹದಿನಾರಾಣೆ ಸತ್ಯ. ಇಲ್ಲಿ ನಮ್ಮ ಕಿವಿಯನ್ನು ತುಂಬುವುದು ಪಾಂಡಿತ್ಯವಲ್ಲ; ಪ್ರತಿಭೆ! ಹೃದಯವನ್ನು ತುಂಬಿಸುವುದು ಕೈಗೆಟುಕದ ಕಲ್ಪನೆಯಲ್ಲ; ಸಹಜ ಸರಳವಾದ ಹೋಲಿಕೆ.

ಪೈಯವರ "ವೈಶಾಖಿ"ಯನ್ನು ಬೌದ್ಧಮತ ಪ್ರಕ್ರಿಯೆಗಳ ಪರಿಚಯವಿಲ್ಲದೆ ಅರಗಿಸಿಕೊಳ್ಳುವುದು ಸುಲಭವಲ್ಲ. ಆದರೆ ಅಲ್ಲಿನ "ಭವ್ಯಾಂಗ"ವನ್ನು ಬಿಟ್ಟು "ಕಾವ್ಯಾಂಗ"ವನ್ನು ಓದಿದರೆ ಇದರಲ್ಲಿಯೂ ಉಕ್ತಿ ವೈಶಿಷ್ಟ್ಯಗಳಿವೆ ಎಂಬುದನ್ನು ಕಾಣಬಹುದು. ಅವು ಸಾಮಾನ್ಯರ ಜೀವನದ ಮಟ್ಟವನ್ನೂ ಮೀರಿ ನಿಂತಿವೆ. ಅರ್ಘ ಪುಷ್ಟಿ, ಸನ್ನಿವೇಶ ವಿವರಣೆಗಾಗಿ ಇವು ಈ ಕಾವ್ಯದಲ್ಲಿ ಅಲ್ಲಲ್ಲಿ ಬಂದಿದ್ದರೂ ಅವುಗಳ ಕಂಪು ನಮ್ಮ ಘ್ರಾಣೇಂದ್ರಿಯವನ್ನು ಜಾಗ್ರತಗೊಳಿಸುತ್ತವೆ. "ಕಾದ ಕಬ್ಬಿಣಕ್ಕೆ ಇತ್ತ ನೀರು; ಕಪ್ಪುರ ಸುಟ್ಟು ಬೂದಿ ಇಲ್ಲದಂತೆ; ಪಡಿಯನು ಒಡವೆಯಂ ಸೆಳೆದ ತಕ್ಕಡಿ; ಮುಂಗಾರ ವಾತಾಲಿಗೆ ಅಲೆವ ಅಡಕೆಯ ಬನ" ಗಳು ಕಥೆಯ ಬೌದ್ಧ ಆವರಣ ಮಾಯೆಯಲ್ಲಿಯೂ ಲೋಕೋಕ್ತಿ ವೈಶಿಷ್ಟ್ಯಗಳನ್ನು ಒಳಗೊಂಡಿವೆ. ಬುದ್ಧನು ತನ್ನ ಶಿಷ್ಯರಿಗೆ "ನಿಮ್ಮ ಧರ್ಮವಂ, ನಿಮ್ಮ ಸಾಮ್ರಾಜ್ಯಮಂ ಅನ್ಯರಲಿ ಹೊರಿಸೆ ಮೇಲ್ವಾಯದಿರಿ" ಎಂದು ಉಪದೇಶಿಸಿದಾಗ ಇದು ವರೆಗೆ ಕಾವ್ಯಾಂಗದಿಂದ ಅರಳಿದ ನಮ್ಮ ಮನಸ್ಸು ಭವ್ಯಾಂಗದತ್ತ ಒಲೆಯುತ್ತದೆ. ಹೀಗೆ ಲೌಕಿಕದಿಂದ ಅಲೌಕಿಕಕ್ಕೆ ನಮ್ಮನ್ನು ಸಿದ್ಧಗೊಳಿಸುವ ಕಾವ್ಯಗಳು, ಕವಿಗಳೇ ಕೃತಾರ್ಥರು.

ಪೂಜ್ಯ ಪೈಯವರ ಬಿಡಿ ಕವನಗಳಲ್ಲಿಯೂ ಲೋಕೋಕ್ತಿಗಳು ಹೇರಳವಾಗಿವೆ. ವಿಸ್ತಾರ ಭಯದಿಂದ ಅವುಗಳಲ್ಲಿ ಮುಖ್ಯವಾದೊಂದನ್ನು ಇಲ್ಲಿ ಹೇಳಿ ಈ ಬರಹವನ್ನು ಮುಗಿಸಬಹುದು. "ಕನ್ನಡಿಗರ ತಾಯಿ" ಪಂಡಿತ ಪಾಮರರಾದಿಯಾಗಿ ಎಲ್ಲರೂ ಮೆಚ್ಚಿದ ಅವರ ಭವ್ಯ ಕವಿತೆ. ಆವೊಂದು ಕವನದಲ್ಲಿ ಅವರು ಹತ್ತು ಪ್ರಬಂಧಗಳಿಗೆ ವಸ್ತುವಾಗಿರುವ ಚರಿತ್ರೆಯನ್ನು, ಕನ್ನಡದ ಗತ ವೈಭವವನ್ನು ಸಿಂಹಾವಲೋಕಿಸಿದ್ದಾರೆ. ಈ ಅವಲೋಕನದಲ್ಲಿ ಮುತ್ತಿನಂಥ ಒಂದು ಉಕ್ತಿ ಇದೆ:

"ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ<br>ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ."

ಈ ಸಾಲುಗಳನ್ನು ನಾವು ಇನ್ನೊಮ್ಮೆ ಈ ಕಾಲದಲ್ಲಿ ಜ್ಞಾಪಿಸಿಕೊಳ್ಳುವುದು ಅವಶ್ಯವಾಗಿದೆ. ಪೈಯವರ ಕೃತಿಗಳನ್ನು ತಿಳಿದು ಕೊಳ್ಳುವ ಈ ಯತ್ನದಿಂದ ಅವರನ್ನು ಜ್ಞಾಪಿಸಿಕೊಳ್ಳುವಾಗ ಈ ಉಕ್ತಿ ವೈಶಿಷ್ಟ್ಯದ ಮಹತ್ವವನ್ನು ಅರಿತು ಕೊಳ್ಳುವುದೇ ಅವರಿಗೆ ನಾವು ಅರ್ಪಿಸುವ ಗೌರವ.



# ಪೈಗಳ ಕೆಲವು ಪ್ರಯೋಗಗಳು

**ತೆಕ್ಕುಂಜ ಗೋಪಾಲಕೃಷ್ಣ ಭಟ್ಟ**

1950ನೆಯ ಡಿಸೆಂಬರ್-ದಿನಗಳು 24, 25 ಮತ್ತು 26ರಲ್ಲಿ ಬೊಂಬಾಯಿಯಲ್ಲಿ ನೆರವೇರಿದ ಮೂವತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪೀಠವನ್ನಲಂಕರಿಸಿದ್ದ ರಾಷ್ಟ್ರಕವಿ ಮಂ. ಗೋವಿಂದ ಪೈಗಳು ತಮ್ಮ ಅಧ್ಯಕ್ಷ ಭಾಷಣದಲ್ಲಿ,

"ಕೈಲಾದ ಮಟ್ಟಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸಿ ನಮ್ಮ ಶಬ್ದಸ್ತೋಮವನ್ನು ಹೆಚ್ಚಿಸಬೇಕು......ಈ ಕೆಲಸದಲ್ಲಿ ಮೊದಲ ಹೆಜ್ಜೆಗಳೆಂದರೆ ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಕ್ರಿಯಾಪದಗಳನ್ನೂ, ಉದಾ: "ಅರುಣಿಸಿತು ಮೂಡದೆಸೆ"= ಮೂಡಲಲ್ಲಿ ಕೆಂಬೆಳಕು ತೋರಿತು, "ಸವ್ಯಸಾಚಿಸು"= ಎರಡು ಕೆಯ್ಗಳಿಂದಲೂ ಬಾಣಗಳನ್ನು ಎಸೆ. ಇ. ಹೊಸ ನಾಮಪದಗಳನ್ನು, ಉದಾ: ಸಮ್ರಾಜಿಕೆ=(empire, imperialism) ಇ. ಕನ್ನಡ ಶಬ್ದಗಳಿಗೂ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಶಬ್ದಗಳನ್ನೂ, ಉದಾ: ಕೆಳಗಿಸು=ಕೆಳಗೆ ಇಳಿಸು, ಕಮ್ಮಿಸು=ಪರಿಮಳಿಸು ಇ, ರಚಿಸಬೇಕು, ಹಾಗೂ ಮರವೆಯ ಪಾಲಾದ. ಉದಾ; ಅವಯವದೆ (ಪಂಪ ಭಾರತ, ii 44; ಇ) ಬಲುಬೇಗನೆ, ಮುಂತಾದ ಕನ್ನಡ ಶಬ್ದಗಳನ್ನು ಎಷ್ಟೋ ಕಾಲದಿಂದ ನಿದ್ದೆಹೋಗುವಲ್ಲಿಂದ ಎಬ್ಬಿಸಬೇಕು, ಕನ್ನಡದ ಸೋದರಿಯರಾದ ಇತರ ದ್ರಾವಿಡ ಭಾಷೆಗಳಿಂದ ಬೇಕಾದ ಶಬ್ದಗಳನ್ನು ಬೇಕಾದಂತೆ ಕನ್ನಡಿಸಿ ಎರಕೊಳ್ಳಬೇಕು, ಇತರ ಭಾಷೆಗಳ ಚಲೋದಾದ ನುಡಿಗಟ್ಟುಗಳನ್ನು (idioms) ಅನುವದಿಸಿ, ಉದಾ: to throw down the gauntlet= ಕೈಹೊಡೆಯನ್ನು ಬಿಸುಡು ಇ ಅವನ್ನು ನಮ್ಮವಾಗಿಸಿಕೊಳ್ಳಬೇಕು ಎಂಬ ಇವೇ............ಬರಹಗಾರರು ಅಕ್ಷರಿಕೆಯನ್ನು (spelling) ಚನ್ನಾಗಿ ಗಮನಿಸಬೇಕು; ಉದಾ, (1) ನಿಶ್ಚಯಾರ್ಥದ ಕನ್ನಡ ಶಬ್ದಗಳಾದ ಕಂಡಣೆ, ಕಂಡಿಸು, ಎಂಬವುಗಳಿಂದ ("ತಪ್ಪು"-"ತಪ್ಪಿತ"ದಂತೆ) ಹುಟ್ಟಿದ "ಕಂಡಿತ" ಎಂಬ ಕಕಾರಾದಿಯಾದ ರೂಪವೇ ಸರಿಯಲ್ಲದೆ "ತುಂಡಿಸಿದ" ಎಂಬ ಅರ್ಥವುಳ್ಳ ಸಂಸ್ಕೃತ "ಖಂಡಿತ" ಎಂಬ ಖಕಾರಾದಿ ರೂಪವಲ್ಲ: (2)"ಮುಗಿತ" ಎಂಬ ಅರ್ಥದಲ್ಲಿ ("ಸಂದಾಯ", "ಉಳಿತಾಯ"ಗಳಂತೆ) "ಮುಗಿ" ಎಂಬ ಧಾತುವಿನಿಂದಾದ "ಮುಗಿತಾಯ"ವೇ ನೇರಾದ ರೂಪವಲ್ಲದೆ, ಸರ್ವಥಾ "ಮುಕ್ತಾಯ"ವಲ್ಲ; (3) ವಿರಳಾರ್ಥದಲ್ಲಿ "ಅಪೂರ್ವ" ಎನ್ನಬೇಕಲ್ಲದೆ, "ಕುರೂಪ" ಎಂಬ ಅರ್ಥವುಳ್ಳ "ಅಪರೂಪ"ವಲ್ಲ, ಇ. ಆದರೆ ಹಲವು ಕನ್ನಡ ಶಬ್ದಗಳಿಗೆ ಆಯಾ ಅನ್ಯಾನ್ಯ ಪ್ರಾಂತಗಳಲ್ಲೇ ಅಲ್ಲ. ಕೆಲವಕ್ಕೆ ಒಂದೇ ಪ್ರಾಂತದಲ್ಲೂ ಇರುವ ವಿವಿಧ ರೂಪಗಳನ್ನು ತೊಡೆದು ಬಿಟ್ಟು, ಉದಾ: ಅಡಕೆ-ಅಡಿಕೆ. ಇದಿರು-ಎದುರು. ಉಡಿಗೆ-ಉಡುಗೆ, ಗುಡಸಲು-ಗುಡಿಸಲು-ಗುಡುಸಲು-ಗುಡಲು ಇತ್ಯಾದಿ, ಅವನ್ನು ಯಾವುದೊಂದೇ ರೂಪಕ್ಕೆ ಇಳಿಸಬೇಕೆಂಬ ಪ್ರಯತ್ನವಾದರೆ ನನ್ನ ಮನಸ್ಸಿಗೆ ಒಗ್ಗದು, ಅವೆಲ್ಲಾ ರೂಪಗಳನ್ನು ಬದುಕಗೊಡಬೇಕು, ಅವೆಲ್ಲವನ್ನು ಬಳಸಬೇಕು, ಬಾಳಿಸಬೇಕು ಎಂಬುದೇ ನನಗೆ ಮೆಚ್ಚು."

ಎಂದು "ಅಪ್ಪಣಿಸಿ"ದ್ದಾರೆ. (ಅಧ್ಯಕ್ಷಭಾಷಣ–ಪುಟ14–15) ಇದರಿಂದ ಅವರ ಪ್ರಯೋಗಗಳ ಸ್ವರೂಪವೂ, ಅದಕ್ಕೆ ಕಾರಣವೂ ಸಾಕಷ್ಟು ಚೆನ್ನಾಗಿ ಅವಗತವಾಗುತ್ತವೆ. ಪ್ರಕೃತದ ಉದ್ಧರಣದಲ್ಲಿ ಅವರು ಕೊಟ್ಟ ಉದಾಹರಣೆಗಳು ಅವರ ಹೆಬ್ಬೆರಳು ಎಂಬ ನಾಟಕದಲ್ಲಿ ಹೇರಳವಾಗಿಯೂ, ಗೊಲ್ಗೊಥಾ ಮತ್ತು ವೈಶಾಖಿ ಎಂಬ ಕಾವ್ಯಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿಯೂ ದೊರೆಯುತ್ತವೆಯಲ್ಲದೆ ಇತರತ್ರವೂ ಉಪಲಬ್ಧವಾಗುತ್ತವೆ. ಇಲ್ಲಿ ಅವರ ಅಧ್ಯಕ್ಷ ಭಾಷಣ ಮತ್ತು ಉಪರ್ಯುಕ್ತ ಕೃತಿಗಳಿಂದ ಕೆಲವು ಪ್ರಯೋಗಗಳನ್ನು ಉದ್ಧರಿಸಿಕೊಂಡು ಅವುಗಳ ಕುರಿತು ನಾಲ್ಕು ಮಾತುಗಳನ್ನು ಉಲ್ಲೇಖಿಸಲಾಗುವುದು.

ಮೊದಲಾಗಿ "ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಕ್ರಿಯಾಪದಗಳನ್ನು "ನಮ್ಮವಾಗಿಸಿಕೊಂಡ ಬಗೆಯನ್ನು ಪರಿಶೀಲಿಸೋಣ. ಅವರ ಭಾಷಣದಲ್ಲಿ ಅವರೇ ಉದಾಹರಿಸಿದ ಶಬ್ದಗಳಲ್ಲದೆ ಪುನರುಕ್ತಿಸು=ಮತ್ತೊಮ್ಮೆ ಹೇಳು. ಧಾವತಿಸು= ಅವಸರಪಡು, ಎಂಬವುಗಳನ್ನು ಕಾಣುತ್ತೇವೆ. ಇತರ ಕೃತಿಗಳಲ್ಲಿ ಈ ಕೆಳಗಿನವುಗಳನ್ನು ಕಾಣಬಹುದು:

ನಿಪುಣಿಸು=ನಿಪುಣನನ್ನಾಗಿ ಮಾಡು. ಅಧ:ಪಾತಿಸು=ಕೆಳಗೆ ಬೀಳಿಸು. ಔಷಧಿಸು=ಔಷಧಿಯನ್ನು ಮಾಡು. ಅಭಾವಿಸು= ಇಲ್ಲದಂತೆ ಮಾಡು, ಕೋಲಾಹಲಿಸು-ಗಲಭೆಮಾಡು. ಮನನಿಸು=ಮನನಮಾಡು, ಕೌಮುದಿಸು= ತಿಂಗಳ ಬೆಳಕನ್ನುಂಟುಮಾಡು, ಶುದ್ಧಿಸು=ಶುದ್ಧಮಾಡು, ಪರಾಙ್ಮುಖಿಸು=ಮುಖ ತಿರುಗಿಸುವಂತೆ ಮಾಡು. ಬಹುವಚನಿಸು=ಬಹುವಚನದಲ್ಲಿ ಸಂಬೋಧಿಸು, ಚಕಾರಿಸು=ಚಕಾರ ಶಬ್ದವನ್ನುಚ್ಚರಿಸು, ಚಿರಸ್ಥಾಯಿಸು=ಶಾಶ್ವತವಾಗಿ ಉಳಿಸು. ಅತಿಪಾರ್ಥಿಸು=ಪಾರ್ಥ (ಅರ್ಜುನ)ನನ್ನು ಮೀರಿಸು, ಇತ್ಯಾದಿಗಳು.

ಇವು ಮಾತ್ರವಲ್ಲದೆ ರೂಢಿಯಲ್ಲಿರುವ ರೂಪಗಳಿಗೆ ಪ್ರತಿಯಾಗಿ ಕೆಲವು ಶಬ್ದಗಳ ರೂಪಗಳು ಭಿನ್ನವಾಗಿ ಕಂಡುಬರುತ್ತವೆ. ಉದಾ: ಉದ್ಗಾರಿಸು (ಉದ್ಗರಿಸು), ವಿಸ್ತಾರಿಸು (ವಿಸ್ತರಿಸು), ವಿಹಾರಿಸು(ವಿಹರಿಸು) ಇತ್ಯಾದಿ. ಇವುಗಳ ಸ್ವರೂಪಗಳ ಸಾಧುತ್ವವನ್ನು ಸಮರ್ಥಿಸಬಹುದಾದರೂ ತೂಷ್ಣಿಸು=ಸುಮ್ಮನಾಗು ಎಂಬುದನ್ನು ಅಂಗೀಕರಿಸಿಕೊಳ್ಳಬಹುದೇ ಎಂದು ಸಂದೇಹವಿದೆ. ಏಕೆಂದರೆ "ತೂಷ್ಣೀಂ" ಎಂಬ ಸಂಸ್ಕೃತದ ಅವ್ಯಯಕ್ಕೆ ಇಸು ಪ್ರತ್ಯಯವನ್ನು ಸೇರಿಸುವುದು ಸಮಂಜಸವೆನ್ನಬಹುದೇ? ಸಂಸ್ಕೃತ-ಕನ್ನಡ ವೈಯಾಕರಣರು ನಿರ್ಧರಿಸಬೇಕು.

"ಕನ್ನಡ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಹೊಸ ಶಬ್ದಗಳನ್ನು" ಅವರು ಹೇಗೆ ನಿರ್ಮಿಸಿಕೊಂಡಿದ್ದರೆಂಬುದಕ್ಕೆ ಈ ಕೆಳಗಣ ಶಬ್ದಗಳನ್ನು ನೋಡಬಹುದು: ಕೂಸಾಡಿಸು = ಮಂಕಾಡಿಸು, ಒಳಗಿಸು = ಒಳಗೆ ಸೇರಿಸಿಕೊಳ್ಳು, ಚಳಿಯು = ಕುಗ್ಗಿಕೊಳ್ಳು ಇತ್ಯಾದಿಗಳಲ್ಲಿ ಮೊದಲಿನ ಶಬ್ದವನ್ನು ಕೂಸು ಮತ್ತು ಆಡಿಸು ಎಂದು ಭಿನ್ನಪದಗಳನ್ನಾಗಿ ಸ್ವೀಕರಿಸಿಕೊಳ್ಳಲೂ ಸಾಧ್ಯವಿದೆ.

ಹೊಸ ಶಬ್ದಗಳನ್ನೇ ನಿರ್ಮಿಸಬೇಕೆಂಬ ತಮ್ಮ ಗುರಿಯ ಕಡೆಗೆ ಅವರು ಹೇಗೆ ಮುಂದುವರಿಯುತ್ತಿದ್ದರೆಂಬುದಕ್ಕೆ ಹಡಗುವಳ್ಳ (captain), ಒಪ್ಪಯಿಕೆ (resignation) ಒಳವಾರು (import), ಹೊರವಾರು (export), ಅಣಿಷ್ಠ (= superlative of ಅಣು), ವೈಣಿಕಗೀತ (lyric), ಜಾಣಿಕೆ ಎಂಬ ಶಬ್ದಗಳನ್ನು ಉದಾಹರಿಸಬಹುದು.

ಹೀಗೆ ಸಂಸ್ಕೃತ ಕನ್ನಡ ಶಬ್ದಗಳಿಗೆ ಹೊಸರೂಪಗಳನ್ನು ಕೊಟ್ಟು ನಮ್ಮವನ್ನಾಗಿಸುತ್ತಿದ್ದ ಅವರು ಕೆಲವು ಸಲ ಸಂಸ್ಕೃತ ಶಬ್ದಳನ್ನು ಇದ್ದಕ್ಕಿದ್ದಂತೆಯೇ ಇರಿಸಿಕೊಳ್ಳುತ್ತಿದ್ದುದು ಮಾತ್ರವಲ್ಲ, ಸಂಸ್ಕೃತ ವಾಕ್ಯಗಳನ್ನೂ ಯಥಾವತ್ತಾಗಿ ಪ್ರಯೋಗಿಸುತ್ತಿದ್ದರು. ಅಲಮಲಂ, ಶಿವಾಸ್ತೇ ಪಥಾ: ಸಂತು, ಮಾಮಾ, ಶತಂ ಜೀವ ಶರದೋ ವರ್ಧಮಾನ:, ಸುಖೀಭವ ಎಂಬವುಗಳು ಪ್ರಯೋಗವಾಗಿದ್ದರೂ ಇವೆಲ್ಲ ಉಚಿತ ಪಾತ್ರಗಳ ಬಾಯಿಂದ ಬರುತ್ತವೆಯೆಂಬುದನ್ನು ಗಮನಿಸಬೇಕು. ಹಾಗೆಯೇ ಕೆಲಕೆಲವು ಕನ್ನಡದ ರೂಢಿಯ ನುಡಿಗಟ್ಟುಗಳನ್ನು ಸಂಸ್ಕೃತಕ್ಕೆ ಪರಿವರ್ತಿಸಿಕೊಂಡಂತೆ ಕಾಣುತ್ತದೆ. ಕತ್ತರಿಯೊಳಗಿನ ಅಡಕೆ ಎಂಬುದನ್ನು ಕರ್ತರೀಕ್ರಮುಕ ಸ್ಥಿತಿಯೆಂದು ರೂಪಾಂತರಿಸಿಕೊಂಡಿದ್ದರೂ, ಕೆಲಕೆಲವು ಅನ್ಯಭಾಷಾ ಪ್ರಯೋಗಗಳನ್ನು ಇದ್ದಕ್ಕಿದ್ದಂತೆಯೇ ಪ್ರಯೋಗಿಸಿದ್ದಾರೆಂಬುದಕ್ಕೆ "ವೈಶಾಖಿ"ಯಲ್ಲಿ ಬರುವ ಪಾಲಿಭಾಷೆಯ ನಿರುಪಧಿಶೇಷನಿರ್ವಾಣ, ನೇರಂಜರೆ, ಉರುವೇಲೆ, ಕಕುತ್ಥಾನದಿ ಎಂಬವುಗಳಿಗೆ ನಿರುಪಾಧಿಶೇಷ ನಿರ್ವಾಣ ನಿರಂಜನಾ, ಉರುವಿಲ್ವ, ಕಕುಸ್ಥಿ ನದಿ ಎಂಬ ಸಂಸ್ಕೃತ ರೂಪಗಳನ್ನು ಇಟ್ಟುಕೊಂಡಿಲ್ಲ. ಇದಕ್ಕೆ ಬುದ್ಧನ ಕಾಲದ ವಾತಾವರಣ ಚಿತ್ರವನ್ನು ಮನಸ್ಸಿನಲ್ಲಿ ಒಡಮೂಡಿಸುವುದೇ ಉದ್ದೇಶವೆನ್ನಲಡ್ಡಿಯಿಲ್ಲ.

ಪೈಗಳ ಕೃತಿಗಳಲ್ಲಿ ಪ್ರಯೋಗವಾಗಿರುವ ಎಷ್ಟೋ ಶಬ್ದಗಳು ಮೇಲು ನೋಟಕ್ಕೆ ಉಚಿತವಲ್ಲವೆಂಬಂತೆ ಕಾಣುತ್ತವೆಯಾದರೂ, ಅವುಗಳಲ್ಲಿ ಹೆಚ್ಚಿನವು ಬೇರೆಬೇರೆ ಕೋಶಗಳ ಆಧಾರವುಳ್ಳವುಗಳೆಂಬುದನ್ನು ಮರೆಯಬಾರದು. ಇಂದು ಹೆಚ್ಚಾಗಿ ಕೈ ಎಂದು ಬರೆಯುವ ಶಬ್ದವನ್ನು ಅವರು ಕೆಯ್ ಎಂದೇ ಬಳಸುತ್ತಿದ್ದರು. ಇದಕ್ಕೇನು ಕಾರಣವೆಂದು ಶೋಧಿಸುವಾಗ ಕಿಟ್ಟೆಲ್ಲರ ಕೋಶದಲ್ಲಿ ಇದಕ್ಕೆ ಆಧಾರವಿದೆ ಎಂಬುದು ಕಂಡುಬಂತು. ಅದರಲ್ಲಿ

> ಕಯ್—ಕೆಯ್. This syllable often appears as ಕೆಯ್ and ಕೈ; it is, however, not unfrequently found in old manuscripts and appears to be radical; cf. e. g. sk. ಶಯ, the hand, with Kannada ಕಯ್ (ಕೆಯ್, ಕೈ), the hand. To avoid too great a deviation from present custom the form ಕೆಯ್ has been adopted wherever admittable.

ಎಂದಿದೆ. ಇದೇ ರೀತಿ "ಶಿವಾಸ್ತೇ ಪಥಾ: ಸಂತು" ಎಂದು ಕಂಡಾಗ ಕಾಳಿದಾಸನ ಶಾಕುಂತಲ ನಾಟಕದಲ್ಲಿ "ಶಿವಾಸ್ತೇ ಪಂಥಾನ: ಸಂತು" ಎಂದು ಪ್ರಯೋಗವಾದುದು ನೆನಪಾಗಿ, ಪಥಾ: ಎಂದು ಅಕಾರಾಂತ ಶಬ್ದದ ಬಹುವಚನವು ಸಾಧುವೇ ಎಂದು ಹುಡುಕಿದಾಗ ಕೋಶಗಳಲ್ಲಿ ಅಕಾರಾಂತ ಶಬ್ದವೂ ಇರುವುದು ಕಂಡುಬಂದಿತು. ಹೀಗೆ ಅನೇಕ ಶಬ್ದಗಳನ್ನು ಕಾಣುವಾಗ ಮೊದಲ ನೋಟಕ್ಕೆ ತಬ್ಬಿಬ್ಬಾಗುವವಾದರೂ ಅವುಗಳಲ್ಲಿ ಹೆಚ್ಚಿನವಕ್ಕೆ ಆಧಾರವಿದೆಯೆಂದು ಕಂಡುಬರುತ್ತದೆ. ಕೆಯ್ತು, ಕೆಯ್ದು, ನೆಟ್ಟಾನೆ, ಕನ, ನುಲಿಸು, ಕೀಡಿ, ಗಂಡಿಕೆ, ನೆನವು, ವಯಿನ ಇತ್ಯಾದಿಗಳೆಲ್ಲ ಈ ವರ್ಗಕ್ಕೆ ಸೇರುತ್ತವೆ.

ಕಿಟ್ಟೆಲ್ಲರ ಕೋಶದಲ್ಲಿ ಕಾಣದ ದುಸ್ಸಾಧ್ಯವಾದ ಪ್ರಯೋಗಗಳೂ ಅವರ ಕೃತಿಗಳಲ್ಲಿ ಕಂಡುಬರುತ್ತವೆ. ಇವುಗಳಿಗೆ ಅನ್ಯ ಕೋಶಗಳೂ ಆಧಾರವಾಗಿರಬಹುದು, ಅಥವಾ ಜನರ ಆಡುಮಾತುಗಳಲ್ಲಿ ಅವು ಕಂಡುಬರುವುದೇ ಕಾರಣವಾಗಿರಬಹುದು. ಆಸ ಎಂಬುದನ್ನೂ ಅಸಾಧ್ಯ ಎಂಬರ್ಥದಲ್ಲಿ ಪ್ರಯೋಗಿಸಿದ್ದಾರೆಂಬುದಕ್ಕೆ "ಕಲಿಸಲಾಸ" ಎಂಬುದನ್ನು ಉದಾಹರಿಸಬಹುದು. "ಹರಿಮುರಿ" ಎಂಬುದನ್ನು ಅಲ್ಪಪ್ರಮಾಣ ಎಂಬರ್ಥದಲ್ಲಿ ಪ್ರಯೋಗಿಸಿದುದನ್ನು ಕಾಣುವಾಗ, ಇದು ಆಡುಮಾತಿನಿಂದ ಬಂದುದೆಂದು ಹೇಳುವುದಕ್ಕೆ ಅಭ್ಯಂತರವೇನೂ ಇಲ್ಲ. ಉಳಿದವರು ಇದನ್ನು ಈ ಅರ್ಥದಲ್ಲಿ ಬಳಸುತ್ತಾರೋ ಇಲ್ಲವೋ, ತಿಳಿಯದಾದರೂ ಹವೀಕರು ಮಂಗಳೂರು ಪುತ್ತೂರು ಕಡೆಗಳಲ್ಲಿ ಬಳಸಿಕೊಳ್ಳುತ್ತಾರೆ, ನಿಶ್ಚಯ.

ಸಂಸ್ಕೃತ ಪ್ರಯೋಗಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸವನ್ನೂ ಅವರು ಮಾಡಿದ್ದಾರೆ. ಉದಾಹರಣೆಗೆ "ಕಾಲಲ್ಲಿ ತಲೆ ಚಾಚು" ಎಂಬುದು. ಇನ್ನು, ಐಕಮತ್ಯ ಎಂಬುದನ್ನು ಐಕ್ಯಮತ್ಯ ಎಂದೂ, ಬಾರನು ಎಂಬುದನ್ನು ಬರನು ಎಂದೂ, ಮೇಲಧಿಕಾರಿ ಎಂಬುದನ್ನು ಮೇಲಾಧಿಕಾರಿ ಎಂದೂ, ಪಡಿಯಿಂ ಒಡವೆಯಿಂ.........ಎಂಬುದನ್ನು ಪಡಿಯಂ ಒಡವೆಯಂ......ಎಂದೂ ಪ್ರಯೋಗಿಸಿದುದನ್ನು ಕಾಣುತ್ತೇವೆ.

ಅವರಿಗೆ ಅರಿಸಮಾಸದೋಷವೆಂಬುದು ಸರ್ವತ್ರಗ್ರಾಹ್ಯವಲ್ಲವೆಂಬ ಭಾವನೆ ಬಂದಿರಬೇಕು. ಪೂರ್ವಕವಿಗಳೂ ಅಂತಹ ಪ್ರಯೋಗಗಳನ್ನು ಮಾಡಿ, ಮಾರ್ಗದರ್ಶಕರಾದುದರಿಂದ ಅವರೂ ಅಂತಹ ಬಳಕೆಯಲ್ಲಿ ಹಿಂಜರಿದಿರಲಾರರು. ವೈಯಾಕರಣರು ಪೂರ್ವಕವಿಪ್ರಯೋಗಗಳೆಂದು ಅಂಥವುಗಳಿಗೆ ಮನ್ನಣೆಯಿತ್ತಿರುವಾಗ, ತಮ್ಮ ಪ್ರಯೋಗಗಳನ್ನು ಅಸಾಧುವೆಂದೂ ಯಾರೂ ನೀಕರಿಸಲಾರರೆಂದು ಅವರು ಧೈರ್ಯತಂದುಕೊಂಡಿರಬೇಕು. ಅವರು ಅಂತಹ ಧೀರರಾಗಿದ್ದರೆಂಬುದೂ ಸತ್ಯ. ರಾಜಕನ್ಯೆ, ಅತಿತಿಂದಿ ಇತ್ಯಾದಿಗಳು ಅವರ "ವೈಶಾಖಿ"ಯಲ್ಲಿ ಕಂಡುಬರುತ್ತವೆ.

ಬಲ್ಲಿ, ಬಿಟ್ಟಿ, ಸರಿರಿ, ಎಂದು ಬಲ್ಲೆ, ಬಿಟ್ಟೆ, ಸರಿಯಿರಿ-ಎಂಬವುಗಳಿಗೆ ಪ್ರತಿಯಾಗಿ ಪ್ರಯೋಗವಾಗಿವೆ. ಹಾಗೆಯೇ ಹೋಗುತ್ತದೆ ಮುಂತಾದವುಗಳಲ್ಲಿ ಸೇರುವ "ಅದೆ" ಎಂಬ ಪ್ರತ್ಯಯವನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಸಂಧಿನಿಯಮಗಳು ಕೆಲವು ವೈಯಾಕರಣ ಉದಾಹರಣೆಗಳಿಗೆ ಹತ್ತಿರ ಬರುವಂತೆ ಕಂಡುಬರುವುದಿಲ್ಲ. ತೃತೀಯಾ ವಿಭಕ್ತಿಯ ಪ್ರತ್ಯಯವಾಗಿ "ಎ" ಎಂಬುದನ್ನು ಎಷ್ಟೋ ಕಡೆ ಬಳಸಿದ್ದಾರೆ. ಈ ಪ್ರತ್ಯಯವು ಕೆಲವು ವೇಳೆ ಅವಧಾರಣೆಯ ಅರ್ಥದಲ್ಲಿಯೂ ಪ್ರಯೋಗವಾಗುವುದಿದೆ. ಸಂದರ್ಭವರಿತು ಅವುಗಳ ಅರ್ಥವ್ಯತ್ಯಾಸವನ್ನು ಮಾಡಿಕೊಳ್ಳಬೇಕಾಗುತ್ತದೆ. ಮೊನ್ನೆಯಮೊನ್ನೆ, ಅಲ್ಲಡೆ, ಬರುವುದೆ, ಮುನ್ನೆ ಇತ್ಯಾದಿಗಳು ಪೈಗಳ ವಿಶಿಷ್ಟ ಪ್ರಯೋಗಗಳೆಂದೇ ಕಂಡುಬರುತ್ತವೆ. ಹೀಗೆ ಹೊಸ ಶಬ್ದ ನಿರ್ಮಾಣ, ಹೊಸ ಪ್ರಯೋಗರಚನೆ ಹೊಸ ದೃಷ್ಟಿಗಳಲ್ಲಿ ಅದ್ವಿತೀಯರಾಗಿದ್ದರು ಎನ್ನುವುದರಲ್ಲಿ ಸಂದೇಹವೇ ಇಲ್ಲ.



# ತುಳುನಾಡಿನ ಚರಿತ್ರೆಗೆ ಶ್ರೀ ಗೋವಿಂದ ಪೈಗಳ ಕೊಡುಗೆ

ಶ್ರೀ ಪಿ. ಗುರುರಾಜ ಭಟ್

ಮೊದಲ ಮಾತು: ಶ್ರೀ ಮಂಜೇಶ್ವರ ಗೋವಿಂದ ಪೈಗಳ ವಿಚಾರ ಸಾಹಿತ್ಯಗಳ ಮೇಲಾಗಲೀ ಅವುಗಳಲ್ಲಿ ಅಡಕವಾಗಿರುವ ವಸ್ತು ವಿಶೇಷದ ಕುರಿತಾಗಲೀ ವಿಮರ್ಶೆಮಾಡುವ ಕೆಲಸವು ಸುಲಭವಲ್ಲ. ಕಾರಣ ಅವರು ಯಾವತ್ತು ವಿಷಯವನ್ನು ವಿಶಾಲವಾಗಿಯೂ ಆಳವಾಗಿಯೂ ಅಭ್ಯಾಸ ಮಾಡಿದವರು. ತನ್ನ ಸಿದ್ಧಾಂತಗಳನ್ನು ಸಾಕಷ್ಟು ಮೂಲ ಸಾಮಾಗ್ರಿಗಳ ಪರಿಶೀಲನೆಯ ಫಲಿತಾಂಶವಾಗಿ ನಿರ್ಭೀತಿಯಿಂದ ವ್ಯಕ್ತಪಡಿಸಿದವರು ಶ್ರೀ ಪೈಗಳು.

ನಾನೀ ಲೇಖನದಲ್ಲಿ ಶ್ರೀ ಪೈಗಳ ಬರೇ ಮೂರು ಬರಹಗಳನ್ನು ಉದ್ದೇಶಿಸಿ ಅವುಗಳಿಂದ ನಮ್ಮ ನಾಡಾದ ತುಳು ದೇಶದ ಚರಿತ್ರೆಗೆ ಉಂಟಾದ ಮಹದುಪಕಾರವನ್ನು ಸ್ಮರಿಸುವ ಕಾರ್ಯ ಮಾತ್ರ ಮಾಡಿದ್ದೇನೆ. ನನ್ನ ಈ ಪ್ರಯತ್ನದಲ್ಲಿ ಶ್ರೀ ಪೈಗಳಿಂದ ಭಿನ್ನಾಭಿಪ್ರಾಯ ಪಡುವ ಸಂದರ್ಭದಲ್ಲಿ ನನ್ನದಾವ ಅಭಿಪ್ರಾಯಗಳನ್ನು ವ್ಯಕ್ತ ಮಾಡಿದ್ದೇನೆ. ಎಂದರೆ ಶ್ರೀ ಪೈಗಳ ಸಿದ್ಧಾಂತಗಳನ್ನಾಗಲೀ ತೀರ್ಮಾನಗಳನ್ನಾಗಲೀ ಅಲ್ಲಗಳೆಯಲು ಯಾ ಕಡೆಗಣಿಸಲು ಪ್ರಯತ್ನ ಮಾಡಿದ್ದೇನೆಂಬ ಅರ್ಥವಲ್ಲ. ಶ್ರೀ ಪೈಗಳು ಸದಾ ವಂದನೀಯರು.

ನಾನೆತ್ತಿದ ಶ್ರೀ ಪೈಗಳ ಪ್ರಾಮುಖ್ಯವಾದ ಮೂರು ಲೇಖನಗಳು (1) ಇತಿಹಾಸದ ಇರುಳಿನಲ್ಲಿ ತುಳುನಾಡು ("ಪಂಚಾಕಜ್ಜಾಯ"ವೆಂದು ನಾಮಾಂಕಿತವಾದ ಮಂಗಳೂರಲ್ಲಿ ಜರಗಿದ 13ನೆಯ ಕನ್ನಡ ಸಾಹಿತ್ಯ ಸಮ್ಮೇಳನವ ಪರವಾಗಿ ಕ್ರಿ. ಶ. 1927ರಲ್ಲಿ ಪ್ರಕಟವಾದ ಹೊತ್ತಿಗೆಯಲ್ಲಿ ಕಂಡು ಬರುವ ಲೇಖನ)

(2) ತುಳುನಾಡು (ಪೂರ್ವ ಸ್ಮೃತಿ) ("ತೆಂಕನಾಡು" ಎಂಬ ನಾಮಾಂಕಿತವಾದ ದಕ್ಷಿಣ ಕನ್ನಡದ ಕಾಸರಗೋಡಿನಲ್ಲಿ ಜರಗಿದ 31ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಪರವಾಗಿ ಕ್ರಿ.ಶ. 1947ರಲ್ಲಿ ಪ್ರಕಟಿಸಲ್ಪಟ್ಟ ಹೊತ್ತಿಗೆಯಲ್ಲಿ ಕಂಡು ಬರುವ ಲೇಖನ)

(3) ಕನ್ನಡ ಸಾಹಿತ್ಯದ ಪ್ರಾಚೀನತೆ (ಮುಂಬಾಯಿ ಸರಕಾರದ ಕನ್ನಡ ಸಂಶೋಧನ ಸಮಿತಿಯ ಉಪನ್ಯಾಸ ಮಾಲೆ 1-ರಲ್ಲಿ ಪ್ರಕಟಿಸಲ್ಪಟ್ಟ "ಮೂರು ಉಪನ್ಯಾಸಗಳು" ಎಂಬ ಪುಸ್ತಕದಲ್ಲಿ ಕಂಡುಬರುವ 3ನೆಯ ಲೇಖನ.)

ಇವುಗಳಲ್ಲಿ ಮೊದಲಿನ ಎರಡು ಲೇಖನಗಳು ತುಳುನಾಡಿನ ಚರಿತ್ರೆಯ ಮೂಲಶೋಧನೆಗೆ ಅನುಕೂಲವಾದುವು. ಅವುಗಳ ಪ್ರಭಾವ ನಮ್ಮ ತುಳುನಾಡಿನ ಇತಿಹಾಸದ ಮೇಲೆ ನೇರವಾಗಿ ಆಗಿದೆ ಎಂದು ಧಾರಾಳವಾಗಿ ಹೇಳಬಹುದು. ಮೂರನೆಯ ಲೇಖನವು ನಮ್ಮ ನಾಡಿನ ಚರಿತ್ರೆಯ ಪುನ: ನಿರ್ಮಾಣ ಕಾರ್ಯದಲ್ಲಿ ಸಹಾಯವಾಗುವ ಸಾಮಗ್ರಿ. ಆದುದರಿಂದ ಅದರ ಪ್ರಭಾವವು ಅಪರೋಕ್ಷ. ಈ ಮೊದಲೇ ತಿಳಿಸಿದಂತೆ ಶ್ರೀ ಪೈಗಳ ಬರವಣಿಗೆ ಅನಂತವಾದುದು. ಅದ ಕಾರಣ ಚಾರಿತ್ರಿಕ ಹಿನ್ನೆಲೆಯಲ್ಲಿ ಶ್ರೀ ಪೈಗಳ ಸಾಹಿತ್ಯವನ್ನು ಪರಿಶೀಲಿಸುವಾಗ ನನ್ನ ದೃಷ್ಟಿಯಲ್ಲಿ ಈ ಮೂರು ಲೇಖನಗಳು ಅಮೂಲ್ಯವಾದುವುಗಳಾಗಿ ಕಂಡುದುದರಿಂದ ಅವನ್ನಿಲ್ಲಿ ಆರಿಸಿಕೊಂಡಿದ್ದೇನೆ. ಮಾತ್ರವಲ್ಲ ಮೊದಲ ಎರಡು ಲೇಖನಗಳು ಅತ್ಯಮೂಲ್ಯವಾದ ಸಂಶೋಧನಾತ್ಮಕ ಸಾಹಿತಿಕ ಲೇಖನಗಳಾಗಿವೆ. ಅವುಗಳನ್ನು ಬರೆಯುವುದರಲ್ಲಿ ಶ್ರೀ ಪೈಗಳು ಎಷ್ಟು ಆಧಾರಗ್ರಂಥಗಳನ್ನು ಆಯ್ದುಕೊಂಡು ಅವುಗಳಲ್ಲಿಯ ವಸ್ತುವನ್ನು ವಿಚಾರದೊರೆಗಲ್ಲಿಗೆ ತಿಕ್ಕಿ ತನ್ನದೇ ಆದ ನಿರ್ಧಾರಕ್ಕೆ ಬಂದಿದ್ದಾರೆ ಎಂಬುದನ್ನು ತಿಳಿಯುವಾಗ ರೋಮಾಂಚನವಾಗದಿರದು.

**"ಇತಿಹಾಸದ ಇರುಳಿನಲ್ಲಿ ತುಳುನಾಡು"** ಎಂಬ ಲೇಖನದ ತಯ್ಯಾರಿಯಲ್ಲಿ ಅವರು ಈ ಕೆಳಗಣ ಗ್ರಂಥಗಳನ್ನು ಅಭ್ಯಾಸ ಮಾಡಿದ್ದಾರೆ. 1. ಋಗ್ವೇದದ ಐತರೇಯ ಬ್ರಾಹ್ಮಣ. 2. ವಿಷ್ಣು. ಮತ್ಸ್ಯ. ಭಾಗವತ. ಲಿಂಗ ಮತ್ತು ಮಾರ್ಕಂಡೇಯ ಪುರಾಣಗಳು. 3. ಹರಿವಂಶ 4. ಮಹಾಭಾರತ 5. ಕಥಾಸರಿತ್ಸಾಗರ 6. ಪ್ರಪಂಚ ಹೃದಯ 7. ಸಹ್ಯಾದ್ರಿಖಂಡ 8. ಅಮರಕೋಶ 9. ನಾಗಾನಂದ ನಾಟಕ 10. ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ. 11. Gray's Indo-Iranian Philology. 12. Early History of the Deccan. 13. Jouvean—Dubrell's Ancient History of the Deccan. 14. D. R. Bhandarkar's Asoka. 15. Vincent Smith's Asoka. 16. Mysore and Coorg from Inscriptions. 17. Cambridge History of India Vol. I. 18. Pargiter's Purana Text of the Dynasties of the Kali Age. 19. Modern Review—January 1915. 20. Ptolemy's Geography. 21. Trivandrum Sanskrit Series XLV. 22. Kittel's Kannada—English Dictionary 23. Manual of the Administration of Madras Presidency Vol. III 24. Madras Govt. G. O. No. 99 of the 29th August, 1916. 25. Malabar District Gazetteer 26. The Coins of India (Heritage of India Series) Plate III No. 1. 27. New Tamil Lexicon—J. S. Chandar.

**"ತುಳುನಾಡು (ಪೂರ್ವಸ್ಮೃತಿ)"** ಎಂಬ ಲೇಖನವು ಈ ಕೆಳಗಣ ಆಧಾರ ಗ್ರಂಥಗಳ ಅಭ್ಯಾಸದ ಫಲವಾಗಿದೆ.

1. ಹರಿವಂಶ. 2. ಅಭಿಧಾನ ರತ್ನಮಾಲಾ 3. ಅವಧಾನ ಕಲ್ಪಲತಾ 4. ಕಥಾಸರಿತ್ಸಾಗರ 5. ನಾಗಾನಂದ 6. ಬೃಹತ್ಕಥಾ 7. ಹೇಮಚಂದ್ರನ ಅನೇಕಾರ್ಥ ಸಂಗ್ರಹ 8. ಹೇಮಚಂದ್ರನ ಅಭಿಧಾನ ಚಿಂತಾಮಣಿ 9. ವಾತ್ಸ್ಯಾಯನನ ಕಾಮಸೂತ್ರಕ್ಕೆ ಜಯಮಂಗಲನು ರಚಿಸಿದ ಟೀಕೆ. 10. ಮಾರ್ಕಂಡೇಯ ಪುರಾಣ. (English Translation by Pargiter) 11. ಆರ್ಯ ಮಂಜಶ್ರೀ ಮೂಲಕಲ್ಪ 12. ಶಬ್ದಕಲ್ಪದ್ರುಮ ಭಾಗ IV 13. ರಜತಪೀಠಪುರ ಮಹಾತ್ಮ್ಯ (ಉಡುಪಿ 1913) 14. ಪಾಡ್ದನೊಳು (Basel Mission Press, Mangalore) 15. ಶಬ್ದಮಣಿದರ್ಪಣ 16. ಸಹ್ಯಾದ್ರಿಖಂಡ 17. ಪ್ರಪಂಚ ಹೃದಯ. 18. Fleet's Kanarese Dynasties 19. Mc Crindle : Ancient India as described by Ptolemy. 20. North Kanara Gazetteer 21. Journal of the Library Committee of the L. E. Association Vol. I 22. Vincent Smith's Asoka. 23. Ptolemy's Geography 24. Trivandrum Sanskrit Series Nos. 45 & 84. 25. South Indian Inscriptions. 26. Historical Inscriptions of Southern India. 27. Cambridge History of India Vol. I. 28. Quarterly Journal of Mythic Society XIII. 29. Political History of Ancient India—Hemachandra Raychaudhri 30. Beginnings of South Indian History — Krishnaswamy Aiyangar. 31. South Indian Epigraphy Report. 32. Indian Antiquary XIV. 33. Buchanan's Mysore and Canara 34. Manual of Indian Buddhism : Kern. 35. Early History of India. 36. Catalogue of the Museum of Archaeology at Saranath. 37. Statistical Appendix together with a supplement to the two District Manuals of South Kanara. 38. "Egypt Exploration Fund: Graeco Roman Branch. The Oxyrhynchus Papyri Part III" Edited with translation and notes by Greenfell and Hunt. 39. Madras University Tamil—English Dictionary. 40. Kittel: Kannada—English Dictionary. 41. Epigraphia Carnatica Vols. II, III, IV, V, VI, VII, VIII, IX and XI.

ಮೇಲಿತ್ತ ಉದಾಹರಣೆಗಳಿಂದ ಶ್ರೀ ಪೈಗಳು ಲೇಖನವನ್ನು ಬರೆಯುವಾಗ ಅವರ ವಸ್ತು ಪ್ರತಿಪಾದನೆಯು ಎಷ್ಟೆಲ್ಲಾ ಆಧಾರ ಗ್ರಂಥಗಳ ಮೇಲೆ ಹೊಂದಿಕೊಂಡಿದೆ ಎಂಬೀ ವಿಚಾರವು ವಿದಿತವಾಗುತ್ತದೆ.

ಮೂರು ಲೇಖನಗಳ ಚಿಕ್ಕ ವಿಮರ್ಶೆ

## 1. ಇತಿಹಾಸದ ಇರುಳಿನಲ್ಲಿ ತುಳುನಾಡು

ಈ ಲೇಖನದಲ್ಲಿ ಶ್ರೀ ಗೋವಿಂದ ಪೈಗಳು ತುಳುನಾಡನ್ನು ಋಗ್ವೇದದ ಐತರೇಯ ಬ್ರಾಹ್ಮಣದಲ್ಲಿ ನಮೂದಿಸಲ್ಪಟ್ಟ ಸತ್ವಕರ ನಾಡಿಗೂ ಮತ್ಸ್ಯ, ಲಿಂಗ, ಭಾಗವತ ಮತ್ತು ಮಾರ್ಕಂಡೇಯ ಪುರಾಣಗಳಲ್ಲಿ ಉಲ್ಲೇಖಿತವಾದ ಸಾತ್ತ್ವತರ ದೇಶಕ್ಕೂ ಮಹಾಭಾರತದ ಸಭಾಪರ್ವದಲ್ಲಿ ಬರುವ ತಾಲೀಕಟ, ಭೀಷ್ಮಪರ್ವದಲ್ಲಿ ಬರುವ ತಾಲವನ, ಮಾರ್ಕಂಡೇಯ ಪುರಾಣದಲ್ಲಿ ಬರುವ ತಾಲೀಯ ಎಂದು ಕರೆಯಲ್ಪಡುವ ದೇಶಕ್ಕೂ ಹೋಲಿಸುತ್ತಾರೆ. ಶ್ರೀ ಪೈಗಳು ಹೇಳುವಂತೆ ಸಾತ್ತ್ವತರು ತುಳುನಾಡಿನವರಾದರೆ ಪುರಾಣಗಳಲ್ಲಿಯ ತಾಲಿವನವು ತುಳುನಾಡಾಗಿದ್ದರೆ ನಮ್ಮೀ ನಾಡಿನ ಪ್ರಾಚೀನತೆಯನ್ನು ಕನಿಷ್ಟ ಪಕ್ಷ ಕ್ರಿ. ಪೂ. 800ಕ್ಕೆ ಕೊಂಡುಹೋಗಬಹುದು. ತನ್ನ ಶೋಧನೆಯನ್ನು ಮುಂದುವರಿಸುತ್ತಾ ಶ್ರೀ ಪೈಗಳು ಈ ಸಾತ್ತ್ವತರೇ ಅಶೋಕನ ಶಿಲಾಲೇಖನದಲ್ಲಿ ಬರುವ "ಸತಿಯ(ಸಾತಿಯ) ಪುತ್ರ"ರಾಗಿರಬೇಕೆಂದು ಊಹಿಸುತ್ತಾರೆ. ತಾಲಿವನದ ಜನರಾದ ತಾಲಾ: ತಾಲವನಾ: ತಾಲೀಯಾ: ಎಂಬವರೇ ಭಾಷೆಯ ವರ್ಣ ಪರಿವರ್ತನೆಯಿಂದ ಸಾತವಾನ, ಸಾಲಿವಾನ, ಶಾಲಿವಾಹನ, ಸಾತವಾಹನರಾದರು ಎಂದು ಮುಂತಾಗಿ ವಾದಿಸುತ್ತಾರೆ. ಎಂದರೆ ಕ್ರಿ. ಪೂ. 200ರಿಂದ ಕ್ರಿ.ಶ. 200ರ ತನಕ ಪ್ರಸಿದ್ಧರಾದ ಶಾತವಾಹನರ ಮೂಲವು ತುಳುದೇಶವಾಗಿರಬಹುದು ಎಂದು ವರ್ಣಪಲ್ಲಟನಿಯಮವನ್ನಾಧರಿಸಿ ಶ್ರೀ ಪೈಗಳು ಅಭಿಪ್ರಾಯಪಡುತ್ತಾರೆ. ಇಲ್ಲಿ ಸ್ವಲ್ಪ ವಿವೇಚನೆಯನ್ನು ಮಾಡಲಿಕ್ಕಿದೆ.

(1) ಮೊದಲನೆಯದಾಗಿ ಶಾತವಾಹನರಿಗೆ ಸಂಬಂಧಿಸಿದ ಒಂದೇ ಒಂದು ಶಾಸನವಾಗಲೀ ನಮ್ಮ ತುಳುನಾಡಿನಲ್ಲಿ ಇಷ್ಟರ ತನಕ ದೊರೆತಿಲ್ಲ. ಅವರ ಪ್ರಭುತ್ವವು ದಕ್ಷಿಣದಲ್ಲಿ ಸ್ಥಾಪಿತವಾಗಿತ್ತು. ಸಾತವಾಹನರು ಮೂಲತ: ತುಳುನಾಡಿನಲ್ಲಿದ್ದು ಅನಂತರ ದಕ್ಷಿಣಕ್ಕೆ ಹೋಗಿ ಅಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿರಬೇಕೆಂಬುದರಲ್ಲಿ ಕಲ್ಪನೆಯೇ ಹೆಚ್ಚು ಕಂಡುಬರುತ್ತದೆ.

(2) ಎರಡನೆಯದಾಗಿ ಪುರಾಣಗಳಲ್ಲಿ ದೇಶಗಳ ಹೆಸರುಗಳನ್ನು ಹೇಳುವಾಗ ಶ್ರೀ ಪೈಗಳು ಅನ್ನುವಂತೆ ಅವುಗಳನ್ನು ಸ್ಥಾನಾನುಕ್ರಮವಾಗಿ ಉಲ್ಲೇಖಿಸಿದಂತೆ ಕಂಡುಬರುವುದಿಲ್ಲ. ಮಹಾಭಾರತದ ಸಭಾಪರ್ವದಲ್ಲಿ ಹೆಸರುಗಳು ಹೀಗೆ ಹೇಳಲ್ಪಟ್ಟಿವೆ: ಶೂರ್ಪಾರಕ, ತಾಲೀಕಟ, ಪಾಂಡ್ಯ, ದ್ರವಿಡ, ಓಡ್ರ (ಒರಿಸ್ಸಾ), ಕೇರಲ, ಆಂಧ್ರ, ಕಾಲವನ, ಕಲಿಂಗ, ಉಷ್ಟ್ರಕರ್ಣಿಕ. ಭೀಷ್ಮ ಪರ್ವದಲ್ಲಿ ಈ ಕೆಳಗಿನಂತೆ ಉಲ್ಲೇಖಿತವಾಗಿವೆ: ದ್ರವಿಡ, ಕೇರಳ, ಮೂಷಿಕ, ವಾನವಾಸಿಕ, ಕರ್ನಾಟಕ, ಮಾಹಿಷಕ, ಕೌಕುಟ್ಟಕ, ಚೋಲಿ, ಕೊಂಕಣ

ಕಾಲವನ. ಸಭಾಪರ್ವದಲ್ಲಿ ಆಂಧ್ರದ ಒತ್ತಿಗೂ, ಭೀಷ್ಮಪರ್ವದಲ್ಲಿ ಕೊಂಕಣದ ಒತ್ತಿಗೂ ಈ ತಾಲವನವಿರುವುದರಿಂದ ಕೊಂಕಣ ಆಂಧ್ರಗಳ ಮಧ್ಯೆ ಈ ತಾಲವನ ಇದ್ದಿರಬೇಕಾಗಿ ತಿಳಿಯಬಹುದು.

(3) ಮೂರನೆಯದಾಗಿ ಶ್ರೀ ಪೈಗಳು ಅವರ "ತುಳುನಾಡು-ಪೂರ್ವಸ್ಮೃತಿ" ಎಂಬ ಲೇಖನದಲ್ಲಿ ಮಾರ್ಕಂಡೇಯ ಪುರಾಣದಲ್ಲಿ ಬರುವ ಶಾಂತಿಕವನ್ನು ನಮ್ಮ ತುಳುನಾಡಿಗೆ ಅನ್ವಯಿಸುತ್ತಾರೆ. ಆ ಶಾಂತಿಕವು ಪ್ರಾಕೃತ ರೂಪದಲ್ಲಿ "ಸಾತಿಯ"ವಾಗ ಬಹುದಾಗಿದ್ದು, ಅಶೋಕನ ಶಿಲಾಲೇಖದ "ಸತಿಯ ಪುತ್ರ" ಜನಾಂಗಕ್ಕೆ ಸಾತೀಯರನ್ನು ಹೊಂದಿಸಿದ್ದಾರೆ. ಅದೇ ಪುರಾಣದಲ್ಲಿ ಬರುವ ತಾಲೀಯವು ಬೇರೆ ದೇಶವಿರಬೇಕೆಂದು ನನಗನಿಸುತ್ತದೆ.

(4) ಕಡೆಯದಾಗಿ ಶಹಬಾಜಗಡೀ ಮನಸೇರಾ, ಗಿರನಾರ ಮತ್ತು ಚೌಗಡದ ಅಶೋಕನ ಶಿಲಾ ಲೇಖನಗಳ ಪ್ರತಿಗಳಲ್ಲಿ "ಸತಿಯಪುತ್ರ" (ಪುತ್ರೋ) ಎಂಬ ರೂಪವಿರುವುದರಿಂದ ಈ ರೂಪವೇ ಮೂಲವಿದ್ದು ಇದು "ತಾಲೀಯ" ಎಂಬುದರ ರೂಪಾಂತರವಾಗಲು ಸ್ವಲ್ಪ ಕಷ್ಟವಿದೆ ಎಂದು ನನಗನಿಸುತ್ತದೆ. ಏನೇ ಇರಲಿ ಶ್ರೀ ಪೈಗಳ ಅನುಮಾನಿತ ಸತ್ಯದಿಂದ (Hypothesis) ಒಂದು ಚಾರಿತ್ರಿಕ ಯಾ ವಂಶೀಯ ಸಂಗತಿಯು ಪ್ರಕಾಶಕ್ಕೆ ಬರಲವಕಾಶವಿದೆ. ಅದರಲ್ಲಿ ಅನ್ವೇಷಣೆಮಾತ್ರ ಇನ್ನೂ ನಡೆಯಬೇಕು.

"ಚಂದ್ರವಂಶದ ಯದು ಮಹಾರಾಯನ ಮಗನಾದ "ಕ್ರೋಷ್ಟು" ಎಂಬವನ ಸಂತತಿಯಲ್ಲಿ ಸತ್ತ್ವತನೆಂಬ ರಾಜನಿದ್ದನು; ಆತನ ವಂಶದವರು ಸಾತ್ತ್ವತರೆಂದು ಪ್ರಸಿದ್ಧರಾದರು. ಇದೇ ಸಾತ್ತ್ವತರ ವಂಶದಲ್ಲಿ ಶ್ರೀ ಕೃಷ್ಣನು ಉದಿಸಿದನು. ಶ್ರೀ ಕೃಷ್ಣನು (ದಕ್ಷಿಣ ಪಥದಲ್ಲಿಯ) ಮೂರ್ತಿಕವತವೆಂಬ ನಗರದ ಸಾಲ್ವನನ್ನು ಗೆದ್ದು ಕೊಂದನೆಂಬ ಆಖ್ಯಾಯಿಕೆಯು ಮಹಾಭಾರತದಲ್ಲಿದೆ. ಆ ಕಾಲದ ರಾಜನೀತಿಗನುಸಾರವಾಗಿ ನವೀನಜಿತವಾದ ಆ ಮೂರ್ತಿಕವತದಲ್ಲಿ ಶ್ರೀ ಕೃಷ್ಣನ ವಂಶೀಯರಾದ "ಭೋಜ, ಅಂಧಕ, ವೃಷ್ಣಿ ಮೊದಲಾದ ವಿವಿಧ ಶಾಖೆಗಳ ಸಾತ್ತ್ವತರು ಬಂದು ನೆಲಸಿರಬೇಕೆಂಬುದು, ಸತ್ತ್ವತನ ಮಗನಾದ ದೇವಾವೃಧನ ವಂಶದವರು ಮೂರ್ತಿಕವತ ಭೋಜರೆಂದು ಪ್ರಸಿದ್ಧರಾದರೆಂದು ಹರಿವಂಶದಲ್ಲಿರುವ ಹೇಳಿಕೆಯಿಂದ ವ್ಯಕ್ತವಾಗುತ್ತದೆ. ಭೋಜರೆಂಬ ಜನರಲ್ಲಿ ಬಳಕೆಯಾಗಿರುವ ರಾಜ್ಯನೀತಿಗೆ "ಭೌಜ್ಯ" ವೆಂಬ ಹೆಸರು ಬರತಕ್ಕುದಾದುದರಿಂದ ಐತರೇಯ ಬ್ರಾಹ್ಮಣದಲ್ಲಿ ಹೇಳಿರುವ ತೆಂಕಣ ಪ್ರಾಂತಗಳಲ್ಲಿ ನೆಲೆಸಿದ್ದ ಸತ್ತ್ವತರು ಯದುವಂಶದ ಸತ್ತ್ವತರಾಯನ ವಂಶೀಯರಾದ ಭೋಜ, ಅಂಧಕ, ವೃಷ್ಣಿ, ಮೊದಲಾದ ಶಾಖೆಯವರಾದ ಸಾತ್ತ್ವತರಾಗಿರಬೇಕು" ಶ್ರೀ ಪೈಗಳ ಈ ತೆರನಾದ ನಿರ್ಧಾರವು ಯದುವಂಶದವರ ದಾಕ್ಷಿಣಾತ್ಯಪಯಣವನ್ನೂ ಅವರ ಕುಲಕ್ಕೆ ಸಂಬಂಧಿಗಳಾದ ತುರ್ವಶಾರ ದಾಕ್ಷಿಣಾತ್ಯ ಪಯಣವನ್ನು ಸೂಚಿಸುತ್ತದೆ. ನಾನು ನನ್ನ "ತುಳುನಾಡು" ಎಂಬ ಪುಸ್ತಕದಲ್ಲಿ ತುಳುನಾಡು ಎಂಬ ಹೆಸರು ತುಳುವಶಾ (ತುರ್ವಸು)ರಿಂದ ಬಂದುದೆಂಬುದಾಗಿಯೂ ಇದು ತುಳುಕುಲವೆಂಬುದಾಗಿಯೂ ವಿಮರ್ಶೆಮಾಡಿದ್ದೇನೆ. (ತುಳುನಾಡು ಪುಟ 16; ಪುಟ 27ರಿಂದ 32ರವರೆಗೆ: ಪುಟ 33–34) ಐತರೇಯ ಬ್ರಾಹ್ಮಣದಲ್ಲಿಯಾಗಲೀ ಪುರಾಣಗಳಲ್ಲಾಗಲೀ ಬರುವ ಸತ್ತ್ವತರೂ ನಮ್ಮ ತುರ್ವಶಾರೂ, ತುಳುವರೂ ಒಂದೇ ಬುಡಕಟ್ಟಿಗೆ ಸೇರಿದವರೆಂದು ನನಗೆ ಭಾಸವಾಗುತ್ತದೆ. ಯದುತುರ್ವಶಾರ ಪರಂಪರೆಯವರು ಇತಿಹಾಸ ಕಾಲದಲ್ಲಿ ದಕ್ಷಿಣಭಾರತದಲ್ಲಿ ಖ್ಯಾತಿವೆತ್ತ ಸಂಗತಿ ಚರಿತ್ರೆಯ ಅಭ್ಯಾಸಿಗಳಿಗೆ ತಿಳಿದ ಸಂಗತಿ. ಯಾದವರೂ ತುರ್ವಶಾರ ವಂಶದವರೇ ಆಗಿರುವರು. ಮೈಸೂರಿನ ಅರಸುಮನೆತನವು ಯದುವಂಶಕ್ಕೆ ಸೇರಿದ್ದು. ವಿಜಯನಗರದ ಅರಸುಮನೆತನವು ಗೋವಳರ, ದನಗಾರರ, ಕುರುಬರ ಮನೆತನ. ಅದರಲ್ಲೂ ತುಳುವವಂಶವು ತುರ್ವಸುವಿನ ಸಂತತಿ ಎಂಬುದಾಗಿ ಶಾಸನಗಳು (ಅದರಲ್ಲೂ ಕಲ್ಬರಹಗಳು) ತಿಳಿಸುತ್ತವೆ. ಹೀಗಾಗಿ ತುಳುನಾಡೆಂಬುದು ಸಾತ್ತ್ವತರ ನಾಡು ನೇರವಾಗಿ ಅಲ್ಲವಾದರೂ ಅಂತೂ ಚಂದ್ರವಂಶಕ್ಕೆ ಸೇರಿದ್ದ ಯದುತುರ್ವಶಾಲರ ನಾಡು ಎಂಬುದನ್ನು ಪ್ರತಿಪಾದಿಸಲು ಬಹುದೂರ ಹೋಗಬೇಕಾಗಿಲ್ಲ.

## 2. ತುಳುನಾಡು—ಪೂರ್ವಸ್ಮೃತಿ

ಐವತ್ತು ಪುಟಗಳಿಂದ ಕೂಡಿದ ಶ್ರೀ ಪೈಗಳ ಈ ಲೇಖನವು ತುಳುನಾಡಿನ ಈ ಕುರಿತಾದ ಅವರ ಅಭ್ಯಾಸದ ಸಂಪೂರ್ಣ ಸಾರದಂತಿದೆ. ಈ ಲೇಖನವು ತುಳುನಾಡಿನ ಅದರಲ್ಲೂ ದಕ್ಷಿಣಕನ್ನಡ ಜಿಲ್ಲೆಯ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯ ಒಂದು ಸ್ಫುಟಿಕ. ಇದರಲ್ಲಿ ತುಳುನಾಡು ಹಳೆಗಾಲದಲ್ಲಿ ಅನಾರ್ಯರಾದ ಶುಖರೆಂಬ ನಾಗರ ನೆಲೆವನೆಯಾಗಿದ್ದಿತೆಂದೂ ಮಾರ್ಕಂಡೇಯ ಪುರಾಣದಲ್ಲಿ ಉಲ್ಲೇಖಿತವಾದ ಶಾಂತಿಕವೇ ತುಳುನಾಡಾಗಿರಬೇಕೆಂದೂ ಇದೇ ಅಶೋಕನ ಶಿಲಾ ಲೇಖದಲ್ಲಿ ಕಂಡು ಬರುವ ಸತಿಯ ಪುತ್ರವೆಂದೂ ಕ್ರಿ. ಶ. 2ನೆಯ ಶತಕದಿಂದ ಕ್ರಿ. ಶ. 13ನೆಯ ಶತಕದವರೆಗೆ ಹೆಸರಾದ ಆಳ್ವಖೇಡವು ತುಳುನಾಡೆಂದೂ, ತುಳು ಶಬ್ದೋತ್ಪತ್ತಿಯನ್ನು ತಮಿಳಿನ ಆಶ್ರಯದಿಂದ ಕಂಡು ಹುಡುಕುವುದಾದರೆ ತುಟ್ಟಿ ಎಂದರೆ ನೀರಿನಲ್ಲಿ ಹುಟ್ಟುಹಾಕುವುದು. ಅಂತಹ ಉದ್ಯೋಗವಿರುವ ಜನರ ಪ್ರದೇಶ ತುಳುನಾಡಾಗಬಹುದೆಂದೂ ತೀರ್ಮಾನಿಸಿರುವರು. ಮಾತ್ರವಲ್ಲ ಮಂಗಳೂರು, ಕಾಸರಗೋಡು, ಪುತ್ತೂರು, ಕಾರ್ಕಳ, ಉಡುಪಿ ಮತ್ತು ಕುಂದಾಪುರ ಸ್ಥಳಗಳಿರುವ ಪ್ರಾಚೀನತೆ. ಅವುಗಳ ಚರಿತ್ರೆಯನ್ನು ಶಾಸನಾಧಾರಗಳ ಮೂಲಕ ವಿಶದೀಕರಿಸಿರುವರು, ಈ ಕುರಿತಾಗಿ ಶ್ರೀ ಪೈಗಳನ್ನು ಟೀಕಿಸುವಂತಿಲ್ಲ. ಶ್ರೀ ಪೈಗಳಿಗೆ ದೊರಕದೆ ಇರುವ ಶಾಸನಗಳೋ ದಾಖಲೆಗಳೋ ಕಾಣಸಿಕ್ಕಿದಾಗ ಅವುಗಳಲ್ಲಿ ವಿಶಿಷ್ಟವಾದ ವಿಷಯ ಸಾಮಾಗ್ರಿ ಮಾತ್ರ ಅವರ ಅಭಿಪ್ರಾಯವು ವ್ಯತ್ಯಾಸಹೊಂದಬೇಕಾಗುವುದು. ಈ ನಾಡಿನ ಸನಾತನ ಧರ್ಮದ ಮೊಳಕೆ ಮತ್ತು ಅದರ ಬೆಳವಣಿಗೆ ಬೌದ್ಧ ಮತ್ತು ಜೈನ ಧರ್ಮಗಳು ಮಾತ್ರವಲ್ಲದೆ ನಾಥ ಪಂಥದ ಪ್ರಾದುರ್ಭಾವ ಇತ್ಯಾದಿ ಧಾರ್ಮಿಕ ವಿಚಾರಗಳನ್ನೊಳಗೊಂಡ ಈ ಲೇಖನದ ಪುಟಗಳು ಅರ್ಥಗರ್ಭಿತವಾದುವುಗಳು. ಈ ಎಲ್ಲಾ ವಿಷಯ ಪ್ರಕಾಶನದಲ್ಲಿ ನಮ್ಮ ನಾಡಿನಲ್ಲಿ ನಾಗಕುಲದವರು ಬಹು ಪ್ರಾಚೀನ ಕಾಲದಲ್ಲಿ ನೆಲೆಸಿದ್ದರೆಂಬುದೂ ಆಳ್ವಖೇಡವೂ ತುಳುನಾಡೂ ಭೌಗೋಳಿಕ ಮತ್ತು ಕಾಲಗಣನೆಯ ದೃಷ್ಟಿಯಿಂದ ಕನಿಷ್ಠಪಕ್ಷ ಕ್ರಿ. ಶ. ಒಂದೆರಡನೆಯ ಶತಕದಷ್ಟಾದರೂ ಹಳೆದಿರಬೇಕೆಂ

ಬುದೂ ಅಂತೆಯೇ ಮಂಗಳೂರಿನ ಕದಿರೆಯು ದೊಡ್ಡ ಬೌದ್ಧ ವಿಹಾರವಾಗಿದ್ದು, ತದನಂತರ ನಾಥಪಂಥದ ಕೇಂದ್ರವಾಗಿ ಪರಿವರ್ತನೆ ಹೊಂದಿತೆಂಬುದೂ ಶ್ರೀ ಪೈಗಳ ಮೂಲ ಶೋಧನೆಗಳಾಗಿವೆ. ಆದರೆ ಅವರ ಲೇಖನದಲ್ಲಿ ಹಲಕೆಲವು ಭಿನ್ನಾಭಿಪ್ರಾಯಗಳನ್ನೊಳಗೊಂಡ ಸಂಗತಿಗಳಿಲ್ಲವೆಂದಿಲ್ಲ. "ಶಾಂತಿಶಪ್ತ" ಸತಿಯುವಾಗಿ ಅದು ತುಳುನಾಡಾಗಿದ್ದಿರಬೇಕೆಂಬುದುರಲ್ಲಿ ಅಷ್ಟೊಂದು ಸಮಂಜಸತೆ ಇಲ್ಲವೆಂಬುದಾಗಿಯೂ ತುಳುವಿನ ಉತ್ಪತ್ತಿಯನ್ನು ತಮಿಳಿನ "ತುಟ್ಟಿ" ಎಂಬ ಪದದಲ್ಲಿ ಹುಡುಕುವುದು ಬಹಳ ಮನಸೀಯವಾಗಲಾರದೆಂಬುದಾಗಿಯೂ, "ಚುಟು" ಕಾಲಾನುಗತಿಕದಿಂದ ವರ್ಣಪಲ್ಲಟಹೊಂದಿ "ತುಳು"ವಾಗುವುದರಲ್ಲಿ ಅಷ್ಟೊಂದು ಔಚಿತ್ಯವಿರಲಾರದೆಂಬುದಾಗಿಯೂ ನಾನು ನನ್ನ "ತುಳುನಾಡು" ಪುಸ್ತಕದಲ್ಲಿ ಕಾಣಿಸಿದ್ದೇನೆ. (ಪುಟ 17 and 194) ಈ ವಿಷಯಗಳನ್ನೆಲ್ಲಾ ಇಲ್ಲಿ ಪುನಃ ಬರೆಯುವುದು ಉಚಿತವಾಗದು. 'Oxyrhynchus Papyri'ನಲ್ಲಿ ಕಂಡುಬರುವುದೆಂದು ತಿಳಿಯಲಾದ ಕನ್ನಡ ಶಬ್ದಗಳು ಖಂಡಿತವಾಗಿಯೂ ಕನ್ನಡ ಶಬ್ದಗಳೇ ಎಂಬುದರ ಬಗೆಗೆ ಭಿನ್ನಾಭಿಪ್ರಾಯವಿದೆ. ಕಾರಣ ಶ್ರೀ ಪೈಗಳಾಗಲೀ ಇತರ ವಿದ್ವಾಂಸರಾಗಲೀ ತೋರಿಸಿಕೊಟ್ಟ ಈ ಪ್ರಹಸನದಲ್ಲಿಯ ಈ ಶಬ್ದಗಳು ಕ್ರಿ.ಶ. ಎರಡನೆಯ ಶತಮಾನದ ಕನ್ನಡದಂತೆ ಕಂಡುಬರುವುದಿಲ್ಲ. ಆದುದರಿಂದ ಈ ವಿಷಯದಲ್ಲಿ ಇನ್ನೂ ವಿಮರ್ಶೆಶೋಧನೆ ಅಗತ್ಯ.

ಶ್ರೀ ಪೈಗಳ ವಿದ್ವತ್ತು ಅವರ ತುಲನೆಯ ದೃಷ್ಟಿಯಿಂದ (Vision of Association) ಸ್ಫುಟಗೊಳ್ಳುವುದು. ಹರಿವಂಶದಲ್ಲಿ ಬರುವ "ಮುದ್ಗರಾ" ಎಂಬುದು ನಮ್ಮೂರ "ಮೊಗೇರ"ರಿರಬೇಕೆಂಬ ಅವರ ಅಭಿಪ್ರಾಯವು ಬಹಳ ವಿಚಾರಣೀಯವಾಗಿದೆ. ಅಂತೆಯೇ ಹವಿಗನಾಡು (ಹೆಗ, ಹೈವೆ) ಮೂಲದಲ್ಲಿ ಪಶುಕವಾಗಿತ್ತು. ಪಶುಕ⟶ಪಯಿಕ⟶ಪಯಿಗ⟶ಹಯಿಗ⟶ಹೈಗವೆಂಬ ರೂಪಾಂತರಗಳನ್ನು ತೋರಿಸಿಕೊಟ್ಟವರು ಶ್ರೀ ಪೈಗಳು. ಆದರೆ ಶ್ರೀ ಪೈಗಳು ಆಳ್ವಖೇಡವು ಆಲುಕವೆಂಬ ಶೇಷ (ನಾಗಾಧಿಪ) ನ ಸಂಬಂಧವಾದ ಹೆಸರಿನಿಂದ ಬಂದುದಾಗಿರಬೇಕು ಎಂಬ ಅನುಮಾನಿತ ಸತ್ಯವು ಅಷ್ಟೊಂದು ಸಮಂಜಸವೆಂದು ನನಗೆ ಕಂಡುಬರುವುದಿಲ್ಲ. ಆಳ್ವಖೇಡವು ಆಳ್ವರ ಖೇಡ: ಆಳು ಅರಸ (ಚಕ್ರವರ್ತಿ ಅಥವಾ ಮೇಲಧಿಕಾರಿಗಳಿಗೆ ಅಧೀನರಾದವರ)ಗಾಡು; ಆಲುವ ಅಥವಾ ಅಲುಪ ಎಂಬ ರೂಪವು ಶಾಸನಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. (ಆಳುವರಸರ್, ಆಳು ಅರಸರ್, ಆಳುವ, ಆಳುಪ, ಆಳ್ವ, ಆಳುಕ ಎಂಬೀ ರೂಪಗಳು ದೊರಕುತ್ತವೆ) "ಕ" ಪ್ರತ್ಯಯವು ಕನ್ನಡ ಶಬ್ದಗಳಿಗೆ ಸೇರಿದ ಉದಾಹರಣೆಗಳೂ ಇವೆ. ಕರಿ+ಕ⟶ಕರಿಕ; ಅಟ್ಟು+ಕ⟶ಅಟ್ಟುಕ (Destroyer) ಇತ್ಯಾದಿ. ಅಂತೆಯೇ ಆಳು+ಕ ಆಳುಕ (ಆಳ್ವಧಿಕಾರಿ ಎಂಬರ್ಥ) ಆಳುಕವೇ ಆಳುವ ಅಥವಾ ಆಳ್ವ. ಆಳ್ವರನಾಡು ಆಳ್ವಖೇಡ. ಅಂತೆಯೇ ಚೇಱು (ಚೇರ) ಎಂಬ ಹೆಸರು ಅಲ್ಲಿಯ ಭೂಗುಣವಾದ ಕೆಸರು ಎಂಬುದರಿಂದ ಬಂದಿರಬೇಕು ಎಂಬ ಅವರ ತೀರ್ಮಾನವೂ ಅಷ್ಟೊಂದು ಸರಿಕಾಣುವುದಿಲ್ಲ. ಕಾರಣ ಚೇಱು (ಚೇರು) ಎಂಬುದಕ್ಕೆ ಗಿಡ್ಡಗಾದ ಎಂಬ ಅರ್ಥವಿದ್ದು, ಚೇರ ದೇಶದ ಮೂಲನಿವಾಸಿಗಳಾದ ಚೇರುಮಾರರಿಂದ ಆ ದೇಶಕ್ಕೆ ಹೆಸರು ಬಂದಿರಬಹುದಾದ ಸಾಧ್ಯತೆ ಹೆಚ್ಚಿದೆ. ಈ ಚೇರ ಎಂಬ ಹೆಸರಿನ ಕನ್ನಡ ಪ್ರಭೇದವೇ (Kanarese Dialectic Form) ಕೇರಳವೆಂಬುದಾಗಿ ವಿದ್ವಾಂಸರ ಅಭಿಪ್ರಾಯವಿದೆ. ಪ್ರಪಂಚದ ಹೃದಯವೆಂಬ ಸುಮಾರು 7ನೇ ಶತಕದ ಸಂಸ್ಕೃತ ಗ್ರಂಥದಲ್ಲಿ ಪಶ್ಚಿಮ ಕರಾವಳಿಯ ಪ್ರದೇಶಗಳನ್ನು ಸಪ್ತ ಕೊಂಕಣವಾಗಿ ವಿಭಾಗಿಸಿದೆ. ಕೂಪಕ. ಕೇರಲ, ಮೂಷಿಕ, ಆಲುವ. ಪಶು (ಪಶುಕ), ಕೊಂಕಣ ಮತ್ತು ಪರಕೊಂಕಣ. ಈ ಎಲ್ಲಾ ಹೆಸರುಗಳೂ ಜನಾಂಗಗಳಿಂದಲೇ ಬಂದುದೆಂದು ನನಗನ್ನಿಸುತ್ತದೆ. (ಕೂಪಕ-ಕೋವಿಲರ ದೇಶ; ಕೇರಲ-ಚೇರುಮಾರರ ದೇಶ; ಮೂಷಿಕ-ದರೋಡೆಕಾರರ ನಾಡು-ಸಂಘಮ್ ಸಾಹಿತ್ಯದಲ್ಲಿ ಪಶ್ಚಿಮ ಕರಾವಳಿಯ ಜನಕ್ಕೆ ದರೋಡೆಕಾರರು ಕೊಳ್ಳೆ ಹೊಡೆಯುವವರು, ಸಮುದ್ರಗಳ್ಳರು "Pirates and Plunderers" ಎಂಬ ಉಲ್ಲೇಖವಿದೆ. ಆಲುವ (ಆಳುವ) ಆಳುವರ, ಆಳುವರಸರನಾಡು; ಪಶುಕ-ಗೋವಳರ ನಾಡು; ಕೊಂಕಣ-(ಕೋಕಣ) ಇದೂ ಗೋಪರಾಷ್ಟ್ರವೇ ಇರಬೇಕು; ಪರಕೊಂಕಣ-ಉತ್ತರ ಕೊಂಕಣ.

## 3. ಕನ್ನಡ ಸಾಹಿತ್ಯದ ಪ್ರಾಚೀನತೆ

ಮೇಲೆ ತಿಳಿಸಿದಂತೆ ಈ ಲೇಖನವು ನನ್ನ ಮಟ್ಟಿಗಂತೂ ಚರಿತ್ರೆಯ ದೃಷ್ಟಿಯಿಂದ ಬಹಳ ಉಪಯುಕ್ತ. ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ನಿರ್ಧರಿಸುವ ಕಾರ್ಯದಲ್ಲಿ ಶ್ರೀ ಪೈಗಳು ಚಾರಿತ್ರಿಕ ಸಂಶೋಧಕರಿಗೆ ಮಹದುಪಕಾರವನ್ನು ಮಾಡಿದ್ದಾರೆ. ಸಾಮಾನ್ಯರ ದೃಷ್ಟಿಯಲ್ಲಿ ಇದಕ್ಕೆ ಅಷ್ಟು ಮಹತ್ವವಿರಲಾರದಾದರೂ ಸಂಶೋಧಕರ ದೃಷ್ಟಿಯಿಂದ ಇದು ಅತಿ ಮಹತ್ವವುಳ್ಳದ್ದಾಗಿದೆ

ಶ್ರೀ ಪೈಗಳು ಈ ಲೇಖನದಲ್ಲಿ ಈ ಕೆಳಗಿನಂತೆ ವಿಮರ್ಶೆ ಮಾಡುತ್ತಾರೆ. ನೃಪತುಂಗನಲ್ಲಿಯೂ ಕಾಣದ ಈ "ಇಱ್" ಮತ್ತು "ಪೊಱ್ದ" ಎಂಬ ರೂಪಗಳಲ್ಲಿ ಮೊದಲಿನದು ಕ್ರಿ.ಶ. ಸುಮಾರು 700ದೆಂಬ ಶ್ರವಣ ಬೆಳ್ಗೊಳದ (EC II) 26ನೆಯ ಶಾಸನದಲ್ಲಿಯೂ "ಉಳ್ಳರಿ ಪೀಠದಿಱ್ದೊನ್" 98ನೇಯದರಲ್ಲಿಯೂ "ಅನುಪಮ ದಿವ್ಯಪ್ಪದು ಸುರಲೋಕದ ಮಾರ್ಗದೊಳಿಱ್ದರಿಸ್ಸಿಸಿಮ್;" ಕ್ರಿ.ಶ. ಸುಮಾರು 700ರದೆಂಬ ಕಿಗ್ಗದ ಶಿಲಾಲೇಖನದಲ್ಲಿಯೂ (EC VI ಕೊಪ್ಪ ನಂ. 40) "ಬೆಸಗೆಯ್ವಲ್ಲಿ...... ಕ್ಕಲುಂ ಇಱ್ದ" ದೊರೆಯುತ್ತವೆ. ಆದರೆ ಪೊಱ್ಸು"ವಾದರೋ (ಪೊಱ್ದುದೊಂ) ಕನ್ನಡ ಸಾಹಿತ್ಯದಲ್ಲಿ ಅನ್ಯತ್ರ ಇರುವಂತೆ ತೋರುವುದಿಲ್ಲ. ಈ "ಇಱ್" ಮತ್ತು "ಪೊಱ್ಸ" ಎಂಬುವುಗಳ ಮೂಲರೂಪಗಳು "ಇರ್" ಮತ್ತು "ಪೊರ್ದು" ಎಂಬುದರಲ್ಲಿ ಸಂದೇಹವಿರಲಾರದು. ಇಲ್ಲಿ "ಱ" ಕಾರವು "ರ"ಕಾರದ ಬದಲಿಗೆ ನಿಂತಿದೆ.

ಅಂತೆಯೇ ತೇದಿ ಇಲ್ಲವಾದರೂ ಕ್ರಿ.ಶ. ಸುಮಾರು 7ನೇ ಶತಮಾನದ (ಸು. 675 ಕ್ರಿ.ಶ.) ಚಿತ್ರವಾಹನ ಕೊಪ್ಪ ನಂ. 37ನೇ ಕಿಗ್ಗದ ಶಿಲಾ ಶಾಸನದಲ್ಲಿ ಈ ಕೆಳಗಿನಂತಿದೆ (EC VI)

ಕಿೞ್ಗೆ ನೇಶ್ವರದಾ ದೇವರ ಪರವರಿಯ ಭಂತಮುಂ
ಕವಿಲಿಯ ಪಾಲುಂ ಎೞ್ದುಂ...............ದೇವಾನ್ದೇವನ ಪರಿ
ಜನವಲ್ಲಾಡೆ ಪೆೞನೊರ್ವರಾರು ಮುಡ್ದೊವೆಂಡುಕಂ

.......................................................

.......................................................

ಈನಿತ್ತ ಧರ್ಮವಾನ್ ಕಾದೋರಾಕುಲಂಪೆೞ್ಗೆ॥
ಪೊಲಿಪುಕೊಳ್ಳಿಯುಂ ಅರಮನೆತಾಣವ ಭಾಗಮುಮ್
ಅಚ್ಚಕಮ್ಮತ್ತಿಯೆರೆ ಕೊಟ್ಟಾರ್ಸೇನವರಸರುಂ
ಧರ್ಮಗರಣಿಗರುಂ ಇದಾನ್ನೆೞನೋರ್ವಕ್ಕೊ
ಳ್ವೋನುಂ ಕೊಡುವೋನುಂ.........॥

"ಇದರಲ್ಲಿ "ಪೆೞನ್" (ಬೇರೆಯುವನು) ಎಂಬುದಕ್ಕೆ "ಪೆೞನ್" ಎಂದೂ, "ಪೆರ್ಚುಗೆ" (ಹಚ್ಚಲಿ" ಎಂಬುದಕ್ಕೆ "ಪೆೞ್ಗೆ" ಎಂದೂ ಇರುವ ರೂಪಗಳನ್ನು ಗಮನಿಸುವುದು" ಹೀಗೆ ಶ್ರೀ ಪೈಗಳು ತೋರಿಸಿಕೊಟ್ಟುದು ನಮ್ಮ ಸಂಶೋಧನೆಗೆ ಅತ್ಯಂತ ಮಹೌಲ್ಯದ್ದಾಗಿದೆ. ನಾನು ಅನ್ಯತ್ರ ಪ್ರತಿಪಾದಿಸಿದಂತೆ (ತುಳುನಾಡು ಪುಸ್ತಕದಲ್ಲಿಯೂ ನನ್ನ ಇತರ ಲೇಖನಗಳಲ್ಲಿಯೂ) ಆದಿಯ (ತುೞು) ಶಬ್ದವು ಅದಾವ ಕಾರಣದಿಂದಲೋ "ತುೞುವಾಗಿದೆ. ತುೞುನಾಡೇ ತುೞುನಾಡಾಗಿದೆ. "ತುೞ್ವ" (ತುರ್ವ)ವೇ "ತುಲುವ"ವಾಗಿದೆ.

| | | |
|---|---|---|
| ಪೆೞನ್ | — | ಪೆೞನ್ |
| ಪೆರ್ಚುಗೆ | — | ಪೆೞ್ಗೆ |
| ಇರ್ಕ್ | — | ಇೞ್ |
| ಪೊರ್ದು | — | ಪೊೞ್ದು ಆದಂತೆ |
| ತುೞ್ವ | — | ತುೞುವ |
| ತುರ್ವ | — | ತುೞುವ |
| ತುೞು | — | ತುೞು ಆಗಿರಬೇಕು. |

ಈ ರೀತಿಯ ಬದಲಾವಣೆಗೆ ಕ್ರಿ.ಶ. 13ನೆಯ ಶತಮಾನದ ವರೆಗಿನ ಶಾಸನಗಳಲ್ಲಿಯೂ ಅನೇಕ ದೃಷ್ಟಾಂತಗಳು ದೊರೆಯುತ್ತವೆ. ಈ ಕೆಳಗೆ ಪ್ರಾಮುಖ್ಯವಾದ ಕೆಲವೇ ದೃಷ್ಟಾಂತಗಳನ್ನೀಯುತ್ತೇನೆ.

| | | |
|---|---|---|
| ಮಾರ್ತಂಡ | — | ಮೞ್ತಂಡ |
| ಗರ್ದುಗ | — | ಗೞ್ದುಗ |
| ಪೆೞಿಂತ್ತೊರೆ | — | ಪೆೞಿಂತ್ತೊರೆ |
| ಪೊಂಬುೞ್ಚ | — | ಪೊಂಬುೞ್ಚ |
| ತೋೞಹ | — | ತೋೞಹ |
| ಬೞಂತದೊೞಂತ | — | ಬೆಳ್ದೊರೆ |
| ನಿೞಾಸಿ | — | ನಿೞಾಸಿ |
| ಉಪ್ಪಾೞ | — | ಉಪ್ಪಳ |
| ಇರ್ಚ್ಛಾಸಿರ | — | ಇೞಂಛಸಿರ |
| ಮೂೞುವಳ್ಳಿ | — | ಮೂಳುವಳ್ಳಿ(ಹಲ್ಮಿಡಿಯ ಶಾಸನ) |

ಇತ್ಯಾದಿ.

## ಉಪಸಂಹಾರ

ಶ್ರೀ ಗೋವಿಂದ ಪೈಯವರ ಇತರ ಚಾರಿತ್ರಿಕ ಲೇಖನಗಳನ್ನಷ್ಟೇ ಇಲ್ಲಿ ನಮೂದಿಸುವುದರಲ್ಲಿ ತೃಪ್ತಿಪಡಬೇಕು. ಕಾರಣ ಅವನ್ನು ವಿಮರ್ಶೆ ಮಾಡಲು ಇಲ್ಲಿ ಅವಕಾಶವೂ ಇಲ್ಲ; ನನ್ನ ವಿದ್ವತ್ತು ಆ ಕೆಲಸಕ್ಕೆ ಬೇಕಷ್ಟಿಲ್ಲ.

1. Satyaputra of Asoka's Edict II ('Krishnaswami Aiyangar Commemoration Volume' ದಲ್ಲಿ 1936ರಲ್ಲಿ ಪ್ರಕಟವಾದ ಲೇಖನ.)

2. Satyaputra of the Asokan Edicts ('Canara High School O. B. A. Magazine' ನಲ್ಲಿ ಪ್ರಕಟವಾದ ಲೇಖನ)

3. ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು (ಪ್ರಬುದ್ಧ ಕರ್ನಾಟಕ ಸಂಪುಟ 11 ಸಂಚಿಕೆ 1–2ರಲ್ಲಿ ಪ್ರಕಟವಾದ ಲೇಖನ)

4. ಕರ್ನಾಟಕದಲ್ಲಿಯ ಮೂರು ಗೊಮ್ಮಟ ಮಹಾ ಮೂರ್ತಿಗಳು (1956ರಲ್ಲಿ ಪ್ರಕಟಿಸಲ್ಪಟ್ಟ ಸ್ವಸ್ತಿ ಶ್ರೀ ನೇಮಿ ಸಾಗರ ಸ್ವಾಮಿಗಳವರ ಅಭಿನಂದನ ಗ್ರಂಥದಲ್ಲಿಯ ಲೇಖನ)

5. ಧರ್ಮಸ್ಥಳದ ಶಿವಲಿಂಗಕ್ಕೆ ಮಂಜುನಾಥ ಎಂಬ ಹೆಸರು ಹೇಗೆ ಬಂತು? ("ಸಮರ್ಪಣೆ" ಎಂಬ ಶ್ರೀಮಾನ್ ಶ್ರೀ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರಿಗೆ ಹಿತೈಷಿಗಳು ಒಪ್ಪಿಸಿದ ಪ್ರಬಂಧಗಳ ಸಂಪುಟ (1950)

6. ಅಳಿಯ ಕಟ್ಟಿನ ಪ್ರಾಚೀನತೆ (ಇದರಲ್ಲಿ ಭೂತಾಳ ಪಾಂಡ್ಯ, ಜೈನರಲ್ಲು ಅಳಿಯಕಟ್ಟು, ತುಳುನಾಡಿನಲ್ಲಿ ಜೈನ ಧರ್ಮ, ಬ್ರಾಹ್ಮಣರೂ ಅಳಿಯ ಕಟ್ಟು ಎಂಬ ಒಳವಿಭಾಗಗಳಿವೆ) [Tuluva Mahasabha Annual ಎಂಬ 1929ರಲ್ಲಿ ಪ್ರಕಟವಾದ ಹೊತ್ತಿಗೆಯಲ್ಲಿಯ ಲೇಖನ.]

7. ಉಡುಪಿ (ಉಡುಪಿಯ ಮ್ಯುನಿಸಿಪಾಲಿಟಿಯ ರಜತೋತ್ಸವದ ಪರವಾಗಿ ಪ್ರಕಟಿಸಲ್ಪಟ್ಟ ಹೊತ್ತಿಗೆಯಲ್ಲಿಯ ಲೇಖನ 1960)

8. ನಮ್ಮ ಹಿರಿಯರನ್ನು ಕುರಿತು (ಮುಂಬಾಯಿಯಲ್ಲಿ ಗೌಡಸಾರಸ್ವತ ಬ್ರಾಹ್ಮಣ ಸಭಾದವರಿಂದ ಬೆಳ್ಳಿಹಬ್ಬ ಸಂ ಬಂಧ ಪ್ರಕಟಿಸಲ್ಪಟ್ಟ ಸಂಚಿಕೆಯಲ್ಲಿ ಬಂದಿರುವ ಲೇಖನ)

9. ಕನ್ನಡ ಕವಿ ಲಕ್ಷ್ಮೀಶನ ಕಾಲದ ಮರುವಿಚಾರ ("ಶ್ರೀ ಪಂಜೆಯವರ ನೆನಪಿಗಾಗಿ" ಎಂಬ ಸ್ಮಾರಕ ಗ್ರಂಥದಲ್ಲಿ ಬಂ ದಿರುವ ಲೇಖನ-1952)

10. ರತ್ನಾಕರ ಸಿದ್ಧನ ಕಾಲನಿರ್ಣಯ (ಮೂಡಬಿದರೆಯ ವರಕವಿ ಶೃಂಗಾರ ಕವಿ ರತ್ನಾಕರ ವರ್ಣಿಯ ಜಯಂತ್ಯುತ್ಸವ ದಲ್ಲಿ ಅಲ್ಲಿಯ ತರುಣ ವೃಂದವು ವಿವೇಕಾಭ್ಯುದಯದಲ್ಲಿ ಪ್ರಕಟಿಸಿದ ಹೊತ್ತಗೆ-1952)

(ನಾನಿಲ್ಲಿ ಚರಿತ್ರೆಗೆ ಸಂಬಂಧಿಸಿದ ಮುಖ್ಯ ಲೇಖನಗಳನ್ನು ನಮೂದಿಸಿದ್ದೇನಷ್ಟೆ)

ಈ ಎಲ್ಲಾ ಲೇಖನಗಳಲ್ಲಿ ಶ್ರೀ ಪೈಗಳು ವಿಚಾರವಿಮರ್ಶೆ ಮಾಡಿರುವ ವಸ್ತು, ಸಾಹಿತ್ಯಗಳನ್ನು ಸತ್ಯದ ಒರೆಗಲ್ಲಿಗೆ ಪುನ: ತಿಕ್ಕಿ ಸಂಶೋಧನೆಯ ಫಲವಾಗಿ ದೊರೆತಿರುವ ಆಧುನಿಕ ಚಾರಿತ್ರಿಕ ಸಾಹಿತ್ಯಗಳೊಡನೆ ಹೋಲಿಸಿ ಅವಕ್ಕೆ ಪುಟಗೊಟ್ಟಲ್ಲಿ ನಮ್ಮೊ ತುಳುನಾಡಿನ ಚರಿತ್ರೆಯು ನಿರ್ದಿಷ್ಟವಾಗಬಹುದು, ಭೂಉತ್ಖನದ ಫಲವಾಗಿ ಅನೇಕ ವಿಷಯಗಳು ಹೊಸತಾಗಿ ಕಂಡು ಬರಬಹುದು.

**ಕಾಲನಿರ್ಣಯವು (Chronology) ಶ್ರೀ ಗೋವಿಂದ ಪೈಗಳು ಚರಿತ್ರೆಗಿತ್ತ ವಿಶಿಷ್ಟವಾದ ಪ್ರಥಮ ಕೊಡುಗೆ. ವಿವಿಧ ಸಾಹಿತ್ಯಗಳನ್ನು ಅಭ್ಯಾಸಿಸಿ ಅವುಗಳ ವಿಷಯಗಳನ್ನು ಪರಸ್ಪರ ಹೋಲಿಸಿ ಸ್ಥಳಗಳನ್ನೂ ಅವುಗಳ ಪ್ರಾಚೀನತೆ ಯನ್ನೂ ಗೊತ್ತುಹಚ್ಚುವುದು (Association and Identification) ಅವರ ಎರಡನೆಯ ಕೊಡುಗೆ.** ಈ ಕಾರ್ಯದಲ್ಲ ವರು ಬೇರೆಬೇರೆ ಭಾಷೆಗಳ ನೆರವನ್ನೂ ಐತಿಹ್ಯಗಳ ಸಹಾಯವನ್ನೂ, ಪುರಾಣ ಇತಿಹಾಸಗಳ ಸಹಕಾರವನ್ನೂ ಪಡೆದಿದ್ದಾರೆ. ಶ್ರೀ ಪೈಗ ಳಿಗೆ ಸಂಶೋಧನೆಗೆ ಅಗತ್ಯವಾದ ವಾತಾವರಣವೂ, ಅದಕ್ಕೆ ತಕ್ಕುದಾದ ಮಾನಸಿಕ ಮತ್ತು ವೈಜ್ಞಾನಿಕ ದೃಷ್ಟಿಕೋನವೂ, ವಿದ್ವತ್ತು ಇದ್ದುವು. ಯಾರ ಆಶ್ರಯವನ್ನು ಹೊಂದುವುದಕ್ಕಾಗಲೀ ಸಮಾಜದ ಗೌರವವನ್ನು ಪಡೆಯುವುದಕ್ಕಾಗಲೀ, ಡಿಗ್ರಿಗಳನ್ನು ಹೊಂದುವ ಆಸೆಯಿಂದಾಗಲಿ ತಾನು ಹೇಳುವ ವಿಷಯವೇ ಸತ್ಯವೆಂಬ ಚಟದಿಂದಾಗಲೀ ಶ್ರೀ ಪೈಗಳು ಸಂಶೋಧನೆಯನ್ನು ಮಾಡಿದುದಲ್ಲ ಆದುದರಿಂದ ಅವರು ಇತರರನೇಕರು ಹೊಂದುವುದಕ್ಕಿಂತ ಹೆಚ್ಚಿನ ಯಶಸ್ಸನ್ನು ಈ ಕ್ಷೇತ್ರದಲ್ಲಿ ಪಡೆದಿದ್ದಾರೆ. ಸತ್ಯವಾದುದನ್ನು ಹೇಳಬೇಕು, ಅಂತೂ ಅದನ್ನು ಪ್ರಯತ್ನಿಸಬೇಕು. ಇದರಿಂದ ಅಜ್ಞಾನದ ಪರದೆಯನ್ನು ಎತ್ತಿ ಜ್ಞಾನದ ಬೆಳಕನ್ನು ಹರಡಿಸಬೇಕು ಎಂಬುದೇ ಶ್ರೀ ಪೈಗಳ ಹಿರಿದಾದ ಉದ್ದೇಶ. ಶ್ರೀ ಮಂಜೇಶ್ವರ ಗೋವಿಂದ ಪೈಗಳು ಸಾಹಿತ್ಯ, ವಿಚಾರ, ಚರಿತ್ರೆಯ ಕ್ಷೇತ್ರಗಳಲ್ಲಿ ಚಿರಂಜೀವಿಗಳು.

## Bibliography


1. Bombay—Karnatak Inscriptions.
2. Karnatak Inscriptions.
3. South Indian Inscriptions.
4. Epigraphical Report of the Madras Presidency.
5. Malabars by William Logan Vol. I
6. Kannada—English Dictionary—Kittel.
7. ತುಳುನಾಡು—ಪಿ. ಗುರುರಾಜ ಭಟ್.

# ಹೊಸಗನ್ನಡ ಗದ್ಯಕ್ಕಾಗಿ ಶ್ರೀ ಪೈಗಳ ಕೃಷಿ

**ಶ್ರೀ ಶೇಖರ ಇಡ್ಯ, ಮುಂಬಯಿ**

ಶ್ರೀ ಗೋವಿಂದ ಪೈಗಳ ಪ್ರತಿಭೆಯು ಬಹುಮುಖವಾದುದು; ಅಂತೆಯೇ ಅವರ ಸಾಹಿತ್ಯ ಸೇವೆಯ ಪ್ರಕಾರಗಳು ಹಲವು. ಅವರು ಇತಿಹಾಸದ ಕುರಿತು ಬರೆದ ಲೇಖನಗಳು ಇತಿಹಾಸ–ಸಂಶೋಧನಾ ಕಾರ್ಯಕ್ಕೆ ಬೆಲೆಬಾಳುವ ಕಾಣಿಕೆಯಾಗಿವೆ. ಅವರ ಬರಹಗಳಲ್ಲಿ ಜನಜೀವನ, ಸಾಹಿತ್ಯ, ಇತಿಹಾಸಗಳ ಆಮೂಲಾಗ್ರ ಜ್ಞಾನವು ವ್ಯಕ್ತವಾಗುತ್ತದೆ. ಪ್ರೌಢವಾದ ಖಂಡಕಾವ್ಯಗಳಿಂದಲೂ, ಸೊಗಸಾದ ಚತುರ್ದಶಪದಿ (Sonnet) ಗಳಿಂದಲೂ, ಸರಸವಾದ ನೀಳ್ಗವನಗಳಿಂದಲೂ ಅವರು ಚಿರಕಾಲ ಬಾಳುವ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಭಾಷೆಯ ಬೆಳವಣಿಗೆಯ ಕಾರ್ಯದಲ್ಲಿ ಅವರ ಕಾಣಿಕೆ ಹಿರಿದಾಗಿದೆ. ಈ ದೃಷ್ಟಿಯಿಂದ ಅವರ ಗದ್ಯದಲ್ಲಿ ಕಂಡುಬರುವ ವೈಶಿಷ್ಟ್ಯಪೂರ್ಣ ಕೆಲಸದ ಪರಿಚಯ ಮಾಡಿಕೊಡುವ ಒಂದು ಪ್ರಯತ್ನ ಇಲ್ಲಿ ಮಾಡಲಾಗಿದೆ.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಹೊಸಗನ್ನಡ ಗದ್ಯ ನಿರ್ಮಾಣದ ಕಾರ್ಯ ಮುಖ್ಯವಾಗಿ ಕಾದಂಬರಿಕಾರರಿಂದ ಆಗಿರುತ್ತದೆ. ಈ ಕಾರ್ಯದಲ್ಲಿ ಅವರ ದುಡಿಮೆ ಮಹತ್ವದ್ದು. ತಿಳಿಗನ್ನಡ ಶೈಲಿಯು ಸಿದ್ಧವಾಗಬೇಕಾದರೆ ಇನ್ನೂ ಕೆಲವು ದಶಕಗಳು ಬೇಕಾದಾವು. ಕಾದಂಬರಿಕಾರರ ಕನ್ನಡವು ಸಂಸ್ಕೃತ, ಬಂಗಾಳಿ ಮತ್ತು ಮರಾಠಿ ಭಾಷೆಗಳ ವರ್ಚಸ್ಸಿನಿಂದ ತನ್ನ ಸತ್ವವನ್ನು ತೋರಿಸಿರಲಿಲ್ಲ. ಇಂಗ್ಲೀಷ್ ಓದು ಹೆಚ್ಚುತ್ತಿರುವ ಆ ಕಾಲದಲ್ಲಿ ಆ ಭಾಷೆಯಲ್ಲಿ ಸುಲಲಿತವಾಗಿ, ಸರಳವಾಗಿ, ನೇರವಾಗಿ ಅನುಭವಗಳನ್ನು ವ್ಯಕ್ತಪಡಿಸುವ ಶಕ್ತಿಯನ್ನು ಕಂಡ ನಮ್ಮ ಹೊಸ ಬರಹಗಾರರು ಕನ್ನಡದಲ್ಲೂ ಅಂತಹ ಒಂದು ಶೈಲಿಗಾಗಿ ಪ್ರಯತ್ನಪಟ್ಟದ್ದು ಸಹಜವೇ ಆಗಿರುತ್ತದೆ. ಮಂಗಳೂರು ವಿಭಾಗದಲ್ಲಿ ಈ ಕ್ಷೇತ್ರದಲ್ಲಿ ಪಂಜೆಯವರು, ಕಾಮತರು ಇನ್ನೂ ಅನೇಕ ಭಾಷಾಪ್ರೇಮಿಗಳು ದುಡಿದಿರುವರು. ಶ್ರೀ ಹುರುಳಿ ಭೀಮರಾಯರಂತಹ ಅ–೧ ದರ್ಜೆಯ ಪತ್ರಿಕೋದ್ಯಮಿಗಳ ಸೇವೆಯನ್ನೂ ನಾವು ಮರೆಯಲಾರೆವು.

ಸಾಹಿತ್ಯದ ಸೊಗಸಾದ ಸೌಧವನ್ನು ರಚಿಸಬೇಕಾದರೆ ಪದಗಳು ಇಟ್ಟಿಗೆಗಳಂತಿದ್ದು, ಅವುಗಳ ಹೆಚ್ಚಳ, ವೈವಿಧ್ಯ ಹೆಚ್ಚಿದಂತೆ ರಚನೆಯ ಅಂದ-ಚೆಂದ ಹೆಚ್ಚುತ್ತದೆ. ಬರಹಗಾರನ ಕಾರ್ಯದಲ್ಲಿ ಪದಸಂಪತ್ತು ಮೂಲವಸ್ತುವಾಗಿರುತ್ತದೆ. ಅಲಂಕಾರದ ಸ.ರಣೆ ಆ ಮೇಲಿನ ಕೆಲಸ. ಸಂಕೀರ್ಣವಾದ ಬಾಳಿನ ಹಲವು ಅನುಭವಗಳನ್ನು ಇತರರಿಗೆ ಸ್ಪಷ್ಟವಾಗಿಯೂ, ರಸಾತ್ಮಕವಾಗಿಯೂ ತಿಳಿಸುವ ಹಂಬಲ ಲೇಖಕನಿಗೆ ಇದ್ದೇ ಇರುತ್ತದೆ. ಅಲ್ಲದೆ ಸೂಕ್ಷ್ಮ ಭೇದ, ಪ್ರಭೇದಗಳನ್ನು ತಿಳಿಸುವಾಗ ನುಡಿಯಲ್ಲಿ ಸಾಕಷ್ಟು ಪದಗಳಿಲ್ಲದಿದ್ದರೆ ನಿರೂಪಣೆ ಅಂದಗೆಟ್ಟು ಬರಹದ ಉದ್ದೇಶ ಸಮರ್ಥವಾಗಿ ಓದುಗನಿಗೆ ಮುಟ್ಟದಿರಬಹುದು. 19ನೇ ಶತಮಾನದಲ್ಲಿ ಸಾಹಿತ್ಯ ಕೃಷಿಯು ವಿಪುಲವಾಗಿ ಆಗದ ಕಾರಣ ಸಿದ್ಧಶೈಲಿಯ ಸಂಪ್ರದಾಯ ದೊರಕದೆ 20ನೇ ಶತಮಾನದ ಮುಂದಣಿನ ಬರಹಗಾರರಿಗೆ ತಮ್ಮ ನಿರೂಪಣೆಯಲ್ಲಿ ತೊಡಕಾಯಿತು. ಅದರಲ್ಲೂ ಪಾಶ್ಚಾತ್ಯ ಸಂಸ್ಕೃತಿ ಸಾಹಿತ್ಯಗಳ ಸಂಪರ್ಕದಿಂದ ನಮ್ಮ ವಿದ್ವಾಂಸರಲ್ಲಾದ ನವೀನ ಪ್ರಚೋದನೆ ಬರಹಗಳಲ್ಲಿ ಅಭಿವ್ಯಕ್ತವಾಗಿ ಹೊಸ ವಿಚಾರಧಾರೆಗೆ ಅನುಗುಣವಾದ (ಸಂವಾದಿ) ಸಿದ್ಧಪದಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆಯಲಿಲ್ಲ. (ಇಂದೂ ಈ ಸಮಸ್ಯೆ ಇಲ್ಲವೆಂದಲ್ಲ-ಆದರೆ ಪರಿಸ್ಥಿತಿ ಆವಂದಿನಿಂದ ಭಿನ್ನವಾಗಿದೆ) ಈ ಬಿಕ್ಕಟ್ಟಿನ ಕಾಲದಲ್ಲಿ ಶ್ರೀ ಗೋವಿಂದ ಪೈಗಳ ಭಾಷಾ ಸೇವೆಯು ವೈಶಿಷ್ಟ್ಯ ಪೂರ್ಣವೂ, ಅಮೋಘವೂ ಆಗಿರುತ್ತದೆ.

ಬಾಳನ್ನೇ ಜ್ಞಾನಾರ್ಜನೆ ಮತ್ತು ವ್ಯಾಸಂಗಕ್ಕಾಗಿ ಮೀಸಲಾಗಿರಿಸುವ ಭಾಗ್ಯವಿದ್ದ ಶ್ರೀ ಪೈಗಳಲ್ಲಿ ಹಲವು ಭಾಷೆಗಳ ಸೂಕ್ಷ್ಮ ಪರಿಚಯವೂ, ವ್ಯಾಕರಣದಲ್ಲಿ ಆಳವಾದ ಪರಿಶ್ರಮವೂ ಇತ್ತು. ನಮ್ಮ ನುಡಿ ವಿಶಾಲವೂ, ವೈವಿಧ್ಯ ಪೂರ್ಣವೂ, ಸತ್ವಶಾಲಿಯೂ ಆಗಬೇಕೆಂಬ ಪ್ರಜ್ಞೆಯಿಂದ ಅವರು ಪದಬಳಕೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದರು. ದೇಸಿಯಿಂದ ಶಬ್ದಗಳನ್ನು, ಗಾದೆಗಳನ್ನು ಹೆಕ್ಕಿ ಸಾಹಿತ್ಯಿಕ ನುಡಿಗೆ ಸೇರಿಸಿದರು; ಹಳೆ ಸಾಹಿತ್ಯದಲ್ಲಿ ಮಾತ್ರ ಉಪಯೋಗಿಸಲಾಗುತ್ತಿದ್ದ ಪದಗಳನ್ನು ಎಳೆತಂದು ಅವುಗಳಿಗೆ ಹೊಸವುಸಿರನ್ನು ಕೊಟ್ಟರು; ತುಳು ನಡಿಯಲ್ಲಿ ಮಾತ್ರ ಪ್ರಚಲಿತವಿರುವ ಪದ, ಜಾಣ್ನುಡಿಗಳನ್ನು ಕನ್ನಡಕ್ಕೆ ಅಳವಡಿಸಿಕೊಂಡರು; ಬಳಕೆಯಲ್ಲಿರದಂತಹ ಹೊಸ ಸಮಾಸಗಳನ್ನು ಸೃಷ್ಟಿಸಿದರು (ಉದಾಹರಣೆಗಳಿಗೆ ಅನುಬಂಧವನ್ನು ನೋಡಿರಿ); ಪರಭಾಷಾ ಪದಗಳಿಗೆ (ಅದರಲ್ಲೂ ಆಂಗ್ಲ ಭಾಷೆ) ಸಮಾನಾರ್ಥ ಬರುವ ಪದಗಳನ್ನೂ, ಸಮಾಸಗಳನ್ನೂ ರಚಿಸಿದರು; ನವೀನ ನಾಮುಸಾಧಿತ, ಧಾತುಸಾಧಿತ ಪದಪ್ರಯೋಗಗಳನ್ನು ಮಾಡಿ ಇತರ ಬರಹಗಾರರಿಗೆ ಮಾರ್ಗದರ್ಶನ ಮಾಡಿದರು; ಹೊಸಪದಗಟ್ಟು, ಸಾಮತಿಗಳನ್ನೂ ತಮ್ಮ ಬರಹಗಳಲ್ಲಿ ತಂದರು. ಇತರ ಭಾಷೆಗಳಲ್ಲಿರುವ ಅಂಕಿತನಾಮಗಳು ಕನ್ನಡ ಉಚ್ಚಾರಕ್ಕೆ ಒಗ್ಗುವಂತೆ ಅಳವಡಿಸುವುದರಲ್ಲಂತೂ ಶ್ರೀ ಪೈಗಳದ್ದು ಎತ್ತಿದ ಕೈ. ಹೀಗೆ ಅವರು ತಮ್ಮ ಸಾಹಸೀ ಪ್ರಯೋಗಗಳಿಂದ ನುಡಿಯನ್ನು ಶ್ರೀಮಂತಿಸಿದರು. ಸೊಗಸನ್ನು ಹೆಚ್ಚಿಸಿದರು. ಇದೇ ರೀತಿ ದುಡಿದ ಶ್ರೀ ಶಂ. ಭಾ. ಜೋಶಿಯವರ ಮಹಾಕಾರ್ಯವನ್ನು ಈ ಸಂದರ್ಭದಲ್ಲಿ ನೆನೆಸಿಕೊಳ್ಳಬಹುದು.

ಶ್ರೀ ಗೋವಿಂದ ಪೈಗಳ ಗದ್ಯ ಬರಹಗಳು ನಾಡಿನ ಮೂಲೆ ಮೂಲೆಗಳ ಸುಪ್ರಸಿದ್ಧ ಹಾಗೂ ಅಪ್ರಸಿದ್ಧ ಪತ್ರಿಕೆಗಳಲ್ಲಿ, ಸಂಚಿಕೆಗಳಲ್ಲಿ ಹಲವು ದಶಕಗಳ ದೀರ್ಘಾವಧಿಯಲ್ಲಿ ಬೆಳಕು ಕಂಡಿವೆ. ಇವುಗಳ ಸಂಗ್ರಹವು ಈ ತನಕ ಆಗದ ಕಾರಣ ಅವರ

ವೈಶಿಷ್ಟ್ಯಪೂರ್ಣ ಪದಪ್ರಯೋಗಗಳನ್ನು ತೃಪ್ತಿಕರವಾಗಿ ಅಭ್ಯಸಿಸುವುದು ಅಸಾಧ್ಯವಾಗಿದೆ. ಇಂತಹ ತೊಡಕಿನಲ್ಲೂ ಕನ್ನಡ ನಾಡಿನಿಂದ ದೂರದ ನಗರದಲ್ಲಿದ್ದೂ ಪೈಗಳ ಹಿರಿಗೆಲಸದ ಅಲ್ಪ ಪರಿಚಯವನ್ನಾದರೂ ಮಾಡೋಣವೆಂಬ ಒತ್ತಾಸೆಯಿಂದ ಈ ಲೇಖ ಬರೆಯಲಾಗಿದೆ. ಹಲವಾರು ಕಾರಣಗಳಿಂದ ಈ ಕೆಲಸ ಅಪೂರ್ಣವಾಗಿದೆಯೆಂದು ಅರಿವಿದ್ದರೂ, ಶ್ರೀ ಪೈಯವರ ದೊಡ್ಡ ಕೆಲಸವನ್ನು ನೋಡಿ ಅಚ್ಚರಿಪಟ್ಟು ಈ ವಿಷಯದೆಡೆಗೆ ಇಂದಿನ ಬರಹಗಾರರ ಗಮನವನ್ನೆಳೆಯುವುದೂ ಇದರ ಉದ್ದೇಶವಾಗಿದೆ.

ಶ್ರೀ ಪೈಯವರಿಂದ ಆಂಗ್ಲ ಭಾಷೆಯಲ್ಲಿರುವ ಪದಗಳಿಗೆ ಸಂವಾದಿ*ಯಾಗಿ ಚಲಾವಣೆಗೆ ಬಂದ ಪದಗಳು:

| | | |
|---|---|---|
| Spelling | = | ಅಕ್ಷರಿಕೆ (ಇದರ ಹೊರತಾಗಿ ಕನ್ನಡದಲ್ಲಿ ಬೇರೆ ಪದ ಇದ್ದದ್ದು ಗಮನಕ್ಕೆ ಬಂದಿಲ್ಲ.) |
| A I | = | ಅ೧ ಅತ್ಯುತ್ತಮ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. |
| Inverted Commas( " " ) | = | ನಾಗದಂತ (ಈ ಪದ ವಿಲಕ್ಷಣವಾಗಿಲ್ಲವೇ?) |
| Chorus | = | ಗೊಂದಳ |
| Captain | = | ಹಡಗುವಳ್ಳ |
| Alphabet | = | ಕಾಬಳ್ಳಿ-("ವರ್ಣಮಾಲೆ" ಸಂಸ್ಕೃತದಿಂದ ಬಂದದ್ದು.) |
| Imperialism | = | ಸಾಮ್ರಾಜ್ಯಿಕೆ |
| Mr. X | = | ಶ್ರೀ ಕ್ಷ ನು (ಅನಾಮಿಕ ಅಥವಾ ಯಾರೋ ಒಬ್ಬನು) |
| Lyric | = | ವೈಣಿಕ ಗೀತೆ (ಇದಕ್ಕಿಂತ ಭಾವಗೀತೆ ಸೊಗಸಾದ ಪದವಾಗಿದೆ) |
| Meaningless | = | ಅನರ್ಥಕ(ಅರ್ಥವಿಹೀನ) |
| Reign | = | ಆಳಿಕೊತ್ತು. |
| Whites | = | ಬೆಳ್ಳರು |
| Heroic Couplet | = | ವೀರದ್ವಿಪದಿ |
| Revive | = | ಮರುಕಳಿಸು |
| Sonnet | = | ಚತುರ್ದಶಪದಿ (ಅಷ್ಟಷಷ್ಟಪದಿ ಎನ್ನುವುದೂ ಉಂಟು) |
| Over sight | = | ಕಣ್ಮರವೆ |
| The Proof | = | ತಿದ್ದುಗೆ(ಅಚ್ಚಾದ ಮೇಲೆ ಮಾಡಿದ ತಿದ್ದು.) |
| Geographer | = | ಭೌಗೋಲಿಕ |
| Homliness | = | ಮನೆವಳಿಕೆ |
| Scene | = | ನೋಟ (ದೃಶ್ಯವೆಂದೂ ಬಳಕೆಯಲ್ಲಿದೆ.) |
| Novelty | = | ನೂತನತೆ |
| Etc, Etcetara | = | ಇ. (ಇತ್ಯಾದಿಯ ಸಂಕ್ಷೇಪಾಕ್ಷರ ಅಥವಾ ಸಂಜ್ಞೆ) |
| Lion's Share | = | ಸಿಂಹಪಾಲು |
| Vacation | = | ಬಿಡುಗಾಲ |
| Idiom | = | ನುಡಿಗಟ್ಟು |
| Pitition | = | ಮನವಿ |
| Famous | = | ಕೀರ್ತಿತ |
| Tea-party | = | ಪಾನಗೋಷ್ಠಿ |
| Resignation | = | ಒಪ್ಪಯಿಕೆ (ಫಲಾಪೇಕ್ಷೆಯಿರದ ಎಂಬ ಅರ್ಥದಲ್ಲಿ) |
| Mistake | = | ಎಡಹು |
| Fluidity | = | ದ್ರವಣ |
| Parodist | = | ವಿಡಂಬಕ |
| Pavement | = | ಕಲ್ಲುಕಟ್ಟಣೆ |
| Creator | = | ಸೃಷ್ಟಾರ |

*ಸಂವಾದಿಯೆಂದರೆ ಸರಿಯೊಪ್ಪುವ ಎಂಬರ್ಥದಲ್ಲಿ ಶ್ರೀ ಪೈಯವರೇ ಬಳಸಿದ್ದಾರೆ.

Creator = ರಚಕ
Import = ಒಳಮಾರು (ಆಯಾತ, ಆಮದು ಇ.)
Anthology = ಮಂಜರಿ
Export = ಹೊರಮಾರು (ನಿರ್ಯಾತ, ರಫ್ತು ಇ.)
Electric Lamp = ಮಿಂಚುದೀಪ (ವಿದ್ಯುದ್ದೀಪವೆಂಬ ಪದ ಬಳಕೆಯಲ್ಲಿದೆ)
To Copy = ಸಂಪ್ರತಿಸು
Farce = ಪ್ರಹಸನ
Easy Task = ಎಡಗೈಯಾಟ
Conclusion = ನಿರ್ಣಯಿಕೆ
Similarity = ಹೋಲುವೆ
Reminder = ನೆನವರಿಕೆ

ಕನ್ನಡದ ಉಚ್ಚಾರಕ್ಕೆ ಒಗ್ಗುವಂತೆ ಸಂಪಾದಿಸಿದ ಅನ್ಯದೇಶೀಯ ಅಂಕಿತನಾಮಗಳು:

England = ಆಂಗ್ಲಾಳ, Scotland = ಸ್ಕೋತಾಳ
Italy = ಇತಲಿ
Egypt = ಐಗುಪ್ತ
Roman = ರೋಮೀಯ
Vergil = ವರ್ಗಿಲ
Augustus = ಔಗುಸ್ತ
Hebreu = ಇಬ್ರೀಯ
David = ದಾವಿದ
Mazzini = ಮಾಝಿನಿ
Mary = ಮರಿಯಾ
John = ಯೋಹಾನ
Matheu = ಮತಾಯ
Adam = ಆದಾಮ
Lazarus = ಲಾಜರ

ಹೊಸ ಸಮಾಸಗಳು:

ಕಂದುಗೊಂಡೆ = ಬಾಡಿದ ಹೂಗಳ ಗೊಂಡೆ(ದಂಡೆ)
ಹಿಂಡುಗತ್ತಲೆ = ಅತೀ ಕತ್ತಲೆ
ಭೀಮಕಾರ್ಯ = ಹಿರಿಗೆಲಸ
ಬಾಡುಮೋರೆ = ಬಾಡಿದ ಮೋರೆ
ಮೊಲಗತ್ತಲೆ = ?
ಮಸಿಗೇಡು = Waste of Ink
ಹಿಂಗತೆ = ಪೂರ್ವೇತಿಹಾಸ
ಸೀಮಂತರತ್ನ = ಶ್ರೇಷ್ಠರತ್ನ
ಮರವೆಪಾಲಾಗು = ನೆನಪಿನಲ್ಲಿ ಉಳಿಯದೆ ಮಾಯವಾಗು.

ಧಾತುಸಾಧಿತ ನಾಮಪದಗಳು (ತದ್ಧಿತಾಂತ ಪದಗಳು):

ರಚಕ : ರಚಿಸಿದವನೆಂಬ (The creator) ಅರ್ಥದಲ್ಲಿ

ಚಾಲಕ : ದಿಗ್ದರ್ಶಕನೆಂಬ ಅರ್ಥದಲ್ಲಿ
ನುಡಿತ : ನುಡಿದ ಮಾತು (The saying) ಎಂಬ ಅರ್ಥದಲ್ಲಿ
ಓದಿಕೆ : The reading ಎಂಬ ಅರ್ಥದಲ್ಲಿ. ಓದು ಎಂಬ ಪದವೂ ಬಳಕೆಯಲ್ಲಿದೆ.
ಕೇಳುಗ : The listener ಎಂಬ ಅರ್ಥದಲ್ಲಿ
ಕಲಿಕೆ : The learning ,,
ತಿದ್ದುಗೆ : The proof ,,

ಕೃದಂತ ಭಾವನಾಮಗಳು: ತಪ್ಪಿತ, ಮುಗಿತ, ಕೆಲೆತ, ಒಡಗೂಟ.

ಶ್ರೀ ಪೈಯವರು ಪ್ರಯೋಗಿಸುತ್ತಿದ್ದ ಕ್ರಿಯಾರೂಪಗಳು: ನಾಟಿಸು, ಕೂರಿಯೂ, ಕೂರಿಸು.

ಒಂದೆಡೆಯಲ್ಲಿ "ಅಕನ್ನಡಿಗ" ಎಂಬುದಾಗಿ ಕನ್ನಡದಲ್ಲಿರದ ಸಂಸ್ಕೃತದ ನಿಷೇದಾರ್ಥ ಪ್ರತ್ಯಯವನ್ನು ಉಪಯೋಗಿಸಿದ್ದಾರೆ. ಮಾಡಲಾಸ ಎಂಬಲ್ಲಿ ಕನ್ನಡ ನಿಷೇದಾರ್ಥಕ ಪ್ರತ್ಯಯವನ್ನು ಬಳಸಲಾಗಿದೆ. ಇಂದು, ಅಂದು, ಎಂದುಗಳ ಬದಲಾಗಿ ಈವಂದು, ಆವಂದು, ಯಾವಂದು ಎಂಬ ಪದಗಳೂ ಶ್ರೀ ಪೈಯವರ ಗದ್ಯದಲ್ಲಿ ದೊರಕುತ್ತವೆ. ಶಾಸೆ, ಚೂಣಿ, ತೇದಿ, ಮುಳು, ಎರವಾಗು, ಗೇಯು, ಊಣಿ, ಕೆಯ್ ಮುಂತಾದ ಕನ್ನಡ ಪದಗಳೂ, ಏವಂಚ, ಅನ್ಯತ್ರ, ಅತಏವ, ಇತಿಶ್ರೀ, ಪ್ರಾಕ್ಕಾಲಿನ, ಇತರತ್ರ, ಇತರೇತರ, ಸಮಸಾಮಯಿಕ ಇತ್ಯಾದಿ ಸಂಸ್ಕೃತ ಪದಗಳೂ ಇವೆ.

ಸಂಸ್ಕೃತ ಪದಗಳಿಗೆ ಕನ್ನಡ ಪ್ರತ್ಯಯ ಹಚ್ಚಿ ಕ್ರಿಯಾಪದ ಮಾಡುವುದೆಂದರೆ ಶ್ರೀ ಪೈಗಳಿಗೆ ಬಹಳ ಮೆಚ್ಚು.

| | | |
|---|---|---|
| ವಿಶ್ರಾಂತಿಸು | = | ವಿಶ್ರಾಂತಿ ಪಡೆ (to rest) |
| ಸವ್ಯಸಾಚಿಸು | = | ಎರಡೂ ಕೈಗಳಿಂದ ಬಾಣಗಳನ್ನೆಸೆಯು |
| ಅರ್ಥವಿಸು | = | ಅರ್ಥಮಾಡಿಕೊಳ್ಳು (Interpret ಎಂಬ ಅರ್ಥದಲ್ಲಿ) |
| ಕಥಿಸು | = | ಹೇಳು |
| ಕವನಿಸು | = | ಪದ್ಯರಚಿಸು |
| ಕುತೂಹಲಿಸು | = | ಕುತೂಹಲವನ್ನು ತೋರಿಸು |
| ಅರುಣಿಸು | = | "ಉದಯಿಸು"ವಿನಂತೆ |
| ಪುನರುಕ್ತಿಸು | = | ಮತ್ತೊಮ್ಮೆ ಹೇಳು |
| ಅನುಮೇಯಿಸು | = | To reason ಎಂಬ ಅರ್ಥದಲ್ಲಿ |
| ಅಸ್ತಮಿಸು | = | ಅಸ್ತಮಯವಾಗು |
| ಧಾವತಿಸು | = | ಅವಸರಿಸು |
| ಭಗೀರಥಿಸು | = | ಭಗೀರಥನಂತೆ ಪ್ರಯತ್ನಿಸು |

ನಾಮಸಾಧಿತ ಪದಗಳು(ಪ್ರಯೋಜನಾರ್ಥಕ);

ಹೂವುತ್ತಿರು = ಹೂಬಿಡು (Flowering—ಉದಾ: "ಹೂವುತ್ತಿರುವ ಮರವು" ಆಂಗ್ಲ ಭಾಷೆಯ Flowering Treeಗೆ ಸಂವಾದಿಯಾಗಿದೆ), ತೇದಿಸು = ತೇದಿಯನ್ನು ಕಂಡುಹಿಡಿ, ಕನ್ನಡಿಸು = ಕನ್ನಡಕ್ಕೆ ಅನುವಾದಿಸು (ಈ ಪದ ಈಗಾಗಲೇ ಜನಪ್ರಿಯವಾಗಿದೆ), ಸಲ್ಲಾಪಿಸು = ಮಾತಾಡು, ಬಾಳಿಸು = ಜೀವನ ಮಾಡಿಸು, ಕೈಗಾರಿಸು = ಆಂಗ್ಲ ಭಾಷೆಯ Industrialize ಎಂಬ ಅರ್ಥದಲ್ಲಿ. ಮಡುಹು = ಕೊಲ್ಲು. ಬದುಕಗೊಡು = ಆಂಗ್ಲಭಾಷೆಯ Let live ಎಂಬ ಅರ್ಥದಲ್ಲಿ ಪರಿಮಳಿಸು = ಪರಿಮಳವನ್ನು ಬೀರು, ಕಮ್ಮಿಸು = ಕಂಪನ್ನು ಬೀರು, ಒಕ್ಕಣಿಸು = ಒಕ್ಕಣೆ ಬರೆ (To Draft), ಮನೆಯೂಳಗಿಸು = ಮನೆಗೆಲಸಮಾಡಿಸು, ಪರಿಚಿಯಿಸು = To introduce ಎಂಬರ್ಥ. ಚಿಲಿಮಿಲಿಸು, ಗೀಚಿಡು, ಮನವರಿಸು, ಕಂಟಳಿಸು ಒಟ್ಟಯಿಸು, ಬಳಿವಿಡಿದು, ಕೂರಿಸು, ತೆತ್ತಿಸು, ನಾಟಿಸು, ನೆರಸು, ಪೆಚ್ಚಿಸು ಇತ್ಯಾದಿಪದಗಳು ಪೈಯವರ ಗದ್ಯದಲ್ಲಿ ದೊರಕುತ್ತವೆ. ಅವರು 'ಖಂಡಿತ' ಬರೆಯುವುದು ತಪ್ಪೆಂದು ಸೂಚಿಸಿ "ಕಂಡಿತ" ಸಾಧುವಾದುದರಿಂದ "ಕಂಡಿತ"ವೆಂದೇ ಬರೆಯುತ್ತಾರೆ. ಶುಭಕಾಮನೆ ವ್ಯಕ್ತಪಡಿಸಿದಾಗ ಇಂಗ್ಲಿಷಿನಲ್ಲಿ Amen ಹೇಳುವಂತೆ ಶ್ರೀ ಪೈಗಳು "ತಥಾಸ್ತು" ಎಂದು ಬರೆಯುವ ವಾಡಿಕೆಯೂ ಇದೆ.

ತದ್ಧಿತಾಂತ ಭಾವನಾಮಗಳು: ಅಜ್ಜತನ, ವರ್ತಕತನ, ಅರಸ್ಥಾನ, (ರಾಜಸ್ಥಾನ, ಎಂಬರ್ಥದಲ್ಲಿ)

ಆವೃತ್ತಿವಾಚಕ ತದ್ಧಿತಾವ್ಯಯಗಳು: ಇಮ್ಮೆ (ಎರಡು ಸಲ), ಮೂಮೆ (ಮೂರು ಸಲ), ಹಲಮೆ (ಹಲವು ಸಲ)

"ಆಪ"ಪ್ರತ್ಯಯ (ಹಳೆಗನ್ನಡದ ಅರ್ಪ=ಶಕ್ತ) ಹಚ್ಚಿ ಸೃಜಿಸಿದ ಶಬ್ದಗಳು:

ರಚಿಸಲಾಪ, ಓದಲಾಪ, ಕಾಣಲಾಪ, ಅರಿಯಲಾಪ, ಕೊಡಲಾಪ ಇ. ತುಳು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ, ಬಲ್ಲಿಷ್ಟರ ಮಟ್ಟಿಗೆ ನೂಲಮದುವೆ, ತೀಮಾನ್, ಬಾಂದುಗಲ್ಲು, ಗಾಬಾಗು, ಅರಸ್ಥಾನ, ಕೊಕ್ಕೆಮಾತಾಡು, ಗವುಜು, ಗಡು, ದಿಬ್ಬಣ, ಪಟ್ಟಾಂಗ, ಜಂಬರ, ರೆಚ್ಚೆ, ರಂಬಾಟ, ಗೋರಿಬಲೆ, ಜಾರೋದು ಮುಂತಾದ ಪದಗಳು ಶ್ರೀ ಪೈಯವರಿಂದಾಗಿಯೇ ಕನ್ನಡವನ್ನು ಸೇರಿಬಿಟ್ಟಿವೆ. ತೆತ್ತಿಸು, ಅಧಿವಾದ, ಜೋಬ, ಸಂಗಳಿಸು, ಹೆಡಮಟ್ಟು, ತೀರುಪಡಿ, ಉಪ್ಪಯಣಿಸು, ಒಳವು, ಸವಸು, ಮಚ್ಚಿಕೆದಕಾಡು, ನಗ್ಗಾಲ, ತುಯ್ಯುವುದು, ಇಗೊಳ್ಳಿ, ಬಳವಿ, ಹೋಲುವೆ, ತುಸ, ಕಾಂಬಾಗ, ಏತತನ, ರಾಪುಗೊಳ್ಳು, ಮುಂದಲಿಗೆ, ಹಂಗುಳಿಕೆ, ಖವಖವಿಸು, ಗೆಂಟುಗೆಂಟುಗಳು, ಹಿಂದುಹಿಂದಾಗು, ಮಕ್ಕಾಮಕ್ಕಿ, "ನಾಮುಂದೆ-ತಾಮುಂದೆತನ" (ಹೇಗಿದೆ ಈ ಭಾವನಾಮ?) ಹತ್ತೆಪತ್ತೆಯಾಗು, ಬೆಚ್ಚಬೆಸಗಾಗು, ಮುಂದುಮುಂದಾಗು ಮುಂತಾದ ಅಪೂರ್ವ ಪದಗಳನ್ನು ಓದಬೇಕಾದರೆ ಪೈಗಳ ಬರಹದಲ್ಲಿ ಮಾತ್ರ ಸಾಧ್ಯ.

ಕೊನೆಯ ಮಾತು:

ಕೆಲವೇ ಕೆಲವು ಬಿಡಿ ಬರಹಗಳಲ್ಲಿ ದೊರೆತ ಅಂಶಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗಿದೆ. ಈಪರಿಶೀಲನೆಯೂ ಅಪೂರ್ಣ ಯಾಕೆಂದರೆ ಇನ್ನು ಹಲವಾರು ಸಮಸ್ಯಾತ್ಮಕ ಅಂಶಗಳು ಉಳಿದುಕೊಂಡಿದೆ. ಶ್ರೀ ಪೈಗಳ ಸಾಹಸೀ ಪ್ರಯೋಗಗಳು ನಮ್ಮ ನುಡಿಯನ್ನು ಶ್ರೀಮಂತಿಸಿ, ಸೊಗಸನ್ನು, ರುಚಿಯನ್ನು, ಸತ್ವವನ್ನು ಹೆಚ್ಚಿಸಿದೆ. ಇಂದಣ-ಮುಂದಣ ಕನ್ನಡ ಸಾರಸ್ವತ ಪ್ರಪಂಚ ಕೆಲಸಕ್ಕಾಗಿ ಋಣಿಯಾಗಿದೆ. ಪ್ರಯೋಗಶೀಲ ಬರಹಗಾರರಿಗೆ ದಾರಿಬೆಳಕಾಗಿ ತುಂಬುಬದುಕನ್ನು ಬಾಳಿದ ಪೈಯವರ ಕೃಷಿಯು ನೂರ್ಮಡಿ ವೃದ್ಧಿಯಾಗಲಿ.

ಅನುಬಂಧ

ಶ್ರೀ ಪೈಗಳ ಹಲವು ಗದ್ಯ ಬರಹಗಳಲ್ಲಿ ಒಕ್ಕಣಿಸಿದ ಹಲವು ಸ್ವಾರಸ್ಯಪೂರ್ಣ ವಾಕ್ಯಗಳು, ಜಾಣ್ನುಡಿ, ನುಡಿಗಟ್ಟುಗಳು ಇ.

ಅಜ್ಜತನದ ಮಣೆಯಲ್ಲಿ ಕೂರಿಸು
ಕನ್ನಡಿಯಲ್ಲಿ ಗುಜ್ಜಾದ ಆನೆಯಂತೆ
ಕೈ ಹೊಡೆಯನ್ನು ಬಿಸುಡು ( Throw down the gauntlet )
ಬಣ್ಣಹಾರಿದೆಯಲ್ಲದೆ ಏರಿಲ್ಲ.
ಸೇರಿಗೆ 24ತೊಲೆ ಸತ್ಯ.
ಪ್ರಸ್ತಾವನೆಗೂ ನಾಟಕಕ್ಕೂ ತೆರೆಯನ್ನು ಎತ್ತಬೇಕಾಗಿಲ್ಲ.
ಮಿಕ್ಕವರ ಮನೆಯಲ್ಲಿ ದೋಸೆಗೆ ತೂತಾದರೆ ಆತನಲ್ಲಿ ಕಾವಲಿಗೆ ತೂತು
ಎಷ್ಟೋ ದಿನಗಳ ಸೇವಂತಿಗೆಯಂತೆ
ಹಿಟ್ಟು ಕೊಂಚ ದಳವಾಗಿರಬಹುದೇ ಹೊರತು ಹಿಟ್ಟು ಹಿಟ್ಟೇ, ಬೂದಿಯಲ್ಲ
ತನ್ನವರು ಬಂದರೆ ಒಳಗಾಡು ಸಟ್ಟುಗವೇ, ಹೆರವರು ಬಂದರೆ ಮೇಲಾಡು ಸಟ್ಟುಗ
ಕಂಬಳಿಗೆ ಕಾಯುತ್ತಿದ್ದನಲ್ಲದೆ ಹರಿಕಥೆಗೆ ಬಂದಿದ್ದನಲ್ಲ.
ಚೂಣಿತುತ್ತಿನಲ್ಲಿ ಹರಳು ಕಡಿದಂತೆ
ತಾಳಕ್ಕೂ ಮೇಳಕ್ಕೂ ನಾನೇ ಆದೆ
ಉತ್ತಮೇಲಲ್ಲವೇ ಬಿತ್ತುವ ಯೋಚನೆ
ಸಾವಿರ ಸುತ್ತಿಗೆ ಒಂದೇ ಗಂಟು.
ನೀರಾದರೂ ಮಜ್ಜಿಗೆ ಮೂರಾದರೂ ಮಜ್ಜಿಗೆ
ಬತ್ತದ ಊಬಿನಷ್ಟು ಹೊರಗಾಗು
ಬೂರುಗದ ಮರ ಕಾದ ಗಿಣಿಯಂತೆ

ಮರದ ಹಣ್ಣು ಮರದ ಬುಡಕ್ಕೆ ಬಂದಂತೆ
ನೆರೆಮನೆಯ ಸೋಬಾನೆಯಲ್ಲಿ ಮಗನ ಮುಂಜಿ ಮಾಡುವ
ಇಂದು ಒಬ್ಬನೇ ನಡೆಯುವ ಮೇಕೆದಾರಿ ಮುಂದು ತೇರು ಎಳೆವ ಹೆದ್ದಾರಿ
ಮಜ್ಜಿಗೆಗೆ ತಕ್ಕ ರಾಮಾಯಣ
ಬಟ್ಟಲಿನ ಬಿರುಗಾಳಿಯಂತೆ
ಹೋದಪುಟ್ಟ ಬಂದ ಪುಟ್ಟ
ಈಗ ಇಮ್ಮಡಿ ಜೋಬನಾಗಿದ್ದೇನೆ.
ಪೆಟ್ಟಿಗೆಯಲ್ಲಿ ಅಸ್ಥಿಪಂಜರವಿದೆ (Skeleton in the cupboard)
ಕಣ್ಣುಕೊಟ್ಟದೇವರು ಕಣ್ಬೊಲವನ್ನು ಕೊಟ್ಟಿರಲಾರನೇ?
ಹಾಲು ಕಾಸಲಿಕ್ಕೂ ಹುರುಳಿ ಹುರಿಯಲಿಕ್ಕೂ ಸರಿಯಾಗಲಿಲ್ಲ.
ಒಂದು ಮಣ ಹತ್ತಿ ಭಾರವೋ ಒಂದು ಮಣ ಕಬ್ಬಿಣ ಭಾರವೋ?
ಒಂದು ಒರೆಯಲ್ಲಿ ಎರಡು ಕತ್ತಿಗಳನ್ನಿರಿಸುವುದು
ಅಲ್ಲಿ ಹಸೆಯ ಕೆಳಗೆ ನುಸಿದರೆ ಇಲ್ಲಿ ರಂಗೋಲೆಯ ಕೆಳಗೆ ನುಸಿದರು.
ಆಟಿಗೊಮ್ಮೆ ಸೋಣಕ್ಕೊಮ್ಮೆ
ಮಗ ಸೋತರೂ ಜೂಜಿನ ಒಳವು ಕಲಿತ
ಕೆರದ ಒಳಗಿನ ಕಲ್ಲಿನಂತೆ
ಒಡಲಿಲ್ಲದ ನೆರಳಿನಂತೆ
ಕುರುಡನಿಗೆ ಕನ್ನಡಕ ಏರಿಸಲೇಕೆ?
ಹಬ್ಬ ತಪ್ಪಿದರೂ ಹೋಳಿಗೆ ತಪ್ಪಲಿಲ್ಲ
ಹೊದರಿನಲ್ಲಿ ತಲೆಮರೆಸಿಕೊಂಡು ಸುತ್ತಲೆಲ್ಲಾ ಮೊಲಗತ್ತಲೆ
ಹಿಂಡಿ ಮುಗಿಸಿದ ಕೆಚ್ಚಲಿಗೆ ಕರು ಬಿಟ್ಟಂತೆ
ಕಣ್ಣಿಗಿಂತ ಹುಬ್ಬು ಮೇಲಂತೆ
ದೋಣಿಗೆ ಆಗುವ ಮರವನ್ನು ಕೀಲಿಗೆ ಕಡಿಯಬಾರದು
ವರ್ಷವೆಂದರೆ ಹೀಗೆ ಹಣ್ಣೂ ಅಲ್ಲ ಆಚೆ ಹದಿರೂ ಅಲ್ಲ
ನೆರಳಪಾಲಾಗು
ಓರಂತೆ ಹಿಗ್ಗಿಸು
ಕಟ್ಟೆ ಕುಸಿದ ಹೊಳೆಯಂತೆ
ಬುಗ್ಗೆಯ ವರೆಗೆ ಸೋಸು
ಉಗುರಿಲ್ಲದ ಬೆರಳಿನಂತೆ
ಕೊನೆಗೆ ಬೆಟ್ಟ ಈಯಿತು (ಪರ್ವತ ಪ್ರಸವ)
ಆ ಅಧ್ಯಾಯ ಅಲ್ಲಿಗೆ ಮುಗಿಯಿತು (The chapter closed)
ಬರಗಾಲದಲ್ಲಿ ಅಂಗೈ ಗಾತ್ರದ ಮೋಡ ತೋರಿತು
ಗಜವೈದ್ಯವನ್ನು ಮಾಡು
ಆನೆಯ ಗರ್ಭದಂತೆ ಬೆಳೆಯಿತು
ಮೊದಲಿಲ್ಲದೆ ಬಡ್ಡಿ ಹೋಗು
ಹುಣಸೆ ಮುಪ್ಪಾದರೂ ಹುಳಿ ಮುಪ್ಪೇ?
ಅತ್ತೆ ಒಡೆದ ಪಾತ್ರೆ
ಬಂಜೆಯನ್ನು ಮಗನ ಜಾತಕ ಕೇಳಿದಂತೆ
ತೆಗೆದ ಅವರ ಮೇಲೆ ಹುಸಿಗುದರೆಗಳನ್ನು
ಬಲತೋಳು ಕುಸಿದಂತೆ
ಜಿಗಳೆಯ ಜಾತಿಗೆ ಚೇಳು ಚುಚ್ಚಿತು
ಬೆಕ್ಕು ಚೀಲದಿಂದ ಹೊರಗೆ ಬಿತ್ತು (Cat is out of bag)
ನಂಜಲಿಕ್ಕೆ ಸಿಕ್ಕಿತಲ್ಲದೆ, ಮೆಲ್ಲಲಿಕ್ಕೆ ಸಾಲದು
ಬೆಣ್ಣೆಯಿಟ್ಟುಕೊಂಡು ತುಪ್ಪಕ್ಕೆ ಅಲೆಯುತ್ತೀರಿ.

ಗಂಟಲಿನ ಗಾಳವಾಗಿದೆ
ಬಡಿಸಿದ್ದು ಬೀಸಳಿಗೆಯಾದರೂ ಅಟ್ಟದ್ದು ಗುಂಡಳಿಕೆ ತಾನೆ?
ಪದ್ಯದ ಬಲೆಗಾರಿಕೆ ಏಕೆ? ಗದ್ಯದ ಗಾಳ ಸಾಲದೆ?
ಲಾವಂಚದ ಸೂಡಿನಲ್ಲಿ ಒಣಹುಲ್ಲೇಕೆ?
ಮೀನಿನ ಮರಿಗೆ ಈಜು ಕಲಿಸಬೇಕೇ?
ರಂಪಣಿ ಬಲೆಯನ್ನು ಬೀಸು
ಮುಖ ನೋಡಿ ಮಣಿ
ಮುಂಗೈ ಆಡಿದರೆ ಮೊಳಕೈ ಆಡುತ್ತದೆ
ಹಿಡಿಯಷ್ಟು ಕಾಳು ಮುಡಿಯಷ್ಟು ಹೊಟ್ಟಿನಲ್ಲಿ ಬೆರಸಿಹೋಗುತ್ತದೆ
ಒಳಗಿಂದಲೆ ಗಡಿಯಾರದ ಮುಳ್ಳುಗಳಲ್ಲಿ ಕೈಯಾಡಿಸಿರಬೇಕು.
ಹೂವು ಮೂಸಿದರೆ ಒಂದು ವಾಸನೆ; ತಿಕ್ಕಿದರೆ ಇನ್ನೊಂದು ವಾಸನೆ
ಎಣ್ಣೆ ಸಿಕ್ಕಿದ್ದೇ ಶನಿವಾರ
ಮೂಕನ ಹೋಳಿಗೆಯಂತೆ
ಏಳು ಹೊಂಡಕ್ಕೆ ಒಂದು ಅಪ್ಪದಂತೆ
ಅತ್ತೆಗೆ ಲಾಲಿ ಕಲಿಸಲಿಕ್ಕೆ ಸೊಸೆಯೇ?
ಕೇರೆ ಹಾವು ಹೀರಿದ ಕೆಚ್ಚಲಂತೆ
ಕೆಳಗಿಟ್ಟರೆ ಇರುವೆ ಕಚ್ಚೀತು, ಮೇಲಿಟ್ಟರೆ ಕಾ ಗೆ ಚುಚ್ಚೀತು
ತಕ್ಕಡಿಗೆ ಗೊತ್ತೇ ಮನೆಯ ಬಡತನ
ನೀರು ಕೋಳಿಗಾಗದು, ನೆಲ ಬಾತುಕೋಳಿಗಾಗದು
ಹಿಂಗಾಲಿನಷ್ಟು ಬಲ ಮುಂಗಾಲಿಗಿದ್ದರೆ
ತಕ್ಕಡಿಯ ದಂಡಿ ಹೇಗೆ ಬಗ್ಗೀತೆಂದು
ಮಾತು ಬಾಯಿಬಿಟ್ಟು ಅನ್ಯತ್ರ ನೆಲಸಿತೆ?
ಊಡದ ತುರುವಿಗೆ ಉಣ್ಣದ ಕರು
ಚಿನ್ನ ಕೀಳಾದರೆ ಚಿನಿವಾರರನ್ನೇಕೆ ದೂರಲಿ?



# ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ವಿಚಾರ ದರ್ಶನ

**ಶ್ರೀ ವಾಮನ ಕೊಡಿಯಾಲ್‌ಬೈಲ್**

ಇಂದಿನ ವಿಪ್ಲವ ಪೂರ್ಣ ಜಗತ್ತಿಗೆ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರು ಒಂದು ಆಶಾ ಕಿರಣವಾಗಿದ್ದರು. ಅವರು ತಮ್ಮ ಜೀವನದಲ್ಲಿ ಏನನ್ನು ಸಾಧಿಸಿದರು? ಅವರ ಗುರಿ ಗಮ್ಯಗಳೇನು? ಅವರ ವಿಚಾರಧಾರೆ ಯಾವುದು? ಇವುಗಳನ್ನು ತುಸು ವಿಶ್ಲೇಷಿಸಿ ಅರಿತುಕೊಂಡು ಅವರು ಹಾಕಿಕೊಟ್ಟ ಮಾರ್ಗದಲ್ಲಿ ಕನ್ನಡಿಗರಾದ ನಾವು ತ್ರಿಕರಣಪೂರ್ವಕವಾಗಿ ನಡೆದುಕೊಂಡಲ್ಲಿ ಅದೇ ಶ್ರೀಯುತರ ಅಮರವಾದ ಆತ್ಮಕ್ಕೆ ತೃಪ್ತಿಯನ್ನುಂಟುಮಾಡುವ ಅಪೂರ್ವ ಸ್ಮಾರಕವು ಆಗುವುದರಲ್ಲಿ ಸಂಶಯವಿಲ್ಲ.

ಶ್ರೀಯುತರು ಸತ್ಯಸಂಶೋಧಕರಾಗಿದ್ದರು. ಸ್ಥಿತಿಪ್ರಜ್ಞರಾಗಿದ್ದರು. ತತ್ವವೇತ್ತರಾಗಿದ್ದರು. ತನ್ನ ವಿಚಾರಗಳನ್ನು ಆಚಾರಕ್ಕಿಳಿಸಿ ಜಯಗಳಿಸಿದ ಮಹಾ ಮೇಧಾವಿ ಮತ್ತು ಎದೆಗಾರರಾಗಿದ್ದರು. "ವಸುಧೈವ ಕುಟುಂಬಕಮ್" ಎನ್ನುವುದರ ಪ್ರತಿಮೂರ್ತಿಯೇ ಅವರೆಂದರೆ ಇದರಲ್ಲಿ ಅತಿಶಯೋಕ್ತಿಯೇನಿಲ್ಲ.

"ಯಸ್ಯಸರ್ವೇ ಸಮಾರಂಭಾ: ಕಾಮ ಸಂಕಲ್ಪ ವರ್ಜಿತಾ:
ಜ್ಞಾನಾಗ್ನಿ ಧಗ್ದಕರ್ಮಾಣಂ ತಮಾಹು: ಪಂಡಿತಂ ಬುದಾ:॥
ತುಲ್ಯ ನಿಂದಾಸ್ತುತಿ ರ್ಮೌನೀ ಸಂತುಷ್ಟೋ ಯೇನಕೇನಚಿತ್
ಅನಿಕೇತ: ಸ್ಥಿರಮತಿ: ಭಕ್ತಿಮಾನ್ ಮೇ ಪ್ರೀಯೋ ನರ:॥
ಪ್ರಜಹಾತಿಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್
ಆತ್ಮನ್ಯೇವಾತ್ಮನಾ ತುಷ್ಟಸ್ಥಿತ ಪ್ರಜ್ಞಸ್ತದೋಚ್ಯತೇ॥"

ತಾತ್ಪರ್ಯ:- ಯಾವಾತನ ಸರ್ವ ಕೆಲಸಗಳೂ ಆಶಾವರ್ಜಿತವಾಗಿರುವವೋ ಜ್ಞಾನವೆಂಬ ಅಗ್ನಿಯಿಂದ ಫಲಾಪೇಕ್ಷೆಯನ್ನು ಯಾವಾತನು ಸುಟ್ಟುಬಿಟ್ಟಿರುತ್ತಾನೋ ಆತನೇ ತಿಳಿದವನೆಂದು ಬಲ್ಲವರ ಮತವು. ಯಾವಾತನು ಹೊಗಳಿಕೆ ತೆಗಳಿಕೆಗಳಿಗೆ ಹಿಗ್ಗದೆಯೂ ಕುಗ್ಗದೆಯೂ ಸಮಭಾವದಿಂದಿರುವನೋ, ಯಾವಾತನು ಇದ್ದುದರಲ್ಲಿಯೇ ಸಂತೃಪ್ತನೋ ಪ್ರಪಂಚವೇ ತನ್ನ ಮನೆಯೆಂದು ತಿಳಿದು ಅಂತೆ ನಡೆಯುವನೋ ಭಕ್ತಿಭಾವ ಪೂರಿತನಾದ ಅಂತಹನು ನನಗೆ ಪ್ರಿಯನು. ಮನೋಗತವಾಗುವ ಎಲ್ಲಾ ಕಾಮಾಭಿಲಾಷೆಗಳನ್ನು ಯಾವಾತನು ನಿಗ್ರಹಿಸಿ ಆತ್ಮನಿಂದ ಆತ್ಮದಲ್ಲಿಯೇ ಯಾರು ಸಂತುಷ್ಟನೋ ಅವನೇ ಸ್ಥಿತಪ್ರಜ್ಞನು.

ಹೀಗೆಂದು ಸ್ಥಿತಪ್ರಜ್ಞನ ಲಕ್ಷಣಗಳನ್ನು ಗೀತಾಚಾರ್ಯನಾದ ಶ್ರೀ ಕೃಷ್ಣ ಭಗವಾನನೇ ವರ್ಣಿಸಿರುತ್ತಾನೆ. ಶ್ರೀ ಗೋವಿಂದ ಪೈಯವರು ಸ್ಥಿತ ಪ್ರಜ್ಞರಾದುದರಿಂದಲೇ ಸತ್ಯಶೋಧನೆಯಲ್ಲಿ ನಿರತರಾದರು ಮತ್ತು ಈ ಹಾದಿಯಲ್ಲಿ ಎಷ್ಟೇ ಎಡರು ತೊಡರುಗಳು ಬಂದರೂ ಧೈರ್ಯದಿಂದ ಎದುರಿಸಿ ತನ್ನ ಗುರಿಯನ್ನು ಸಾಧಿಸುತ್ತಿದ್ದರು. "ಸತ್ಯಮೇವ ಜಯತೇ" ಎಂಬುದನ್ನು ಅವರು ತ್ರಿಕರಣ ಪೂರ್ವಕವಾಗಿ ನಂಬುತ್ತಿದ್ದರು ಮತ್ತು ಅಚಲ ಶ್ರದ್ಧೆಯಿಂದ ಆಚಾರದಲ್ಲಿ ತಂದು ತೋರಿಸುತ್ತಿದ್ದರು.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೇ ಬಹುಭಾಷಾ ಪಂಡಿತರಾಗಿ ಇತರ ಭಾಷಾ ಕಾವ್ಯಗಳಲ್ಲಿಯ ಮುಕ್ತ ಛಂದಸ್ಸಿನ ಖಂಡಕಾವ್ಯಗಳನ್ನು ಸೃಷ್ಟಿಸಿದವರಲ್ಲಿ ಮೊತ್ತಮೊದಲಿಗರು ಶ್ರೀ ಗೋವಿಂದ ಪೈಗಳು ಎಂದರೆ ಇದರಲ್ಲಿ ಇತರರಿಗೆ ಅಪಚಾರವೇನಿಲ್ಲ. ಹೀಗೆ ಹೊಸ ಹಾದಿಯನ್ನು ತುಳಿದರೂ ಹಳೆಯದರ ಗುಣಗಳಿಗೆ ಪುಟಕೊಟ್ಟಂತೆ ಉಜ್ವಲವಾಗಿ ಪ್ರಕಾಶಿಸುವ ಕಾವ್ಯಗಳನ್ನು ಅವರು ಕನ್ನಡಿಗರಿಗೆ ಕೊಟ್ಟದ್ದಲ್ಲದೆ, ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಹೊಸ ಶಬ್ದಗಳನ್ನು ವ್ಯಾಕರಣ ಮರ್ಯಾದೆಯನ್ನು ಮೀರದೆ ಸೃಷ್ಟಿಸಿದರು. ಕೆಲವೊಮ್ಮೆ ವ್ಯಾಕರಣ ಸೂತ್ರಗಳನ್ನು ಉಲ್ಲಂಘಿಸಿದರೂ ಸೂತ್ರಗಳ ಉದ್ದೇಶ ಮತ್ತು ಗಮ್ಯಗಳನ್ನು ಉಲ್ಲಂಘಿಸಿಲ್ಲವೆನ್ನುವುದನ್ನು ಸರ್ವರೂ ಒಪ್ಪಲೇಬೇಕು.

"ಕನ್ನಡದ ನೂತನ ಕವಿತೆಗಳು ಶ್ಲಾಘ್ಯವಾದರೂ ಅನುಕರಣೀಯವಲ್ಲ" ಎಂಬ ಒಂದು ಲೇಖದಲ್ಲಿ (ಕಂಠೀರವ ದಸರಾ ಸಂಚಿಕೆ 1934) ವಿದ್ವಾನ್ ಉಡುಪಿ ಸೀತಾರಾಮಾಚಾರ್ಯರು "ಹೊಸ ಹಾದಿಯ ಹೊಸ ಕಾವ್ಯಗಳಲ್ಲಿ ಹುರುಳಿಲ್ಲ" ಮತ್ತು "ಹೊಸಹಾದಿಯು ಅನುಕರಣೀಯವಲ್ಲ" ಎಂಬುದಾಗಿ ಸ್ಪಷ್ಟವಾದ ಮಾತುಗಳಿಂದ ವಿಮರ್ಶಾಪೂರ್ವಕವಾಗಿ ಸಿದ್ಧಿಸಿರುವರು. ಆಗಿನ ಪ್ರಸಿದ್ಧ ಕವಿಗಳಲ್ಲಿ ಶ್ರೀಯುತರ ಕಟುಟೀಕೆಗೆ ಒಳಗಾಗದವರಿಲ್ಲ, ಶ್ರೀಯುತ ಸೀತಾರಾಮಾಚಾರ್ಯರ ವಿಮರ್ಶಾ ಸಾಮರ್ಥ್ಯವನ್ನು ಕೊಂಚ ಅವಲೋಕಿಸಿರಿ.

"ಹಳೆಯದೆಲ್ಲ ಹೊಲಸು" ಎಂದೆನ್ನುವ ನವ್ಯ ಶಿಕ್ಷಿತರಾದರೋ ಈಗ ಹಲವೆಡೆಗಳಲ್ಲಿ ಬೆಳೆಯುತ್ತಿರುವ ಸಂಘ ಸಮಾಜ, ಸಭೆ, ವಾಚನಮಂದಿರ ಮುಂತಾದ ಸಂಸ್ಥೆಗಳ ಉಪಕ್ರಮ ಭಾಷಣ ವಾರ್ಷಿಕೋತ್ಸವ ಮೊದಲಾದ ಸವರಂಭಗಳಲ್ಲಿಯೂ ನೂತನ ಗ್ರಂಥಗಳ ಮುನ್ನುದಿಗಳಲ್ಲಿಯೂ, ಪ್ರಾಚೀನ ಕಾವ್ಯಗಳ ಮೇಲೆ,—ಅವುಗಳನ್ನು ಹೊಗಳುವವರ ಮೇಲೆ ಕೂಡ,—ಅನಾದರವನ್ನು ಹುಟ್ಟಿಸುವ ಒಂದೆರಡು ವಾಕ್ಯಗಳನ್ನಾದರೂ ಹೇಳುವುದು, ಬರೆವುದು ಸಹ ಶಿಷ್ಟಾಚಾರವೇ ಆಗಿಹೋಗಿದೆ. ಆದರೆ ಇದು ಅನುಚಿತ

ವೆಂದು ಹೇಳಲಾಗುವುದಿಲ್ಲ. ವರ್ತಕರು ತಾವು ವಿಕ್ರಯಿಸುವ ವಸ್ತುಗಳಿಗೆ ಗ್ರಾಹಕರು ಮರುಳಾಗುವುದಕ್ಕಾಗಿ ಅವುಗಳನ್ನು ಹೊಗಳುವುದರೊಂದಿಗೆ ಇತರರ ವಸ್ತುಗಳನ್ನು ತೆಗಳುವಂತೆ ನೂತನ ಕವಿತೆಗಳನ್ನು ಪ್ರಚಾರ ಮಾಡುವ ನವೀನ ಕವಿಗಳು ಜನರ ಸನ್ನಿಧಿಯಲ್ಲಿ ನವ್ಯ ಕಾವ್ಯಗಳ ಮಹತ್ವವನ್ನು ಆವಾಹನೆ ಮಾಡುವಾಗ, ಪೂರ್ವ ಕಾವ್ಯಗಳ ಮೇಲೆ ಉಚ್ಚಾಟನ ಮಂತ್ರಾಕ್ಷತೆಯನ್ನೆರಚುವುದು ಅಪರಿಹಾರ್ಯವಾಗಿದೆ. ಆದರೆ ಜನರು ಈ ಹೊಗಳಿಕೆ ತೆಗಳಿಕೆಗಳ ಮಾತನ್ನು ವೇದವಾಕ್ಯದಂತೆಯೋ, ಹೆಂಡತಿಯ ಮಾತಿನಂತೆಯೋ ವಿಚಾರ ಮಾಡದೆ ನಂಬುವುದು ಯೋಗ್ಯವಲ್ಲ. ಮುಂದೆ ಕವಿತಾ ಸರಣಿಯಲ್ಲಿ ನಡೆಯಲಿಚ್ಛಿಸುವವರು ಕೂಡ ಈ ಮಾತಿಗೆ ಮರುಳಾಗಿ ಹಳೆಯದನ್ನು ಕಣ್ಣೆತ್ತಿ ನೋಡದೆ ಹೊಸದನ್ನೇ ಮಾದರಿಯಾಗಿಟ್ಟುಕೊಂಡು ಅವ್ಯಸ್ಥಿತವಾಗಿ ಬರೆಯುತ್ತಾ ಬಂದರೆ, "ಓರಿಯಕ್ಕನ ಚಾಳಿ ಮನೆಯ ಮಕ್ಕಳಿಗೆಲ್ಲಾ ಅಂಟಿದಂತೆ" ಆಗಲಿಕ್ಕಿಲ್ಲವೇ? ಇದರಿಂದ ಕನ್ನಡ ಸಾಹಿತ್ಯದ ಉನ್ನತಿಯಾಗುವುದರ ಬದಲು ಅವನತಿಯೇ ಆಗಲಿಕ್ಕಿಲ್ಲವೇ? ಎಂಬುದನ್ನು ವಿಚಾರವಂತರು ಆಲೋಚಿಸಲಿ..........................................
............ಈ ನವ್ಯ ಶಿಕ್ಷಿತರನೇಕರು ನೂತನ ಕವಿತೆಗಳಲ್ಲಿ ತೋರಿಸುವ ಅಭಿಮಾನವು ನ್ಯಾಯವಾದರೂ, ಮೇರೆ ಮೀರಿ ಪಕ್ಷಪಾತ ಸ್ವರೂಪವನ್ನು ತಾಳಿದೆ ಎಂಬುದು ಮುಂದಿನ ವಿವರಣೆಯಿಂದ ವಾಚಕರಿಗೆ ವೇದ್ಯವಾದೀತು. ಪ್ರಾಚೀನ ಕಾವ್ಯಗಳಲ್ಲಿ ಸಂಸ್ಕೃತ ಶಬ್ದ ಬಾಹುಳ್ಯವು ದೋಷವೆಂದು ಎತ್ತಿ ತೋರಿಸುವರೇ ಹೊರತು ಅರ್ವಾಚೀನ ಪದ್ಯಗಳಲ್ಲಿಯೂ ಅದು ಇದೆ ಎಂಬುದನ್ನೇ ಮರೆತು ಬಿಡುವರು. ಇಂಗ್ಲೀಷಿನ ಪರಿಮಳವು ಸುಳಿಯದ ಕಾಲದ ಜನರು ಹೆಚ್ಚಾಗಿ ಸಂಸ್ಕೃತ ಪದಗಳ ಜ್ಞಾನವುಳ್ಳವರಾಗಿದ್ದುದರಿಂದ ಅವರ ಅಭಿರುಚಿಗೆ ತಕ್ಕಂತೆ ಹಿಂದಣ ಕಾವ್ಯಗಳು ಸಂಸ್ಕೃತ ಪದಗಳಿಂದ ನಿಬಿಡವಾಗಿದ್ದರೆ ಅದು ಕ್ಷಮ್ಯವು. ಹಲ್ಲಿಲ್ಲದ ಬಾಯಿಗೆ ಚಕ್ಕುಲಿಯು ರುಚಿಸದಿದ್ದರೆ, ಕಲ್ಲುಸಕ್ಕರೆಯಲ್ಲಿ ದ್ವೇಷ ಮಾಡುವುದೇ? ಸ್ವಲ್ಪ ಹೊತ್ತು ಬಾಯಲ್ಲಿಟ್ಟುಕೊಂಡರೆ ಸಿಹಿಯಾಗುವುದಿಲ್ಲವೇ? ನಮ್ಮ ಪೂರ್ವಜರ ಪೂಜ್ಯ ಭಾಷೆಯಾದ ಸಂಸ್ಕೃತ ಕಾವ್ಯಗಳನ್ನು ತಿಳಿಯಲಿಕ್ಕೆ ಆಗದಿದ್ದರೂ ಕನ್ನಡ ಕಾವ್ಯದಲ್ಲಿ ಸೇರಿದ ಸಂಸ್ಕೃತ ಪದಗಳನ್ನಾದರೂ ತಿಳಿಯಲಿಕ್ಕೆ ಪ್ರಯತ್ನಿಸಿದರೆ ಅದರಿಂದ ಆನಂದವಾಗುವುದಿಲ್ಲವೇ? ಈಗಿನ ಹೊಸ ಹುರುಪಿನ ಜನರ ರುಚಿಗಾಗಿ ಹೊರಟ ಹೊಸ ಕವಿತೆಗಳಲ್ಲಿಯೂ ಸಂಸ್ಕೃತ ಪದಗಳನ್ನು ನೋಡಿರಿ.

ಶ್ಯಾಮಲ ಪಲ್ಲವ ಸುಮಸಂಪೂಜಿತ
ಭೀಮ ನಿಬಿಡ ತರುರಾಜಿ ವಿರಾಜಿತ
ಮಲಯಸಹ್ಯವನ ಪರ್ವತ ಶಿಖರದಿ

(ಕವಿವರ್ಯ ಶ್ರೀ ಕೆ.ವಿ.ಪುಟ್ಟಪ್ಪನವರ ಸಂಧ್ಯಾ ಸಮೀರಣದಿಂದ)

ಭೀಷಣ ಭ್ರುಕುಟಿಯ ಭಂಜಲಗ್ನ ಪರಶುವಂ
..........................................
ಉದ್ದೀಪ್ತ ನೇತ್ರನುಂ ಮುಕ್ತಕೇಶನುಮಾಗಿ

(ಶ್ರೀ ಕೆ.ವಿ. ಪುಟ್ಟಪ್ಪನವರ "ಗಂಡುಗೊಡಲಿಯಿಂದ)

ಹೀಗೆ ಪದ್ಯಗಳಲ್ಲೇ ಅಲ್ಲದೆ ಗದ್ಯಗಳಲ್ಲಿಯೂ ಅನಾವಶ್ಯಕವಾಗಿಯೂ ಸಂಸ್ಕೃತ ಪದಗಳನ್ನು ನೂತನ ಕವಿಗಳು ಸಹ ಉಪಯೋಗಿಸುತ್ತಾರೆ. ಉದಾ: —'**ಇಂದುವದನೆ ಕುಂದರದನೆ ಪ್ರಕೃತಿರೂಪಸಿಯಾಗಿ ರಕ್ತಾನಖಿ ರಕ್ತಾಮುಖಿ ಪ್ರಕೃತಿರಾಕ್ಷಸಿ**ಯಾಗಿ ತೋರುತ್ತಾಳೆ.

(ಶ್ರೀ ಕೆ. ವಿ. ಪುಟ್ಟಪ್ಪನವರ ಪಾಂಚಜನ್ಯದ ಮುನ್ನುಡಿ.)

ಇವರದೇ ಆದ ಲಲಿತ ಕವಿತೆಯ 'ನವಿಲಿನ' ಮುನ್ನುಡಿಯನ್ನು ನೋಡಿರಿ: —'**ಕಲಾಸುಂದರಿಯು ಸರಸಿಯಾದರೂ ಮಹಾತಪಸ್ವಿನಿ**—ಆಕೆಯ **ಬಹಿರಂಗ**ದಲ್ಲಿ **ತೇಜಸ್ಸಿರುವಂತೆ ಅಂತರಂಗ**ದಲ್ಲಿ **ತಪಸ್ಸಿದೆ.** ಹಸುರು ಗಿಡಮರಗಳಿಂದಲೂ, **ನಗರಗ್ರಾಮಗ**ಳಿಂದಲೂ **ವನಪರ್ವತ**ಗಂಳಿದಲೂ ಹೊಳೆಕೆರೆಗಳಿಂದಲೂ ನಲಿದು ನಗೆಸೂಸುತ್ತಿರುವ **ಉರ್ವರೆಯ ಅಂತರಾಳ**ದಲ್ಲಿ **ಅನೇಕ ಶತಮಾನ**ಗಳಿಂದಲೂ **ಉನ್ಮತ್ತರಭಸ**ದಿಂದ **ಘೂರ್ಣಿ**ಸುತ್ತಿರುವ **ಜಲರೂಪದ ಅಗ್ನಿ**ರಾಶಿಯು **ತಪ್ಪಸ್ಸು** ಮಾಡುತ್ತಿರುವಂತೆ ಆಕೆಯ**ಅಂತರಂಗ**ದಲ್ಲಿ ತಪಸ್ಸಿದೆ.................................ಆಕೆಯು **ಬುದ್ಧಿಭಾವ**ಗಳ **ವಿದ್ಯುದಾಲಿಂಗನ**ದಿಂದ **ಆವಿರ್ಭವಿಸಿರುವ ಪ್ರತಿಭಾರೂಪಸಿ.'**

ಈ ವಾಕ್ಯಗಳಲ್ಲಿ ಸಂಸ್ಕೃತವು ಹೆಚ್ಚೋ ಕನ್ನಡವು ಹೆಚ್ಚೋ ವಾಚಕರು ಯೋಚಿಸಬೇಕು. ಇಷ್ಟವಾದ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಿಲ್ಲರೂ ಸಂಸ್ಕೃತ ಪದವನ್ನು ಪ್ರಯೋಗಿಸದಿರುವುದಿಲ್ಲ. ಅಪವಾದ ಮಾತ್ರ ಹಿಂದಿನ ಕವಿಗಳಿಗಾಗಿದೆ. ಇನ್ನೊಂದು ಸಂಗತಿ ಏನೆಂದರೆ ಹಿಂದಿನವರು ಸಂಸ್ಕೃತವನ್ನು ಪ್ರಯೋಗಿಸಿದರೂ ಸುಬದ್ಧವಾಗಿರುತ್ತಿತ್ತು. ಇಂದಿನ ಕವಿಗಳು ಅಬದ್ಧವಾಗಿ ಉಪಯೋಗಿಸುತ್ತಾರೆ. ಮೇಲಣ ವಾಕ್ಯವನ್ನು ನೋಡಿರಿ! ಕಲಾಸುಂದರಿಯು ರಸಿಕೆಯೆಂಬ ಅರ್ಥದಲ್ಲಿ "ಸರಸಾ ಎಂಬುದರ ತದ್ಭವವಾದ "ಸರಸೆ" ಎಂಬುದು ಸ್ತ್ರೀಲಿಂಗಕ್ಕೆ ವಿಶೇಷಣವಾದೀತೇ ಅಲ್ಲದೆ "ಸರಸಿ" ಎಂದಾಗುವುದಿಲ್ಲ. ಹೀಗಾಗಬೇಕಾದರೆ "ಸರಸೀ" ಎಂಬ ಸಂಸ್ಕೃತ ರೂಪವಿರಬೇಕು. ಸ್ತ್ರೀಲಿಂಗದಲ್ಲಿ ಅಂಥ ಪದವಿಲ್ಲ. ಹೋಗಲಿ, ಇದು ಕನ್ನಡದ ರೂಢ ಶಬ್ದವೆಂದು ಸಮಾಧಾನ ಮಾಡಿಕೊಂಡರೂ ಪ್ರಕೃತಿ ರೂಪಸಿ ಎಂಬ ಅಬದ್ಧ ಶಬ್ದಕ್ಕೆ ಯಾವ ಸಮಾಧಾನವನ್ನು ಹೇಳುವುದಕ್ಕೂ ಆಗುವುದಿಲ್ಲ. ಸಂಸ್ಕೃತದ "ತಾಪಸಿ" ಎಂಬ ಶಬ್ದದ ಸಾದೃಶ್ಯ ಭ್ರಮದಿಂದ "ರೂಪಸಿ" ಎಂಬುದನ್ನು ಕಲ್ಪಿಸಿಕೊಂಡಿರಬಹುದು. ಆದರೆ "ತಾಪಸಿ" ಶಬ್ದವು ಸಕಾರಾಂತ "ತಪಸ್" ಶಬ್ದದಿಂದ ಹುಟ್ಟಿಬೆಳೆದುದು. "ರೂಪಸಿ" ಶಬ್ದದ ಮೂಲವು ಅಕಾರಾಂತ "ರೂಪ" ಶಬ್ದವು. ಇದರಿಂದ

ಉಂಟಾಗುವ ಸ್ತ್ರೀಲಿಂಗ ವಿಶೇಷಣವು "ರೂಪಿಣಿ" ಎಂದಾದೀತಲ್ಲದೆ "ರೂಪಸಿ" ಆಗಲಿಕ್ಕಿಲ್ಲ! ರೂಪವುಳ್ಳವಳು ರೂಪಸಿಯಾಗು ದಾದರೆ ಕೋಪವುಳ್ಳವಳು ಕೋಪಸಿ, ರಾಗವುಳ್ಳವಳು ರಾಗಸಿ, ಭೋಗವುಳ್ಳವಳು ಭೋಗಸಿಯಾಗಬೇಕಾದೀತು. ಈ ಅಪಶಬ್ದವನ್ನು ಪದ್ಯದಲ್ಲಿಯೂ ಉಪಯೋಗಿಸಿದ್ದಾರೆ. ಉದಾ:- "ದಿನದಿನನಿಶಿ ಮಾಯಾರೂಪಸಿ" (ಪುಟ್ಟಪ್ಪನವರ ನವಿಲು)

ಹೀಗೆ ಶ್ರೀಗಳಾದ ಕೆ.ವಿ.ಪುಟ್ಟಪ್ಪ, ಬಿ.ಎಂ.ಶ್ರೀ ಕಂಠಯ್ಯ, ಮೊದಲಾದ ಪ್ರಸಿದ್ಧರನ್ನು ನಿರ್ಭಯವಾಗಿ ಕಟುಟೀಕೆಗೊಳ ಗಾಗಿಸಿದ ವಿದ್ವಾನ್ ಉಡುಪಿ ಶ್ರೀ ಸೀತಾರಾಮಾಚಾರ್ಯರು (ಇವರು ಮಂಗಳೂರು ಗವರ್ನಮೆಂಟ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾ ಪಕರಾಗಿದ್ದರು.) ಶ್ರೀ ಮಂಜೇಶ್ವರ ಗೋವಿಂದ ಪೈಯವರ ಕವಿತೆಗಳನ್ನಾಗಲೀ ಅಥವಾ ಶಬ್ದಸೃಷ್ಟಿಯ ವಿಧಾನಗಳನ್ನಾಗಲೀ ಅಥವಾ ಕವಿತಾ ರಚನೆಯಲ್ಲಿ ಅನುಸರಿಸಿದ ಛಂದೋ ಮಾರ್ಗವನ್ನಾಗಲೀ ಟೀಕಿಸಿದ್ದಿಲ್ಲ. 1931ರಲ್ಲಿಯೇ ಶ್ರೀ ಮಂಜೇಶ್ವರ ಗೋವಿಂದ ಪೈಗಳ "ಗೋಲ್ಗೊಥಾ" ಬೃಹತ್‌ಖಂಡ ಕಾವ್ಯವು ಪ್ರಕಟವಾಗಿತ್ತು. ಅದಕ್ಕಾಗಿಯೇ ಶ್ರೀಯುತ ಗೋವಿಂದ ಪೈಯವರು ಆಧುನಿಕ ಕನ್ನಡ ಸಾಹಿತ್ಯದ "ದ್ರೋಣಾಚಾರ್ಯ"ರೆನ್ನುವುದು ಹೊಸ ಹಾದಿಯನ್ನು ತುಳಿದರೂ ಹಳೆಯದರಲ್ಲಿರುವ ದೋಷಗಳನ್ನು ವರ್ಜಿಸಿ ಪಂಡಿತ ಪಾಮರಿಗೆ ಅರ್ಥವಾಗುವಂಥಾ ಜನ ಸಾಹಿತ್ಯವನ್ನು ರಚಿಸಿ ಹಿಂದಿನ ಇಂದಿನ ಮತ್ತು ಮುಂದಿನವರಿಂದಲೂ ಶ್ಲಾಘ್ಯವೆನಿಸುವ ಅನುಕರಣೀಯವಾದ ಒಂದು ಮಾರ್ಗವನ್ನು ತೋರಿಸಿಕೊಟ್ಟರಲ್ಲದೆ, ಕನ್ನಡದ ಶಬ್ದ ಭಂಡಾರವನ್ನು ಶಬ್ದ ಸಮುದ್ರ ತಳದಿಂದ ಹೆಕ್ಕಿ ಕೆತ್ತಿದ ಹೊಸ ಹೊಸ ಶಬ್ದರತ್ನಗಳಿಂದ ತುಂಬಿಸಿದರು. ಇದು ಶ್ರೀಯುತ ಗೋವಿಂದ ಪೈಯವರು ಭಾಷಾ ವಿಸ್ತಾರ ಮತ್ತು ಬೆಳವಣಿಗೆಯ ದೃಷ್ಟಿಯಿಂದ ಅನುಸರಿಸಿ ಅನುಷ್ಠಾನಕ್ಕೆ ತಂದ ವಿಚಾರ ಮಾರ್ಗ.

ಶ್ರೀಯುತರು ಹೊಸ ಕಾವ್ಯಗಳನ್ನು ಬರೆದರು. ಹೊಸ ಮಾರ್ಗವನ್ನು ಶೋಧಿಸಿದರು. ಕನ್ನಡ ಭಾಷೆಯ ಮೂಲ ಮತ್ತು ಆಳಗಳನ್ನು ಕಂಡುಹಿಡಿಯಲು ಮೊತ್ತಮೊದಲಾಗಿ ಶ್ರಮಿಸಿದವರು. ಇವೆಲ್ಲಾ ಪ್ರಯತ್ನಗಳಲ್ಲಿ ಅಡಕವಾಗಿರುವ ಒಂದೇ ಒಂದು ಉದ್ದೇಶವೆಂದರೆ ಸತ್ಯಶೋಧನೆ" ಸತ್ಯವನ್ನು ಬಹುಮುಖವಾಗಿ ಅರಿತುಕೊಂಡವರು ಶ್ರೀ ಗೋವಿಂದಪೈಯವರು. ಅವರ ಖಂಡ ಕಾವ್ಯ (ನಾಟಕ) "ಹೆಬ್ಬೆರಳು" ವಿನ ಕಥಾವಸ್ತುವು ವೇದವ್ಯಾಸರ ಸಂಸ್ಕೃತ ಭಾರತದಿಂದಾಯ್ದುದಾದರೂ ಆ ನಾಟಕವನ್ನು ಸಂಪೂರ್ಣ ವಾಗಿ ಅವಲೋಕಿಸಿದರೆ ಆರ್ಯ ಮತ್ತು ಅನಾರ್ಯ ಜನಾಂಗಗಳೊಳಗೆ ಆಗಿನ ಕಾಲದಲ್ಲಿ ಏನು ತಾರತಮ್ಯವಿತ್ತು; ಅನಾರ್ಯ ಜನಾಂಗಗಳಾದ ದ್ರಾವಿಡರು, ಕಣ್ಣರು, ನಾಟರು, ಗೋಪರು ಯದು, ಭಿಲ್ಲ ತುರ್ವಸುಗಳನ್ನು ಆರ್ಯರು ಹೇಗೆ ನಡೆಯಿಸಿಕೊಳ್ಳು ತ್ತಿದ್ದರು? ಅನಾರ್ಯರು ನಾಗರಿಕರೋ ಅನಾಗರಿಕರೋ ಎಂಬ ಬಗ್ಗೆ ಉತ್ತಮ ವಿಶ್ಲೇಷಣಾತ್ಮಕ ವಿಮರ್ಶೆ ಮತ್ತು ಸತ್ಯಸ್ಥಿತಿಯ ಉಲ್ಲೇಖಗಳು ನಾಟಕದಾದ್ಯಂತ ಕಂಡುಬರುವುವು. ದ್ರೋಣಾಚಾರ್ಯ ಮತ್ತು ಏಕಲವ್ಯರ ಸಂವಾದದಲ್ಲಿ ಈ ವಿಚಾರಗಳು ಸ್ಪಷ್ಟವಾಗಿ ಗೋಚರಿಸುವುವು. ಇತ್ತ ನೋಡಿರಿ.

ಏಕಲವ್ಯ (ಪ್ರವೇಶಿಸಿ)

ಗುರುದೇವ, ಪೊಡಮಡುವೆ ತಮ್ಮಡಿಗೆ.
(ಬಿಲ್ಲಂಬುಗಳನ್ನು ದ್ರೋಣಾಚಾರ್ಯನ ಕಾಲಬಳಿಯಲ್ಲಿ ಮಡಗಿ ಮೈಚಾಚುವನು.)

ದ್ರೋಣ

ಮಂಗಲಾನಿಭವಂತು!

ಏಕಲವ್ಯ (ಎದ್ದು ಕೆಯ್ಮುಟ್ಟಿ ನಿಂತು)

ಏನಪ್ಪಣೆಯೊ ದೇವ ನನ್ನ ಬೇಡಿಕೆಗೆ?

ದ್ರೋಣ

ಇದೋ
ನೀಭಿಲ್ಲಶಾವಕಂ, ನೀನನಾರ್ಯಕಿಶೋರ,
ನಿನಗೆ ಪಂಚಮವೇದವಂ ಕಲಿಸಲಾಸ!

ಏಕಲವ್ಯ (ತಬ್ಬಿಬ್ಬಾಗಿ)

ಆ: ಅಂತೆನೆ ಅನಾರ್ಯರು ಮನುಷ್ಯರಲ್ಲವೇ ಜೀಯ?

ದ್ರೋಣ

ಮನುಜರವರ್ಯೆಸೆ ಖಗಗಳಲಿ ತಾರ್ಕ್ಷ್ಯ-ಧ್ವಾಂಕ್ಷವೆಂತು
ಮೃಗಗಳಲಿ ಶಾರ್ದೂಲ-ಮಾರ್ಜಾಲವೆಂತಂತೆ
ಆರ್ಯರನಾರ್ಯರತಿ ಭಿನ್ನರಹರು. ಖಗ
ರಾಜನೇಂ ಕಲಿಸುವನೆ ವಾಯಸಕೆ ಪಕ್ಷವಂ
ಕೊಡಹದೋಲಾಡೆ? ವ್ಯಾಘ್ರಂ ಬಿಡಾಲಕೆ ತನ್ನ
ಲಂಘನವ ಕಲಿಸುವುದೆ? ನಿನ್ನುದ್ದ ಮಿಕ್ಕುನೀ
ನೆಗೆಯಬೇಡವೋ ಕಂದ!

(ಏಕಲವ್ಯನು ಸ್ತಬ್ಧನಾಗುವನು)

ಗೊಂದಳ

ಭಿಲ್ಲಗೆ ಧನುರ್ವಿಧ್ಯೆ
ಕಲಿಸಲಾಚಾರ್ಯ ತಪ್ಪೇನಂತೆ?

ದ್ರೋಣ

ಮೊದಲೊಳಾಂ
ಬ್ರಾಹ್ಮಣಂ, ವರ್ಣಾಧರ್ಮವನಧ: ಪಾತಿಸಲೆ?
ಶಾಸ್ತ್ರವಂ ಗಂಗೆಗೆಸೆಯಲೆ? ದ್ವಿಜರ ವಿದ್ಯೆಯಂ
ಭಿಲ್ಲಗೊರೆಯಲೆ? ಮೇಲೆ ಕ್ಷತ್ರೋಪಜೀವಿಯಾಂ,
ವರ್ಣಸಂಕರವಾಗದಂತೆ ಪಾಲಿಪರಾಜ
ನೀತಿಗಾಂ ವ್ಯಾಘಾತ ಒಡ್ಡಲೆ? ವೃಥಾರಾಜ
ರವಕರುಣೆ ಸಂಪಾದಿಸಲೆ? ಭಿಲ್ಲರಿಗೆ ವಿಪ್ರ
ರಾಚಾರ್ಯತೆಯ ಸಮಾಜವೆ ಸಂಪ್ರದಾ
ಯವೆ ನಿಷೇಧಿಸುತ್ತಿರಲಾ ಸಮಾಜಾಂಗವಾದ
ನಾನುಲ್ಲಂಘಿಸಲೆ? ಸಾಕು ಸಾಕು. ಮಾ. ಮಾ, ಒಲ್ಲೆ

ಏಕಲವ್ಯ
(ಪ್ರಯತ್ನಪೂರ್ವಕವಾಗಿ)

ಬೆಂಕಿ ತಳೆಯದೆ ಹೊಗೆಯ? ಬೆಟ್ಟ ತಾಳದೆ ಹುಲ್ಲ?
ಗಂಗೆಗೆರದಾ ಹೆಂಡ ಗಂಗೆಯಾಗದೆ ದೇವ?

ದ್ರೋಣ
(ವಿಸ್ಮಯದಿಂದ ತನ್ನಲ್ಲೆ)

ಬಲು ತೀಕ್ಷ್ಣಮತಿ ಈತನರಣಿಯಿಂ ಸಿಡಿತರುವ
ವಿಸ್ಫುಲಿಂಗಗಳಂತೆ ಎದ್ದುಬರುತಿವೆ ಮಾತು

(ಪ್ರಕಾಶವಾಗಿ)

ನಿನ್ನಬಾಲಪ್ರೌಢಿಗಮಮ ಮೆಚ್ಚಿದೆನಗ್ನಿ
ಧೂಮದಿಂದಾರುತಿದೆ, ಪರ್ವತಂ ತೃಣದಿಂದ
ದಾವಕೇಡಾಗುತಿದೆ, ಗಂಗೆಯಿಂದೆಸಗಿದಾಮದಿರೆಯಂ
ಪಾನಿಪರೆ? ಭಿಲ್ಲರಿಗೆ ಆರ್ಯರಾ ಸಂಗತಿಯೆ?
ಅಲಮಲಂ ಕೂಸಾಡಿಸದಿರೆನ್ನ.

ಈ ಸಂಭಾಷಣೆಯಲ್ಲಿ ಅನಾರ್ಯನಾದ ಭಿಲ್ಲ ಬಾಲಕ ಏಕಲವ್ಯನ ಮಾತಿನಲ್ಲಿ ಎಂತಹ ನಾಗರಿಕತನ ಮತ್ತು ಪ್ರತ್ಯುತ್ಪನ್ನಮತಿತ್ವವು ಗೋಚರಿಸುವುದು. ಹರಿಶ್ಚಂದ್ರ ಕಾವ್ಯದ ಹೊಲತಿಯರು ಮತ್ತು ಪ್ರಭು ಹರಿಶ್ಚಂದ್ರರೊಳಗೆ ನಡೆದ ವಾಗ್ವಾದಕ್ಕೆ ಸರಿಮಿಗಿಲೆನಿಸುವಂತೆ ಹೆಣೆಯಲಾಗಿದೆ ಈ ಸಂಭಾಷಣೆ. ಆರ್ಯರು ಬಹಳ ಕಟ್ಟುನಿಟ್ಟಿನ ಸ್ವಭಾವದವರು ಮತ್ತು ತಾವು ಅತಿ ಶ್ರೇಷ್ಠವರ್ಗದ ಮಾನವರು ಎಂದು ತಿಳಿದುಕೊಂಡವರು ಎಂಬ ಭಾಗವು ದ್ರೋಣಾಚಾರ್ಯನ ಮಾತುಗಳಿಂದ ಹೊರ ಹೊಮ್ಮುವವು. ಭಿಲ್ಲನಾದ ಏಕಲವ್ಯನು ಆರ್ಯಭಿನ್ನಸಂಸ್ಕೃತಿಯುಳ್ಳವನಾಗಿದ್ದು. ಅನಾರ್ಯರಾದವರೂ ಮನೋಬುದ್ಧಿ ಪ್ರಭಾವಗಳಲ್ಲಿ ಆರ್ಯರಿಗಿಂತ ಕಡಿಮೆಯಾದವರಲ್ಲವೆಂಬುದನ್ನು ಪ್ರತ್ಯಕ್ಷಗೊಳಿಸುತ್ತದೆ. ಈ ವಿಚಾರ ಸರಣಿಯು ಸತ್ಯಪಥದಲ್ಲಿ ಸತ್ಯಾನ್ವೇಷಣೆಗಾಗಿ ಸಾಗಿದೆ ಎಂಬುದನ್ನು ಈ ನಂತರ ನಡೆದ ಸಂಶೋಧನೆಗಳು, ಅಂದರೆ ಕರ್ನಾಟಕ ಇತಿಹಾಸ, ಸಂಸ್ಕೃತಿ ಸಂಶೋಧನಾಚಾರ್ಯ ಶ್ರೀ ಶಂ.ಭಾ. ಜೋಶಿಯವರ "ಕನ್ನಡದ ನೆಲೆ" "ಶಿವರಹಸ್ಯ." "ಕಂನಾಡ ಕತೆ" "ಕರ್ನಾಟಕದ ವೀರ ಕ್ಷತ್ರಿಯರು" "ಕಂನುಡಿಯ ಹುಟ್ಟು" ಮೊದಲಾದ ಗ್ರಂಥಗಳಲ್ಲಿ ಪ್ರಕಟಿಸಲ್ಪಟ್ಟಿರುವ ಐತಿಹಾಸಿಕ ಸತ್ಯಸಂಶೋಧನೆಗಳಿಗೆ ನಾಂದಿಯಲ್ಲವೇ? ಆ ಸಿರಿವಂತ ಬೆಳೆಯ ಬೀಜಾಂಕುರವಲ್ಲವೆ? ಶ್ರೀಯುತ ಗೋವಿಂದ ಪೈಯವರ ಸಂಶೋಧನಾತ್ಮಕ ಸಾಮರ್ಥ್ಯವನ್ನು ಉದಾಹರಿಸುತ್ತಾ ಹೋದರೆ ಅದು ಅನಂತವಾಗುವುದು. ಆ ಭಯದಿಂದ ಅದನ್ನು ಇಲ್ಲಿಯೇ ನಿಲ್ಲಿಸಿ, ಶ್ರೀಯವರು ಕಾವ್ಯರಚನೆಯಲ್ಲಿ ಅನುಸರಿಸಿದ ಮತ್ತು ಅವರ ವಿಚಾರ ಸರಣಿಯನ್ನೂ ಅವರ ವಿದ್ವತ್ತು. ಪ್ರತಿಭೆ, ವಾಸ್ತವಿಕತೆಗಳನ್ನಷ್ಟೇ ಪ್ರತಿಪಾದಿಸಿರುತ್ತೇನೆ.

ಇನ್ನು ಕೊಂಚ ಮುಂದಕ್ಕೆ ಹೋಗಿ "ಹೆಬ್ಬೆರಳು" ನಾಟಕದಲ್ಲಿ ಶ್ರೀಮಾನ್ ಗೋವಿಂದ ಪೈಗಳು ಭಾರತದೇಶದಲ್ಲಿ ಪ್ರಕೃತ ಆರ್ಯರೇ ಅಥವಾ ದ್ರಾವಿಡರೇ ಎಂಬ ಪ್ರತ್ಯೆಪ್ರತ್ಯೇಕ ಜನಾಂಗಗಳಿರುವುದಿಲ್ಲ. ಮತ್ತು ಇರಲು ಶಕ್ಯವಿಲ್ಲ ಎಂಬುದನ್ನು ಸ್ಪಷ್ಟವಾಗಿ ಅಂದೇ ತಿಳಿದು ಕೊಂಡ "ಏಕಲವ್ಯನ ತಂದೆ ಹಿರಣ್ಯಧನುವಿನ ಬಾಯಿಂದ ಬಂದ ಉದ್ವೇಗಪೂರ್ಣ ವಾಕ್ಯಗಳಿಗೆ ಪ್ರತ್ಯು

ತ್ತರವಾಗಿ ದ್ರೋಣಾಚಾರ್ಯರು ಕೊಟ್ಟ ಉತ್ತರ ರೂಪದಲ್ಲಿ ನುಡಿಸಿದ್ದಾರೆ:–

"ಏಕಲವ್ಯನು ತನ್ನ ಬಲಗೈ ಹೆಬ್ಬೆರಳನ್ನು ಕೊಯ್ದು ಗುರು ದ್ರೋಣಾಚಾರ್ಯರ ಪಾದದಡಿಯಲ್ಲಿ ಸಮರ್ಪಿಸಿ ಮೂರ್ಛಾಗತನಾಗಿರುತ್ತಾನೆ. ಆತನ ತಂದೆ ಹಿರಣ್ಯಧನುವು ಬಹಳ ದು:ಖಾರ್ತನಾಗಿ; ತನ್ನನ್ನು ಶಪಿಸೆಂದು ಕೇಳಿಕೊಂಡು ದ್ರೋಣರಿಗೆ ಪ್ರತಿಯಾಗಿ ಹೀಗೆನ್ನುವನು.

ಹಿರಣ್ಯಧನು (ದ್ರೋಣನನ್ನು ಕುರಿತು)
ಸಪಿಸಲಾನೆಲ್ಲಿ? ಪಾಪಂಗೊಳುವ ತಾವೆಲ್ಲಿ?
ತಮ್ಮ ಶಿಷ್ಯರಿಗಿವಂ ಸರಿಯಹನೋ? ಮಿಗಿಲಹನೋ?
ಎಂದೆ ಕರುಬಿಂದ ಬೆರಳಂ ಕೇಳ್ದಿರೆಂದೆನ್ನ
ಗೋಣಗುತಿಹ ಮನವ ಮಣಿಸಲಾಸ! ಯಾವೊಂದು ಕೆಲಸವನ್ನೆಸಗಲೆಸಗಿದ ಕೆಡುಕೆ ಕೊನೆಗದಕೆ
ಮುಳುವಹುದು! ಇದರೊಳಿಬ್ಬಗೆ ಎಡೆಯ!

ಎಲವೂ ಮುಗಿದು ತುಸು ಹೋತ್ತಿನ ನಂತರ ದ್ರೋಣಾಚಾರ್ಯರು ಅರ್ಜುನನೊಡನೆ ಏಕಾಂತವಾಗಿ ಹೀಗೆನ್ನುವರು

ದ್ರೋಣ
ಯಾವೊಂದು ಕೆಲಸವನ್ನೆಸಗಲೆಸಗಿದ ಕೆಡುಕೆ
ಕೊನೆಗದಕೆ ಮುಳುವೆಂದ ಭಿಲ್ಲರಾಣ್ಮನ ಮಾತು
ಕೇಳಿದೆಯ? ಅರ್ಥವಾಯಿತೆ ಪಾರ್ಥ?

ಅರ್ಜುನ
ಕೇಳ್ದೆ ಗುರು
ದೇವ, ನನಗರ್ಥವಾಗಿಲ್ಲ,

ದ್ರೋಣ
ಕೇಳಂತಾಗೆ
ಕೌಂತೇಯ, ಏಕಲವ್ಯಂ ಯಾವ ಕುರುಕುಲದ
ಕುವರರಿಗೆ ಮಿಗಿಲೆನಿಸಿ ಅವರ ವಿದ್ಯಾಭ್ಯುದಯ
ಕವಘಾತವಹನೆಂದು ಬಗೆದು ನಾನವನ ಬೆರ
ಳೀಸಿದೆನೋ, ಆ ಕುರುಕುಲದ ನಾಶಕದೆ ಸಂಚ
ಕಾರವೆಂದವನಿಂತು ಸೂಚಿಸಿದ ನೈಸೆ? ಕೇಳಾ
ರ್ಯರಿನ್ನು ಮನಾರ್ಯರಂ ತಮ್ಮೊಳೊಳ
ಕೊಳ್ಳದಿರಲವನ ಮಾತೆ ಈಡೇರಲಿದೆ! ಅಕಟಕಟ
ಭಾರತಂ ನಿ:ಕ್ಷತ್ರವಾಗಲಿದೆ

ಗೊಂದಳದವರು
ಆರ್ಯರಿನ್ನಾದೊಡಮನಾರ್ಯರನ್ನೊಳಕೈಸಿ
ಇಬ್ಬರೊಂದಿಗೆ ಸಿತಾಸಿತೆಯಂತೆ ಹರಿಯಲೆಮ
ಏಕಲವ್ಯನ ಬೆರಳ ಬೆಲೆ ಬಂತು! ಅಂತಹುದೆ?
ಆತನೊಸೆದೆಸಗಿದಾತ್ಮಾರ್ಪಣಂ ಸಫಲಿಪುದೆ?
ನೋಡಲಿದೆ! ನೋಡಲಿದೆ! ಜಲದಿ ಮಿೂನಿನ ಕಾಲ
ಬಹಭವಿಷ್ಯದ ಕಾಲ ಕಾಣುವಂತೆಮಗಿಲ್ಲ!

ಹೀಗೆ ಒಂದೆಡೆ ಭಾರತದೇಶದಲ್ಲಿ ಆರ್ಯ ಅನಾರ್ಯ ಸಂಗಮದಿಂದುಂಟಾದ ಜನಾಂಗವೇ ಬಾಳುತ್ತಲಿದೆ ಎಂಬುದಾಗಿ ಪ್ರತಿಪಾದಿಸಿದ್ದಲ್ಲದೆ ಸಮಗ್ರ ಭಾರತದಲ್ಲಿ ರಾಷ್ಟ್ರೀಯ ಭಾವೈಕ್ಯತೆಯನ್ನು ಪ್ರಚೋದಿಸಿರುತ್ತಾರೆ, ಶ್ರೀಮಾನ್ ಗುರುವರ್ಯ ಗೋವಿಂದ ಪೈಗಳು.

ಸತ್ಯಸಂಶೋಧನೆಯ ಮಹಾತಪಸ್ಸಿನಲ್ಲಿ ಶ್ರೀ ಗೋವಿಂದ ಪೈಗಳು ಅಗಾಧ ಚಾರಿತ್ರಿಕ ಮತ್ತು ಭೌಗೋಲಿಕ ಸಂಶೋಧನೆಗಳನ್ನು ನಡೆಯಿಸಿ ಅಸಂಖ್ಯಾತ ಪ್ರಬಂಧಗಳನ್ನು ಪ್ರಕಟಿಸಿರುವರು. ಅಂತಹವುಗಳಲ್ಲೊಂದು 31ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಾಸರಗೋಡು ಇವರಿಂದ "ತೆಂಕನಾಡು" ಪುಸ್ತಕದಲ್ಲಿಯ "ತುಳುನಾಡು" ಎಂಬ ಬರೆಹ. ಈ ಪ್ರಬಂಧದಲ್ಲಿ ಮತ್ತು ಇಂತಹದೇ ಬೇರೊಂದೆಡೆ ಬರೆದ ಬರೆಹದಲ್ಲಿ "ತುಳು ಮತ್ತು ಕನ್ನಡ" ಶಬ್ದದ ಉತ್ಪತ್ತಿಯ ಬಗ್ಗೆ ಹೆಚ್ಚು ಕಡಿಮೆ ಯೋಗ್ಯವಾದ ಒಂದು ಚರ್ಚೆಯನ್ನು ಮಾಡಿದ್ದರೂ ನಿರ್ಣಯವು ಅವರಿಗೇ ತೃಪ್ತಿಯಿಲ್ಲದಿದ್ದುದರಿಂದ ಮುಂದೆ ಶ್ರೀಯುತ ಶಂ.ಭಾ.ಜೋಶಿಯವರು ತನ್ನ "ಕನ್ನಡದ ನೆಲೆ" "ಕಂನಾಡ ಕತೆ" ಮುಂತಾದ ಪುಸ್ತಕಗಳಲ್ಲಿ ಮಂಡಿಸಿದ ವಾದಗಳನ್ನು ಸಂಪೂರ್ಣ ಒಪ್ಪಿ ಅವರ ಪ್ರಯತ್ನಗಳನ್ನು

ಮನಸಾರೆ ಪ್ರಶಂಸಿಸಿ ಪತ್ರಗಳನ್ನು ಬರೆದರು. ಸ್ವಲ್ಪ ತಪ್ಪಿದರೂ ತಪ್ಪೆಂದು ತಿಳಿದ ಕೂಡಲೇ ಅದನ್ನು ಒಪ್ಪಿಕೊಳ್ಳುವ ಮಹಾ ಗುಣವು ಮಹಾತ್ಮರಿಗಲ್ಲದೆ ಇತರರಿಗೆ ಸಿದ್ಧಿಸುವುದೇ?

ತನಗೆ ಸತ್ಯ ಮತ್ತು ಒಪ್ಪುಗೆಯದೆಂದು ಮನಗಂಡರೂ, ಬೇರೆ ಯಾರಾದರೂ ದುರಾಗ್ರಹದಿಂದ ಅದು ಸರಿಯಲ್ಲ ಅದು ಹಾಗಲ್ಲ, ಹೀಗೆಯೇ ಇರುತ್ತದೆ ಎಂದು ಪ್ರತಿಪಾದಿಸಿದರೂ ಶ್ರೀಯುತ ಗೋವಿಂದ ಪೈಗಳು ಅದನ್ನು ಖಂಡ ತುಂಡವಾಗಿ ಖಂಡಿಸಿ ಪರಸ್ಪರ ಭಾವೋದ್ರೇಕ ಮತ್ತು ತಿರಸ್ಕಾರಭಾವಗಳಿಗೆ ಅವಕಾಶವುಂಟುಮಾಡಿಕೊಡುವುದೇ ಇಲ್ಲ. ಬದಲಾಗಿ "ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್" ಎಂಬ ತತ್ವಕ್ಕಂಟಿಕೊಂಡು ತಮ್ಮದೇ ವಿಶಿಷ್ಟ ರೀತಿಯಲ್ಲಿ ತನ್ನ ವಿಚಾರಗಳನ್ನು ಮಂಡಿಸು ವರು. "ಸತ್ಯಮೇವ ಜಯತೇ ನಾನೃತಂ" ಎಂಬ ವಾಕ್ಯದ ಮೇಲೆ ಅಷ್ಟಿತ್ತು ಅವರ ವಿಶ್ವಾಸ.

ಶ್ರೀಮಾನ್ ಶಿವರಾಮ ಕಾರಂತರು ಮತ್ತು ಅವರ ಗೆಳೆಯರು "ಪಾರ್ತಿ ಸುಬ್ಬ"ನನ್ನು ಕುಂಬಳೆಯಿಂದ ಕುಂದಾಪುರ ಕ್ಕೆಳೆದು "ಅಜಪುರ" (ಬ್ರಹ್ಮಾವರದ ಸುಬ್ಬನನ್ನಾಗಿಸಿದಾಗ, ಕಾಸರಗೋಡು ಅದರಲ್ಲಿಯೂ ಮಂಜೇಶ್ವರ ಮತ್ತು ಕುಂಬಳೆ ಫಿರ್ಕಾ ಗಳು ಕೇರಳಕ್ಕೆ ಸೇರಿದುದನ್ನು ವಿರೋಧಿಸಿ ಲೇಖನ ಸಂನ್ಯಾಸವನ್ನು ಆಚರಿಸಿದ ಶ್ರೀ ಪೈಗಳು ಈ ಸಂದರ್ಭದಲ್ಲಿ ಬಹಳ ಮೃದು ವಾಗಿ ಮತ್ತು ನಯವಾಗಿ "ನವಭಾರತ" 1959ನೇ ಇಸವಿ ಅಗೋಸ್ತು 15ರ ಸಂಚಿಕೆಯಲ್ಲಿ "ಪಾರ್ತಿ ಸುಬ್ಬನ ಹುಟ್ಟೂರು ಯಾವುದು? ಎಂಬ ಚಿಕ್ಕ ಲೇಖನವನ್ನು ಬರೆದು "ಕುಂಬಳೆಯ ದೇಶಮಂಗಲದ ಅಜಾವರ ಎಂಬ ಗ್ರಾಮದಲ್ಲಿ ಜನ್ಮಿಸಿದವನು. "ಅಜ ಪುರ ಸುಬ್ಬನು ಮತ್ತು ಅವನೇ "ಪಾರ್ತಿಸುಬ್ಬನು ಎಂಬುದಾಗಿ ಸಪ್ರಮಾಣವಾಗಿ ಸಯುಕ್ತಿಕವಾಗಿ ಸಿದ್ಧಿಸಿರುವರು. ಇದರಲ್ಲಿ ಪಾರ್ತಿ ಸುಬ್ಬನು ಅಜಪುರ (ಅಜಾವರ)ದವನು ಮತ್ತು ಕುಂಬಳೆಯ ನೆರೆಯ ದೇಶಮಂಗಲದಿಂದ ಮೂರು ಮೈಲುಗಳ ಅಂತರದಲ್ಲಿರುವ "ಅಜಾವರ" ಗ್ರಾಮದವ ಎಂಬುದನ್ನು ಅನೇಕ ಸಾಕ್ಷ್ಯ ಮತ್ತು ಗ್ರಂಥಗಳ ಆಧಾರದಿಂದ ನಿರ್ದುಷ್ಟವಾದ ತರ್ಕ ಸರಣಿಯಿಂದ ಋಜು ಗೊಳಿಸಿರುವರು. ಆದರೂ ಯಾವುದೇ ತರದ ವೈಯಕ್ತಿಕ ತಪ್ಪು ತಿಳುವಳಿಕೆ ದುರಾಗ್ರಹ ಅಪಪ್ರಚಾರಗಳಿಗೆಡೆಯುಂಟಾಗದಂತೆ ತನ್ನ ಲೇಖವನ್ನು ಸಿದ್ಧಗೊಳಿಸಿರುವರು. ಬಹುಶಃ ಸಂಶೋಧನಾತ್ಮಕ ಲೇಖಗಳಲ್ಲಿ ಇದೇ ಅವರ ಕೊನೆಯ ಲೇಖನವಾಗಿರುತ್ತದೆ. ಪರಸ್ಪರ ಘರ್ಷಣೆ ತಿಕ್ಕಾಟಗಳಿಗೆಡೆಯಾಗದಂತೆ ಸತ್ಯದ ಬೆನ್ನು ಹಿಡಿಯುವುದೇ ಶ್ರೀಯುತರ ಹುಟ್ಟುಗುಣ.

ಆದುದರಿಂದಸತ್ಯ ಸಂಶೋಧನೆ, ಸ್ಥಿತಪ್ರಜ್ಞತ್ವ, ಪರಸ್ಪರ ಪ್ರೇಮಭಾವ ಸಂವರ್ಧನೆ, ಕಾಲಧರ್ಮಕ್ಕನುಗುಣವಾಗಿ ಪುರೋ ಗಾಮಿತ್ವ, ಪ್ರಗತಿಪಥಾನುಸರಣ, ತತ್ತ್ವದರ್ಶನ, ಸತ್ಯಸಂಧತೆಗಳೇ ನಮ್ಮ ಗುರಿಗಮ್ಯಗಳಾಗಿ ವಿಚಾರಗಳನ್ನು ಆಚಾರದಲ್ಲಿ ತರುವ ಶೀಲವಂತರಾಗಿ ನಾವು ಬಾಳಿ ಪೂಜ್ಯ ರಾಷ್ಟ್ರ ಕವಿ ಗೋವಿಂದ ಪೈಗಳಿಗೆ ಒಂದು ಅಪ್ರತಿಮ ಅಪೂರ್ವ ಅದ್ಭುತವಾದ ಸ್ಮಾರಕ ವನ್ನು ರಚಿಸುವರೆ ಬದ್ಧಕಂಕಣರಾಗೋಣ.

"ಸಿರಿಗನ್ನಡಂಗೆಲ್ಗೆ"



# ತಮ್ಮ ತಾಯ್ನುಡಿಯನ್ನು ಕುರಿತು

ಡಾ। ಬಿ. ಎನ್. ಎನ್. ಶಾನುಭಾಗ

ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರ ತಾಯ್ನುಡಿಯು ಕನ್ನಡವಾಗಿರದೇ ಕೊಂಕಣಿಯಾಗಿತ್ತೆಂದು ಹೇಳಿದರೆ ಅನೇಕರಿಗೆ ಆಶ್ಚರ್ಯವಾಗಬಹುದು. ತಾಯ್ನುಡಿ ಕನ್ನಡವಾಗಿದ್ದ ಅನೇಕ ಕನ್ನಡ ಕವಿಗಳನ್ನು ಮೀರಿಸಿ ಅವರು ಕನ್ನಡದಲ್ಲಿ ಕವನಿಸಿ "ರಾಷ್ಟ್ರಕವಿ" ಎಂಬ ಬಿರುದನ್ನು ಪಡೆದರು. ತಾವಿದ್ದ ಆವರಣದಲ್ಲೇ ಹೊಂದಿಕೊಂಡು ಹೋಗಿ ತಮ್ಮ ಪ್ರತಿಭೆಯ ಬೆಳಕನ್ನು ಸುತ್ತಲೂ ಹರಡಿಸುವ ಗುಣವನ್ನು ಕೊಂಕಣಿಗರು ಹುಟ್ಟಿನಿಂದಲೇ ಪಡೆದು ಬಂದಿದ್ದಾರೆಂಬುದಕ್ಕೆ ಅನೇಕರು ಸಾಕ್ಷಿಯಾಗಿದ್ದಾರೆ. ತಾಯ್ನುಡಿ ಕೊಂಕಣಿಯಾದರೂ ಕನ್ನಡದಲ್ಲಿ ಕಾವ್ಯ ರಚನೆ ಮಾಡಿ "ರಾಷ್ಟ್ರ ಕವಿ" ಎಂಬ ಮಾನನಾಮವನ್ನು ಮಂಜೇಶ್ವರ ಗೋವಿಂದ ಪೈಯವರು ಗಳಿಸಿದ್ದರೆ ಮರಾಠಿಯಲ್ಲಿ ಕಾವ್ಯಗಳನ್ನು ರಚಿಸಿದ ಶ್ರೀ ಬಾಕಿಬಾಬಾ ಬೋರಕರರವರು ಎರಡು ವರ್ಷಗಳ ಕೆಳಗೆ ಮಹಾರಾಷ್ಟ್ರ ಸರಕಾರದಿಂದ ಉತ್ತಮ ಕವಿಯೆಂದು ನಿರ್ಧರಿಸಲ್ಪಟ್ಟು ಪಾರಿತೋಷಕವನ್ನು ಪಡೆದಿದ್ದಾರೆ.

"ವಿದ್ವತ್ವಂ ಚ ನೃಪತ್ವಂ ಚ ನೈವ ತುಲ್ಯಂ ಕದಾಚನ।
ಸ್ವದೇಶೀ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ॥"

ಎಂಬ ಮಾತಿನ ಯಥಾರ್ಥ ಕಲ್ಪನೆ ಬರಬೇಕಾದರೆ ಕೊಂಕಣಿಗರ ಜೀವನ ಯಾತ್ರೆಯನ್ನು ಅಭ್ಯಸಿಸಬಹುದು.

1950ನೆಯ ಇಸವಿಯ ಡಿಸೆಂಬರ್ ತಿಂಗಳಲ್ಲಿ ಮುಂಬಯಿಯೊಳಗೆ ಜರುಗಿದ 38ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ರಾಷ್ಟ್ರಕವಿಗಳನ್ನು ಅಧ್ಯಕ್ಷರನ್ನಾಗಿ ಮಾಡಿ ಕನ್ನಡ ನಾಡು ಅವರನ್ನು ಗೌರವಿಸಿತು. ಈ ಗೌರವದ ಸ್ಥಾನಕ್ಕೆ ಅವರು 1940ರಲ್ಲೇ ಯೋಗ್ಯತೆಯನ್ನು ಪಡೆದಿದ್ದರು. ಆಗ ಅ.ನ.ಕೃಷ್ಣರಾಯರೂ ವಿ. ಸೀತಾರಾಮಯ್ಯನವರೂ ಮಂಜೇಶ್ವರದಲ್ಲಿ ಪೈಗಳವರನ್ನು ಭೇಟಿಯಾದಾಗ ಆ ವರುಷದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಬೇಕಾಗಿ ಅವರನ್ನು ಕೇಳಿಕೊಂಡಿದ್ದರು. ಆದರೆ ತಾಯ್ನಾಡು ಪರದಾಸ್ಯದಲ್ಲಿ ತೊಳಲಾಡುತ್ತಿದ್ದಾಗ ತಮಗೆ ಯಾವುದೇ ಗೌರವದ ಸ್ಥಾನದ ಬಯಕೆಯಿಲ್ಲೆಂದು ಗೋವಿಂದ ಪೈಯವರು ಸ್ಪಷ್ಟವಾಗಿ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರು. ಸ್ವಾತಂತ್ರ್ಯ ಬಂದ ಬಳಿಕ ಆ ಸ್ಥಾನವನ್ನು ರಾಷ್ಟ್ರಕವಿಗಳಿಗೆ ಕೊಡಲೇಬೇಕೆಂದು ಕನ್ನಡ ನಾಡು ನಿರ್ಧರಿಸಿದಂತೆ 38ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿತು.

ಮಂಜೇಶ್ವರ ಗೋವಿಂದ ಪೈಯವರು ತಮ್ಮ ತಾಯ್ನುಡಿಯಾದ ಕೊಂಕಣಿಯ ಬಗ್ಗೆ ಏನು ಹೇಳುವರೆಂದು ತವಕಪಡುವವರಿಗೆ ಈ ಅಧ್ಯಕ್ಷಸ್ಥಾನದಿಂದ ಅವರು ಮಾಡಿದ ಭಾಷಣದಿಂದ ನೋವುಂಟಾದಂತೆ ತೋರುತ್ತದೆ. ತಮ್ಮ ಭಾಷಣದಲ್ಲಿ ಅವರು ತಮ್ಮ ಹೆತ್ತ ತಾಯಿಯಾದ ಕೊಂಕಣಿಯ ಮೊಲೆಯಲ್ಲಿ ಹಾಲಿಲ್ಲವಾದ್ದರಿಂದ ತಾವು ಕನ್ನಡದಾಯಿಯ ಮೊಲೆಯ ಹಾಲುಂಡು ಬೆಳೆದೆನೆಂದು ಉದ್ಗರಿಸಿದರು. ಇದು ಅವರ ಮಟ್ಟಿಗೆ ಸತ್ಯಸಂಗತಿಯಾದರೂ ಸತ್ಯವನ್ನು ಇಷ್ಟು ಕಟುವಾಗಿ ನುಡಿದಿದ್ದರಿಂದ ಅನೇಕ ಕೊಂಕಣಿಗರಿಗೆ ಪೈಯವರ ಮೇಲೆ ಸಿಟ್ಟು ಬಂದಿತ್ತು; ಆ ಸಿಟ್ಟಿನ ಉರಿಯ ಬಾಣವನ್ನು ಅವರು ಪೈಯವರ ಮೇಲೆ ಎಸೆಯಲೂ ಹಿಂಜರೆಯಲಿಲ್ಲ. ಉತ್ತರ ಕನ್ನಡ ಜಿಲ್ಲೆಯ ಕುಮಟೆಯಿಂದ ಅರ್ಧ ಶತಮಾನದಿಂದಲೂ ಹೊರಡುತ್ತಿರುವ ವಾರಪತ್ರಿಕೆಯಾದ "ಕಾನಡಾ ವೃತ್ತ"ದ 23-1-1951ರ ಸಂಚಿಕೆಯಲ್ಲಿ ಪ್ರಕಟವಾದ ಕೆಳಗಿನ ಕೆಲ ನುಡಿಗಳನ್ನು ಇಲ್ಲಿ ಉದಾಹರಿಸಬಹುದು.

"ಕೊಂಕಣಿ ಭಾಷೆಯಲ್ಲಿ ಸಾಹಿತ್ಯವಿರುವದಿಲ್ಲೆಂಬ ದೂರುಂಟು: ಆದರೆ ಆ ಕೊರತೆಯನ್ನು ಮುಂದೊತ್ತುವ ಕೊಂಕಣಿಗರು ನಾಚಿಕೆಪಡಬೇಕು. ಸಾಹಿತ್ಯವು ಮಳೆಯಂತೆ ಮುಗಿಲೊಳಗಿಂದ ಬೀಳುವದಿಲ್ಲ! ಅಥವಾ ಅರಬೀ ಸಮುದ್ರದಾಚೆಯಿಂದ ಹರಿದುಬರುವದಿಲ್ಲ! ಅದನ್ನು ನಾವು ಮನುಷ್ಯರೇ ನಿರ್ಮಿಸಬೇಕು. ಪ್ರತಿಭಾವಂತರು ತಮ್ಮ ಭಾಷೆಯಿಂದ ಬರೆದದ್ದೇ ಸಾಹಿತ್ಯವಾಗುತ್ತದೆ..................ಮೇಧಾವಿಗಳೂ ಪ್ರಾಜ್ಞರೂ ಕೊಂಕಣಿಯಲ್ಲಿ ಬರೆಯಲಾರಂಭಿಸಿದರೆ ಕೊಂಕಣಿ ಸಾಹಿತ್ಯ ರಚನೆಯಾಗಲು ತಡವಾಗುವಂತಿಲ್ಲ. ಆದರೆ ಕೊಂಕಣಿ ಮಾತೆಯ ದುರ್ದೈವದಿಂದ ಆಕೆಯ ಶೂರ-ವೀರ, ಮೇಧಾವಿ ಪ್ರಜ್ಞಾವಂತ ಪುತ್ರರೆಲ್ಲ ಪರಭಾಷೆಗಳ ದತ್ತಕರಾಗಿದ್ದಾರೆ! ಶ್ರೀ ಮಂಜೇಶ್ವರ ಗೋವಿಂದ ಪೈಯವರು ಕೊಂಕಣಿ ಮಾತೆಯ ಉದರದಲ್ಲಿ ಜನಿಸಿದ ಒಂದು ಶ್ರೇಷ್ಠ ರತ್ನದಂತಿದ್ದಾರೆ. ಅವರ ವಿದ್ವತ್ತೆ ಗಾಢವಿದೆ: ಪ್ರತಿಭೆ ಉಜ್ವಲವಿದೆ: ಸಂಶೋಧನ ಚಾತುರ್ಯ ಕೊಂಡಾಡುವಂತಹದಿದೆ. ಇಂತಹ ಪ್ರಗಲ್ಭ ಪ್ರತಿಭಾಶಾಲಿಗಳು ದಿವಂಗತ ಗೋಂಯಬಾಬರಂತೆ ಇಲ್ಲವೆ ಶ್ರೀಮಾನ್ ಪರ್ಕಳ ನಾರಾಯಣ ಪ್ರಭುರವರಂತೆ ಕೊಂಕಣಿ ಸಾಹಿತ್ಯ ನಿರ್ಮಾಣ ಮಾಡುವ ಕೆಲಸ ಕೈಗೊಂಡಿದ್ದರೆ ಕೊಂಕಣಿ ಮಾತೆಯ ಉದ್ಧಾರವಾಗುತ್ತಿತ್ತು. ಅವರ ಕೀರ್ತಿಧ್ವಜವೂ ಎತ್ತರದಲ್ಲಿ ಮೆರೆಯುತ್ತಿತ್ತು. ಆದರೆ ಹೆತ್ತತಾಯಿಯ ಮೊಲೆಯಲ್ಲಿ ಹಾಲಿಲ್ಲೆಂದು ಹೇಳಿ ಶ್ರೀ ಪೈಯವರು ಕನ್ನಡದಾಯಿಯ ಮೊಲೆಯ ಹಾಲುಂಡು ಆಕೆಗೆ ತಮ್ಮನ್ನು ಮಾರಿಕೊಂಡುಬಿಟ್ಟಿದ್ದಾರೆ. ಇದೇ ಕಳೆದ ಡಿಸೆಂಬರ್ ತಿಂಗಳಲ್ಲಿ ಮುಂಬಯಿಯೊಳಗೆ ಸೇರಿದ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷಪೀಠದಿಂದ ಕೊಟ್ಟ ಅವರ ವಿದ್ವತ್ತಾಪ್ರಚುರ ಅಧ್ಯಕ್ಷೀಯ ಭಾಷಣದ ಕೊನೆಗೆ ಅವರು ತಮ್ಮ ತಾಯ್ನುಡಿಯಾದ ಕೊಂಕಣಿ ಮಾತೆಯನ್ನು ತೆಗಳಿ ದತ್ತಕತಾಯಿಯಾದ ಕನ್ನಡಾಂಬೆಯ

ಹೆಗ್ಗಳಿಕೆ ಮಾಡಿದುದನ್ನು ಓದುವಾಗ ಶ್ರೀಮಾನ್ ಪೈರ ಅಭಿಮಾನಿಗಳು ಕೂಡ ತಲೆತಗ್ಗಿಸಬೇಕು. ಕೊಂಕಣಿ ಮಾತೆಯ ಸ್ತನಗಳಲ್ಲಿ ಶ್ರೀ ಪೈ ರಿಗೆ ಹಾಲು ಸಿಗಲಿಲ್ಲವಂತೆ! ಆದರಿಂದ ಅವರು ಹಾಲಿಗಾಗಿ ಕನ್ನಡದಾಯಿಯನ್ನು ಆಶ್ರಯಿಸಬೇಕಾಯಿತಂತೆ! ಕನ್ನಡ ಸಾಹಿತ್ಯವಾದರೂ ಬ್ರಹ್ಮದೇವರ ಸೃಷ್ಟಿಯು ಕಾಲದಿಂದ ಬಂದುದಲ್ಲ; ರನ್ನ-ಪೊನ್ನರ ಕಾಲದಿಂದ ನಿರ್ಮಾಣ ಹೊಂದಿದ್ದು ಆಗಿರುತ್ತದೆ. ಕನ್ನಡದಲ್ಲಿ ಸಾಹಿತ್ಯವಿಲ್ಲೆಂದು ರನ್ನನಾಗಲಿ ಪೊನ್ನನಾಗಲೀ ಬೇರೊಂದು ಭಾಷೆಯ ಮರೆಹೊಕ್ಕಿದ್ದಿಲ್ಲ. ಕನ್ನಡ ತಾಯಿಯ ಮೊಲೆಯಲ್ಲಿ ಹಾಲು ಹುಟ್ಟಿಸಿ ಅವರು ಅವಳನ್ನು ಪಯಸ್ವಿನಿಯನ್ನಾಗಿ ಮಾಡಿದರು, ಎಂಬುದನ್ನು ಸಂಶೋಧನ - ವಿದಗ್ದ ಶ್ರೀ ಪೈಯವರು ಹೇಗೆ ಮರೆತರೋ ತಿಳಿಯದು! ಶ್ರೀ ಪೈಯವರು ನಮ್ಮ-ನಿಮ್ಮಂತೆ ಸಾಮಾನ್ಯರಲ್ಲ. ಹೊಸ ಸೃಷ್ಟಿಯನ್ನು ರಚಿಸಬಲ್ಲ ಕವಿಗಳಿರುತ್ತಾರೆ. ಮದ್ರಾಸ ಸರಕಾರದ (ಕನ್ನಡ) ಆಸ್ಥಾನದ ಕವಿಗಳಿರುತ್ತಾರೆ. ಕವಿತ್ವಕ್ಕೆ. ಕವಿಯ ಕಾವ್ಯರಚನೆಗೆ ಭಾಷೆ ಅದೊಂದು ಬರೇ ಸಾಧನ, ಗೌಣ ಸಾಧನ. ಅವರು ಕೊಂಕಣಿಯಲ್ಲಿ ಸಾಹಿತ್ಯ ರಚಿಸಲು ಕೈಯಿಕ್ಕುತ್ತಿದ್ದರೂ ಅವರ ರಚನೆ ಲಲಿತವಾಙ್ಮಯವಾಗುತ್ತಿತ್ತು; ಗೌರವಾರ್ಹ ಸಾಹಿತ್ಯವಾಗುತ್ತಿತ್ತು. ಆದರೆ ಶ್ರೀಮಾನ್ ಪೈಯವರಿಗೆ ಕೊಂಕಣಿ ಮಾತೆಯ ಸೇವೆ ಮಾಡಬೇಕೆಂಬ ಹಂಬಲವಾಗಲಿಲ್ಲ. ಇಂತಹ ಮಾತೃವಾತ್ಸಲ್ಯ ಹೀನರಿಗೆ ಕೊಂಕಣಿ ಮಾತೆಯ ಸ್ತನಗಳಲ್ಲಿ ಹಾಲು ಹೇಗೆ ದೊರೆತೀತು.?"

ಆದರೆ ಗೋವಿಂದ ಪೈಯವರಿಗೆ ತಮ್ಮ ತಾಯ್ನುಡಿಯಾದ ಕೊಂಕಣಿಯ ಬಗ್ಗೆ ಅಭಿಮಾನವಾಗಲಿ, ಆದರವಾಗಲಿ ಇದ್ದಿಲ್ಲವೆಂದು ಯಾರಾದರೂ ನಿಷ್ಕರ್ಷೆಗೆ ಬಂದರೆ ಅದು ಕೇವಲ ತಪ್ಪು ತಿಳಿವಳಿಕೆಯೆಂದೇ ಸ್ಪಷ್ಟವಾಗಿ ಹೇಳಬಹುದು. ಅವರು ಕಾವ್ಯರಚನೆಯ ಜೊತೆಗೆ ಸಂಶೋಧನ ಕಾರ್ಯದಲ್ಲಿಯೂ ತೊಡಗಿದ್ದರೆಂಬುದನ್ನು ನಾವು ಮರೆಯಕೂಡದು. ಈ ಮಹತ್ತಾದ ಕಾರ್ಯದಲ್ಲಿ ಅವರು ತಮ್ಮ ಹಿರಿಯರ ಮೂಲಸ್ಥಾನ, ದೇಶ ಸಂಚಾರ ಪರಂಪರೆ ಭಾಷೆಗಳನ್ನು ಕಂಡು ಹಿಡಿಯುವ ಪ್ರಯತ್ನ ಮಾಡಿದ್ದಾರೆ. ಮತ್ತು ತಾವು ಕಂಡುಹಿಡಿದ ವಿವರಗಳನ್ನು "ನಮ್ಮ ಹಿರಿಯರನ್ನು ಕುರಿತು" ಎಂಬ ಲೇಖವಲ್ಲಿ ಪ್ರಕಟಪಡಿಸಿದ್ದಾರೆ. ಈ ಲೇಖವು ಅದೇ ಕುಮಟೆಯಿಂದ ಹೊರಡುವ "ಜೀವೋತ್ತಮ" ತ್ರೈಮಾಸಿಕ 11-6-1959ರ ಸಂಚಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖದ ಕೊನೆಯಲ್ಲಿ ಅವರು ತಮ್ಮ ತಾಯ್ನುಡಿಯಾದ ಕೊಂಕಣಿಯ ಬಗ್ಗೆ ತಮ್ಮ ಸ್ಪಷ್ಟಾಭಿಪ್ರಾಯವನ್ನು ಮುಂಡಿಸಿದ್ದಾರೆ. ಕೊಂಕಣಿಯು ಮರಾಠಿಯ ಉಪಭಾಷೆಯೆಂಬ ವಾದವನ್ನು ಈ ಕೆಳಗಿನ ಮಾತುಗಳಲ್ಲಿ ಖಂಡತುಂಡವಾಗಿ ಮುರಿದುಬಿಟ್ಟಿದ್ದಾರೆ. ಇದು (ಕೊಂಕಣಿಯು) ಮರಾಠಿಯಿಂದ ಹುಟ್ಟಿರಬೇಕೆಂದು ಹಲವರ, ಹಲವು ವಿದ್ವಾಂಸರ ಭಾವನೆ ಇದೆ; ಇದು ತಪ್ಪು ಶುದ್ದ ತಪ್ಪು. ಏಕೆಂದರೆ ಒಂದೇ ಮಾತಿನಲ್ಲಿ ಹೇಳುವುದಾದರೆ ಮರಾಠಿ ಭಾಷೆಯ ಆದಿಮಗ್ರಂಥದಲ್ಲಿ ಒಂದಾಗಿರುವ ಜ್ಞಾನದೇವನೆಂಬ ಪ್ರಾಸಾದಿಕ ಕವಿಯು ಕ್ರಿ.ಶ. 1290ರಲ್ಲಿ ರಚಿಸಿದ "ಜ್ಞಾನೇಶ್ವರಿ" ಎಂಬ ಉದ್ಗ್ರಂಥದಲ್ಲಿ ಅನೇಕ ಕೊಂಕಣಿ ಮಾತುಗಳಿವೆ. ಹಲವು ಪ್ರಯೋಗಗಳು ಕೊಂಕಣಿ ಭಾಷೆಯ ವ್ಯಾಕರಣ ರೀತಿಯ ಸಹಾಯದಿಂದಲ್ಲದೆ ಮರಾಠಿ ಭಾಷೆಯ ವ್ಯಾಕರಣ ಸಹಾಯದಿಂದ ವಿಶದೀಕರಿಸಲಿಕ್ಕೆ ಬರುವುದಿಲ್ಲ: ಆ ಹಳೆಯ ಕಾಲದಲ್ಲಿ ಕೊಂಕಣಿ ಭಾಷೆಯ ಮಾತುಗಳು ಕೆಲಕೆಲ ಶಾಸನಗಳಲ್ಲಿ ಕೂಡಾ ಸಿಗುತ್ತವೆ. ಮರಾಠಿಯ ಮಾತೇ ದೊರೆಯುವುದಿಲ್ಲವೆಂಬುದರಿಂದ ಕೊಂಕಣಿಯಲ್ಲಿ ಆಗ್ಗೆಯಾದರೂ ಸಾಹಿತ್ಯವಿರಲಿ. ಇಲ್ಲದಿರಲಿ. ಆ ಭಾಷೆ ಜನರ ಆಡುಮಿಕೆ ಚಟುವಟಿಕೆಗಳಲ್ಲಿ ತುಂಬ ನೆಲಸಿತ್ತೆಂದೂ, ಮರಾಠಿ ಆಗ್ಗೆ ಇನ್ನೂ ಸ್ಫುಟವಾಗಿ ಹುಟ್ಟಿದ್ದಿಲ್ಲ ಅಥವಾ ಹುಟ್ಟಿದ್ದರೆ ಅದು ಬರೇ ನಾಡ್ನುಡಿ (Potois)ಯಂತೆ ಇತ್ತೆಂದೂ, ಹಾಗಲ್ಲವಾದರೆ ಕೊಂಕಣಿಯಿಂದ ಮರಾಠಿ ಹುಟ್ಟಿರಬೇಕಲ್ಲದೆ ಮರಾಠಿಯಿಂದ ಕೊಂಕಣಿ ಹುಟ್ಟಿರಲಾರದೆಂದೂ ದೃಢವಾಗುತ್ತದೆ.

ಈ ತಮ್ಮ ನಿರ್ಣಯಕ್ಕೆ ಅವರು ಇತರ ಆಧಾರಗಳನ್ನೂ ಕೊಟ್ಟಿದ್ದಾರೆ. "ಪಶ್ಚಿಮ ಸಮುದ್ರ ತೀರದ ಪ್ರಾಂತಕ್ಕೆ ಕೊಂಕಣವೆಂದಲ್ಲದೆ ಮಹಾರಾಷ್ಟ್ರವೆಂದು ಹೆಸರಿಲ್ಲ; ಮಹಾರಾಷ್ಟ್ರವೆಂದರೆ ಅದರ ಮೂಡು ಮಗ್ಗುಲಲ್ಲಿರುವ ಸಮುದ್ರ ತಟವರ್ತಿಯಲ್ಲದ ಮಧ್ಯದೇಶ.(Inland Country) ಮಷ್ಟೆ. ಕೊಂಕಣವೇನೂ ಮಹಾರಾಷ್ಟ್ರದೊಂದು ಭಾಗವಲ್ಲ; ಯಾವ ಹಿಂದಣ ಕಾಲದಲ್ಲಿಯೂ ಅಲ್ಲ. ಈಗಲೂ ಅಲ್ಲ. ಮರಾಠಿ ಭಾಷೆ ಹುಟ್ಟಿದುದು ಸಂಸ್ಕೃತದ ಮಹಾರಾಷ್ಟ್ರ ಪ್ರಾಕೃತದಿಂದ; ಆದರೆ ಅದಕ್ಕಿಂತ ಎಷ್ಟೋ ಹಳೆಯದಾದ ಮಾಗಧೀ ಪ್ರಾಕೃತದಿಂದ ಕೊಂಕಣಿಯು ಜನ್ಮವೆತ್ತಿತು. ಬೌದ್ಧ ಗ್ರಂಥಗಳನ್ನು ಬರೆದಿರುವ ಪಾಲಿಭಾಷೆಯೂ. ಜೈನ ಗ್ರಂಥಗಳನ್ನು ಬರೆದಿರುವ ಅರ್ಧಮಾಗಧಿಯೂ ಕೊಂಕಣಿಗೆ ಅತ್ಯಂತ ನಿಕಟವಾಗಿವೆ: ಮಹಾರಾಷ್ಟ್ರ ಪ್ರಾಕೃತವಾದರೂ ಶಾನೆ ದೂರವಿದೆ". ಈ ಸಂಗತಿಗಳನ್ನೂ ಸಿದ್ಧಪಡಿಸಲು ಪ್ರಬಲ ಕಾರಣಗಳನ್ನೂ ಕೊಟ್ಟಿದ್ದಾರೆ. "ಸಾರಸ್ವತರು ತ್ರಿಹೋತ್ರವೆಂಬ ವಿದೇಹ ದೇಶದಲ್ಲಿ ನೆಲಸಿದರೆಂಬುದನ್ನು ಮೇಲೆ ಹೇಳಿದೆಯಷ್ಟೆ. ಯಾವ ಬಿಹಾರ ದೇಶದ ಉತ್ತರ ಭಾಗವೇ ವಿದೇಹ ದೇಶವಾಗಿದ್ದಿತೋ ಅದರ ದಕ್ಷಿಣ ಭಾಗವೇ ಆಗಣ ಮಗಧ ದೇಶ ಎಂಬುದರಿಂದ ವಿದೇಹದಲ್ಲಿದ್ದ ಸಾರಸ್ವತರ ಭಾಷೆ ಮಾಗಧಿ - ಅರ್ಧ ಮಾಗಧಿಗಳಿಂದ ಹುಟ್ಟಿರಬೇಕು. ಅಲ್ಲವೇ ಅದೇ ಆಗಿರಬೇಕು, ಅಲ್ಲವೆ ಅವಕ್ಕೆ ನಿಕಟತಮವಾಗಿರಬೇಕು. ಆ ವಿದೇಹದಿಂದ ಗೋವೆಗೆ ಬರುವಾಗ ಅವರು ಆಡುತ್ತಿದ್ದ ಭಾಷೆ ಅದೇ, ಮತ್ತದರಿಂದಲೇ ಅವರ ಸಂತಾನರಾದ ಗೋವೆಯಲ್ಲಿದ್ದ ನಮ್ಮ ಹಿರಿಯರು ಆಡುತ್ತಿದ್ದ ಈ ಕೊಂಕಣಿ ಭಾಷೆ ಹುಟ್ಟಿರಬೇಕು. ಗೋವೆ ಕೊಂಕಣ ದೇಶವೆಂಬುದರಿಂದ ಈ ಭಾಷೆಯ ವಿದೇಹದೇಶಕ್ಕೆ ಸಂಬಂಧಿಯಾದ ಮೂಲ ಹೆಸರು ಕ್ರಮೇಣ ಮರೆತು ಹೋಗಿ ಇದು ಕೊಂಕಣಿಯೆಂದಾದುದೇನೂ ಚೋದ್ಯವಲ್ಲ. ಮತ್ತು ಸಾವಿರಾರು ವರ್ಷಗಳಲ್ಲಿ ಗೋವೆಯಲ್ಲಿಯೂ ದ್ರಾವಿಡಭಾಷಾಭೂಯಿಷ್ಠವಾದ ಇತರ ದೇಶಗಳಲ್ಲಿಯೂ ನೆಲಸಿರುವ ಈ ಭಾಷೆ ಕ್ರಮಶ: ತನ್ನ ಮೂಲಭಾಷೆಯಿಂದ ಪಲ್ಲಟಿಸಿರುವುದೂ ಚೋದ್ಯವಲ್ಲ. ಮಹಾರಾಷ್ಟ್ರದ ನೆರೆಯಲ್ಲಿರುವ ಗೋವೆಗೆ ಬರುವ ಮುಂಚೆಯೇ ಸಾರಸ್ವತರು ಆಡುತ್ತಿದ್ದ ಈಗಣ ನಮ್ಮ ಭಾಷೆಯ ತಾಯಿಭಾಷೆ ಎಂದಿಗೂ ಮಹಾರಾಷ್ಟ್ರ ಪ್ರಾಕೃತದಿಂದ ಬಂದುದಲ್ಲ; ಏಕೆಂದರೆ ಮಹಾರಾಷ್ಟ್ರ ಪ್ರಾಕೃತದ ಪ್ರಾಂತ

ಗಳಿಲ್ಲಿ? ವಿದೇಹ ದೇಶವೆಲ್ಲಿ? ಹಾಗೆಯೇ ಆಗಣ ಆ ಮೂಲಭಾಷೆಯಿಂದ ಹುಟ್ಟಿದೀ ಕೊಂಕಣಿಯೂ ಮರಾಠಿಯಿಂದ ಬಂದುದಲ್ಲ."

ಕೊಂಕಣಿಯ ಮೇಲೆ ಇತರ ಭಾಷೆಗಳು ಬೀರಿದ ಪ್ರಭಾವವನ್ನು ಅವರು ಮನಗಂಡು ಅಂಥ ಪ್ರಭಾವದ ಸೆಳೆತಕ್ಕೆ ಸಿಲುಕಿ ಕೊಂಕಣಿಯನ್ನು ಮರೆತಿರುವವರನ್ನು ಸೂಚ್ಯವಾಗಿ ಹೀಗಳೆದು ಕೊಂಕಣಿಗರಲ್ಲಿ ಮನೆಮಾಡಿಕೊಂಡಿರುವ ತಾಯ್ನುಡಿಯ ಭಕುತಿಯನ್ನು ಕೊಂಡಾಡಿ ಅದರಲ್ಲಿ ಸಾಹಿತ್ಯವನ್ನು ಬೆಳೆಸುವ ಸಾಕಷ್ಟು ಪ್ರಯತ್ನಗಳು ಆಗಿಲ್ಲವಾದರೂ ಕೊಂಕಣಿಯು ನಿಸ್ಸತ್ವಭಾಷೆಯಲ್ಲವೆಂದೂ ಸಾಹಿತ್ಯ ನಿರ್ಮಿತಿಯಾಗುವ ಯೋಗ್ಯತೆ ಅದರಲ್ಲಿದೆಯೆಂದೂ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. "ಕೊಂಕಣಿ ಭಾಷೆಯಲ್ಲಿ ಆ ಕಾಲವಲ್ಲಿ ಸಾಹಿತ್ಯವಿದ್ದಿತೋ ಏನೆಂಬುದನ್ನು ಈಗ ನಿಶ್ಚಯಿಸಲಾಗದಾದರೂ ಪಕ್ಕದಲ್ಲಿ ಮೊಳೆತು ಬೆಳೆದ ಮರಾಠಿ ಭಾಷೆ ಕ್ರಮಶ: ಸಾಹಿತ್ಯವಿಕಾಸವನ್ನು ಕೂಡಾ ಹೊಂದಿದುದರಿಂದ. ತನಗಿಂತ ವಯೋಧಿಕಳೂ ತನ್ನ ದೊಡ್ಡ ತಾಯ ಮಗಳೂ ಆದ ನಮ್ಮ ಕೊಂಕಣಿ ಭಾಷೆಯ ಮನೆಯನ್ನು ಆಕ್ರಮಿಸತೊಡಗಿದುದರಿಂದ ಅತ್ತಣ ಕೊಂಕಣಿಯಲ್ಲಿ ಈಗ ಸಾವಿರಾರು ಮರಾಠೀ ಶಬ್ದಗಳಿವೆ, ವ್ಯಾಕರಣ ಪ್ರಯೋಗಗಳಿವೆ. ಮಾತ್ರವಲ್ಲ ಮುಂಬಾಯಿ ಇಲಾಖೆಯ ಅನೇಕ ದೇಶಗಳಲ್ಲಿ ಈಗ ಸಾಹಿತ್ಯ ಹೀನವಾಗಿರುವ ಕೊಂಕಣಿಯನ್ನು ಮಾತನಾಡುವುದಕ್ಕೆ ಹೇಸಿಯೋ, ನಾಚಿಯೋ ನಮ್ಮವರು ಮರಾಠಿಯನ್ನೇ ಆಡುತ್ತಿರುವರು. ಕೊಂಕಣಿ ಭಾಷೆಯ ಹೊಲಬರಿಯರು ನಮ್ಮೀ ದೇಶಗಳಲ್ಲಿ ಕೂಡ ತುಳು-ಕನ್ನಡ-ಮಲೆಯಾಳಿ ಶಬ್ದಗಳು ನಮ್ಮ ಭಾಷೆಯಲ್ಲಿ ಬೇಕಾದಷ್ಟು ನುಗ್ಗಿ ಕೊಂಡಿವೆಯಾದರೂ ನಾವಿದನ್ನು ಇನ್ನೂ ಮಾತೃಪ್ರೇಮದಿಂದ ಆಧರಿಸಿ ನುಡಿಯುತ್ತಿರುವೆವು. ಬಿಟ್ಟುಬಿಡಲೂ ಒಡಂಬಡೆವು ಎಂಬೀ ಕಾರಣದಿಂದ ನಮ್ಮೀ ಭಾಷೆಯಲ್ಲಿ ನಾವಿಲ್ಲಿಗೆ ಬಂದ ಬಳಿಕ ನಾವೇನೂ ಸಾಹಿತ್ಯವನ್ನು ಬೆಳೆಸಿಲ್ಲವಾದರೂ. ಇದಕ್ಕೆ ಇನ್ನೂ ಸಾಕಷ್ಟು ಚೇತನವಿದೆ, ಜೀವವಿದೆ, ವ್ಯಕ್ತಿತ್ವವಿದೆ, ನಮ್ಮೀ ಭಾಷೆಯೇನು? ಶುಷ್ಕವಲ್ಲ, ನೀರಸವಲ್ಲ. ನಿಶ್ಚೇತವಲ್ಲ. ಎಲ್ಲ ವಿಷಯಗಳಲ್ಲಿ ಇತರ ಸಜೀವ ಭಾಷೆಗಳಂತೆ ಅವುಗಳಷ್ಟೇ ಸಜೀವವಾಗಿ ಇದೆ.

ಗೋವಿಂದ ಪೈಯವರು ತಮ್ಮ ತಾಯ್ನುಡಿಯಲ್ಲಿ ಸಾಹಿತ್ಯವನ್ನು ರಚಿಸಿಲ್ಲವಾದರೂ ಆ ನುಡಿಯಾದ ಕೊಂಕಣಿಯ ಬಗ್ಗೆ ಆದರ ಭಾವನೆ ಅವರ ಹೃದಯದಲ್ಲಿ ನೆಲಸಿತ್ತೆಂಬುದು ನಿರ್ವಿವಾದವಾದ ಸಂಗತಿಯು. ಅವರ ಈ ಆದರ ಭಾವನೆಯು ಅಂಧಶ್ರದ್ಧೆಯಾಗಿರಲಿಲ್ಲ. ಅವರು ತಮ್ಮ ಸಂಶೋಧನೆಗಳಿಂದ ಕೊಂಕಣಿಯ ಕುರಿತು ಸತ್ಯಸಂಗತಿಗಳನ್ನು ಅರಿತುಕೊಂಡು ಆ ಭಾಷೆಯ ಬಗ್ಗೆ ಹುಟ್ಟಿಕೊಂಡಂಥ ತಪ್ಪುತಿಳಿವಳಿಕೆಗಳನ್ನು ದೂರಮಾಡಿ ಅದರ ಹಿರಿಮೆಯನ್ನು ಜಗತ್ತಿಗೆ ಸಾರಿ ಹೇಳಿದ್ದಾರೆ. ಅದರ ಸತ್ವವನ್ನು ಕೊಂಕಣಿಗರ ಗಮನಕ್ಕೆ ತಂದು ಸಾಹಿತ್ಯ ರಚನೆಯಲ್ಲಿ ಮುಂದಾಗುವಂತೆ ಅವರನ್ನು ಪ್ರಚೋದಿಸಿದ್ದಾರೆ. ರಾಷ್ಟ್ರಕವಿಗಳದು ವಿತಂಡವಾದಿಗಳ ಶುಷ್ಕತರ್ಕವಲ್ಲ. ಪ್ರಬಲ ಆಧಾರಗಳ ಮೇಲೆ ದೃಢವಾಗಿ ಬೇರುಬಿಟ್ಟ ವಿಚಾರಗಳನ್ನು ಅವರು ಪ್ರಕಟಪಡಿಸಿದ್ದಾರೆ. ಕೊಂಕಣಿಯು ಮರಾಠಿಯ ಉಪಭಾಷೆಯಲ್ಲವಷ್ಟೇ ಅಲ್ಲ; ಅದು ಮರಾಠಿಗಿಂತ ಹಳೇ ಭಾಷೆಯೆಂಬುದನ್ನು ಸಿದ್ಧಪಡಿಸಿ ಕೊಂಕಣಿಯ ಬೆಳವಣಿಗೆಗೆ ಭದ್ರಬುನಾದಿಯನ್ನು ಹಾಕಿಕೊಟ್ಟಿದ್ದಾರೆ. ಈ ತಳಪಾಯದ ಮೇಲೆ ಕೊಂಕಣಿಯ ಸಾಹಿತ್ಯ ಮಂಟಪವನ್ನು ಕಟ್ಟಲು ಕೊಂಕಣಿಗರು ಮುಂದಾಗಿ ಕಾರ್ಯನಿರತರಾಗುವದೇ ಕೊಂಕಣಿಗರು ರಾಷ್ಟ್ರಕವಿಗಳಿಗೆ ನೀಡಬಹುದಾದ, ನೀಡಬೇಕಾದ ಶ್ರದ್ಧಾಂಜಲಿಯಾಗಿದೆ. ಅದುವೆ ಅವರ ಆತ್ಮಕ್ಕೆ ಶಾಂತಿ-ಸಮಾಧಾನಗಳನ್ನು ನೀಡೀತು.





ಮದ್ರಾಸಿನ ಗವರ್ನರ್‌ರಾದ ಭಾವನಗರದ ಮಹಾರಾಜರಾದ ಶ್ರೀ ಕೃಷ್ಣಸಿಂಹರು ಶ್ರೀ ಪೈಯವರಿಗೆ ರಾಷ್ಟ್ರಕವಿ ಉಪಾಧಿಯನ್ನು ದಯಪಾಲಿಸುವುದು. ಅವರ ಹಿಂಬದಿಯಲ್ಲಿ ಮದ್ರಾಸಿನ ಮುಖ್ಯಮಂತ್ರಿ ಕುಮಾರ ಸ್ವಾಮಿರಾಜರನ್ನು ಕಾಣಬಹುದು.



## ನಮ್ಮ ರಾಷ್ಟ್ರ ಕವಿಗಳು

ಎಡದಿಂದ ಬಲಕ್ಕೆ :—1. ಶ್ರೀ ವಲ್ಲತಹೋಲ್ ನಾರಾಯಣ ಮೇನನ್ (ಮಳಯಾಳಿ).
2. ಶ್ರೀ ಮ. ಗೋವಿಂದ ಪೈ (ಕನ್ನಡ). 3. ಶ್ರೀ ಕೃಷ್ಣಮೂರ್ತಿ ಶಾಸ್ತ್ರಿ (ಸಂಸ್ಕೃತ).
4. ಶ್ರೀ ಎನ್. ವಿ. ರಾಮಲಿಂಗಮ್ ಪಿಳ್ಳೈ (ತಮಿಳು).



ಶ್ರೀ ಪೈಗಳು ರಾಷ್ಟ್ರಕವಿ ಉಪಾಧಿಯನ್ನು ಕೊಟ್ಟ ಕುರಿತು ಅಭಿನಂದಿಸಿ ಭಾಷಣ ಮಾಡುವುದು.

# ಕೆಲ ದೇವತಾ ಸಮೀಕ್ಷೆ*

ಶ್ರೀ ಶಂ. ಬಾ. ಜೋಶಿ

**ಶ್ರೀ ಲಕ್ಷ್ಮೀ, ನಾರಾಯಣ, ವಿಷ್ಣು, ಅಂಬಾ, ರುದ್ರ, ಅದಿತಿ, ಅಂಭೃಣಿ**

## ದೈವತ ಹಾಗೂ ದೇವ

ಯಾವುದೊಂದು ಜನಾಂಗದವರ ದೈವತ ಮತ್ತು ಅವರ ದೈವ (ಹಣೇ ಬರೆಹ) ಇವು, ಒಂದರಿಂದೊಂದು ಬೇರೆ ಇರಲಾರವು. ಯಾವ ದೈವತಗಳನ್ನು ಜನ ಮನೋವಾಕ್ಕಾಯಗಳಿಂದ ಭಜಿಸುವುದೋ ಮತ್ತು ಧ್ಯಾನ-ಧಾರಣೆಯಿಂದ ತತ್‌ಮಯವಾಗುವುದಕ್ಕಾಗಿ ಹಂಬಲಿಸುವುದೋ, ಆ ದೈವತದಲ್ಲಿ ಕಲ್ಪಿಸಲಾದ ಶೀಲ-ಸ್ವಭಾವಗಳೇ ಕೆಲವೊಂದು ಪ್ರಮಾಣದಲ್ಲಿ, ಆ ಭಜಕ-ವರ್ಗಗಳಲ್ಲೂ ಒಡಮೂಡದಿರಲು ಸಾಧ್ಯವಿಲ್ಲ.

ಜನಾಂಗದ ಸಾಂಸ್ಕೃತಿಕ ಇತಿಹಾಸವು, ಆ ಜನಾಂಗದ ದೇವತಾ ಕಥೆಗಳ ಹುಟ್ಟು-ಬೆಳವಿಯೊಳಗಿಂದ ಉಗಮಗೊಂಡುದು ಕಂಡು ಬರುತ್ತದೆ. ಪುರಾಣ-ಕಥಾ-ಶಾಸ್ತ್ರದಲ್ಲಿ ಎಂದರೆ ಪವಾಡ-ಕಥಾ-ಶಾಸ್ತ್ರದಲ್ಲಿ (Mythology) ನಿಷ್ಣಾತರಾದ ಅರ್ನೆಸ್ಟ್ ಕ್ಯಾಸಿರರ್ ಅವರು ತಮ್ಮ ಸಮೀಕ್ಷೆಯಲ್ಲಿ ಮನಗಂಡು ಹೇಳಿದ ಮಾತು ಹೀಗಿದೆ. " The whole history of the Hindu, Greeks, etc., was [is] implicit in their Gods"

"ಧರ್ಮವು ಸನಾತನ" ಎಂಬ ಸಂಗತಿ ಪರಮ ಅರ್ಥದಲ್ಲಿ ಲಾಕ್ಷಣಿಕ ಸತ್ಯವಿದ್ದರೂ, ದೇವತಾ ವಿಚಾರದಲ್ಲಿ ಕಾಲ ಕಾಲಕ್ಕೆ ತುಂಬ ಮಾರ್ಪಾಟುಗಳು ಆಗುತ್ತ ಬಂದುದು ವಾಸ್ತವ ಸತ್ಯವಾಗಿದೆ. **ದೇವತಾ ವಿಚಾರದಲ್ಲಿ ಮಾರ್ಪಾಟುಗಳೇ ಆಗಿರದ, ಆದರೆ, ಪ್ರಗತಿ-ಪಥದೊಳಗೆ ಇರುವ ಒಂದೂ ಜನಾಂಗವೂ ದೊರೆಯಲಾರದು ಈ ಜಗತ್ತಿನಲ್ಲಿ.** ಇದು ಮಾನವೇತಿಹಾಸದೊಳಗಿನ ಸಾರ್ವತ್ರಿಕ ಘಟನೆಯಾಗಿದೆ. ಭಾರತೀಯರೂ ಮಾನವೇತಿಹಾಸಕ್ಕೆ ಹೊರಗಿನವರಲ್ಲ. "ಜಗತ್" (ಗಚ್ಛತಿ ಇತಿ) "ಸಂಸಾರ" (ಸೃಸರ್) ಎಂಬ ಪದಗಳಿಂದ ನಮ್ಮ ಪೂರ್ವಜರು ಗತಿಯ ಈ ತತ್ವವನ್ನು ಮೊದಲೇ ಅರಿತಿದ್ದರೆಂಬ ಮಾತು ನಿದರ್ಶನಕ್ಕೆ ಬರುತ್ತದೆ.

ದೇವತಾ ವಿಚಾರಗಳ ಮಾರ್ಪಾಟುಗಳೊಡನೆ, ಜನಾಂಗದ ವೈಚಾರಿಕ ಭೂಮಿಕೆ ಬದಲಾಗುವುದು ಕ್ರಮಪ್ರಾಪ್ತವಾಗುತ್ತದೆ ಅಥವಾ ಆಂತರಿಕ ವೈಚಾರಿಕ ಭೂಮಿಕೆಯ ಬದಲಾವಣೆಯು, ಅಂದಿನ ಪ್ರಚಲಿತ ದೇವತಾ ವಿಚಾರದ ಮಾರ್ಪಾಟಿನ ರೂಪದಲ್ಲಿ ಹೊರಗೆ ಅಭಿವ್ಯಕ್ತವಾಗತೊಡಗುತ್ತದೆ. ಏಕೆಂದರೆ ಒಂದೊಂದು ಕಾಲದ ದೈವತಗಳು ಆ ಜನದ ಆಯಾಕಾಲದ ಜೀವನಾದರ್ಶದ ಬಾಹ್ಯ ಪ್ರತಿಮಾ ಸಂಕೇತಗಳೇ ಆಗಿರುತ್ತವೆ. ಆದರೆ ಆರಾಧಿಸುವ ಪ್ರತಿಮಾ-ಸಂಕೇತಗಳ ಅರ್ಥ ಮತ್ತು ಆ ಜನರ ಪ್ರತ್ಯಕ್ಷ ಆಚರಣೆಯಲ್ಲಿ ಅಡಕವಾಗಿರುವ ಅರ್ಥ, ಇವುಗಳಲ್ಲಿ ಅಂತರವು ಹೆಚ್ಚುತ್ತ ನಡೆದಂತೆ, ಧಾರ್ಮಿಕ ಹಾಗೂ ಸಾಮಾಜಿಕ ಸ್ವರೂಪದ ವೈಚಾರಿಕ ಕ್ರಾಂತಿಯ ಆವಶ್ಯಕತೆ ಕಾಣಿಸಿಕೊಳ್ಳತೊಡಗುವುದು. ಪಶುಬಲಿಯ ಮೂಲಕ ಜರುಗುತ್ತಿದ್ದ ಯಜ್ಞವು, ಋಗ್ವೇದ ಕಾಲದಲ್ಲಿಯೆ ಕೊನೆ ಕೊನೆಗೆ ಲಕ್ಷಣಾರ್ಥ ಪಡೆದುದುಂಟು! "ಪುರುಷ" ಸೂಕ್ತವು ಉದಾಹರಣೆ, ಇದಕ್ಕೆ. ಯಜ್ಞ-ವಿಷಯಕ ಹಾಗೂ ಇಂದ್ರಾದಿ ದೇವತಾ ವಿಷಯಕ ಬದಲಾದ ದೃಷ್ಟಿಕೋನದ ಫಲಿತವೇ ಉಪನಿಷತ್ತುಗಳು! ಹೀಗೆ ಭಾರತೀಯ ಜನಾಂಗದ ಆದರ್ಶ, ಆಕಾಂಕ್ಷೆಗಳಲ್ಲಿ ಆಗುತ್ತ ಬಂದಿರುವ ಬದಲಾವಣೆಗಳು (ಋಗ್ವೇದ ಕಾಲದಿಂದಲೂ ದೊರೆವ) ನಮ್ಮ ನಾಡಿನ ದೈವತ ಕಥಾ ಸಮೀಕ್ಷೆಯಲ್ಲಿ ಬೆಳಕಿಗೆ ಬರಬಹುದಾಗಿದೆ. ಪ್ರಸ್ತುತ, ನಮ್ಮ ಸಾಂಸ್ಕೃತಿಕ ಪೂರ್ವೋತ್ತರಗಳನ್ನು ಅರಿತುಕೊಳ್ಳುವ ಪ್ರಯತ್ನಕ್ಕೆ ಪ್ರಾಶಸ್ತ್ಯವಿದ್ದು, ಆದರ್ಶ, ಆಶೆ-ಆಕಾಂಕ್ಷೆಗಳ ವಿಚಾರ ಗೌಣವಾಗಿದೆ. ಏಕೆಂದರೆ ಈಗ ಪ್ರಧಾನ ಸಂಗತಿ, ದೇವತಾ ಜಿಜ್ಞಾಸೆ. ಆದರೆ ಈ ದೇವತಾ ಜಿಜ್ಞಾಸೆಗೆ ತೊಡಗುತ್ತಲೇ ಮೊತ್ತ ಮೊದಲಲ್ಲಿ ಎದುರು ನಿಲ್ಲುವ ಮಹಾನ್ ಆತಂಕ ಎಂದರೆ, ಈ ದೇವತಾ ಸಂಬಂಧಗಳಲ್ಲಿ ಕಂಡು ಬರುವ ಕೆಲವೊಂದು ವಿಸಂಗತಿ! ಉದಾಹರಣಾರ್ಥ, ಶ್ರೀ ಲಕ್ಷ್ಮೀ ಮತ್ತು ನಾರಾಯಣ. ಅಂಬಿಕೆ ಮತ್ತು ರುದ್ರ. ಈ ಜೋಡಿಯನ್ನೇ ತಕ್ಕೊಳ್ಳಿ. ಇವರಲ್ಲಿ ಆದರ್ಶ-ದಾಂಪತ್ಯ-ಸಂಬಂಧವನ್ನು ಕಲ್ಪಿಸಿ, ನೆಚ್ಚಿಕೊಂಡುದುಂಟು. ಆದರೆ ಈ ಶ್ರದ್ಧಾಭಾವಕ್ಕೆ ಆಘಾತವನ್ನೀಯುವ ಉಲ್ಲೇಖಗಳನ್ನು ಮೊದಲು ಎದುರಿಸಿದಾಗ, "ಈ ಹಾಳು ಸಮೀಕ್ಷೆ ಯಾತಕ್ಕೆ?" ಎನಿಸಿ, ಮನಸ್ಸು ಮುರುಟಿಕೊಂಡಿತು. ಅಸಮಾಧಾನವೂ ಆಯಿತು! ಆದರೇನು ವೇದಾದಿಗಳಲ್ಲಿ ದೊರೆವ ಲಿಖಿತ ಆಧಾರಗಳನ್ನು ಸುಳ್ಳು ಎನ್ನುವುದು ಹೇಗೆ? ಇನ್ನು ಈ ಸಂಗತಿ ನಿಜವಿದ್ದರೆ, ಅದರ ಕಾರಣಗಳೇನು ಎಂಬುದೂ ಸುಶಿಕ್ಷಿತರೆಂದು ಹೆಮ್ಮೆ ಪಡುವ ನಮಗೆ ತಿಳಿಯಬೇಡವೆ? ಆದರೆ, ಈ ವಿಸಂಗತಿಗಳನ್ನು ಬಚ್ಚಿಡುವ ಬುದ್ಧಿ ಪೂರ್ವಕ ಪ್ರಯತ್ನವಾಗಿಲ್ಲವಷ್ಟೆ, ಎಂಬ ಸಂದೇಹವುಂಟಾಗುವಂತಿದೆ. ಒಟ್ಟಿನ ಪರಿಸ್ಥಿತಿ. ಉಪನಿಷತ್ತುಗಳ ಪೂರ್ವದ ವೈದಿಕ ಸಾಹಿತ್ಯವನ್ನು ಮರೆಮಾಚಿರುವುದರ ಹಿಂದೆ. "ಜನಕ್ಕೆ ನಮ್ಮ ದೇವತಾ ವಿಸಂಗತಿ ತಿಳಿದೀತಲ್ಲ" ಎಂಬ ಹೆದರಿಕೆಯೂ

---

*ಬೇಗನೆ ಪ್ರಕಟವಾಗಲಿರುವ 'ದೇವತಾ ಮೂಲ ದಿವ್ಯ ತತ್ತ್ವದರ್ಶನ' ಎಂಬ ಗ್ರಂಥದ ಒಂದು ಭಾಗ. ಸ್ವಾಧ್ಯಾಯ ಪ್ರವಚನ ತಪೋನಿರತರಾಗಿ ಜ್ಞಾನೋಪಾಸನೆಗೇ ಬಾಳನ್ನು ಮುಡುಪಾಗಿಟ್ಟ ವಂದ್ಯ ಶ್ರೀ ಗೋವಿಂದ ಪೈಗಳವರ ಪುಣ್ಯಸ್ಮೃತಿಗಾಗಿ ಕಳುಹಿದ ಆದರದ ಕಾಣಿಕೆ—ಲೇಖಕ.

ಒಂದು ಕಾರಣವಿರಲಾರದೆ? ಎಂಬ ಶಂಕೆ ತಲೆದೋರುವಂತೆ ಇದೆ! ಆದರೆ ಸತ್ಯವನ್ನು ಮರೆಮಾಜಿದರೂ ಅವರ ಇಷ್ಟಾನಿಷ್ಟ ಪರಿಣಾಮಗಳನ್ನು ಅನುಭವಿಸುವುದು ಮಾತ್ರ ಎಂದೂ ತಪ್ಪಲಾರದು! ತಪ್ಪಿಯೂ ಇಲ್ಲ!

ವಿಷ್ಣು, ರುದ್ರ, ಅಂಬಿಕೆ, ಅದಿತಿ, ಆಂಭೃಣಿ, ಲಕ್ಷ್ಮೀ ಈ ದೇವತೆಗಳು ಋಗ್ವೇದದಲ್ಲಿ ಬರುತ್ತವೆಯಾದರೂ ಇವು ಬೆಳೆದು ಪ್ರಭಾವ ಶಾಲಿಯಾದುದು ವೇದ-ಕಾಲದ ತರುವಾಯ, (ಇದಕ್ಕೆ ಅದಿತಿ, ಆಂಭೃಣಿಯರು ಅಪವಾದವಾಗಿದ್ದಾರೆ. ವೇದ ಕಾಲದಲ್ಲೇ ಅಸ್ತಂಗತರಾದ ದೇವಿಯರು ಇವರು.)! ಈ ಸಂದರ್ಭದಲ್ಲಿ ಸ್ಪಷ್ಟವಾಗಿ ಕಂಡು ಬರುವ ಸಂಗತಿಯೆಂದರೆ, ಇಂದ್ರ, ವರುಣ, ಭಗಪೂಷನ್, (ಸೂರ್ಯನು ಸಹ) ಮೇಲೆ ಹೇಳಿದ ದೈವತ ಕಥೆಗಳಲ್ಲಿ ಎಲ್ಲಿಯೂ ನಿಕಟ ಸಂಬಂಧದೊಳಗೆ ಬರುವುದೇ ಇಲ್ಲ! ಈ ಕಾರಣದಿಂದಾಗಿ ವಿಷ್ಣು, ರುದ್ರ, ಅಂಬಿಕೆ, ಲಕ್ಷ್ಮೀ ಈ ದೈವತಗಳು, ಅಗ್ನ್ಯಾರಾಧಕ ಯಾಜಕ-ಸಂಪ್ರದಾಯದ ಇಂದ್ರಾದಿ ದೈವತಗಳಿಗಿಂತ ಭಿನ್ನ ಸಂಪ್ರದಾಯಕ್ಕೆ ಸೇರಿದ ಇನ್ನೊಂದು ಬಗೆಯ ದೈವತಗಳು ಎಂಬ ಅನುಮಾನವು ತಲೆ ಎತ್ತುತ್ತದೆ.

ಇಂದ್ರ ವರುಣಾದಿ ದೈವತಗಳನ್ನು ಆರಾಧಿಸುತ್ತಿದ್ದ ಪಂಗಡ, ಹಾಗೂ ಮೂಲ ವಿಷ್ಣು, ರುದ್ರ, ಅಂಬೆ, ಲಕ್ಷ್ಮೀ ಈ ದೇವತೋಪಾಸಕ ಪುರಾತನ ವರ್ಗ ಇವೆರಡೂ ಭಿನ್ನ ಸಾಂಸ್ಕೃತಿಕ ಪರಂಪರೆಯ ಜನವಾಗಿರಬೇಕು, ಎಂಬ ಸಂಗತಿಯನ್ನು ಈ ಮೊದಲು "ಹಾಲುಮತ ದರ್ಶನ"ದಲ್ಲಿ ಸ್ವಲ್ಪ ವಿವರಿಸಿದ್ದಾಗಿದೆ. (ಪು.292. 298). ಈ ಎರಡು ಭಿನ್ನ ಸಂಪ್ರದಾಯಕಗಳ ಸಮ್ಮಿಳನ-ಸಮ್ಮಿಶ್ರಣದೊಳಗಿಂದ. ಕೆಲವೊಂದು ಸಮನ್ವಯದ ಪ್ರಯತ್ನಗಳೊಳಗಿಂದ ಇಂದಿನ ಭಾರತೀಯ ಸಂಸ್ಕೃತಿಯು, ರೂಪ ಆಕಾರ ಪಡೆಯುತ್ತ ಬೆಳೆದು ಬಂದಿದೆ, ಎಂಬ ಈ ಮೊದಲಿನ ಅನುಮಾನಿತ ಸತ್ಯವನ್ನೇ ( Hypothesis ) ಪ್ರಸ್ತುತ ಈ ದೇವತಾ ಸಮೀಕ್ಷೆಯು ಪುಷ್ಟೀಕರಿಸುತ್ತಿದೆ. ಪ್ರಸ್ತುತ ಈ ಸಮೀಕ್ಷೆಯನ್ನು ಶ್ರೀ ಲಕ್ಷ್ಮೀ -ನಾರಾಯಣರ ಅನುಸಂಧಾನದಿಂದ ಪ್ರಾರಂಭಿಸುವ.

## ಶ್ರೀ ಲಕ್ಷ್ಮೀ ನಾರಾಯಣ

ಶ್ರೀ ಲಕ್ಷ್ಮಿಯು, ನಾರಾಯಣನ ಪತ್ನಿ ಅವರಂತೆ ವಿಷ್ಣುವಿನ ಭಾರ್ಯೆ ಎಂದೂ ಸಂಪ್ರದಾಯ ಹೇಳುತ್ತದೆ! ಆದರೆ ನಾರಾಯಣ ಮತ್ತು ವಿಷ್ಣು ಇವರು ಒಂದೆಯೆ? ಒಂದೇ ಇದ್ದರೆ ಎರಡು ಪ್ರತಿಮಾ ನಿರ್ಮಾಣವಾದುದೇಕೆ? ಭಿನ್ನರಾಗಿದ್ದರೆ ಮಡದಿ ಒಬ್ಬಳೇ ದೇವಿ ಹೇಗೆ?

"ಶ್ರೀಸೂಕ್ತ" ಎಂಬ ಹೆಸರಿನ ವೈದಿಕ ಸ್ತೋತ್ರವಿದೆ. ಅದರಲ್ಲಿ ಲಕ್ಷ್ಮಿಯ ಮಹಿಮೆಯುಂಟು. ಆದರೆ ಶ್ರೀ ಲಕ್ಷ್ಮಿಯು ಯಾರ ಪತ್ನಿ ಎಂಬ ಒಂದೂ ಉಲ್ಲೇಖವೇ ಇಲ್ಲ ಅಲ್ಲಿ! ಮೂಲ ಋಚೆಗಳ ಇಡೀ ಸ್ತೋತ್ರದಲ್ಲಿ "ದೇವ ಜುಷ್ಟಾಂ ಉದಾರಾಮ್" ಎಂಬ ಒಂದೆಡೆಗೆ ದೇವತಾ ವಾಚಕ ಸ್ಥೂಲ ಉಲ್ಲೇಖವಿದೆ. ಹೊರತು ವಿಷ್ಣು ಪತ್ನಿ ಅಥವಾ ನಾರಾಯಣ ಭಾರ್ಯೆ ಎಂಬ ಯಾವ ಮಾತೂ ಇಲ್ಲ! ಆದರೆ ಇದಕ್ಕೆ ಪ್ರತಿಯಾಗಿ ಶ್ರೀ ಸೂಕ್ತದಲ್ಲಿ "ವನಸ್ಪತಿಸ್ತವ ಹೃಕ್ಷೋಥ ಬಿಲ್ವ:" ಎಂದುದರಿಂದ ಬಿಲ್ವ-ಪ್ರಿಯಳಾದ ಈ ದೇವಿ ರುದ್ರನ ಸಂಗಾತಿಯೊ ಎಂಬ ಸಂದೇಹ ಉಂಟಾಗುವಂತಿದೆ! ನಿಜವಾಗಿ ಶ್ರೀ ವಿಷ್ಣು ಪತ್ನಿ ಎಂಬ ಲಕ್ಷ್ಮಿಗೆ ತುಳಸೀದಳ ಪ್ರಿಯವಿರಬೇಕಿತ್ತು; ಆದರೆ ಇವಳು "ಬಿಲ್ವಪ್ರಿಯಳು" ಎಂದು ಶ್ರೀಸೂಕ್ತ ಹೇಳುತ್ತದೆ. ಹಾಗಾದರೆ ಶ್ರೀ ಲಕ್ಷ್ಮಿಯು ಶೈವೆಯೊ? ಹಾಗಿದ್ದರೆ ಈ ಸೂಕ್ತದಲ್ಲಿ ಶಿವ (ರುದ್ರ)ನ ಅರ್ಧಾಂಗಿ ಎಂಬ ಉಲ್ಲೇಖವಾದರೂ ಸ್ಪಷ್ಟವಿರಬೇಡವೇ?

ಶ್ರೀಸೂಕ್ತದ ಹಳೆಯ ಪಾಠದಲ್ಲಿ ಕೇವಲ 15 ಋಚೆಗಳು ಇದ್ದುದಾಗಿ ತಿಳಿಯುತ್ತದೆ. (ವೈದಿಕ ಸಂಶೋಧನ ಮಂಡಲದ ಋಗ್ವೇದ: ಸಾಯಣ ಭಾಷ್ಯಸಹಿತ, ಸಂಪುಟ IV ಖಿಲಭಾಗ ಪು. 927-30 ನೋಡಿ) ಮೂಲ 15 ಋಚೆಗಳಿಗೆ ಒಂದೊಂದು ಸಂಪ್ರದಾಯದವರು ಇನ್ನೂ ಕೆಲ ಶ್ಲೋಕಗಳನ್ನು ಸೇರಿಸಿ ಪಠಿಸುವ ವಾಡಿಕೆ ತಲೆದೋರಿದ್ದಾಗಿ ಕಾಣುತ್ತದೆ. "ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ ಶರಣ್ಯೇ ತ್ರ್ಯಂಬಕೇ, ಗೌರಿ, ನಾರಾಯಣಿ ನಮೋಸ್ತುತೇ" ಎಂಬ ಶ್ಲೋಕವು ಕೆಲ ಪಠನ ಮಂತ್ರಗಳಲ್ಲುಂಟು. ಈ ಪಾಠದಂತೆ ಶ್ರೀ ಲಕ್ಷ್ಮಿಯು "ನಾರಾಯಣಿ", ಎಂದರೆ ನಾರಾಯಣನ ಅರ್ಧಾಂಗಿಯು, ಸರಿ. ಆದರೆ "ನಾರಾಯಣೀ" ಶ್ರೀ ಲಕ್ಷ್ಮಿಯನ್ನು "ಶಿವೇ", "ತ್ರ್ಯಂಬಕೇ", "ಗೌರಿ" ಎಂದೂ ಸಂಬೋಧಿಸಿದುದರ ಔಚಿತ್ಯವೇನು? ಇವು ನಿರರ್ಥಕ ವಿಶೇಷಣಗಳು ಅಲ್ಲವಾಗಿದ್ದರೆ, ಶ್ರೀ ಲಕ್ಷ್ಮಿಯು, ರುದ್ರ ಪತ್ನಿಯೂ ಅಹುದೇ? ಇದೇ ಬಗೆಯ ಇನ್ನೊಂದು ಪಾಠಬಂದಂತೆ, ಶ್ರೀ ಲಕ್ಷ್ಮಿಯು "ವಿಶ್ವಪ್ರಿಯೇ ವಿಷ್ಣು ಮನೋನು ಕೂಲೆ" ಕೂಡ ಆಗಿದ್ದಾಳೆ!

## ನಾರಾಯಣ-ಮುನಿ ವಿಚಾರ

ಶ್ರೀ ಲಕ್ಷ್ಮಿಯನ್ನು "ನಾರಾಯಣಿ" ಎಂದರೂ ಕೂಡ, ನಾರಾಯಣನೊ, ತಪೋನಿರತ ಓರ್ವ ಮುನಿ! ಮಹಾ ಭಾರತದ ಶಾಂತಿ ಪರ್ವದಲ್ಲಿ ನಾರಾಯಣೀಯ ಆಖ್ಯಾನ ಬರುತ್ತದೆ. ನಾರದನು ಶ್ರೀಮನ್ನಾರಾಯಣನ ದರ್ಶನಾರ್ಥಿಯಾಗಿ ಬದರಿಗೆ ಹೋಗುತ್ತಾನೆ; ಬದರಿಕಾಶ್ರಮದಲ್ಲಿ ನರ -ನಾರಾಯಣರ ಜೋಡಿ ತಪಸ್ಸಿನಲ್ಲಿ ಮಗ್ನವಾಗಿರುವುದನ್ನು ಕಾಣುತ್ತಾನೆ. "ದೇವಾ, ನೀನೇ ಜಗತ್ಕರ್ತನಿರುವಾಗ ಇನ್ನಾರನ್ನು ಒಲಿಸಿಕೊಳ್ಳಲು ತಪಸ್ಸನ್ನಾಚರಿಸುತ್ತಿರುವೆ?" ಎಂದು ಸೋಜಿಗಗೊಂಡು ನಾರದನು ಪ್ರಶ್ನಿಸುತ್ತಾನೆ. ತಪೋನಿರತ ಮುನಿಗಳು ವಿರಕ್ತರೆಂಬುದು ಸರ್ವ ಶ್ರುತವಿದೆ. ನಾರಾಯಣನ "ಪ್ರಕೃತಿಂ ಪರಾಂ" ಕಾಣಲು ಆತನ ಅಪ್ಪಣೆಯಂತೆಯೇ ನಾರದನು (ತುಂಬ ಪ್ರಯಾಸ ಪಟ್ಟು) ಶ್ವೇತ ದ್ವೀಪಕ್ಕೆ ಹೋಗುತ್ತಾನೆ. ಅಲ್ಲಿ ಪವಿತ್ರ ಮುಕ್ತಾತ್ಮರ ದರ್ಶನವಾಗುತ್ತದೆ. ನಾರದನ ಈ ಎರಡೂ ಸಂದರ್ಶನದ ವರದಿಗಳಲ್ಲಿ ಶ್ರೀಮನ್ನಾರಾಯಣನೊಡನೆ ಶ್ರೀ ಲಕ್ಷ್ಮಿಯನ್ನು ಕಂಡ ಒಂದೂ ಉಲ್ಲೇಖವಿಲ್ಲ! ಅದೇ ಪರ್ವದಲ್ಲಿ ಬಂದಿರುವ ಉಪಚರಿ ವಸುವಿನ ದರ್ಶನದಲ್ಲಿ ಕೂಡ, ಆತನು ಲಕ್ಷ್ಮೀ ಸಹಿತ ನಾರಾಯಣನನ್ನು ಕಂಡ ಹಾಗೆ ವರ್ಣನೆ ಬಂದಿಲ್ಲ!

## ಶ್ರೀ ಲಕ್ಷ್ಮಿಯ ತೊಡಕು

ಶ್ರೀ ಲಕ್ಷ್ಮೀ-ನಾರಾಯಣರ ಪರಸ್ಪರ ಸಂಬಂಧದ ಪೂರ್ವೋತ್ತರ ತಿಳಿಯುವ ಪ್ರಯತ್ನದಲ್ಲಿ, ಶ್ರೀ ಲಕ್ಷ್ಮೀ ದೇವಿಯ ಕುರಿತು ಹೊಸತೊಂದು ವಿಚಿತ್ರ ತೊಡಕು ಕಾಣಿಸಿಕೊಂಡಿತು: ನಾರಾಯಣ–ವಿಷ್ಣು ಮತ್ತು ತ್ರ್ಯಂಬಕ–ಶಿವ ಈ ದೈವತಗಳೊಡನೆ ಶ್ರೀ ಲಕ್ಷ್ಮಿಯ ಸಂಬಂಧವು ಬರುತ್ತಿರುವುದಾಗಿ, ಶ್ರೀಸೂಕ್ತದ ಪಾಠಾಂತರಗಳಿಂದ ನಿಶ್ಚಿತವಾಗಿ ಗೊತ್ತಾಗುತ್ತದೆ! ಇದರಿಂದಾಗಿ ತಲೆ ಎತ್ತುವ ಪ್ರಶ್ನೆಗಳು ಎರಡು. 1) "ಶ್ರೀ ಲಕ್ಷ್ಮೀ" ಎಂಬುವಳ ನಿಜ ಸ್ವರೂಪವೇನು? 2) ಇವಳು ಮೇಲಣ ಮೂವರು ದೇವರ ಮಡದಿ ಹೇಗೆ? "ನಾರಾಯಣ" ಮತ್ತು "ವಿಷ್ಣು" ಇವರು ಅಭಿನ್ನರು ಎಂದು ಬಗೆದರೂ ಈ ಪ್ರಶ್ನೆ ಪೂರ್ಣ ಬಗೆಹರಿದಂತೆ ಆಗುವುದಿಲ್ಲ; ಶಿವ (ರುದ್ರ)ನ ಮಡದಿಯೋ ಶ್ರೀ ಲಕ್ಷ್ಮಿ? ಎಂಬ ಎರಡನೆಯ ಪ್ರಶ್ನೆಯ ಇನ್ನುಳಿದ ಭಾಗದ ಸಮಸ್ಯಾ ಪರಿಹಾರ ಹೇಗೆ?

**ಸರ್ವ ಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಕೇ!**
**ಶರಣ್ಯೇ ತ್ರ್ಯಂಬಕೇ, ಗೌರಿ, ನಾರಾಯಣೀ ನಮೋಸ್ತುತೇ॥**

ಈ ಪದ್ಯದಲ್ಲಿ ಶ್ರೀ ಲಕ್ಷ್ಮೀ ಹಾಗೂ "ನಾರಾಯಣ" ಸಂಬಂಧ ಸೂಚಕ ಪದ, ಒಂದೇ ಒಂದು! ರುದ್ರನ ಸಂಬಂಧ ಸೂಚಕ ಪದಗಳು ಮಾತ್ರ ಮೂರು! ಹಾಗಾದರೆ ನಾರಾಯಣ—ವಿಷ್ಣುಗಳನ್ನು ಒಂದೇಯಾಗಿ ಬಗೆಯುವಂತೆ. ರುದ್ರ (ಶಿವ)ನೂ ನಾರಾಯಣ–ವಿಷ್ಣುಗಳಿಂದ ಬೇರೆಯಲ್ಲ. ಎಂದು ಸೂಚಿಸುವ ಉದ್ದೇಶವಿರಬಹುದೆ, ಶ್ರೀಸೂಕ್ತದ ಪಾಠಾಂತರದ ಆ ಋಚೆಯನ್ನು ರಚಿಸಿದ ಕವಿಯದು? ಎಲ್ಲ ದೇವರೂ ಒಂದೇ ಎಂದು ಹೇಳುವ ಉದ್ದೇಶವಿದೆಯೆ ಇಲ್ಲಿ?

ದೇವತಾ ಸ್ವರೂಪದ ಐಕ್ಯವನ್ನು ಅಥವಾ ಅಭೇದವನ್ನು ಪ್ರತಿಪಾದಿಸುವ ಭೂಮಿಕೆಗಳು ಎರಡು ಬಗೆಯವು ಇರಬಲ್ಲವು: 1) ದೇವರು ಎಂದರೆ ಸತ್ಯ. ಸತ್ಯವೇ ದೇವರು. ಆದ ಕಾರಣ ಸತ್ಯ ಅಥವಾ ದೇವರನ್ನು ಯಾವ ಹೆಸರಿನಿಂದ ಕರೆದರೇನು? ಎಲ್ಲ ದೇವರೂ ಒಂದೇ. ರಾಮ–ರಹೀಮ ಬೇರೆಯಲ್ಲ ಎಂದು ಪ್ರತಿಪಾದಿಸುವ ಪದ್ಧತಿ ಒಂದು. 2) ಇನ್ನೊಂದು ಪದ್ಧತಿಯಿಂದ ಪ್ರತಿಪಾದಿಸುವ ಅಭಿನ್ನತ್ವ ಮೊದಲನೆಯ ಅಭಿನ್ನತೆಗಿಂತ ತೀರ ಬೇರೆ ಬಗೆಯದಾಗಿದೆ. ಸಾಂಪ್ರದಾಯಿಕ ಹಾಗೂ ಐತಿಹಾಸಿಕ ಪರಂಪರೆಗಳ ಸಮೀಕ್ಷೆಯಲ್ಲಿ ಕೆಲವೊಂದು ದೇವತೆಗಳ ಮೂಲಧಾರಣೆಯು: (Concept) ತಳಹದಿಯ ದಿವ್ಯ ತತ್ತ್ವವು ಸಮಾನವಾಗಿರುವುದು ನಿಶ್ಚಿತವಾಗಿ ಗೊತ್ತಾಗುತ್ತದೆ.

ಇಲ್ಲಿ ಪ್ರಶ್ನೆ 1) ನಾರಾಯಣ ಹಾಗೂ ವಿಷ್ಣುಗಳು ಅಭಿನ್ನರು ಎಂದರೆ ಯಾವ ಬಗೆಯಲ್ಲಿ? ಇವೆರಡೂ ದೈವತಗಳ ಮೂಲಧಾರಣೆ ( Conception ) ಸಮಾನ ಸ್ವರೂಪದ್ದಾಗಿದೆಯೇ? ನಾರಾಯಣ – ವಿಷ್ಣುಗಳಲ್ಲಿ ಸಮಾನಧಾರಣೆಯಿದೆ ಎನ್ನಲು. ಸಂಪ್ರದಾಯವು ಅನುಕೂಲವಿದ್ದರೂ ಪ್ರತ್ಯಕ್ಷ ಪ್ರಮಾಣಗಳು – ಲಿಖಿತ – ಆಧಾರಗಳು ಏನುಂಟು? 2) ವೈಷ್ಣವ ಹಾಗೂ ಶೈವ ಸಂಪ್ರದಾಯಗಳು. ತಾವು ಪರಸ್ಪರರಿಂದ ಭಿನ್ನವೆಂದು ಹೇಳಿಕೊಳ್ಳುವದೇ ಕಂಡು ಬರುತ್ತಿರುವಾಗ. ವಿಷ್ಣು ಮತ್ತು ರುದ್ರರಲ್ಲಿ ಸಮಾನಧಾರಣೆಯನ್ನು ಅಪೇಕ್ಷಿಸುವುದು ಸಮರ್ಥನೀಯವಾಗಿದೆಯೆ? ಅದು ಇದ್ದುದಾದರೆ ಯಾವ ಬಗೆಯಲ್ಲಿ? ಶ್ರೀಸೂಕ್ತದ ಪಾಠಾಂತರದಲ್ಲಿ ದೊರೆವ ಮೇಲಣ ಆಧಾರ ಒಂದೇ ಸಾಕೆ? ಅದನ್ನು ಬಲವಾದುದೆಂದು, ಪ್ರಮಾಣಭೂತವೆಂದು ಗ್ರಹಿಸಬಹುದೆ? ಈ ಎರಡೂ ಪ್ರಶ್ನೆಗಳನ್ನು ನೇರವಾಗಿ ಚರ್ಚಿಸುವ ಮೊದಲು ಈ ಸಮಸ್ಯೆಯನ್ನು ಇನ್ನೊಂದು ಬಗೆಯಿಂದ ಸಮೀಕ್ಷಿಸಬಹುದಾಗಿದೆ.

ನಾರಾಯಣ. ವಿಷ್ಣು ಹಾಗೂ ರುದ್ರರ ನಿಜ ಸ್ವರೂಪವನ್ನು ಕುರಿತು ಇವರನ್ನೇ ವಿಚಾರಿಸುವುದಕ್ಕಿಂತ. ಇವರ ಅಂತರಂಗವನ್ನು ಶ್ರೀ ಲಕ್ಷ್ಮಿಯ ಮುಖಾಂತರವಾಗಿ ಶಕ್ಯವಿದ್ದಷ್ಟು ತಿಳಿದುಕೊಳ್ಳುವುದೂ ಲೇಸಾದೀತು. ಶ್ರೀ ಲಕ್ಷ್ಮಿಯು ಸಮುದ್ರ ಮಂಥನದಲ್ಲಿ ಹೊರ ಬಂದವಳು, ಎಂಬ ಕಥೆ ಮಹಾಭಾರತ. ಪುರಾಣಾದಿಗಳಲ್ಲಿ ಹಲವೆಡೆಗೆ ಬರುತ್ತದೆ. ಶ್ರೀ ಲಕ್ಷ್ಮಿಯು. ಸಮುದ್ರದ ಒಡಲೊಳಗಿಂದ ಹುಟ್ಟಿದವಳು. ಎಂದರೆ ನೀರಿಂದ ಒಗೆದವಳು ಆಗುತ್ತಾಳೆ. ನೀರಿನಿಂದ ದೇವತೆಗಳು ಹುಟ್ಟುವ ಸಂಗತಿ ಋಗ್ವೇದದ ಹತ್ತನೆಯ ಮಂಡಲದಲ್ಲಿ ಕೆಲವೆಡೆಗೆ ಬಂದಿದೆ. (ಸೂಕ್ತ 72. 82. 121. 129) . ಆದ ಕಾರಣ ಮೂಲ ಶ್ರೀ ಲಕ್ಷ್ಮೀ ದೇವತಾ ತತ್ತ್ವವು, ಜಲ ಸ್ವರೂಪದ್ದಾಗಿರಬೇಕು ಎಂದು ಇಲ್ಲಿ ಧ್ವನಿತವಾಗುತ್ತದೆ.

ಶ್ರೀ ಲಕ್ಷ್ಮಿಯು ಶ್ರೀಮನ್ನಾರಾಯಣನ ಅರ್ಧಾಂಗಿ ಎಂಬ ಪುರಾಣ ಸಂಕೇತವಲ್ಲಿ, ಏನಾದರೂ ಅರ್ಥ–ಔಚಿತ್ಯವಿದ್ದಲ್ಲಿ "ನಾರಾಯಣ" ಎಂಬ ದೇವತಾ ಮೂಲ ತತ್ತ್ವವೂ "ಜಲ" ಸ್ವರೂಪದ್ದೇ ಇರಬೇಕೆಂದು ಶ್ರೀ ಲಕ್ಷ್ಮಿಯ ಮೂಲಕ ಸ್ಪಷ್ಟವಾಗುತ್ತಿದೆ! ಶ್ರೀ ಲಕ್ಷ್ಮಿಯ ಜನ್ಮಕಥೆಯು ಅಡಕವಾಗಿರುವ ಮಹಾಭಾರತದಲ್ಲಿಯೇ ನಾರಾಯಣ ಸ್ವರೂಪ–ರಹಸ್ಯವನ್ನು ನಿವೇದಿಸುವ "ನಾರಾಯಣೀಯ ಆಖ್ಯಾನವೂ" ಒಳಗೊಂಡಿದೆ. "ನಾರಾಯಣ" ನಾಮದೊಳಗಿನ "ನಾರ" ಪದವು ಜಲಾರ್ಥಕವಾದುದಾಗಿದೆ. ("ಆಪೋ ನಾರಾ:") ಹೀಗೆ ಅನಾದಿಕಾಲದ ಸಂಪ್ರದಾಯ ಹೇಳುತ್ತದೆ. (ಇತಿ–ಪ್ರೋಕ್ತಾ:) ಎಂದು ಮಹಾಭಾರತದಿಂದ ಗೊತ್ತಾಗುತ್ತದೆ. ಆದ ಕಾರಣದಿಂದ ಶ್ರೀ ಲಕ್ಷ್ಮೀ ಹಾಗೂ ನಾರಾಯಣ ಈ ದೇವತಾ ಸಂಬಂಧದಲ್ಲಿ ದಾಂಪತ್ಯ ಭಾವವನ್ನು ಕಲ್ಪಿಸಿದ್ದಕ್ಕೆ ತಾತ್ತ್ವಿಕ ಹಿನ್ನೆಲೆಯಿಲ್ಲದಿಲ್ಲ, ಎಂದು ಕಂಡು ಬರುತ್ತದೆ. ("ನಾರಾಯಣ" ದೇವತಾ ತತ್ತ್ವದ ಇನ್ನೂ ಹೆಚ್ಚಿನ ವಿವರಣೆ ಇನ್ನೊಂದೆಡೆಗೆ ಬರಲಿದೆ.)

ಶ್ರೀ ಲಕ್ಷ್ಮೀ ವಿಷ್ಣು ಇವರ ಜೋಡಿಯನ್ನು ಕಲ್ಪಿಸಿದ ಸಂಪ್ರದಾಯದಲ್ಲೂ "ಶ್ರೀ ಲಕ್ಷ್ಮೀನಾರಾಯಣ" ಎಂಬಲ್ಲಿಯಂತೆ ಸ್ವಾರಸ್ಯವಿರಲಾರದೆ? ಏಕೆಂದರೆ ವಿಷ್ಣು ಮತ್ತು ನಾರಾಯಣ ಇವೆರಡೂ ದೈವತಗಳು ತೀರ ಬೇರೆಯಾಗಿವೆ. ಎಂದು ಡಾ॥ಭಂಡಾರಕರ ಪ್ರಭೃತಿ ವಿದ್ವಾಂಸರು ಹೇಳುತ್ತಿದ್ದಾರೆ! ಸಮುದ್ರ ಮಂಥನದ ಕಥೆಯಿಂದ ಲಕ್ಷ್ಮಿಯು ಜಲಸ್ವರೂಪಿ ಎಂದು ಗೊತ್ತಾಗುತ್ತದೆ. "ನಾರಾಯಣ" ನಾಮದೊಳಗಿನ ಪೂರ್ವಪದ "ನಾರ" ಇದು ಜಲಾರ್ಥ ಶಬ್ದ ಎಂದು ಮಹಾಭಾರತದಲ್ಲಿ ಹೇಳಿರುವ ಕಾರಣದಿಂದ,

ಶ್ರೀ ಲಕ್ಷ್ಮೀ–ನಾರಾಯಣರನ್ನು ದಂಪತಿಗಳೆಂದು ಸ್ವೀಕರಿಸಬಹುದಾದರೂ, ವಿಷ್ಣುವು ನಾರಾಯಣನಂತೆ, ಜಲರೂಪನೆಂದು ಹೇಳುವ ಪ್ರಮಾಣಗಳು ದೊರೆಯುವ ವರೆಗೆ, ಶ್ರೀ ಲಕ್ಷ್ಮಿಯನ್ನು ವಿಷ್ಣು ಪತ್ನಿ ಎಂದು ಗ್ರಹಿಸುವುದಾಗಲಿ, ವಿಷ್ಣು–ನಾರಾಯಣರು ಅಭಿನ್ನರು ಎಂದು ಬಗೆಯುವದಾಗಲಿ ಸಮಂಜಸವಾಗಲಾರದು. .

ಆದರೂ ವಿಷ್ಣುವಿಗೆ "ಮಧು" ಎಂಬ ಹೆಸರಿದ್ದುದಕ್ಕೆ ಋಗ್ವೇದದಲ್ಲಿಯೇ ಪ್ರಮಾಣಗಳಿವೆ. (I–154) ಶ್ರೀ ಲಕ್ಷ್ಮೀಯನ್ನು "ಮಾಧವಿ", "ಇಂಗಡಲ ಕುವರಿ" ಎಂದು ಬಗೆಯಲಾಗುತ್ತದೆ. ಈ ನಿಲುವಿನಲ್ಲಿ ಶ್ರೀ ಲಕ್ಷ್ಮೀಯನ್ನು ವಿಷ್ಣುಪತ್ನಿ ಎಂದು ಗ್ರಹಿಸಬಹುದಾಗಿದೆ.

ಇನ್ನುಳಿಯಿತು, ಲಕ್ಷ್ಮೀ–ರುದ್ರರ ಸಂಬಂಧದ ವಿಚಾರ. ಆದರೆ ಜಗದಂಬೆ, ಅಂಬಭವಾನಿಯು ರುದ್ರ–ಪತ್ನಿ ಎಂದು ನಂಬಲಾಗಿದೆ. ಆದ ಕಾರಣ ಮೊದಲು ಅಂಬೆ–ರುದ್ರರ ಸಂಬಂಧ ಸಮಾಲೋಚಿಸುವ.

## ಅಂಬಾ–ರುದ್ರಸ್ಯ ಸ್ವಸಾ—

ಅಂಬೆ (ಭವಾನಿ) ರುದ್ರನ ಸಹೋದರಿ ಎಂದು ಹೇಳುತ್ತದೆ ಯಜುರ್ವೇದ! ಆದರೆ, ಅಂಬೆಯು ರುದ್ರನ ಹೆಂಡತಿ ಎಂದು ಲೋಕ ಬಗೆದಿದೆ! ಯಾವುದು ನಿಜ? ಅಂಬೆ–ರುದ್ರನ ಸಹೋದರಿಯೋ? ಮಡದಿಯೋ? ರುದ್ರನಿಗೆ. "ತ್ರ್ಯಂಬಕ" ಎಂದುದುಂಟು ವೇದದಲ್ಲಿ. ತ್ರ್ಯಂಬ್ರಕ"ದಲ್ಲಿ "ತ್ರಿ + ಅಂಬಕ" ಎಂದು ಎರಡು ಪದಗಳಿವೆ. ವೇದಗಳಲ್ಲಿ "ಅಂಬೆ", "ಅಂಬಿ" ಈ ಎರಡು ಪದಗಳಿಗೆ ತಾಯಿ ಎಂದು ಅರ್ಥ ಗ್ರಹಿಸಲಾಗಿದೆ. "ಅಂಬ" ಪದಕ್ಕಿರುವ ಮಾತೃವಾಚಕ ಅರ್ಥದ ಮೇರೆಗೆ, ತ್ರ್ಯಂಬಕ" ಪದಕ್ಕೆ ಮೂರು ತಾಯಂದಿರುಳ್ಳವನು (ರುದ್ರ) ಎಂದು ಸ್ಪಷ್ಟೀಕರಣ ದೊರೆಯುತ್ತದೆ! ಹಾಗಾದರೆ "ಅಂಬ", "ಅಂಬಾ" ರುದ್ರನ ತಾಯಿಯೋ? ಸೋದರಿಯೋ? ಇದು ಇನ್ನೂ ಒಂದು ಹೆಚ್ಚಿನ ತೊಡಕು! ಋಗ್ವೇದದಲ್ಲಿ "ಅಂಬ", ಅಂಬಾ" ಈ ಪದಗಳು ಪ್ರಾಮುಖ್ಯದಿಂದ ನದೀ ಹಾಗೂ ಜಲದ ವರ್ಣನೆಯಲ್ಲಿ ಬಂದಿವೆ. (I–25, 26, II–42) ಈ ಕಾರಣದಿಂದಾಗಿ "ಅಂಬ" ಪದಕ್ಕೆ ಮಾತೃ ವಾಚಕಕ್ಕಿಂತಲೂ. ಜಲವಾಚಕ ಮೂಲಾರ್ಥವಿರುವ ಶಕ್ಯತೆಯೇ ವಿಶೇಷವಿದೆ. "ಅಂಬು" ಎಂದರೆ ನೀರು; ಜಲಾರ್ಥಕ; "ಅಂಭಸ್" ಪದ, ವೇದದಲ್ಲಿದೆ. ಆದರೆ "ಅಂಬು" ವೇದದಲ್ಲಿ ಇಲ್ಲ. "ಅಂಭೃಣಿ" ಹೆಸರು ವೇದದಲ್ಲಿದ್ದು. ಇದರಲ್ಲಿ ಜಲವಾಚಕ ಅರ್ಥವುಂಟು. "ಅಂಬ" ಇದು ಮೂಲತ: ಜಲವಾಚಕ ಪದವಿದ್ದು ರೂಢಿಯಿಂದ ಮಾತೃವಾಚಕವಾಗಿ ಮಾರ್ಪಟ್ಟಿರಬೇಕು. ""ತೀರ್ಥ" ರೂಪರೆಂದು ತಾಯ್ತಂದೆಗಳಿಗೆ ಹೇಳುವ ರೂಢಿ ಇಂದಿಗೂ ಉಂಟಷ್ಟೇ? ಇದು ವೇದಕಾಲದಷ್ಟು ಪ್ರಾಚೀನವಿದೆ. **"ಆಪೋ ಅಸ್ಮಾನ್ ಮಾತರ:, ದೇವೀರಾಪೋ ಮಾತರ:"** ಎಂಬ ಪ್ರಯೋಗಗಳು ಉಂಟು "ಆಪೋವಾ ಇದಮಗ್ರ ಆಸೀತ್" ಎಂಬ ಶ್ರುತಿಯಿದೆ. ಈ ಶ್ರದ್ಧೆಯಂತೆ ವಿಶ್ವೋತ್ಪತ್ತಿಯಾದುದು ಜಲದಿಂದ. ಈ ಕಾರಣ ಜಲವೇ, ಜನಗಳ ಮಾತೃ ಸ್ಥಾನದಲ್ಲಿ ಆಯಿತಷ್ಟೇ? ಈ ಭೂಮಿಕೆಯಲ್ಲಿ ಮಾತೃವಾಚಕವೆಂದು ಬಗೆಯಲಾದ "ಅಂಬ" ಪದದ, ಜಲಸ್ವರೂಪದ ಮೂಲ ದರ್ಶನವಾಗ ಬಲ್ಲುದಾಗಿದೆ. ಹೀಗೆ "ತೀರ್ಥರೂಪ". "ಗಂಗಾ ಭಾಗೀರಥಿ" ಎಂಬ ಸಂಪ್ರದಾಯದ ಬೇರುಗಳು. "ಆಪೋ ಅಸ್ಮಾನ್ ಮಾತರ:" ಎಂಬ ವೇದ ವಾಕ್ಯದಲ್ಲಿ ಹುದುಗಿರುವುದು ಕಾಣುತ್ತದೆ. ಪ್ರಸ್ತುತ ಬೇಕಾದುದು, "ಅಂಬ" ಪದದ ಅರ್ಥ. "ಅಂಬ" ಪದವು ಮೂಲತ: ಜಲವಾಚಕವಿರಬೇಕು ಎಂಬುದು ಇನ್ನೊಂದು ಬಗೆಯಿಂದಲೂ ಗಮನಕ್ಕೆ ಬರುತ್ತದೆ.

"ರುದ್ರನಿಗೆ" "ಗಂಗಾಧರ"ನೆಂದೂ ಹೇಳಲಾಗುತ್ತದೆ. ರುದ್ರನ "ಗಂಗಾಧರತ್ವ"ದ ಅರ್ಥವಾಗಲು. ಅಂಬೆಯಿಂದ ಸ್ವಲ್ಪ ನೆರವು ದೊರೆವಂತಿದೆ. ಅಂಬೆ ಮತ್ತು ಗಂಗೆ ಇವೆರಡೂ. ಬೇರೆ ಬೇರೆ ಪ್ರತಿಮೆಗಳಿರಲಾರವು. "ಗಂಗಾಂಬಿಕೆ" ಎಂಬ ಹೆಸರಿನ ವಾಡಿಕೆ ಈಗಲೂ ಇದೆ. ಗಂಗೆ ನೀರಿನ ಪ್ರತೀಕ. ಋಗ್ವೇದದಲ್ಲಿ "ಅಂಬ" ಪದವನ್ನು ನದಿಯೊಡನೆ ಸೇರಿಸುವ ವಾಡಿಕೆಯಿದ್ದುದನ್ನು ಹೇಳಿದ್ದಾಗಿದೆ. ಕಂ = ನೀರು; "ಕಂ"–ಗಾ = ಗಂಗಾ = ಜಲಪ್ರವಾಹ. ಈ ವಿಚಾರವು "ಹಾಲು ಮತ ದರ್ಶನ"ದಲ್ಲಿ ಬಂದಿದೆ. (ಪು. 279, 280) ಆದ ಕಾರಣ ಗಂಗಾ: ಅಂಬಿ (ಕಾ) ಇದು ಸಮಾನಾರ್ಥಕ ಜೋಡು ನುಡಿ.

ರುದ್ರನ "ತ್ರ್ಯಂಬಕ" ನಾಮವು, ಈ ದೃಷ್ಟಿಯಿಂದ ಅರ್ಥವತ್ತಾಗಿ ಕಾಣುತ್ತಿದೆ. "ತ್ರ್ಯಂಬಕಂ ಯಜಾಮಹೇ" ಎಂಬ ಮೃತ್ಯುಂಜಯ ಮಂತ್ರ ಋಗ್ವೇದದಲ್ಲಿದೆ (VII59,12, ತೈ. ಸಂ. 8.4) "ಅಂಬಕ" ಪದದ "ಕಣ್ಣು" ಎಂಬರ್ಥದ, ಒಂದೂ ಪ್ರಾಚೀನ ಪ್ರಯೋಗವು ದೊರೆತಿರುವುದಿಲ್ಲ! "ಅಂಬಕಕ್ಕೆ" "ಕಣ್ಣು" ಎಂಬ ಅರ್ಥವು ಬಹಳ ಇತ್ತೀಚೆಗೆ ಬಂದುದಾಗಿದೆ. ಆದ ಕಾರಣ "ಅಂಬ" ಪದಕ್ಕೆ ಮಾತೃವಾಚಕ ಅಥವಾ ಜಲವಾಚಕ ಅರ್ಥವನ್ನು ಹೇಳಬೇಕಾಗುತ್ತದೆ. ಈ ಅರ್ಥದ ಮೇರೆಗೆ "ತ್ರ್ಯಂಬಕ" ಪದದಿಂದ ರುದ್ರನಿಗೆ ಮೂವರು ತಾಯಂದಿರು ಎಂದು ಧ್ವನಿತವಾಗುತ್ತದೆ. ಶೈವ ಸಂಪ್ರದಾಯದಲ್ಲಿ ಸ್ಕಂದನು "ಷಾಣ್ಮಾತುರ:"! ಆರು ತಾಯಂದಿರುವುದರಿಂದ ಆರು ಮೊಗಗಳಂತೆ ಈತನಿಗೆ. ಗಣಪತಿಯು "ದ್ವೈಮಾತುರ:"! ಇಂತಹರ ತಂದೆ ರುದ್ರ (ಶಿವನು)! ಈತನು "ತ್ರೈಮಾತುರ:"! ತ್ರ್ಯಂಬಕ: ಆಗಿದ್ದರೆ ಸೋಜಿಗವೇನು?

ರುದ್ರನ ಈ ಮೂವರು ತಾಯಂದಿರು, ಈ ಅಂಬಿಕೆಯರು ಯಾರು ಯಾರು? ಇವರ ಉತ್ತರ ಗಂಗಾಂಬಿಕೆಯಲ್ಲೇ ಇದೆ! ಗಂಗೆ ತ್ರಿಪಥಗಾಮಿನಿಯಾಗಿದ್ದಾಳೆ. ವಿಯದ್ಗಂಗೆ, ಸ್ವರ್ಗಂಗೆ. ಭೂಗಂಗೆ. ಈ· ಮೂವರು ಗಂಗಾಂಬಿಕೆಯರ ಪುತ್ರನು: "ತ್ರ್ಯಂಬಕ." ರುದ್ರನು ಮೂರೂ ಲೋಕದಷ್ಟು ವಿಶಾಲನು, ವಿಶ್ವವ್ಯಾಪಕನು ಎಂದು ಸೂಚಿಸುವ ಉದ್ದೇಶವಿರಬಹುದು;"ತ್ರ್ಯಂಬಕ"ನೆಂದು ಹೇಳುವಲ್ಲಿ. "ದೇವತೆಗಳೆಲ್ಲ ನೀರಿನಿಂದ ಹುಟ್ಟಿದರು", "ದೇವರೆಲ್ಲ ಮುನ್ನ ನೀರಿನಲ್ಲಿದ್ದರು" ಎಂಬ ಋಗ್ವಚನವುಂಟು. **"ಯದ್ದೇವಾ ಅದಃ ಸಲಿಲೇ ಸುಸಂರಬ್ಧಾಃ ಅತಿಷ್ಠತ"** (X 72.6), ಇದು ನಿಜವಾದರೆ, ರುದ್ರ (ಶಿವ)ನೂ ನೀರಿನಿಂದೊಗೆದವನು, ಗಂಗಾಂಬಿಕಾ

ಪುತ್ರನು ಎಂಬ ಮಾತು ಇನ್ನೊಂದು ಬಗೆಯಲ್ಲಿ ಯಥಾರ್ಥವುಳ್ಳದ್ದೇ ಆಗುವುದು. ವಿಷ್ಣುವು ಸಹ ನೀರಿನಿಂದ ಹುಟ್ಟಿದವನಾಗುತ್ತಾನೆ, ಆತನನ್ನು "ಆದಿತ್ಯ"ನೆಂದು ಗ್ರಹಿಸಿದಲ್ಲಿ. ಅಷ್ಟ ಆದಿತ್ಯರು, ನೀರಿನಿಂದ ಉತ್ಪನ್ನರಾದರು. ಇವರು ಅದಿತಿ–ಪುತ್ರರು ಎಂಬ ಸಂಗತಿಯು, ಈ ಸೂಕ್ತದಲ್ಲೆ ಕೊನೆಗೆ ಬಂದಿದೆ! (8–9) ವಿಷ್ಣುವು ಜಲದಿಂದ ಉದ್ಭವಿಸಿದವನು, ಜಲಸ್ವರೂಪಿ ಎಂಬ ಮಾತು ಇಲ್ಲಿ ನಿದರ್ಶನಕ್ಕೆ ಬರುತ್ತಿದೆ! ಅಲ್ಲದೆ ರುದ್ರ–ವಿಷ್ಣುಗಳು ಸೋದರರಾದರು ಈ ಭೂಮಿಕೆಯಿಂದ!

ಆದರೆ ಜಲವಿಚಾರದ ಈ ಭೂಮಿಕೆಯಿಂದ ಉಂಟಾಗುವ ಇನ್ನೊಂದು ವಿಚಿತ್ರ ತೊಡಕು ನೋಡಿ! ವಿಷ್ಣು– ಪಾದದಿಂದ ಗಂಗೆ ಹೊರಟಳು ಎಂಬ ಪುರಾಣ ಸಂಕೇತದಂತೆ ಗಂಗೆ ವಿಷ್ಣುವಿನ ಮಗಳು ಆಗುತ್ತಾಳೆ. ತಪೋ ಭಂಗಕ್ಕಾಗಿ ಇಂದ್ರನು ಕಳಿಸಿದ ದೇವಾಂಗನೆಯರನ್ನು ತನ್ನ ಅತೀವ ಮೋಹಕ ರೂಪದಿಂದ ನಾಚಿಸಿದ ಉರ್ವಶಿಯು, ನಾರಾಯಣ ಮುನಿಯ ತೊಡೆಯಿಂದ ಹುಟ್ಟಿದವಳಾಗಿ ಒಂದು ಪುರಾಣ ಕಥೆಯುಂಟು. ಈ "ನಾರ"ಣ ಪುತ್ರಿ ಉರ್ವಶಿ! ಅಪ್ಸರೆ! ವಿಷ್ಣು ಮತ್ತು ನಾರಾಯಣ ಇಬ್ಬರಿಂದಲೂ ಎರಡು ಕನ್ಯಾ (ಜಲ) ರತ್ನಗಳು ಹುಟ್ಟಿದವು. ವಿಷ್ಣು ಪಾದದಿಂದ ಗಂಗಾಂಬಿಕೆ! "ನಾರ"ಣನ ತೊಡೆಯಿಂದ ಅಪ್ಸರೆ ಉರ್ವಶಿ! ಇಬ್ಬರೂ "ನೀರೆ"ಯರೇ! "ನಾರಿ" (ನಾರ = ಆಪ) ಮಣಿಗಳೇ! ಈ ಸಂಕೇತಗಳ ಶಬ್ದ ರೂಪದಲ್ಲಿ ಭೇದ ಕಂಡರೂ ಗರ್ಭಿತಾರ್ಥವು (Concept) ಒಂದೇ ಉಂಟಲ್ಲವೇ? ಇವರ ಈ "ನೀರು", "ನಾರತ್ವ" ಮನೋಹಾರಿಯಾಗಿದೆ! ಆಶ್ಚರ್ಯಕಾರಕವಾಗಿದೆ! ಇದುವೆ, "ನಿಹಿತಂ ಗುಹಾಯಾಂ" ಎಂಬ ಅರ್ಥಭಾಗ; ಭಾರತೀಯ ಸಾಂಪ್ರದಾಯಿಕ "ಗುಹ್ಯಾತ್ ಗುಹ್ಯ" ಸಾಂಕೇತಿಕ ಭಾಷೆಯೊಳಗಿನ ರಹಸ್ಯಾರ್ಥ.

ಅಂಬಿಕೆಯ ವಿಚಾರವು, ವಿಷ್ಣು ಹಾಗೂ ರುದ್ರ (ಶಿವ) ಇಬ್ಬರನ್ನೂ ಮತ್ತೆ ಇನ್ನೊಂದು ಬಗೆಯಲ್ಲಿ ಹತ್ತಿರಕ್ಕೆ ಸೆಳೆಯುತ್ತಿದೆ; ಕೊಲ್ಹಾಪುರದ ದೇವಿಯ ಮೂಲಕ! ಶ್ರೀ ಸೂಕ್ತದ ಒಂದು ಪಾಠದಲ್ಲಿ ಹೇಳಿರುವಂತೆ ಶ್ರೀ ಲಕ್ಷ್ಮಿ "ನಾರಾಯಣಿ"ಯಾಗಿರುವಳಲ್ಲದೆ, "ರುದ್ರಾಣಿ"ಯೂ ಅಹುದು! ಇದರಂತೆ ಕೊಲ್ಹಾಪುರದ ಈ ದೇವಿಗೆ, "ಮಹಾಲಕ್ಷ್ಮೀ" ಎಂಬಂತೆ ಅಂಬಾ (ಭವಾನಿ) ಎಂದೂ ಕರೆವ ವಾಡಿಕೆಯಿದೆ! ಈ ವಾಡಿಕೆ ಅರ್ವಾಚೀನವೇನೋ ಎನಿಸಿತ್ತು ಮೊದಲಲ್ಲಿ! ಆದರೆ, ಒಂದು ಕಂನಾಡ ಶಾಸನದಲ್ಲಿಯೂ ಈ ಬಗೆಯ ವಿಸಂಗತ ಮಾತು ಉಕ್ತವಾಗಿದ್ದು ಕಂಡಿತ್ತು! "ಶ್ರೀ ರುದ್ರಾರ್ಧಾಂಗೋತ್ಸಂಗ ನಿವಾಸಿನೀ, ಸಿಂಹವಾಹಿನೀ ಶ್ರೀಮತ್ ಕೊಲ್ಹಾಪುರ ಪೀಠಾಧಿಷ್ಠಿತೇ ಶ್ರೀ ಮನ್ಮಹಾಲಕ್ಷ್ಮೀ........" ಎಂಬ ಶಾಸನವುಂಟು (ಕ್ರಿ. ಶ. 1049, ಬಾಗಲ ಕೋಟೆ ತಾಲೂಕಿನ ಶಿರೂರು ಶಾಸನ), ಕಂನಾಡ ಕಥೆಯಲ್ಲಿ ಇದನ್ನು ಕೊಟ್ಟಿದೆ. (ಪು. 189), ಸುಮಾರು ಸಾವಿರ ವರುಷಗಳ ಹಿಂದೆಯೂ ಕೊಲ್ಹಾಪುರದಮ್ಮನು ಏಕಕಾಲಕ್ಕೆ ಶೈವ ಹಾಗೂ ವೈಷ್ಣವ ಈ ಉಭಯ ಸಂಪ್ರದಾಯದ ದೇವಿಯಾಗಿದ್ದಳು! ಕೊಲ್ಹಾಪುರದ ದೇವಿಯ ಈ ನಿಲುಮೆಯು ಈ ಮೊದಲು ಎತ್ತಿ ಹೇಳಿರುವ ಶ್ರೀ ಸೂಕ್ತದ ಒಂದು ಪಾಠವನ್ನು— ಪುಷ್ಟೀಕರಿಸುತ್ತದೆ ಎಂದರೆ ಇದು ತುಂಬ ಪ್ರಾಚೀನ ಸಂಪ್ರದಾಯವೆಂದಂತಾಯಿತು. ವೇದ ಕಾಲದಲ್ಲಿಯೇ ಈ ಪ್ರವೃತ್ತಿಯಿರಬೇಕಾಯ್ತು.

ಶ್ರೀ ಅಂಬಾ (ಭವಾನಿ) ಮತ್ತು ಮಹಾಲಕ್ಷ್ಮೀ ಎಂಬ ಹೆಸರಿನ ದೇವಿ ಒಬ್ಬಳೇ! ಹಾಗಾದರೆ ಈ ದೇವಿ ಯಾರ ಮಡದಿ? ರುದ್ರಾಣಿಯೋ, ನಾರಾಯಣಿಯೊ ಎಂಬ ಶಂಕೆಗೆ ಸಮಾಧಾನವುಂಟೆ? ಲಕ್ಷ್ಮೀ–ನಾರಾಯಣರು ಎಂಬ ನಿಲುಮೆಯಲ್ಲಿ ಈ ದೇವತಾ ತತ್ವದಂತೆ ಇಬ್ಬರೂ ರಸ (ಜಲ) ಸ್ವರೂಪರಾಗಿದ್ದಾರೆ. ಆದ ಕಾರಣ, ಇದು ವಿಷಮ ದಾಂಪತ್ಯವಾಗಲಿಲ್ಲ. ಅಂಬೆ (ಗಂಗೆ) ಕೂಡ ಜಲಸ್ವರೂಪದ ಪ್ರತೀಕವೆಂದು ಗ್ರಹಿಸಿದಲ್ಲದೆ, ಜಲದಿಂದ ಒಗೆದ ಲಕ್ಷ್ಮಿಗೆ, ಅಂಬೆ (ಭವಾನಿ) ಎಂಬ ಹೆಸರು ಸಲ್ಲದು. ಈ ಹಿನ್ನೆಲೆಯಲ್ಲಿ, ಅಂಬೆ ಶ್ರೀ ಲಕ್ಷ್ಮೀ ದೇವಿಗೆ ಇರುವ "ತ್ರ್ಯಂಬಕ" ನಾಮದ ಔಚಿತ್ಯವು ಗಮನಕ್ಕೆ ಬರುವಂತಿದೆ. "ತ್ರಿಪಥಗಾಮಿನೀ" ಗಂಗೆಗೇ "ತ್ರಿ"–ಅಂಬಿಕೆ ಎಂಬ ಹೆಸರು ಸಾರ್ಥಕವಾಗಬಲ್ಲುದಾಗಿದೆ. ಅಂಬೆ–ಶಿವೆ, ಮತ್ತು ಶ್ರೀ ಲಕ್ಷ್ಮೀ = ನಾರಾಯಣೀ ಇವರು ಒಂದೇ ಎಂದು ಶ್ರೀ ಸೂಕ್ತದ ಒಂದು ಪಾಠವೂ ಹೇಳುತ್ತಿದೆ. ಈ ಪಾಠದಿಂದ ಶೈವ ಹಾಗೂ ವೈಷ್ಣವ ಪಂಥಗಳ ಉಗಮದಲ್ಲಿ ಒಂದೇ ಇರಬೇಕೆಂಬ ಮಾತನ್ನು ಒಪ್ಪದೆ ಬೇರೆ ಉಪಾಯ ತೋರದು! ಅಂಬಾ (ಭವಾನಿ) = ಮಹಾಲಕ್ಷ್ಮೀ ಎಂದು ಬಗೆದಲ್ಲಿ ರುದ್ರ (ಶಿವ) = ವಿಷ್ಣು (ನಾರಾಯಣ) ಎನ್ನುವ ಹೊಣೆ ತಲೆಯ ಮೇಲೆ ಬರುವುದು! ಆದರೆ ಈ ಸಮೀಕರಣದಲ್ಲಿ ತಥ್ಯಾಂಶವೆಷ್ಟಿದೆ, ಎಂಬುದನ್ನು ಇನ್ನೂ ಬೇರೆ ಬಗೆಗಳಿಂದಲೂ ಪ್ರಾಮಾಣಿಸಿ ನೋಡುವುದು ಅವಶ್ಯವಿದೆ.

## ಲೋಕಮಾತೆ ಅದಿತಿ: ಎಲ್ಲಮ್ಮ

ಶ್ರೀ ಲಕ್ಷ್ಮಿಯಂತೆ ರುದ್ರ–ವಿಷ್ಣು ದೈವತಗಳ ತಳಕು ಹಾಕುವ ಇನ್ನೊಬ್ಬ ದೇವಿಯೆಂದರೆ. ಶ್ರೀ "ಅದಿತಿ". ಈ ದೇವಿ ಶ್ರೀ ಲಕ್ಷ್ಮೀಯನ್ನು ಹಲವು ರೀತಿಯಲ್ಲಿ ಹೋಲುತ್ತಾಳೆ! ಇಬ್ಬರೂ ಲೋಕ ಮಾತೆಯರು; ಇವರು ಎಲ್ಲರ ಅಮ್ಮ: ಇನ್ನೊಂದು ಚಮತ್ಕಾರ: **ಎಲ್ಲಮ್ಮನನ್ನು "ಶ್ರೀ ಲಕ್ಷ್ಮಿ"ಯೆಂದು ಭಜಿಸುವ ಮನೆತನಗಳು ಇರುವಂತೆ, "ಭವಾನಿ" "ಅಂಬಿಕೆ" ಎಂದು ಪೂಜಿಸುವ ಮನೆತನಗಳೂ ಉಂಟು!** ಎಲ್ಲಮ್ಮನಲ್ಲಿ ಶೈವ–ವೈಷ್ಣವ ಈ ಉಭಯ ಸಂಪ್ರದಾಯಗಳೂ ಒಂದುಗೂಡುತ್ತಿರುವುದನ್ನು ಇಲ್ಲಿ ಕಾಣಬಹುದು! ಎಲ್ಲಮ್ಮನನ್ನು "ರೇಣುಕೆ" ಎಂದು ಕಾಣುವ ಸಂಪ್ರದಾಯವು ಅರ್ವಾಚೀನ. "ರೇಣುಕೆ" ಮಾನವ ವ್ಯಕ್ತಿ: "ಎಲ್ಲಮ್ಮ" ಇದು ದೈವೀ ಶಕ್ತಿಯ ವಿಶಿಷ್ಟ ರೂಪ. "ರೇಣುಕೆ" ಜಮದಗ್ನಿಯ ಹೆಂಡತಿ; ಸರಿ ಹೋಯ್ತು: ಆದರೆ ಎಲ್ಲಮ್ಮ ಯಾರ ಅರ್ಧಾಂಗಿ? ದಿಗ್ಭ್ರಮೆಯನ್ನುಂಟು ಮಾಡುವ ಈ ಪ್ರಶ್ನೆಯನ್ನು ಎತ್ತುವ ಗೋಜಿಗೆ ಹೋದವರಿಲ್ಲ! ಆದರೆ ಪ್ರಶ್ನೆ ನಿಜವಷ್ಟೆ? "ಅದಿತಿ"ಯ ಬಗೆಗೂ ಸುಮಾರಾಗಿ ಇದೇ ಪ್ರಶ್ನೆ ಸಂಭವಿಸುತ್ತದೆ! ಏಕೆಂದರೆ ಅಖಂಡಿತೆ ಅದಿತಿ. ಎಲ್ಲ(ರ) ಅಮ್ಮ ತಾನೆ? ಎಲ್ಲರ ಅಮ್ಮ–"ಅದಿತಿ" ಯಾರ ಮಡದಿ?

"ಅದಿತಿ"ಯ ಒಂದು ಸ್ತೋತ್ರದಲ್ಲಿ, ಬಂದ ವರ್ಣನೆ ಹೀಗಿದೆ:

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ ಅಮೃತಸ್ಯನಾಭಿಃ॥ (ಋಕ್ VIII 101, 15)

ಈ ಉಲ್ಲೇಖದ ಮೇರೆಗೆ ಅದಿತಿಯು ರುದ್ರಿಯರ ತಾಯಿ ಆಗುತ್ತಾಳೆ. ರುದ್ರಿಯರೆಂದು ಮರುತರಿಗೆ ಹೆಸರು. ಮರುತರನ್ನು "ರುದ್ರ ಪುತ್ರ"ರೆಂದು ವರ್ಣಿಸಲಾಗಿದೆ. ಆದ ಕಾರಣ "ರುದ್ರಾಣಾಂ ಮಾತಾ" ಆಗಿರುವ ಅದಿತಿಯು, ರುದ್ರನ ಅರ್ಧಾಂಗಿಯಾಗುತ್ತಾಳೆ. ಈ ಸಂಬಂಧವನ್ನು ದೃಢಪಡಿಸುವ ಇನ್ನೂ ಒಂದೆರಡು ಸಾಂಕೇತಿಕ ಸೂಚನೆಗಳು ಈ ಸ್ತೋತ್ರದಲ್ಲಿ ಉಂಟು!

ಇದೇ ಋಚೆಯಲ್ಲಿ "ಅದಿತಿ: ಗೌ" ಎಂದು ಹೇಳಿದ್ದಾಗಿದೆ. "ಗೋ" ಸಂಕೇತದ ಮೂಲಕವಾಗಿ ಇವಳು, ಹಾಲಿನ ಆಗರ ಎಂದು ಹೇಳಿದಂತಾಯಿತು. ಅಲ್ಲದೆ, "ಅಮೃತಸ್ಯನಾಭಿ:" ಎಂಬ ಪದದಿಂದ ಈ ಋಚೆಯಲ್ಲೇ ಅದಿತಿಗೆ "ಗೌ" ಎಂದ ಮಾತಿನ ಸ್ಪಷ್ಟೀಕರಣವೂ ಉಂಟು! ಭೂಲೋಕದಲ್ಲಿ ಅದಿತಿಯ ಪ್ರತಿನಿಧಿಯೆಂದರೆ, "ಗೋವು"; ಗೃಹ್ಯ ಸೂತ್ರಗಳಲ್ಲಿ ಇದಕ್ಕೆ ಆಧಾರವಿದೆ. ರುದ್ರನು "ವೃಷಭ"ನು ಅರ್ಥಾತ್" ರುದ್ರಾಣಾಂ ಮಾತಾ ಅದಿತಿ ಗೋ ರೂಪಧಾರಿಣಿ"! "ಅದಿತಿ ರುದ್ರ ಪತ್ನಿ", ಎಂಬ ಈ ಎಲ್ಲ ಸಂಕೇತ ಪ್ರತೀಕಗಳು ಎಷ್ಟೊಂದು ಮನೋಜ್ಞ ರೀತಿಯಲ್ಲಿ ಸುಸಂಗತವಾಗಿವೆ! ಮರುತರನ್ನು "ಪೃಶ್ನಿ ಮಾತರ:", "ಗೋ ಮಾತರ:" ಎಂದೂ ಬೇರೆಡೆಗೆ ವರ್ಣಿಸಿದ್ದುಂಟು! ಈ ನಿಟ್ಟಿನಿಂದಲೂ ಅದಿತಿ; ಗೋವು; ರುದ್ರ; ವೃಷಭ–ಎಂಬಲ್ಲಿರುವ ಸಂಗತಿ ದೃಢಪಡುವುದು.

ಆದರೆ, ವಾಜಸನೇಯ ಸಂಹಿತೆಯಲ್ಲಿ "ಅದಿತ್ಯೈ ವಿಷ್ಣು ಪತ್ನ್ಯೈ" (29–60) ಎಂಬ ಉಲ್ಲೇಖವಿದೆ! ಇದರಿಂದಾಗಿ ಒಂದು ಪ್ರಶ್ನೆ ಏಳುತ್ತದೆ: ಅದಿತಿಯ ಪತಿಯಾಗುವದರ ಬಗೆಗೆ, ರುದ್ರ ಮತ್ತು ವಿಷ್ಣು ಇವರೊಳಗಿನ (ಎಂದರೆ ಈ ದೇವರುಗಳ ಭಕ್ತ ಶಿರೋಮಣಿಗಳೊಳಗಿನ) ಈ ಸ್ಪರ್ಧೆಯ ಅರ್ಥವೇನು? ಇಬ್ಬರಿಗೂ ಹಕ್ಕು ಹೇಳುವ ಅಧಿಕಾರವಿರಬೇಕಾದರೆ "ಅದಿತಿ" ದೇವಿ ಶೈವ-ವೈಷ್ಣವ ಎಂಬ ಸಂಪ್ರದಾಯಗಳ ಸ್ಪರ್ಧೆಗೆ ಪೂರ್ವದವಳು ಎಂದರೆ ಎರಡೂ ಸಂಪ್ರದಾಯಗಳಿಗೆ ಮೂಲದ ಒಂದು ಪಂಥದವಳು ಎಂದು ಇದರ ಮೂಲಕ ಸೂಚಿತವಾಗುವುದಿಲ್ಲವೆ?

ಇನ್ನೂ ಒಂದು ತೊಡಕು: "ಆದಿತ್ಯಾನಾಂ ಅಹಂ ವಿಷ್ಣು:" ಎಂದು ಗೀತೆಯೇ ಹೇಳುತ್ತದೆ. ಅದಿತಿಯು "ಸ್ವಸಾ ಆದಿತ್ಯನಾಂ ಎಂಬ ಈ ಋಗ್ವೇದದ ಉಲ್ಲೇಖದಂತೆ, ಇವಳು (ಅದಿತಿ) ವಿಷ್ಣುವಿನ ಸೋದರಿಯಾಗುವಳು! "ಆದಿತ್ಯ" ಎಂಬ ಹೆಸರೇ "ಅದಿತಿಯ" ಮೂಲಕ ಬಂದಿರುವುದಾಗಿ ಸಂಪ್ರದಾಯವೇ ಹೇಳುತ್ತದೆ! ಅದಿತಿಯ ಮಕ್ಕಳು ಆದಿತ್ಯರು; ಸರಿ ಹೋಯ್ತು. ಆದರೆ ಆದಿತ್ಯರಲ್ಲೊಬ್ಬನೆಂಬ ವಿಷ್ಣುವು ಅದಿತಿ ಪುತ್ರನಾಗುತ್ತಾನೆ! ಅಥರ್ವವೇದದಲ್ಲಿ ಇದಕ್ಕೆ ಆಧಾರವು ಇದೆ. "ಮಧುಕಣ" ರೂಪೀ ಅದಿತಿಯು "ಮಾತಾದಿತ್ಯನಾಂ ದುಹಿತಾವಸೂನಾಂ" ಎಂದು ಅಲ್ಲಿ ಸ್ಪಷ್ಟವಾಗಿಯೇ ಹೇಳಿದ್ದುಂಟು. (IX–4)

ಅದಿತಿಯು ದಕ್ಷ(ಪ್ರಜಾಪತಿ) ಪತ್ನಿಯಾಗಿರುವುದೂ ಋಗ್ವೇದದ ಒಂದು ಸೂಕ್ತದಿಂದ ಕಾಣುತ್ತದೆ. (X–72) ಆ ಸೂಕ್ತದಲ್ಲಿಯೇ ಇವಳು ದಕ್ಷನ ತಾಯಿಯೆಂದೂ ದಕ್ಷನ ಮಗಳು ಎಂದೂ ಉಲ್ಲೇಖವಿದೆ (ಅದಿತೇರ್ದಕ್ಷ: ಅಜಾಯತ. ದಕ್ಷಾದ್ವದಿತಿ:ಪರಿ) ಬ್ರಾಹ್ಮಣಗಳ ಕಾಲದಲ್ಲಿ ಅದಿತಿಯು. ಕಶ್ಯಪ-ಪತ್ನಿ ಎಂಬ ಆಗಿನ ಕಥೆ ತಲೆಯೆತ್ತಿದ್ದುಂಟು. ಈ ವಿಸಂಗತಿಯನ್ನು ತೊಡೆದು ಹಾಕುವುದಕ್ಕೋ ತಿಳಿಯದು, ಕಶ್ಯಪನನ್ನು ವಿಷ್ಣುವಿನ ಅವತಾರವೆಂದು ಹೇಳಿದ್ದುಂಟು. ಇದಂತಿರಲಿ. ವಿಷ್ಣು ಮತ್ತು ಅದಿತಿಯರಲ್ಲಿ ಎಷ್ಟು ಬಗೆಯ ಸಂಬಂಧವು ಬಂದಂತಾಯಿತು? ಎಂಬುದನ್ನು ಸಮೀಕ್ಷಿಸುವಂತಿದೆ. ತಾಯಿ- ಮಗು "ಮಾತಾ ಆದಿತ್ಯಾನಾಂ" ಎನ್ನುವದರಿಂದ ಪತಿ-ಪತ್ನಿ "ಅದಿತ್ಯೈ ವಿಷ್ಣು ಪತ್ನ್ಯೈ" ಎಂಬುದರಿಂದ. ಸೋದರ-ಸೋದರಿ "ಸ್ವಸಾ-ಆದಿತ್ಯಾನಾಂ" ಎಂಬುದರಿಂದ ತಿಳಿಯುವದು.

ಇನ್ನು. ಅದಿತಿಯ ಮೂಲ ಧಾರಣೆಯನ್ನು ಗಮನಕ್ಕೆ ತಂದು ಕೊಡುವ ಕೆಲವು ಸಂಗತಿಗಳನ್ನು ಒಂದೆಡೆಗೆ ತಂದುಕೊಂಡು ಸಮಾಲೋಚಿಸುವುದು ಅವಶ್ಯ. ಸೃಷ್ಟಿ ನಿರ್ಮಾಣವನ್ನು ಕುರಿತು ಒಂದು ಸೂಕ್ತದಲ್ಲಿ "ಅದಿತಿ"-"ದಕ್ಷರ" ಉಲ್ಲೇಖ ಬರುವುದನ್ನು ಮೇಲೆ ಸೂಚಿಸಿದ್ದಾಗಿದೆ. "ಅಷ್ಟೌ ಪುತ್ರಾಸೋ ಅದಿತೇ:ಯೇ ಜಾತಾ: ತನ್ವಸ್ಪರಿ"ಎಂಬ ವರ್ಣನೆಯಲ್ಲಿ, ಎಂಟು ಮಕ್ಕಳು(ಆದಿತ್ಯರು) ಅದಿತಿಯ ತನುವಿನಿಂದ ಹುಟ್ಟಿದ್ದರು ಎಂದು ಹೇಳಿದೆ(8) ಇದೇ ಸೂಕ್ತದಲ್ಲಿ ಇದಕ್ಕೂ ಮೊದಲು ಈ ದೇವರುಗಳು ನೀರಿನಲ್ಲಿ ಇದ್ದರು: ಇವರಲ್ಲಿ ಒಬ್ಬನು ನೀರಿನಿಂದ ಹೊರಬಂದನು; (ಅವನೇ ಮಾರ್ತಾಂಡ) ಎಂಬ ಉಲ್ಲೇಖ ಉಂಟು. (6) 6ನೆಯ ಹಾಗೂ 8ನೆಯ ಋಚೆಯೊಳಗಿನ ಈ ಉಲ್ಲೇಖಗಳಿಂದ ಅದಿತಿಯು ಆದಿ ಜಲಸ್ವರೂಪಿಣೀ ದೇವಿ ಎಂಬ ಸಂಗತಿ ನಿ:ಸಂದಿಗ್ಧ ರೀತಿಯಲ್ಲಿ ಅರಿಕೆಗೆ ಬರುತ್ತಿದೆ. ಈ ದಿವ್ಯ "ಮೂಲ ಜಲ" ಎಂಬುದು ಕೇವಲ ಜಲವಲ್ಲ, ಆಪ-ರಸ ಸ್ವರೂಪವದ್ದು. ಎಂಬುದನ್ನು ಸೂಚಿಸುವ ಇನ್ನೂ ಕೆಲ ಸಂಕೇತಗಳು ಋಗ್ವೇದವಲ್ಲಿ ಉಂಟು. "ಅದಿತಿ:ಗೌ": "ಅಮೃತಸ್ಯನಾಭಿ:" ಎಂಬ ಮಾತು ಮೇಲೆ ಬಂದಿದೆ. ಅಲ್ಲದೆ "ಅದ್ರಿಬರ್ಹಾ ಅದಿತಿ: ಪಿನ್ವತೇ ಮಧು-ಮತ್ ಪಯ:" ಎಂಬ ಇನ್ನೊಂದು ಉಲ್ಲೇಖವು ಅತ್ಯಂತ ಉಚಿತಾರ್ಥವುಳ್ಳ, ಸಮರ್ಪಕವಾಗಿದೆ.

ಇಂತಹ ಮಧುಮತ್ ಪಯೋರೂಪೀ "ಅದಿತಿ" ದೇವಿಯ ಪತಿಗಳೆಂದು ಹೇಳಲಾಗುವ ರುದ್ರ ಹಾಗೂ ವಿಷ್ಣು ಈ ದೈವತಗಳ ಮೂಲ ಸ್ವರೂಪವು ಯಾವ ಬಗೆಯದಾಗಿರಬಹುದು. ರುದ್ರ-ನಾರಾಯಣ-ವಿಷ್ಣುಗಳ ಬಗೆಗೆ ಶ್ರೀ ಲಕ್ಷ್ಮಿಯ ಮುಖಾಂತರವಾಗಿ ತಿಳಿದಂತೆ ಅದಿತಿಯ ಮೂಲಕವಾಗಿಯೂ ಮೊದಲಿಗಿಂತಲೂ ಸ್ವಲ್ಪ ಹೆಚ್ಚೇ. ಕೆಲವು ಸಂಗತಿಗಳು ಬೆಳಕಿಗೆ ಬರುತ್ತಿಲ್ಲವೇ?

ವೇದ ಕಾಲದ ಕೊನೆಗೆ ಅದಿತಿಯ ಅಸ್ತಮಾನ, ಶ್ರೀ ಲಕ್ಷ್ಮಿಯ ಉದಯ ಇವು ಒಂದರ ಹಿಂದೊಂದು ಆದಂತೆ ಎನಿಸುವುವು. ಋಗ್ವೇದದಲ್ಲಿ "ಅದಿತಿ" ಸರ್ವ ಶ್ರೇಷ್ಠಳಲ್ಲದಿದ್ದರೂ. ಸರ್ವಪ್ರಿಯ ದೇವಿಯಾಗಿದ್ದುದಾಗಿ ಕಾಣುತ್ತಾಳೆ. ಆದರೂ ಇವಳು ವೇದಕಾಲದ ಕೊನೆಗೆ ಕಾಣದಾಗಿದ್ದಾಳೆ! ಆ ಸ್ಥಳದಲ್ಲಿ ಲಕ್ಷ್ಮಿಯೆ ಬಂದುದಾಗಿ ಕಾಣುತ್ತದೆ. (ಇಲ್ಲಿ ಲಕ್ಷ್ಮೀ ಪದವನ್ನು ಸರ್ವವ್ಯಾಪಕಾರ್ಥದಲ್ಲಿ ಉಪಯೋಗಿಸಲಾಗಿದೆ.) ಪುರಾಣಗಳಲ್ಲಿ ಬರುವ ದೇವಿಯರಲ್ಲಿ ಸರಸ್ವತಿಯೊಬ್ಬಳೇ ಋಗ್ವೇದದಲ್ಲಿ ಕಾಣುತ್ತಾಳೆ. ಸರಸ್ವತಿಯೂ ಜಲದೇವಿಯೇ ನದೀ ಸ್ವರೂಪಿಣಿ! ವೇದದಲ್ಲಿ "ಅಂಬ" ದೇವಿ ಎಂದುದು ಇವಳಿಗೆ! ಇದೇ "ಅಂಬ" ಪದದ ಪ್ರಾಚೀನ ಉಲ್ಲೇಖ (II 40–16) "ಅಂಬ

ಯ:ಯಂತಿ ಅಧ್ವಭಿ:" ಎಂಬ ಇನ್ನೊಂದು ಉಲ್ಲೇಖದಲ್ಲಿ ಬಹುವಚನಾಂತ "ಅಂಬು" ಪದವು ಕಾಣಿಸಿಕೊಳ್ಳುತ್ತದೆ. ಇಲ್ಲಿ ನಿ:ಸಂದಿಗ್ಧವಾಗಿ "ಅಂಬಯ:"ಪದವು ಜಲವಾಚಕ ಅರ್ಥವುಳ್ಳದ್ದಾಗಿದೆ. ( I 26-16 ) ಕೌಶೀತಕೀ ಉಪನಿಷತ್ತಿನಲ್ಲಿ "ಅಂಬಯಾ: ನದ್ಯ:"ಎಂಬ ಪ್ರಯೋಗವುಂಟು. (1-3) ಇದು ದಿವ್ಯ ಜಲವೆಂದಲ್ಲಿ ಹೇಳಿದೆ. ಯಜುರ್ವೇದದಲ್ಲಿ ದೇವೀವಾಚಕ "ಅಂಬ" ಪದ ಬರುತ್ತದೆ. "ಅಂಬಾ ರುದ್ರಸ್ಯ ಸ್ವಸಾ" ಎಂಬ ಉಲ್ಲೇಖವೇ ಅದು. ಪ್ರಾಚೀನ ಉಲ್ಲೇಖಗಳ ಮೇಲಿಂದ "ಲಕ್ಷ್ಮಿಯು" ಅಂಬಗೆ ಕಿರಿಯಳಾಗಿ ತೋರುತ್ತಾಳೆ; ಏಕೆಂದರೆ ಲಕ್ಷ್ಮಿಯ ಉಲ್ಲೇಖಗಳು ಅಂಬೆಯಷ್ಟು ಪ್ರಾಚೀನವಾಗಿಲ್ಲ. ಅಲ್ಲದೆ "ಲಕ್ಷ್ಮೀ" ಎಂಬ ಹೆಸರು ಲಾಂಛನ (ಲಕ್ಷಣ) ಸೂಚಕವಾಗಿದೆ. "ಅಂಬ"ದಂತೆ ಮೂಲ ವಸ್ತು ನಿದರ್ಶಕ ಪದವಲ್ಲ. ಲಕ್ಷ್ಮಿಯು "ಅಂಬುಧಿ"ಯೊಳಗಿಂದ ಹೊರಬಂದವಳು ಎಂಬ ಪುರಾಣಕಥೆಯುಂಟಷ್ಟೆ ಇಲ್ಲಿ "ಅಂಬ" ಲಕ್ಷ್ಮಿಯ ಮಾತೃಸ್ಥಾನ ಸೂಚಕವಾಗಿರುವುದು, ಸೂರ್ಯ ಪ್ರಕಾಶದಷ್ಟು ಸ್ಪಷ್ಟವಿದೆ. ಅದಿತಿಯು ಜಲಸ್ವರೂಪದಿಂದ ಇವಳು ಗಂಗೆ, ಅಂಬಿಕೆ ಬಳಗದವಳೆಂದೇ ಗೊತ್ತಾಗುತ್ತದೆ. "ಅದಿತಿ" ಪದದಿಂದ ಅಖಂಡಿತ ಪ್ರಾಥಮಿಕ ಮೂಲ ದಿವ್ಯ ತತ್ತ್ವದ ಬೋಧವಾಗುತ್ತದೆ ಅಂಬೆಯ ಉಲ್ಲೇಖಗಳು ಅದಿತಿಯಷ್ಟು ವೆಗ್ಗಳವಾಗಿಲ್ಲ.

ಆದರೂ ವೇದಕಾಲದ ತರುವಾಯ "ಅದಿತಿ" ಹಿಂದೆಬಿದ್ದು ದೇವಿಯ ರೂಪದಲ್ಲಿ ಅಂಬೆ, ಲಕ್ಷ್ಮಿ ಮತ್ತು ಸರಸ್ವತಿಯರು ಪ್ರಾಶಸ್ತ್ಯ ಪಡೆಯತೊಡಗುತ್ತಾರೆ. ಆದರೆ ಋಗ್ವೇದ ಸೂಕ್ತಗಳಲ್ಲಿ ಕಾಣುವ ಆತ್ಮೀಯತೆ, ಗೌರವ,ಭಕ್ತಿ, ಪೂಜ್ಯಭಾವನೆಯ ಮಾನದಿಂದ, ಸರಸ್ವತೀ ದೇವಿಯು ಹಿಂದೆಬಿದ್ದು, ಪುರಾಣಾಂತರಗಳಲ್ಲಿ ಅಂಬೆ-ಲಕ್ಷ್ಮೀ ದೇವಿಯರ ಪ್ರಭಾವವೇ ಹೆಚ್ಚಾಗ ತೊಡಗಿದ್ದು ಕಾಣುತ್ತದೆ ! ಈ ದೇವಿಯ ಏರಿಕೆ ರುದ್ರ ಮತ್ತು ವಿಷ್ಣು ಈ ದೈವತಗಳ ಭಾಗ್ಯದೊಡನೆ ಬೆಸೆದುಕೊಂಡ ಕಾರಣದಿಂದಲೇ ಇರಬೇಕು: ಅಂಬೆ-ಲಕ್ಷ್ಮಿಯರ ಮಹಾತ್ಮ್ಯವು ಅನನ್ಯ ಸಾಧಾರಣವಾಗಿ ಹೆಚ್ಚಾದುದು ಕಾಣುತ್ತದೆ. ಪಾಪ ! ಆ ಬ್ರಹ್ಮನೊಡನೆ ಗಂಟು ಹಾಕಿದ ಸರಸ್ವತೀ ದೇವಿಯ ವೈಭವ, ಬ್ರಹ್ಮನಷ್ಟೇ ಸಂದಿಗ್ಧ ಸ್ಥಿತಿಯಲ್ಲಿ ಇಂದಿಗೂ ಕಾಣಿಸಿಕೊಳ್ಳುತ್ತದೆ. ಋಗ್ವೇದದಲ್ಲಿ "ಸರಸ್ವತಿ" ಯಾರ ಮಡದಿ ಎಂಬ ಮಾತೇ ಸ್ಪಷ್ಟವಿಲ್ಲ. ಈ "ಬ್ರಹ್ಮ" ಗಂಟು ಹಾಕಿದ ಬ್ರಹ್ಮ-ಸರಸ್ವತಿಯ ಭಾಗ್ಯವಿಧಾತನಾರೋ? ಬ್ರಹ್ಮನಂತೂ ಪೂಜೆಗೆ ಎರವಾದ ! ಸರಸ್ವತಿಯನ್ನು ಇಷ್ಟು ದುರ್ಲಕ್ಷಿಸಿ ಜೀವನ ಸ್ಪರ್ಧೆಯಲ್ಲಿ ಬಾಳುವುದು ಅಶಕ್ಯ ! ಅದರಿಂದಾಗಿ ಸರಸ್ವತಿಯ ಹೆಸರು ಇನ್ನೂ ಮುಳುಗಿಲ್ಲ ಅಷ್ಟೆ. ಲಕ್ಷ್ಮೀ ಅಂಬೆಯರಷ್ಟು ಸರಸ್ವತಿಯ ಆವಶ್ಯಕತೆ, ಬಾಳಿನಲ್ಲಿ ಉಂಟೇ ಎನ್ನುವವರೂ ಉಂಟಲ್ಲ !

ಅಂಬಿಕೆ, ಅದಿತಿ, ಸರಸ್ವತಿ ಹಾಗೂ ಲಕ್ಷ್ಮೀ ಇವರ ಜೊತೆಗೆ ಪರಾಮರ್ಶಿಸಬೇಕಾದ ಇನ್ನೊಬ್ಬ ಅಪೂರ್ವ ದೇವಿ ಇದ್ದಾಳೆ. ಅವಳ ಹೆಸರು ವಾಗಾಂಭೃಣೀ ಎಂದು ಉಂಟು !

## ವಾಗಾಂಭೃಣೀ ದೇವಿ

ಈ ದೇವಿಯ ಅಪೂರ್ವತೆ ಅನೇಕ ಪ್ರಕಾರದ್ದಾಗಿದೆ. "ವಾಗಾಂಭೃಣೀ" ಎಂಬ ಹೆಸರು ಈ ದೇವಿಗೆ: ಆದರೆ ಪ್ರತ್ಯಕ್ಷ "ವಾಕ್" ಅಥವಾ "ವಿದ್ಯೆ"ಯ ವಿಚಾರ ಆ ಸೂಕ್ತದಲ್ಲಿ ಎಲ್ಲಿಯೂ ಇಲ್ಲ ! ಋಗ್ವೇದದ ಸರಸ್ವತಿಯ ಸ್ತವನಗಳಲ್ಲಿ ಕಾಣುವ ಪ್ರಶಾಂತ ಸೌಮ್ಯ ಭಾಷೆ ಮತ್ತು ವಾಗಾಂಭೃಣಿಯ ಸೂಕ್ತದೊಳಗಿನ ಆವೇಶದ ವೀರ ಗರ್ಜನೆ, ಎರಡೂ ಒಂದರಿಂದೊಂದು ಎಷ್ಟು ಭಿನ್ನ ! ಸರಸ್ವತಿಯು ನದೀ ಸ್ವರೂಪಿ; ಅಂಭೃಣಿಯೂ ಜಲಸ್ವರೂಪಿ. ಇಬ್ಬರೂ ಜಲತತ್ತ್ವಾಭಿಮಾನಿಗಳು; ಸರಿ. ಆದರೆ, ಆಂಭೃಣಿಯ "ನೀರು" ಅತ್ಯಂತ ಉತ್ತೇಜಕ, ಉನ್ಮಾದಕ, ವೀರ ಗರ್ಜನೆಗೆ ಪ್ರಚೋದಿಸುವ ಗುಣವುಳ್ಳದ್ದಾಗಿ ಕಾಣುತ್ತದೆ.

'ಅಪ್ಸು ಅಂತ: ಸಮುದ್ರೇ ಮಮ ಯೋನಿ:' ಎಂದು ತನ್ನ ಆತ್ಮವೃತ್ತವನ್ನು ತಾನೇ ಹೇಳಿದ್ದಾಳೆ. ಈ ಮಹಾದೇವಿ ಸಮುದ್ರದೊಳಗಿನಿಂದ ಹುಟ್ಟಿದವಳು; ಕಾರಣ, ಲಕ್ಷ್ಮಿಗೆ ಸೋದರಿಯೆ ಆಗುತ್ತಾಳೆ. ಆದರೆ ಕೆಲವು ಸಂಗತಿಗಳಲ್ಲಿ ಲಕ್ಷ್ಮಿಗಿಂತ ಬೇರೆಯಾಗಿದ್ದಾಳೆ. ಅಂಭೃಣಿಯ ಕಡುಪು ಗಡಸು ಗಂಡಸಿಗೂ ನಾಚಿಸುವಂತಹದಾಗಿದೆ. ಶ್ರೀ ಲಕ್ಷ್ಮಿಯನ್ನು ವಿಷ್ಣು ಪತ್ನಿ ಎಂದು ವರ್ಣಿಸಿದ ಉಲ್ಲೇಖಗಳು ಇವೆ. ವೈಷ್ಣವರಲ್ಲಿ ಆಂಭೃಣೀ ದೇವಿಗೆ ಶ್ರೀ ವಿಷ್ಣು ಪತ್ನಿಯ ಸ್ಥಾನವಿರುವುದಾದರೂ ಇವಳನ್ನು ವಿಷ್ಣು ಅಥವಾ ನಾರಾಯಣ ಪತ್ನಿ ಎಂದು ಸಂಬೋಧಿಸಿದ್ದು ಕಾಣುವುದಿಲ್ಲ.

ಅಂಬೆ, ಅದಿತಿ, ಲಕ್ಷ್ಮಿಯರಂತೆ ಇವಳನ್ನು ಆದಿಶಕ್ತಿ ವಿಶ್ವಜನನಿ ಎನ್ನಬಹುದು ಮಾತ್ರವಲ್ಲ; ಈ ವಿಶೇಷಣವು ಇವಳಷ್ಟು ಅನ್ವರ್ಥಕವಾಗಿ ಅವರಾರಿಗೂ ಸಲ್ಲುವುದಿಲ್ಲ. ಈ ವಿಷಯದಲ್ಲಿ ಇವಳು ಅದ್ವಿತೀಯಳು. ಪುರಾಣದ ದುರ್ಗೆ-ಕಾಲೀದೇವಿ ಕೂಡ. ಅಂಭೃಣಿಯ ಎದುರು ಗೌಣಳೇ ಸರಿ; ಏಕೆಂದರೆ ಅವಳು ರುದ್ರನ "ಅರ್ಧಾಂಗಿ" ಎಂಬ ಸಂಕೇತ ಪ್ರಚಾರದಲ್ಲಿ ಉಂಟು. ಆದರೆ ವೀರದೇವಿ ಅಂಭೃಣಿಯ ಬೆಡಗು ಬಿನ್ನಾಣವೇ ಅಪೂರ್ವ. ಇಕೊಳ್ಳಿ ಅವಳೇ ಸಾರುತ್ತಿದ್ದಾಳೆ:

**ಅಹಂ ರುದ್ರೇಭಿಃ ವಸುಭಿಃ ಚರಾಮಿ; ಅಹಂ ಆದಿತ್ಯೈಃ ಉತವಿಶ್ವ ದೇವೈಃ ।**
**ಅಹಂ ಮಿತ್ರಾ ವರುಣೋಭಾ ಬಿಭರ್ಮಿ; ಅಹಂ ಇಂದ್ರಾಗ್ನೀ ಇತಿ ಅಹಂ ಅಶ್ವಿನಾ ಉಭಾ ॥ 2 ॥**

ಒಬ್ಬ ರುದ್ರನಲ್ಲ (ಏಕಾದಶ) ರುದ್ರರು, (ಅಷ್ಟ) ವಸುಗಳು, (ಅಷ್ಟ) ಆದಿತ್ಯರು: ಇಷ್ಟೇ ಅಲ್ಲ, ವಿಶ್ವ ದೇವರು ಇವರೆಲ್ಲರೊಡನೆ ಚರಿಸುತ್ತೇನೆ. ಮಿತ್ರಾ ವರುಣರಿಬ್ಬರಿಗೂ ಆಧಾರ ನಾನೇ; ಇಂದ್ರಾಗ್ನಿಗಳಿಗೆ ಚೈತನ್ಯದಿಂದ ತುಂಬುವವಳು ನಾನೇ; ಅಶ್ವಿನಿಗಳಿಬ್ಬರಿಗೂ ಪ್ರೇರಕಳು ನಾನೇ !

ಈ ಧಾಟಿಯಲ್ಲಿ ಆಂಭೃಣೀ ದೇವಿಯ ಇಡೀ ಸೂಕ್ತವು ಅತ್ಯಂತ ಆವೇಶಯುಕ್ತವಾಗಿದೆ. ಮೈತುಂಬಿ ದೇವಿಯ ಆವೇಶವಾಗಿ ಒಬ್ಬರು ಒಡನುಡಿದ ಮಾತುಗಳು ಇವು. ಋಗ್ವೇದ ಸೂಕ್ತಗಳಲ್ಲಿ ಈ ಅಪೂರ್ವತೆ ಬೇರಾವ ಸೂಕ್ತಗಳಿಗೂ ಇಲ್ಲ. ಪುರುಷ ಸೂಕ್ತ ವಿಷ್ಣು ಸೂಕ್ತಾದಿಗಳಲ್ಲಿ ಕೂಡ ಈ ಪ್ರಕಾರವು ಇಲ್ಲ ! "ಆವೇಶ"ದಲ್ಲಿ-ಮೈಯಲ್ಲಿ ದೇವತಾ ಪ್ರವೇಶವಾಗಿ ಆಡಿದ ಮಾತಿನ ಈ ಧಾಟಿಯ

ನ್ನೇ ಶ್ರೀಮದ್ಭಗವದ್ಗೀತಾಕಾರನು 11ನೆಯ ಅಧ್ಯಾಯದಲ್ಲೂ ಬೇರೆ ಕೆಲವೆಡೆಗಳಲ್ಲೂ ಅನುಸರಿಸಿದ್ದು ಕಾಣುತ್ತದೆ. "ಮಯಾಧ್ಯಕ್ಷೇಣ ಸೂಯತೇ ಸಚರಾಚರಮ್" ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದುಂಟು. ಈ ಭಾವವೆ ಇಡಿ ಅಂಭೃಣೀ ಸೂಕ್ತದ ಹಾಸುಹೊಕ್ಕು ಆಗಿದೆ. ಗೀತೆಯು ವಿಶ್ವರೂಪ ದರ್ಶನದ ತಂತ್ರವನ್ನು (Technique) ವೇದಗಳಲ್ಲಿ ಬಂದಿರುವ ಪುರುಷ ಸೂಕ್ತಾದಿ ವರ್ಣನೆಗಳಿಂದಲೆ ಎತ್ತಿಕೊಂಡು ಅದನ್ನು ತನ್ನ ವಿಶಿಷ್ಟ ಉದ್ದೇಶದ ಸಾಧನೆಗಾಗಿ ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು ಗೀತೆಯು ಅದರ ಪ್ರಯೋಜನ ಪಡೆದುದು ಕಾಣುತ್ತದೆ. ಆದರೆ ಒಂದು ಮಾತು ಮಾತ್ರ ನಿಜ. ಗೀತೆಯ ಆ "ಲೋಕಕ್ಷಯಕೃತ್ ಪ್ರವೃದ್ಧಂ ಕಾಲ"ನ ವಿಶ್ವರೂಪ,-ಶ್ಮಶಾನದ ರೂಪಕ; ಭೀಭತ್ಸಕ್ಕೆ ಹತ್ತಿರದ ರೌದ್ರರೂಪವಾಗಿದೆ. ಆದರೆ ವಾಗಾಂಭೃಣೀ ದೇವಿಯ ಈ ವಿಶ್ವರೂಪ ರೌದ್ರವಾಗಿದ್ದರೂ "ಭಯಾನಕ"ವಾಗಿಲ್ಲ ! ನಿರ್ವೇದಕಾರಿಯಾಗಿಲ್ಲ. ಈ ಸೂಕ್ತದ ವರ್ಣನೆಯೊಳಗಿನ ಸಂಯಮ, ಗಾಂಭೀರ್ಯ ಗಮನಿಸತಕ್ಕಂತಹದ್ದಾಗಿದೆ.

ಋಗ್ವೇದದಲ್ಲಿ ಭಯಭರಿತ ಭಕ್ತಿ-ದಾಸ್ಯಭಕ್ತಿ, ವರುಣ ಸೂಕ್ತದಲ್ಲಿ ಮಾತ್ರ ಉಂಟು ಎಂದು ಬಗೆಯಲಾಗಿದೆ. ಈ ಅಂಭೃಣೀ ಸೂಕ್ತವು ಭಯ ಭರಿತ ಭಕ್ತಿಯನ್ನು ಉದ್ರೇಕಿಸುವ ಸ್ತೋತ್ರವಾಗಿದೆ. ವಿಶ್ವದ ಆಗುಹೋಗುಗಳಿಗೆಲ್ಲ ತಾನೇ ಕಾರಣಳು; ತಾರಕಳು, ಪ್ರೇರಕಳು, ವಿನಾಶಕಳು, ಎಲ್ಲವೂ ತಾನೇ ಎಂದು ವಿವರವಾಗಿ ವರ್ಣಿಸುವ ಈ ದೇವಿಯ ಸಾಕ್ಷಾತ್ ಮಾತುಗಳನ್ನು ಕೇಳಿ (ಮೈತುಂಬಿ ಮಾತನಾಡುವ ಆ "ದೇಹಾರ"ದ ಮೂರ್ತಿಯ ಎದುರು) ಭಯಭರಿತ ಪ್ರಾರ್ಥನಾ ಭಾವದಿಂದ ತಲೆಬಾಗದ ಮರ್ತ್ಯನು ದೊರೆಯಲಾರನು ! ಈ ಅಂಭೃಣೀ ದೇವಿ ಗುಡುಗಿ ಒಡನುಡಿಯುತ್ತಾಳೆ: "ಮಾಂ ಅಮಂತವ: ಉಪಕ್ಷಿಯಂತಿ" (ನನ್ನನ್ನು ಅವಮಾನ್ಯ ಮಾಡುವವರು ಸಂಸಾರ ಓೀನರಾಗುತ್ತಾರೆ) ಎಲೈ ಮರ್ತ್ಯನೇ "ಶ್ರುತ, ಶ್ರುಧಿ" (ಇದನ್ನೆಲ್ಲ ಕೇಳುವ ನೀನು ವಿಚಾರಿಸು) "ಶ್ರದ್ಧಿವಂ" (ಶ್ರದ್ಧೆಯನ್ನು ಪಡೆ, ಇಲ್ಲವಾದರೆ ನಿನ್ನ ವಿನಾಶ ನಿಶ್ಚಿತ) "ಅಹಮೇವ ಸ್ವಯಂ ಇದಂ ವದಾಮಿ" (ಇದನ್ನೆಲ್ಲ ನಾನೇ ಸ್ವತ: ಹೇಳುತ್ತಿದ್ದೇನೆ) !

ಏನೀ ಗಡಸು ! ಏನು ಈ ಗಂಡುಗಾಡಿ ! ಅಂಭೃಣೀ ದೇವಿಯ ಈ ಜ್ವಲಂತ ಜಾಜ್ವಲ್ಯ ತೇಜಸ್ವೀ. ಓಜಸ್ವೀ ವಿಶ್ವರೂಪದ ಎದುರು ಪುರುಷ ಸೂಕ್ತದ ವಿರಾಟ್ ವಿಶ್ವರೂಪವು ಕೂಡ, ಸಪ್ಪೆ ಎನಿಸದಿರದು. ಮೆಚ್ಚಿದವರನ್ನು, ಎಂದರೆ ಶರಣು ಬಂದವರನ್ನೆಲ್ಲ. ಉದ್ಧರಿಸಲು ತಾನು ಸಮರ್ಥಳಾಗಿದ್ದೇನೆ; ಅವರನ್ನು ವೀರ್ಯವಂತರನ್ನಾಗಿ ಮಾಡಬಲ್ಲೆ ! ಸಂಗ್ರಾಮಕ್ಕೆ ಸಮರ್ಥ, ಪರಾಕ್ರಮಿ. ವಿಜಯಿಶಾಲಿಗಳನ್ನಾಗಿಸಬಲ್ಲೆ ! (ಯಂ ಯಂ ಕಾಮಯೇ, ತಂ ತಂ ಉಗ್ರಂ ಕರೋಮಿ; ಅಹಂ ಜನಾಯ ಸಮದಂ ಕೃಣೋಮಿ) ಈ ಅಭಯ ವರದಾನಕ್ಕಿಂತ ಸಂಸಾರೀ ಮಾನವನು ಹೆಚ್ಚಿನದೇನನ್ನು ಬಯಸಬಲ್ಲನು?

ಅಂಭೃಣಿಯ ಈ ವಿಶ್ವರೂಪದರ್ಶನದಿಂದ ಯಾವ ಭಕ್ತನಿಗೆ ಆಗಲಿ, "ನಿಜವಾದ ಆದಿಶಕ್ತಿ ವಿಶ್ವ ಜನನಿ ಎಂದರೆ ಇವಳೆ" ಎಂಬ ವಿಶ್ವಾಸ ಆ ಸಾಕ್ಷಾತ್ಕಾರದಲ್ಲಿ ತಲೆದೋರದೆ ಇರದು; (ಮೈತುಂಬಿದ ಆ ಆವಿಷ್ಟ ವ್ಯಕ್ತಿಯನ್ನು ಕಂಡಾಗ)

ಇನ್ನು ಪ್ರಶ್ನೆ: "ವಿಶ್ವಾಭುವನಾನಿ" ನಾನೇ ನಿರ್ಮಿಸಿದ್ದೇನೆ; ನನ್ನ ಕೃಪೆಯಿಂದ ಇಂದ್ರನಿಗೆ ಇಂದ್ರತ್ವ ಪ್ರಾಪ್ತವಾಗಿದೆ. ಅಗ್ನಿಯ ಅಗ್ನೀತನ ನನ್ನಿಂದ. ವಿಶ್ವೇ ದೇವರುಗಳೆಲ್ಲ ನನ್ನ ಸಂಗಾತಿಗಳು. ರುದ್ರನಿಗಾಗಿ ಆತನ ಬಿಲ್ಲನ್ನು ಮಣಿಸುವವಳು ನಾನು. (ಅಹಂ ರುದ್ರಾಯ ಧನುರಾತನೋಮಿ) ಎಂಬ ಈ ಅಂಭೃಣಿಯು ರುದ್ರನಿಗೆ ಮಿಗಿಲಲ್ಲವೆ? ಆದಿತ್ಯರೆಲ್ಲ ನನ್ನ ಸಂಗಾತಿಗಳು ಎಂಬ ಈ ಅಂಭೃಣಿಯ ಹಿಂಬಾಲಿಗನಾದನು ಆದಿತ್ಯರಲ್ಲೋರ್ವನಾದ ವಿಷ್ಣು ಕೂಡ !.

ಇಂತಹ ಈ ಮಹಾದೇವಿ ಯಾರ ಮಡದಿ? ಈ ಮಹಾದೇವಿಯ ಈ ಅಂತ: ಸತ್ವವನ್ನು ಕರ್ತೃತ್ವ ಶಕ್ತಿಯನ್ನು "ಪೌರುಷ" ಎಂದು ನಿರ್ದೇಶಿಸಿ ಹೇಳಬಹುದೇ? ಇದನ್ನು "ಪೌರುಷ" ಎಂದು "ಪುರುಷ"ನ ಮಾನದಂಡದಿಂದ ಅಳೆಯುವಲ್ಲಿ, ಅವಳ ತೇಜಸ್ಸಿನ ಅಪಮಾನಮಾಡಿದ ಅಪರಾಧ ಸಂಭವಿಸುವ ಹೆದರಿಕೆಯಿದೆ !

ಶ್ರೀ ಲಕ್ಷ್ಮೀ ಅದಿತಿ ಹಾಗೂ ಅಂಭೃಣಿಯರಲ್ಲಿ ಇರುವ ಕೆಲವೊಂದು ಸಾಮ್ಯ ಹಾಗೂ ವಿಶೇಷಗಳು ವಿಚಾರಾರ್ಹವಾಗಿವೆ. ಅದಿತಿಯ ಪತಿಯ ವಿಚಾರವು ವಿಚಿತ್ರವೆನಿಸುವಷ್ಟು ಸಂದಿಗ್ಧವಾಗಿದೆ. ಶ್ರೀ ಲಕ್ಷ್ಮಿಯನ್ನು "ತ್ರ್ಯಂಬಕೇ" "ಶಿವೆ" ಎಂಬಂತೆ "ನಾರಾಯಣಿ" "ವಿಷ್ಣು ಪತ್ನಿ" ಎಂದು ಹೇಳಲಾಗುತ್ತಿದ್ದರೂ ಮೂಲ ಶ್ರೀ ಸೂಕ್ತದಲ್ಲಿ ಈ ದೇವಿಯ ಪತಿ ಯಾರು ಎಂಬ ನಿರ್ದಿಷ್ಟ ಉಲ್ಲೇಖವಿಲ್ಲ. ಅಂಭೃಣೀ ಸೂಕ್ತದಲ್ಲೂ ಆ ಕವಿಯೂ ಇದೇ ಬಗೆಯ ಮೌನವನ್ನು ಸ್ವೀಕರಿಸಿದ್ದು ಕಂಡುಬರುತ್ತಿದೆ.

ಈ ಕಾರಣದಿಂದ ಒಂದರೊಳಗೊಂದು ತೊಡಕಿಕೊಂಡು ಮೇಲಣ ಸಮೀಕ್ಷೆಯ ಪರಿಮಿತಿಯಲ್ಲಿ ಸ್ವಾಭಾವಿಕವಾಗಿ ಬರುವ ದೇವಿಯರ ಹಾಗೂ ದೇವರ ಈ ಪಂಗಡವು ಅಗ್ನಿ. ಸೂರ್ಯ. ಇಂದ್ರ. ವರುಣಾದಿ ಇನ್ನೊಂದು ಪಂಗಡಕ್ಕಿಂತ ಭಿನ್ನವಾಗಿದೆ ಎಂದು ನಿರ್ಧರಿಸಬೇಕಾಗುತ್ತದೆ. ಮತ್ತು ಈ ಉಭಯ ವರ್ಗದ ದೇವತಾ ತತ್ವ ಹಾಗೂ ಸ್ವರೂಪದಲ್ಲೂ ಮೂಲಭೂತ ಭೇದವು ಕಂಡುಬರುತ್ತದೆ: (1) ಮೇಲಣ ಸಮೀಕ್ಷೆಯಲ್ಲಿ ತನ್ನ ತಾನೇ ಹೊರ ಬರುತ್ತಿರುವಂತೆ ಆಪ:ರಸ ಸ್ವರೂಪೀ ದಿವ್ಯ ತತ್ತ್ವವು ಈ ಎಲ್ಲ ದೈವತಗಳ ಧಾರಣೆಯಲ್ಲಿ ನಿದರ್ಶನಕ್ಕೆ ಬರುತ್ತಿದೆ. ಅಗ್ನಿ. ಸೂರ್ಯ. ಇಂದ್ರ. ವರುಣ ಈ ವರ್ಗದ ದೈವತಗಳು ದ್ಯುಲೋಕದವು ಆಗಿದ್ದು ಸಾರ (ಪ್ರಕಾಶ) ತತ್ತ್ವಾಧಿಷ್ಠಿತವಾಗಿವೆ. (2) ಇಂದ್ರನು ವಿಜಿಗೀಷ ವೃತ್ತಿಯವನು. ಇವು ಪ್ರವೃತ್ತಿಪರ ದೈವತಗಳು; ವಿಷ್ಣು ರುದ್ರಾದಿಗಳು ನಿವೃತ್ತಿ ಮಾರ್ಗದವರ ಪೂಜ್ಯ ದೈವತಗಳಾಗಿವೆ.

# ಬಸವಣ್ಣನವರ ವಚನಗಳಲ್ಲಿ ಸಿರಿಯಾಳನ ಕಥೆಯ ವಿಕಾಸ

**ಶ್ರೀ ಕೆ. ವೆಂಕಟರಾಮಪ್ಪ**

ವೀರಶೈವಧರ್ಮಪ್ರಚಾರಕರಲ್ಲಿ ಅಗ್ರಮಾನ್ಯರಾಗಿದ್ದು ಮತಸ್ಥಾಪಕರಷ್ಟೇ ಭಕ್ತಿಗೌರವಗಳಿಗೆ ಪಾತ್ರರಾಗಿರುವ ಬಸವಣ್ಣನವರು ಭಕ್ತಿ ಪಂಥದ ಹಿರಿಮೆಯನ್ನು ಉಪದೇಶಿಸಲು ತೊಡಗಿ ಅನೇಕ ಸಲ ತಮಗಿಂತ ಮೊದಲು ಬಾಳಿ ಧರ್ಮವನ್ನು ಬೆಳಗಿದ ಭಕ್ತಶ್ರೇಷ್ಠರನ್ನು ಸ್ಮರಿಸಿಕೊಂಡಿದ್ದಾರೆ. ಆದ್ಯರು. ಪುರಾತನರು, ಮುನ್ನಿನ ಪುರಾತನರು ಎಂದು ಬಗೆಬಗೆಯಾಗಿ ಅವರನ್ನು ಹೊಗಳಿದ್ದಾರೆ. "ಆದ್ಯರ ವಚನ ಪರುಷವೆಂದೆಂಬೆನು" "ಆದ್ಯರಿಗಲ್ಲದೆ ವೇದ್ಯವಾಗದು" "ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜದ ನೊರೆ ತೆರೆಯುಂತೆ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪುನೀರನುಂಬವನ ವಿಧಿಯಂತೆ ಆಯಿತೆನ್ನಮತಿ" "ಮುನ್ನಿನ ಪುರಾತನರ ನೆನೆದು ಧನ್ಯನಾದೆನೆಂಬ ಮಾತಿನ ರಂಜಕರನೇನೆಂಬೆ?" ಇವೇ ಮುಂತಾದ ಅನೇಕ ವಚನಗಳಲ್ಲಿ ಪುರಾತನ ಶಿವಶರಣರ ಹಿರಿಮೆಯ ಹೊಗಳಿಕೆ ವಿಶೇಷವಾಗಿದೆ. ಪೂಜಾರ್ಹರಾದ ಇಂಥ ಪುರಾತನರಲ್ಲಿ ಸಿರಿಯಾಳ ಒಬ್ಬ.

ಬಸವಣ್ಣನವರ ವಚನಗಳಲ್ಲಿ ಅನೇಕ ಕಡೆ ಸಿರಿಯಾಳನ ಪ್ರಸ್ತಾಪ ಬಂದಿದೆ. "ಸೆಟ್ಟಿಯೆಂಬೆನೆ ಸಿರಿಯಾಳನ?" ಎಂದು ಒಂದು ಕಡೆ ಬಸವಣ್ಣನವರು ಪ್ರಶ್ನೆ ಹಾಕಿಕೊಂಡಿದ್ದಾರೆ. ಸಿರಿಯಾಳ ಕಂಚಿಯಲ್ಲಿ ವಣಿಗ್ವಂಶದಲ್ಲಿ ಜನ್ಮಧಾರಣೆ ಮಾಡಿದುದು ಸರಿ. ಆದರೆ ಸೆಟ್ಟಿಗೆ ಸಹಜವಾದ ಲಾಭಚಿಂತನೆ ಸಿರಿಯಾಳನಿಗಿರಲಿಲ್ಲ. ಐಹಿಕವಾದ ಸಂಪತ್ತನ್ನು ಗಳಿಸುವುದೇ ಪರಮೋದ್ಯೋಗವೆಂದು ಅವನು ಭಾವಿಸಿರಲಿಲ್ಲ. ಶಿವಧ್ಯಾನ, ಶಿವಭಕ್ತರ ಸೇವೆಗಳೇ ಅವನಿಗೆ ಅತ್ಯಂತ ಪ್ರಿಯವಾದ ವಿಷಯಗಳಾಗಿದ್ದುವು. ಶಿವಪ್ರೀತಿಗಾಗಿ ಯಾವ ತ್ಯಾಗಕ್ಕಾದರೂ ಸಿದ್ಧ, ಸಿರಿಯಾಳ. ಇಂಥವನನ್ನು ಭಕ್ತನೆಂದೋ, ಶಿವಶರಣನೆಂದೋ ಕರೆದರೆ ಸಮಂಜಸವಾದೀತೇ ಹೊರತು ಸೆಟ್ಟಿಯೆಂದು ಕರೆದರೆ ಆಗದೆಂದೇ ಬಸವಣ್ಣನವರ ಅಭಿಮತ. "ತನುಮನಧನದಲ್ಲಿ ವಂಚನೆಯನಱಿಯರಯ್ಯ ದಾಸ ಸಿರಿಯಾಳನವರು" ಎಂದು ಹೇಳಿ ಬಸವಣ್ಣನವರು ಸಿರಿಯಾಳನ ಹಿರಿಮೆಯ ರಹಸ್ಯ, ಅವನ ನಿರ್ವಂಚನೆಯಾದ ಶಿವಕೈಂಕರ್ಯ. ಅದಕ್ಕಾಗಿ ಆತನು ತನುಮನಧನಗಳನ್ನೂ ಅರ್ಪಣೆ ಮಾಡಿದುದೇ ಆಗಿದೆಯೆಂದು ಸೂಚಿಸಿದ್ದಾರೆ.

ಸಿರಿಯಾಳನ ಪ್ರಶಂಸೆಯನ್ನು ಮಾಡಿರುವುದೇ ಅಲ್ಲದೆ ಬಸವಣ್ಣನವರು ಆತನು ನಡೆಸಿದ ಅಸಾಧಾರಣವಾದ ಶಿವಕೈಂಕರ್ಯದ ಕಥೆಯನ್ನು ತಮ್ಮ ವಚನಗಳಲ್ಲಿ ಸಂಗ್ರಹವಾಗಿ. ಆದರೂ ಸ್ಪಷ್ಟವಾಗಿ ಹೇಳಿದ್ದಾರೆ. "ಕಾಮಾರಿ ಜಂಗಮನಾಗಿ ಬಂದು ಸಿರಿಯಾಳನ ಮಗನ ಬೇಡಿದ, ಕೊಟ್ಟ ಸಿರಿಯಾಳ ಸೆಟ್ಟಿ ಕಂಚಿಯ ಪುರವ ಕೈಲಾಸಕ್ಕೊಯ್ದ" ಎಂಬ ವಚನದಲ್ಲಿ ಸಿರಿಯಾಳನ ಮಹಾ ತ್ಯಾಗದ ಕಥೆ ಚಿತ್ರಿತವಾಗಿದೆ. ಶಿವನು ಜಂಗಮ ವೇಷಧಾರಿಯಾಗಿ ಬಂದು, ಸಿರಿಯಾಳನನ್ನು ಪರೀಕ್ಷಿಸಿ ಅವನ ಅಚಂಚಲ ಭಕ್ತಿಗೆ ಮೆಚ್ಚಿ ಮಾರುಹೋಗಿ ಅವನನ್ನೂ ಅವನ ಪರಿವಾರದವರನ್ನೂ ಕೈಲಾಸಕ್ಕೇ ಕರೆದುಕೊಂಡು ಹೋದ ಕಥೆ ಇಲ್ಲಿ ಅತ್ಯಂತ ಸಂಗ್ರಹವಾಗಿ ನಿರೂಪಿತವಾಗಿದೆ. ಭಕ್ತನ ಹಿರಿಮೆ. ಭಗವಂತನ ಒಲುಮೆ. ಇವೆರಡರ ಕಥನ ಇಲ್ಲಿ ಬಂದಿದೆ. ಇನ್ನೊಂದು ವಚನದಲ್ಲಿ ಸಿರಿಯಾಳನ ಹಿರಿಮೆಯನ್ನೂ ಪ್ರಸ್ತಾಪ ಮಾಡುತ್ತ ಬಸವಣ್ಣನವರು "ಸೀಸಿಕ್ಕಿದ ಜೂಜಿಂಗೆ ಹೊಯ್ದು ಗೆದ್ದ. ಸಿರಿಯಾಳ" ಎಂದು ಹೇಳಿದ್ದಾರೆ. ಇಲ್ಲಿ ಸಿರಿಯಾಳನು ಶಿವನೊಡನೆ ಪಣಕಟ್ಟಿ ಗೆದ್ದನೆಂಬ ಅರ್ಥವಿದೆ. "ಕಬ್ಬಿನ ಹಣೆದವಾಡುವರಲ್ಲದೆ ಕಾಯದ ಹಣೆದವಾಡುವರೆ?" ಆದರೆ ಸಿರಿಯಾಳನು ಜಾಣ. ವಿಷ್ಣುಭಕ್ತನಾದರೂ ಸೆಟ್ಟಿಯ ಕುಲದಲ್ಲಿ ಹುಟ್ಟಿದವನು. ಲಾಭನಷ್ಟಗಳನ್ನೂ ತಿಳಿಯಲಾರದೆ ಶಿವನು ಬಂದು ಬೇಡಿದಾಗ ಅವನು "ಮೇಲೊಡ್ಡವಾಯಿತೆಂದು" ಮನಗಂಡು ಕೂಡಲ ಸಂಗಮ ದೇವನು ಇಕ್ಕಿದ ಜೂಜಿಂಗೆ ಹೊಯ್ದು ಗೆದ್ದ ! ಇಲ್ಲಿ ಗೆದ್ದವನು ಸಿರಿಯಾಳ. ಅವನಿಗೇ ಹೆಚ್ಚು ಲಾಭವಾಯಿತು. ಶಿವನು ಭಕ್ತನ ಪರೀಕ್ಷೆ ಮಾಡಿ ತಾನೇ ಸೋತ. ಸಿರಿಯಾಳನ ಭಕ್ತಿಯಲ್ಲಿ ಕೊರತೆಯನ್ನು ಕಂಡು ಹಿಡಿಯಲು ಅವನಿಂದ ಆಗಲಿಲ್ಲ. ಸಿರಿಯಾಳನ ನಿಮಿತ್ತದಿಂದ ಶಿವ. ಭೂಲೋಕಕ್ಕೆ ಬರಬೇಕಾಯಿತು. "ಕೂಡಲ ಸಂಗಯ್ಯ. ಸಿರಿಯಾಳನಿಂದ ಮಾನಿಸಲೋಕ ಕಂಡೆ" ಎಂದು ಬಸವಣ್ಣನವರು ಹಾಡಿದ್ದಾರೆ. ಶಿವ ಭೂಲೋಕವನ್ನು ಕಂಡ. ಸಿರಿಯಾಳ ಕೈಲಾಸಕ್ಕೇರಿದ !

ಬೇರೆ ಕೆಲವು ವಚನಗಳಲ್ಲಿ ಬಸವಣ್ಣನವರು ಈ ಕಥೆಯನ್ನು ಇನ್ನೊಂದು ದೃಷ್ಟಿಯಿಂದ ವಿಮರ್ಶಿಸಿದ್ದಾರೆ. ಭಗವಂತನಾದ ಶಿವನು ಭಕ್ತರನ್ನು ಹೀಗೆ ಪೀಡಿಸಬಹುದೇ? ಇದು ಭಕ್ತವಾತ್ಸಲ್ಯದ ಲಕ್ಷಣವೆ? "ಸಿರಿಯಾಳನ ಮಗನ ಬೇಡಿದಂದಿನಿಂದ ಭಯ ಕಾಣೆರಣ್ಣ" ಎಂದು ಉದ್ಗಾರ ತೆಗೆದು ಬಸವಣ್ಣನವರು "ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣ. ಅಘಟಿತಘಟಿತರು. ವಿಪರೀತ ಚರಿತರು, ಕೂಡಲ ಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣ !" ಎಂದು ಪುರಾತನರ ಭಕ್ತಿ ಮಾರ್ಗದ ಕಷ್ಟವನ್ನು ವರ್ಣಿಸಿದ್ದಾರೆ. "ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು. ಬರುತ್ತ ಕೊಯ್ವುದು" ಎಂದು ಬಸವಣ್ಣನವರೇ ಬೇರೆ ಕಡೆ ಹೇಳಿರುವಂತೆ ಭಕ್ತಿ ಸಾಧನೆಯ ಕಷ್ಟ ಇಲ್ಲಿ ವ್ಯಕ್ತವಾಗಿದೆ. ಈಶ್ವರನು ಇಷ್ಟೊಂದು ಕ್ರೌರ್ಯ ಮಾಡಬಾರದಾಗಿತ್ತೆಂದು ಬಸವಣ್ಣನವರಿಗೆ ಅನ್ನಿಸಿದಾಗ ಹೀಗೆ ಹೇಳಿದ್ದಾರೆ. "ಜೆನ್ನ ಹುಣ್ಣ-ಕಂಬಿಯಲಿ ಕೀಸುವರೆ? ಕೂಡಲ ಸಂಗಯ್ಯನ ಕಾಡುವ ಕಾಟ ಸಿರಿಯಾಳಂಗಲ್ಲದೆ ಸೈರಿಸ

ಬಹುದೇ?" ಈ ವಚನವನ್ನು ಗಮನಿಸಿದಾಗ ಶಿವನು ಸಿರಿಯಾಳನನ್ನು ಬಹಳವಾಗಿ ಕಾಡಿಸಿದನೆಂದು ಬಸವಣ್ಣನವರು ಭಾವಿಸಿದಂತೆ ಅರ್ಥವಾಗುತ್ತದೆ. ಆ ಕಾಟವೇನೆಂಬುದನ್ನು ಅವರು ಇನ್ನೊಂದು ವಚನದಲ್ಲಿ ಹೇಳಿದ್ದಾರೆ: "ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ ಕಾಡಿದೆ. ಚೋಳನ ಮನೆಯಲುಣಲೊಲ್ಲದೆ ಚೆನ್ನನ ಮನೆಯಲುಂಡೆ. ಒಬ್ಬರಿಗೊಂದು ಪರಿಯ ಮಾಡಿದೆ. ಕೂಡಲ ಸಂಗಮ ದೇವ" ಸಿರಿಯಾಳನ ಮನೆಗೆ ಹೋಗಿ ಅವನ ಮಗನ ಶರೀರ ಮಾಂಸವನ್ನೇ ಕೇಳಿ ಅಡಿಗೆಮಾಡಿಸಿ ಅಡಿಗೆಯಾದ ಮೇಲೆ ಅವನ್ನು ಊಟಮಾಡಲು ಒಪ್ಪದೆ ಸಿರಿಯಾಳನನ್ನು ಶಿವ ಗೋಳಾಡಿಸಿದ್ದಾನೆ. ಈ ಜಂಗಮನನ್ನು ಸಂತುಷ್ಟಿಪಡಿಸಲು ಸಿರಿಯಾಳ ಬಹಳ ಕಷ್ಟಪಡ ಬೇಕಾಯಿತು.

"ಸಿರಿಯಾಳನಂತೆ ಉಣಲಿಕ್ಕ ಬಲ್ಲೆನೆ? ಉಂಡುಟ್ಟು ಕೊಟ್ಟರೆ ಮುಯ್ಯಿಗೆ ಮುಯ್ಯಿನಿಸಿತ್ತು. ಎನಗೆ ಕೊಟ್ಟರೆ ಧರ್ಮ, ಕೂಡಲ ಸಂಗಮದೇವ." ಎಂದು ಹಾಡಿ ಶಿವನು ತನಗೆ ಕೊಟ್ಟವರಿಗೆ ಮಾತ್ರ ಕೊಡುವುದಾದರೆ ಅವನ ಹಿರಿಮೆ ಏನು? ಅವನೇನೂ ಹೆಚ್ಚಿಗೆ ಮಾಡಿದ ಹಾಗೆ ಆಗಲಿಲ್ಲ. "ಸಿರಿಯಾಳನ ಮಗನ ಬೇಡದ ಮುನ್ನ ಕಂಚಿಯಪುರವ ಕೈಲಾಸಕ್ಕೊಯ್ವರೆ ನಿಮ್ಮ ದೇವರೆಂದೆಂಬೆ......ದೇಹಿ ನೀನು. ವ್ಯಾಪಾರಿಗಳು ನಮ್ಮವರು ! ಬೇಡು–ಕೂಡಲ ಸಂಗಮ ದೇವ ಎಮ್ಮವರ ಕೈಯಲು" ಎಂದು ಹೇಳಿ ಬಸವಣ್ಣನವರು ಶಿವನು ನಿರ ಪೇಕ್ಷೆಯಿಂದ ಭಕ್ತನನ್ನು ಆದರಿಸಲಿಲ್ಲವೆಂದು ಆಕ್ಷೇಪಣೆ ಮಾಡಿದ್ದಾರೆ. ಶಿವನ ಅನುಗ್ರಹ ಕೇವಲ ಮುಯ್ಯಿಗೆ ಮುಯ್ಯಿ ! ತನಗೆ ಕೊಟ್ಟವ ರಿಗೆ ತಾನು ಕೊಡುವ, ಉಪಕಾರಿಗೆ ಪ್ರತ್ಯುಪಕಾರ ! ಭಕ್ತನ ನಿಷ್ಠೆಯನ್ನು ಪರೀಕ್ಷಿಸುವ ಸಲುವಾಗಿ ಅವನಲ್ಲಿ ಬೇಡಿ, ಕಾಡಿದ ಶಿವನಿಗೆ ನೀಡಿದ ಭಕ್ತ ಧನ್ಯನಾದನೆಂದು ಬಸವಣ್ಣನವರು ಇಲ್ಲಿ ನಿರೂಪಿಸಿದ್ದಾರೆ. ಶಿವನು "ದೇಹಿ" ಎಂದು ಬೇಡುವವನು. ಭಕ್ತರು ಶಿವನಿಗೆ ಕೊಟ್ಟು ಅವನಿಂದ ಹೆಚ್ಚಿನ ಲಾಭ ಪಡೆವ ವ್ಯಾಪಾರಿಗಳು ಎಂಬ ಅರ್ಥ ಇಲ್ಲಿದೆ.

"ದೇವನಿಂತಹನೆಂದು ತೋರಿಕೊಡುವೆನು ಗಣಂಗಳಿಗೆ...........ಸಿರಿಯಾಳನ ಮಗನ ಬೇಡಿದಾತನೀ ದೇವ ಕೂಡಲ ಸಂಗಮ ದೇವ, ಜಂಗಮ ಮುಖಲಿಂಗವಾಗಿ ಕಾಡಿ ನೋಡುವ. ಬೇಡಿ ನೋಡುವ" ಹೀಗೆ ಬೇಡಿ ಕಾಡಿ ಭಕ್ತರನ್ನು ಪರೀಕ್ಷಿಸುವುದು ಶಿವನ ವಾಡಿಕೆಯೆಂದು ಹೇಳಿದಂತಾಯಿತು. "ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ. ಗರುವತನವೆ?.........ಸಿರಿಯಾಳನ ಮಗನ ಬೇಡುವ ದೊಂದು ಗರುವತನವೆ? ಕೋಡಗವ ಹುಲ್ಲಲಿ ಮುಸುಕಿದಂತೆ. ಕೂಡಲ ಸಂಗಮ ದೇವಾ. ನಿಮ್ಮ ಪರಿ !" ಎಂದು ನುಡಿದು ಬಸವಣ್ಣನವ ರು ಭಗವಂತನ ಕಠಿಣಚಿತ್ತತೆಯನ್ನೂ ಭಕ್ತಿ ಮಾರ್ಗದ ಮಹಾಕ್ಲೇಶವನ್ನೂ ಸಂಶಯಕ್ಕೆಡೆಯಿಲ್ಲದಂತೆ ನಿರೂಪಿಸಿದ್ದಾರೆ.

ಶಿವನ ಕ್ರೌರ್ಯವನ್ನೂ ಭಕ್ತನ ಕಷ್ಟಕಾರ್ಪಣ್ಯಗಳನ್ನೂ ವರ್ಣಿಸಿ ಹೇಳಿದ ಬಸವಣ್ಣನವರು ಸಿರಿಯಾಳನ ನಡತೆಯನ್ನೂ ಇನ್ನೊಂ ದು ಸಂದರ್ಭದಲ್ಲಿ ಟೀಕಿಸಿದ್ದಾರೆ. ಅರ್ಥ "ಪ್ರಾಣಾಭಿಮಾನವ ಕೊಟ್ಟೆನೆಂಬವರಲ್ಲದೆ ಕೊಟ್ಟ ಭಕ್ತರನಾರನೂ ಕಂಡುದಿಲ್ಲ.........ಸಿರಿ ಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ. ಇವೆಲ್ಲ ಹೊರಗಣ ಮಾತು. ಕೂಡಲ ಸಂಗಮ ದೇವರಲ್ಲಿ ತನ್ನ ಕೊಟ್ಟ.- ಸಿಂಧು ಮರಾಳ." ಎಂಬ ವಚನದಲ್ಲಿ ಸಿರಿಯಾಳ ಈಶ್ವರಾನುಗ್ರಹ ಸಂಪಾದನೆಗಾಗಿ ಜಂಗಮತೃಪ್ತ್ಯರ್ಥವಾಗಿ. ತನ್ನ ಮಗನನ್ನು ಬಲಿಕೊ ಟ್ಟನೇ ಹೊರತು ತನ್ನನ್ನೇ ಬಲಿಕೊಡಲಿಲ್ಲ. ಇದು ಅಂಥ ದೊಡ್ಡ ತ್ಯಾಗವೇನೂ ಅಲ್ಲವೆಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ. ತನ್ನನ್ನೇ ಬಲಿಕೊಡುವುದು ಹೆಚ್ಚಿನ ತ್ಯಾಗ. ಅದೇ ನಿಜವಾದ ತ್ಯಾಗ. "ಸಿರಿಯಾಳ ತನ್ನ ಮಗನನಿತ್ತು ಪ್ರಾಣಪ್ರಸಾದವ ಪಡೆದ.........ಇವರೆ ಲ್ಲರೂ ತಮತಮಗೆ ಮಾಡಿ ಹಡೆದರು ಸಮ್ಯಕ್ ಪದವಿಯನು" ಎಂಬ ವಚನವು ಸಿರಿಯಾಳನ ಮೇಲೆ ಸ್ವಾರ್ಥದ ಆರೋಪಣೆಯೇ ಇದೆ !

ಈ ಎಲ್ಲ ವಚನಗಳನ್ನೂ ಗಮನಿಸಿದರೆ ಬಸವಣ್ಣನವರ ಕಾಲಕ್ಕೆ ಕಂಚಿ ಸಿರಿಯಾಳ ಸೆಟ್ಟಿಯ ಕಥೆ ಕನ್ನಡ ನಾಡಿನಲ್ಲಿ ಪ್ರಚಾರ ಹೊಂದಿದ್ದಿತೆಂದು ಸ್ಪಷ್ಟವಾಗುತ್ತದೆ. ಸಿರಿಯಾಳನ ಕಥೆಯ ಬೇರೆ ಬೇರೆ ಘಟ್ಟಗಳನ್ನು ಬಸವಣ್ಣನವರು ತಮ್ಮ ವಚನಗಳಲ್ಲಿ ಸೂಕ್ಷ್ಮವಾಗಿ ವಿವರಿಸಿದ್ದಾರೆ. ಶಿವನು ಸಿರಿಯಾಳನ ಪರೀಕ್ಷೆಗಾಗಿ ಭೂಲೋಕಕ್ಕೆ ಜಂಗಮ ವೇಷದಲ್ಲಿ ಬಂದದ್ದು ಮೊದಲನೆಯ ಘಟ್ಟ. ಸಿರಿಯಾಳ ನನ್ನು ಕಂಡು ಅವನ ಮಗನನ್ನು ಬೇಡಿದ್ದು ಎರಡನೆಯ ಘಟ್ಟ. ಸಿರಿಯಾಳ ಜಂಗಮನ ಪ್ರಾರ್ಥನೆಯನ್ನು ಒಪ್ಪಿ ಅವನಿಗೆ ತನ್ನ ಮಗನನ್ನೂ ಬಲಿಕೊಡಲು ಸಿದ್ಧವಾದದ್ದು ಮೂರನೆಯ ಘಟ್ಟ. ಅಡಿಗೆ ಸಿದ್ಧ ಮಾಡಿ ಬಡಿಸಿದಾಗ ಜಂಗಮನು ಊಟ ಮಾಡದೆ ಸಲ್ಲದ ಆಕ್ಷೇಪಣೆಗ ಳನ್ನು ಎತ್ತಿ ಶಿವನು ಸಿರಿಯಾಳನನ್ನು ಪೀಡಿಸಿದ್ದು ನಾಲ್ಕನೆಯ ಘಟ್ಟ. ಆ ಪೀಡನೆಯನ್ನು ಸಹಿಸಿಕೊಂಡು ಸಿರಿಯಾಳನು ಶಿವನನ್ನು ಒಲಿಸಿ ಕೊಂಡದ್ದು ಕೊನೆಯ ಘಟ್ಟ. ಈ ಐದು ಹಂತಗಳ ಕಥೆಯನ್ನು ಬಸವಣ್ಣನವರು ತಮ್ಮ ವಚನಗಳಲ್ಲಿ ಸೂಕ್ಷ್ಮವಾಗಿ ಚಿತ್ರಿಸಿರುವುದಷ್ಟೇ ಅಲ್ಲದೆ ಶಿವ ಸಿರಿಯಾಳರ ನಡತೆ. ಆಸೆ ಆಕಾಂಕ್ಷೆಗಳನ್ನು ಭಿನ್ನ ದೃಷ್ಟಿಗಳಿಂದ ವಿಮರ್ಶಿಸಿ ಭಕ್ತರಿಗೆ ಮಾರ್ಗದರ್ಶನ ಮಾಡಿಸಿದ್ದಾರೆ.

ಬಸವಣ್ಣನವರು ಅವತಾರ ಮಾಡಿದುದು ಕ್ರಿ.ಶ. ಹನ್ನೆರಡನೆಯ ಶತಾಬ್ದದ ನಡುವೆ. ಆ ವೇಳೆಗೆ ಜೈನ ಬೌದ್ಧ ಮತಗಳು ಕ್ಷೀಣವಾಗುತ್ತಿದ್ದು ವೈದಿಕ ಮತದ ಪುನರುಜ್ಜೀವನ ಕಾರ್ಯ ನಡೆಯುತ್ತಿತ್ತು. ಬಸವಣ್ಣನವರು ವೀರಶೈವ ಧರ್ಮದ ತತ್ವಗಳನ್ನು ನಿರೂ ಪಿಸಲು ಹೊರಟವರು. ಆ ಕಾಲಕ್ಕೆ ನಾಡಿನ ಜನರಲ್ಲಿ ವಿಭಿನ್ನ ಧರ್ಮಗಳ ಗುಣಾವಗುಣಗಳನ್ನು ಕುರಿತು ಚರ್ಚೆ ನಿರಂತರವಾಗಿ ನಡೆಯುತ್ತಿ ದ್ದಿರಬೇಕು. ಬೇರೆ ಬೇರೆ ಧರ್ಮಗಳ ಸ್ವರೂಪವನ್ನು ವಿಮರ್ಶಿಸುತ್ತ "ದಯೆಯಿಲ್ಲದ ಧರ್ಮವಾವುದಯ್ಯ?" ಎಂದು ಬಸವಣ್ಣನವರು ಕೇಳಿ "ದಯವೇ ಧರ್ಮದ ಮೂಲವಯ್ಯ" ಎಂದು ಸಾರಿ ಹೇಳಿದ್ದಾರೆ. ದಯಾಪಾರಮ್ಯವನ್ನು ಕೊಂಡಾಡಿದ ಬಸವಣ್ಣನವರು ಹಿಂಸಾ ಜನ್ಯವಾದ ಮಾಂಸಾಹಾರ ಪದ್ಧತಿಯನ್ನು ಮೆಚ್ಚುವುದಂತಿರಲಿ, ಒಪ್ಪುವುದೂ ಸಾಧ್ಯವಿಲ್ಲ. "ಗಂಡ ಶಿವಲಿಂಗ ದೇವರ ಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡತಿ ಕೊಂಬುದು ಸುರೆಮಾಂಸ. ಈ ಭಾಂಡ ಭಾಜನಶುದ್ಧಿ ಇ ಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ. ಕೂಡಲ ಸಂಗಮ ದೇವ" ಎಂಬ ವಚನದಲ್ಲಿ ಶಿವಭಕ್ತನು ಮಾತ್ರವಲ್ಲ, ಅವನ ಹೆಂಡತಿ ಮಕ್ಕಳೂ ಶುದ್ಧ ಸಾತ್ವಿಕ ಜೀವನ ನಡೆಸಬೇಕೆಂಬ ಹೇಳಿಕೆಯಿದೆ. ಮಾಂಸ ಭೋಜನ ಮಾಡುವವರ ಸಂಗವೇ ಭಕ್ತರಿಗೆ ಸಲ್ಲದೆಂಬ ಭಾವನೆ ಇಲ್ಲಿ ಸ್ಪಷ್ಟವಾಗಿದೆ. ಹೀಗಿರುವಲ್ಲಿ ನರಮಾಂಸ ಭೋಜನ ಬಯಸುವ ಜಂಗಮ, ಬಸವ ಪಂಥದ ವೀರಶೈವನಾಗಿರುವುದು ಸುತರಾಂ

ಸಾಧ್ಯವಿಲ್ಲ. ಇವನು ಇನ್ನಾವುದೋ ಪಂಥದ ಭೈರವನಾಗಿದ್ದಿರಬೇಕು; ಬಸವಣ್ಣನವರ ಕಾಲಕ್ಕೆ ಅಳಿದು ಹೋಗಿದ್ದ ಯಾವುದೋ ವಾಮಾಚಾರದ ಪಂಥದವನಾಗಿರಬೇಕು. ಆದರೆ ಇದು ಜಂಗಮಾರಾಧನೆಯ ಹಿರಿಮೆಯನ್ನು ಪ್ರತಿಪಾದಿಸುವುದಕ್ಕೆ ಬಹಳ ಅನುಕೂಲ ವಾದ ಕಥೆ. ಜಂಗಮ ಲಿಂಗ ಸಾಮರಸ್ಯ ಇಲ್ಲಿ ಸುವ್ಯಕ್ತವಾಗಿದೆ. ಬಸವಣ್ಣನವರು ಜಂಗಮನ ಪೂಜ್ಯತೆಯನ್ನು ಎತ್ತಿ ತೋರಿಸುವು ದಕ್ಕೆ ಈ ಕಥೆಯನ್ನು ಬಳಸಿಕೊಂಡರೆಂದು ತೋರುತ್ತದೆ. ನಿಷ್ಕಾಮಭಕ್ತರಿಗೆ ಶಿವನ ಬಲವೇ ಸರ್ವಸ್ವ. ಅವರಿಗೆ ಸತಿಸುತ ವ್ಯಾಮೋಹವಿರ ಬಾರದು. ಶಿವಪ್ರೀತಿಗಾಗಿ ಅವರು ಎಂಥ ತ್ಯಾಗಕ್ಕಾದರೂ ಸಿದ್ಧರು. ಅಂಥ ಶಿವಭಕ್ತ ಶ್ರೇಷ್ಠರಲ್ಲಿ ಸಿರಿಯಾಳ ಮಾನ್ಯನಾದವನು. ಅವ ನು ಶಿವಸ್ವರೂಪನಾದ ಜಂಗಮನ ಪ್ರೀತ್ಯರ್ಥವಾಗಿ ತನಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯನಾದ ಮಗನನ್ನೇ ಬಲಿಕೊಟ್ಟನು. ಈ ಕಥೆಯಲ್ಲಿ ವ್ಯಕ್ತವಾಗುವ ನಿಷ್ಕಾಮಭಕ್ತಿಯ ಹಿರಿಮೆಯನ್ನು ಗಮನಿಸಿ ಇದರಲ್ಲಿನ ವಾಮಾಚಾರದ ಅಂಶವನ್ನು ಗಮನಿಸಿಯೂ ಟೀಕಿಸದೆ ಕೈಬಿಟ್ಟರು. ಭ ಕ್ತರನ್ನು ಪರೀಕ್ಷಿಸಲು ಹೊರಟ ಶಿವನು ಭಕ್ತರಿಗೆ ಎಂಥೆಂಥ ಕ್ರೂರ ಸಮಸ್ಯೆಗಳನ್ನು ತಂದೊಡ್ಡುವನೆಂಬುದನ್ನು ತೋರಿಸಲು ಈ ಕಥೆ ಅನು ಕೂಲವಾಯಿತು.

**"ನೆರೆನಂಬೋ ನೆರೆನಂಬೋ ಸಿರಿಯಾಳ ಚಂಗಳೆಯರಂತೆ"**
**"ಭಕ್ತಿ ಎಂತಹುದಯ್ಯಾ? ಸಿರಿಯಾಳ ಮಾಡಿದಂಥಾದ್ದಯ್ಯಾ ಕೂಡಲ ಸಂಗಮ ದೇವ" ॥**



# ಶುಕಸಪ್ತತಿ ಕಥೆ ಕನ್ನಡ ಪದ್ಯ ಕಾವ್ಯ

ಶ್ರೀ ಕೆ. ವೆಂಕಟರಾಯಾಚಾರ್ಯ

ಪ್ರಾಚೀನ ಸಾಹಿತ್ಯ ಭಂಡಾರದ ಶಾಸ್ತ್ರ ಗ್ರಂಥಗಳೂ. ಕಾವ್ಯಗಳೂ ಅನುದಿನವೂ ಚಿಂತನೀಯಗಳೆಂದು ಬಲ್ಲವರ ಮತ. "ಕಾವ್ಯ ಶಾಸ್ತ್ರ ವಿನೋದೇನ ಕಾಲೋ ಗಚ್ಛತಿ ಧೀಮತಾಂ" ಕಾವ್ಯಗಳಲ್ಲಿ ಕಥಾ ಪ್ರಪಂಚವೂ ಒಂದಾಗಿದೆ. ಕಥೆಗಳು ವಸ್ತುಕ--ವರ್ಣಕಗಳೆಂದೂ ನೀತಿ ಪ್ರಧಾನಗಳೆಂದೂ ವಿವಿಧ ರೀತಿಯಲ್ಲಿವೆ. "ಶುಕಸಪ್ತತಿ" ಕಥೆಗಳು ನೀತಿಪ್ರಧಾನಗಳು. ಪತಿವ್ರತೆಯನ್ನು ಕೆಡಿಸಲು ಬಂದ ಅದೊಬ್ಬ ರಾಜನಿಗೆ ಗಿಳಿಯು ಹೇಳಿದ ಎಪ್ಪತ್ತು ಕತೆಗಳಿಲ್ಲಿವೆ. ಇದರ ಹಸ್ತಪ್ರತಿಯ ಮೊದಲಲ್ಲಿ "ಕನ್ನಡಿಸಿ"ದುದೆಂದು ಹೇಳಿದೆ, ಇದರ ಮೂಲವು ಸಂಸ್ಕೃತದಲ್ಲಿ ರಬೇಕು ಎಂದು ವಿಚಾರಕ್ಕೆಡೆಯಾಗಿದೆ. ಅದೊಬ್ಬ ಹೆಂಗುಸು ಜಾರನಲ್ಲಿಗೆ ಹೊರಟಾಗ ಗಿಳಿಯು ಹೇಳಿದ ಎಪ್ಪತ್ತು ಕತೆಗಳು "ಶುಕಸಪ್ತತಿ" ಇತ್ತೀಚೆಗೆ ಪ್ರಕಟವಾಗಿವೆ. (ಮೋತೀಲಾಲ ಬನಾರಸೀದಾಸ-ಡಿಲ್ಲಿ–6) ಇದರಲ್ಲಿ ಸಂಸ್ಕೃತ-ಪ್ರಾಕೃತ ಮಿಶ್ರಣ ಇದೆ. ಇದು ಪ್ರಸ್ತುತ ಕಾವ್ಯಕ್ಕೆ ಹೊಂದಿಕೆಯದಲ್ಲ. ಕನ್ನಡ ಗದ್ಯದಲ್ಲಿ ಬರೆದ "ಸಚಿತ್ರ-ಶುಕಸಪ್ತತಿ ಕಥೆ"ಗಳು ಅಚ್ಚಾಗಿವೆ. (ಬೆಂಗಳೂರು) ಇದು ಈ ಕಾವ್ಯಕ್ಕಿಂತ ಹಲವೆಡೆ ಬೇರೆ ತರವಾಗಿದೆ.

"ಶುಕಸಪ್ತತಿ" ಎಂಬ ಪುಸ್ತಕವು ಕನ್ನಡದಲ್ಲಿ ಎರಡು ವಿಧವಾಗಿರುವುದು. ಒಂದಕ್ಕೆ "ಶೃಂಗಾರ ಶುಕಸಪ್ತತಿ" ಎನ್ನುತ್ತಾರೆ. ಇದರ ಮೂಲವು ಸಂಸ್ಕೃತದಲ್ಲಿದ್ದಾಗ್ಯೂ ಕನ್ನಡ ಗ್ರಂಥದಲ್ಲಿ 70 ದಿವಸದ ಕಥೆಗಳಿಲ್ಲ. ಸಂಸ್ಕೃತದಲ್ಲಿಲ್ಲದ ಕಥೆಗಳೂ ಇವೆ. ಸಂಸ್ಕೃತ ಗ್ರಂಥವು ಕ್ರಿ.ಶ.ಸುಮಾರು 1100ಕ್ಕಿಂತ ಹಿಂದಿನದು. ಪಾರ್ಸಿ, ತುರ್ಕಿ ಭಾಷೆಗಳಿಗೂ ಅಲ್ಲಿಂದ ಜರ್ಮನ್ ಮೊದಲಾದ ಭಾಷೆಗಳಿಗೂ ಅನುವಾದವಾಗಿದೆ..

ಎರಡನೇ ಶುಕಸಪ್ತತಿಗೆ "ವೇದಾಂತ ಶುಕಸಪ್ತತಿ" ಎಂದು ಕೆಲವರು ಹೇಳುತ್ತಾರೆ. ಇದರ ಮೂಲವು ಸಂಸ್ಕೃತದಲ್ಲಿನ "ದಿನಾಲಾಪನಿಕಾ ಶುಕಸಪ್ತತಿ" ಎಂದು; ಇದು ಮುದ್ರಿತವಾಗಿದೆಯೆಂದು ನನ್ನ ಭಾವನೆ. ಇದಕ್ಕೆ ಕನ್ನಡದಲ್ಲಿ ಗದ್ಯ ಅನುವಾದವು ಎರಡು ಮೂರು ಪದ್ಯ ಅನುವಾದಗಳೂ ಇವೆ. ಮೈಸೂರಿನ "ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನ" ಹಸ್ತಲಿಖಿತ ಪುಸ್ತಕಗಳಲ್ಲಿ ಅವನ್ನು ನಾನು ನೋಡಿದ ನೆನಪಿದೆ. (ಡಾ॥ ಅ. ವೆಂಕಟಸುಬ್ಬಯ್ಯ. ಮೈಸೂರು. ಅವರು ಈ ವಿಚಾರ ನನಗೆ ದಯೆಯಿಂದ ತಿಳುಹಿದ್ದಾರೆ.) ಮೈಸೂರು ಮೊದಲಾದೆಡೆ ಪ್ರಾಚ್ಯ ಸಂಶೋಧನಾಲಯಗಳಲ್ಲಿ ಪ್ರಾಚ್ಯ ಪುಸ್ತಕಾಗಾರಗಳಲ್ಲಿ ಇರುವ ಮೂಲ ಗ್ರಂಥಾದಿ ವಿಚಾರ ತಿಳಿಯಲು ಕಷ್ಟಸಾಧ್ಯವಾಗಿದೆ. ಈ ಪ್ರಥಮ ಪರಿಚಯಕ್ಕೆ ಅದು ಅತ್ಯವಶ್ಯವೂ ಅಲ್ಲ ! ಸದ್ಯ ದೊರಕಿದ ವಿಚಾರಾಂಶಗಳು ಬರೆಯಲಾಗಿವೆ.

"ಕರ್ನಾಟಕ ಕವಿಚರಿತೆ"ಯಲ್ಲಿ ಮೂರು ನಾಲ್ಕು ಕಡೆ "ಶುಕಸಪ್ತತಿ" ಕಥೆಗಳ ಪ್ರಸ್ತಾವವಿದೆ(II 484–5. III 172. ಇವೆರಡು ಬೇರೆ ಕವಿಗಳ ಅನುವಾದಿತ ಕೃತಿಗಳು) ಇನ್ನೊಂದೆಡೆ ನಮೂದಿಸಿದ ಪ್ರಕೃತೋಚಿತವಾದ ವಿಚಾರವಿದು.

"ಶುಕಸಪ್ತತಿ ಸು.1650. ಭಾಮಿನೀಷಟ್ಪದಿ. ಪದ್ಯ ಸುಮಾರು 3000. ಕೆಳದಿಯರಸರ ಕಾಲದಲ್ಲಿ ಹುಟ್ಟಿದ ಗ್ರಂಥ"ವೆಂದು 2 ಪದ್ಯಗಳು (1–2.3) ಉದಾಹರಿಸಿವೆ(III 297). ಇದೇ ಕೃತಿಯ ವಿಚಾರ ಮತ್ತೊಂದೆಡೆಗೆ ಇದೆ: "ಶುಕಸಪ್ತತಿ. ಸು. 1680. ಭಾಮಿನೀ ಷಟ್ಪದಿ. ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 38 ಸಂಧಿಗಳು (ಪದ್ಯ 1680) ಇವೆ"ಯೆಂದು 2 ಪದ್ಯಗಳು (4–6.16) ಉದಾಹರಿಸಿವೆ. ಮತ್ತು "297ನೆಯ ಪುಟದಲ್ಲಿ ಹೇಳಿರುವ ಶುಕಸಪ್ತತಿಯೂ ಇದೂ ಒಂದೇ ಗ್ರಂಥವಾಗಿದ್ದರೂ ಇರಬಹುದು" ಎಂದಿದೆ (ಅದೇ ಪುಟ. 299) ಇವೆರಡು ಕಡೆ ಹೇಳಿದ ಕೃತಿಯು ಅದೊಂದೇ; ಈಗ ಈ ಕೃತಿಯ ಕವಿಯ ವಿಚಾರಾದಿಗಳು ಕೊಂಚ ಬರೆಯಲಾಗಿವೆ.

"ಉರಗಕೌಸ್ತುಭಧರ, ವೃಷಧ್ವಜ।
ಗರುಡವಾಹನ. ಕರಿಮಥನ ಕರಿ।
ವರದುರಿತ ಸಂಹಾರ, ಶೂಲಸುದರ್ಶನ ಪ್ರೀತ॥
ಗಿರಿಜೆಯಾಣ್ಮರ ಮಾಮನೋಹರ।
ಪರಮಮಂಗಲ ಮೂರ್ತಿ **ಕೊಡಗಿಯ**।
**ಪುರದ ಶಂಕರ ನಾರಯಣ** ಪಾಲಿಪುದು ಸಂಪದವ॥" (1–5)
ಅಂಬೆಯಮರ ಕದಂಬೆ ವಿಶ್ವ ಕು।
ಟುಂಬೆ ಘನಕುಚ ಕುಂಭೆ ಪೀನನಿ।
ತಂಬೆ ಮಿಸುನಿಯ ಬೊಂಬೆ........।
ತುಂಬೆ ಸಪಲದ ಕೊಂಬೆ ಹರನವ।
ಲಂಬೆ ವನಸಾರಂಬೆ ಕರುಣವ।
ತುಂಬೆ **ವರಮೂಕಾಂಬೆ** ಮನುಮಥನಂಬೆ ಶರಣೆಂಬೆ॥" (1–6)

"ಧರಣಿಗುತ್ತಮನಾಗಿ ರಾಜಿಪ।
**ದೊರೆ ಕೆಳದಿ ಬಸವ ಕ್ಷಿತೀಶನ॥**
**ಚರಣಕಮಲದ ಭೃಂಗ ಶರಜಾನಾಗ ಮಂತ್ರೀಶ॥**
ವಿರಚಿಸಿದನೀ ಪುಣ್ಯಕಥೆಯನು।
ಹರುಷದಿಂ ಕೇಳ್ವರಿಗೆ **ಕೊಡಗಿಯ॥**
**ಪುರದ ಶಂಕರ ನಾರಯಣ**ನಿತ್ತಪನು ಸಂಪದವ॥" (1–17)

ಇಲ್ಲಿ "ಮೂಕಾಂಬೆ"ಯೆಂದರೆ ಕೊಲ್ಲೂರ ದೇವಿಯೆಂದು ಸ್ಪಷ್ಟವಾಗುತ್ತದೆ. "**ಕೊಡಗಿಯ ಪುರದ ಶಂಕರನಾರಾಯಣ**"ನನ್ನು ಇಕ್ಕಡೆ ಸ್ತುತಿಸಿದುದರಿಂದ ಅದು ಈ ಕವಿಯ ಹುಟ್ಟೂರು–ಭಕ್ತಿಕೇಂದ್ರ ಸ್ಥಲವಾಗಿರಬೇಕು. ದ.ಕ.ಜಿಲ್ಲೆಯ ಕುಂದಾಪುರ ತಾಲೂಕಿನ "ಶಂಕರನಾರಾಯಣಪುರಕ್ಕೆ "ಕ್ರೋಡ"ವೆಂದು ಸಂಸ್ಕೃತದಲ್ಲಿ ಹೆಸರಿದೆ (ವಾದಿರಾಜ ಸ್ವಾಮಿ-ತೀರ್ಥಪ್ರಬಂಧ.) ಅದನ್ನು "ಕೊಡಗಿ"ಯೆಂದು ಶಿಲಾಶಾಸನಗಳಲ್ಲಿಹೆಸರಿಸಿದ್ದಾರೆ. (S. I. I. Vol. 9–405. 419. ಇ.).

"ಶರಜಾ-ನಾಗ"ನೆಂಬುದು ಸಂಯುಕ್ತನಾಮವಾಗಿ, ಕವಿನಾಮವು "ಸುಬ್ರಹ್ಮಣ್ಯ" ನಿರಬೇಕೆಂದು ನನ್ನ ಒಂದೆರಡು ಬರಹಗಳಲ್ಲಿ ಸೂಚಿತವಾಗಿದೆ. (ರಾಷ್ಟ್ರಮತ-ವಿಶೇಷಾಂಕ, ಭವ್ಯವಾಣಿ, ಶರಣ ಸಾಹಿತ್ಯ ಪತ್ರಿಕೆಗಳು). "ತರಜಾ" "ಸರಜಾ" ಎಂದು ಹಲವೆಡೆ ಬಳಸಿರುವುದರಿಂದ, ಅದೊಂದು ಮೂಲ ನಾಮ(ರೂಢಿ) ಇರಬೇಕು. "ಕೆಳದಿ ನೃಪ ವಿಜಯ"ದಲ್ಲಿ ಈ ಕವಿಯ ಹೆಸರು ಕಾಣುತ್ತದೆ: ಶರಜಾ ನಾಗಪ್ಪಯ್ಯ (ಪುಟ.169–177), ಆ ನಾಗಪ್ಪಯ್ಯ (171), **ನಿಯೋಗಿ ಶರಜಾ ನಾಗಪ್ಪಯ್ಯ** (174). ಇಲ್ಲಿಯ ನಾಗಪ್ಪಯ್ಯನೆಂಬುದರಲ್ಲಿ "ನಾಗ"ನೆಂದು ಮಾತ್ರ ಕಾವ್ಯದಲ್ಲಿ ಹೇಳಿದೆ. ಇಲ್ಲಿ "ನಿಯೋಗಿ"ಯೆಂದಿದೆ, ಈ ಕಾವ್ಯದಲ್ಲಿ "ಸನ್ಮಂತ್ರಿ"ಯೆಂದು ಹೆಸರುಗೊಂಡಿರುತ್ತಾನೆ. ನಿಯೋಗಿ ಅಂದರೆ ಮಂತ್ರಿಯೆಂದು (ಆಪ್ಟೇಕೋಶ) ನಿಯೋಗಿ-ಮಂತ್ರಿಯಾದ "ಶರಜಾನಾಗ"ನು ಕೆಳದಿಯ ದೊರೆ ಒಂದನೆಯ ಬಸವರಾಜನ ಕಾಲದಲ್ಲಿ–ಆಶ್ರಯದಲ್ಲಿ -ಈ ಕಾವ್ಯ ಬರೆದನು.

ಕೆಳದಿಯ 1ನೆಯ ಬಸವರಾಜನು ಇಸ್ವಿ 1697ರಿಂದ 1715ರ ತನಕ ಆಳಿದನೆಂದು "ಕೆಳದಿ ನೃಪವಿಜಯ"ದಲ್ಲಿದೆ (ಪುಟ 170-177) ಶಿಲಾಶಾಸನಗಳಿಂದಲೂ ಈ ಕಾಲ ತಿಳಿಯಲಾಗಿದೆ. (H. I. S. I. 291-360) ಈ ರಾಜನು ಸ್ವಯಂ ಕವಿಯೆಂದೂ ಹೇಳಲಾಗಿದೆ. (ಕೆಳದಿ ನೃಪವಿಜಯ. ಪುಟ 175)

"ಮೆರೆವ ಶಿವತತ್ತ್ವರತ್ನಾ
ಕರಮೆಂದೆನಿಪಾ ಸುಭಾಷಿತ ಸುರದ್ರುಮಮೆಂ॥
ಬುರುತರ ಕಾವ್ಯದ್ವಯಮಂ।
ವಿರಚಿಸಿ ಸದ್ಯಶವನಾಂತನಾ ಬಸವನೃಪಂ॥

ಇಂತು ಸಂಸ್ಕೃತ ಗ್ರಂಥ ನಿಬಂಧದ್ವಯಮಂ ವಿರಚಿಸಿ ಮತ್ತಮಲ್ಲದನಂತರಂ ಗೀರ್ವಾಣ ಕರ್ಣಾಟಕ ಭಾಷೆಗಳಿಂ-

ಅನುಪಮ ಸೂಕ್ತಿ ಸುಧಾಕರ॥
ಮೆನಿಪಾ ವಸ್ತುಕ ಸುಕಾವ್ಯಮಂ ವಿರಚಿಸಿ ಸೂ॥
ರಿನಿಕರ ಕಲ್ಪದ್ರುಮನೆಂ।
ದೆನಿಪೀ ಬಿರುದಾಂತು ಮೆರೆದನಾ ಬಸವನೃಪಂ॥"

ಅಚ್ಚಾಗಿರುವ ಈತನ "ಶಿವತತ್ತ್ವ ರತ್ನಾಕರ"ವು "ವಿಶ್ವಕೋಶ"ದಂತಿದೆ. (ಮದರಾಸು ಪ್ರತಿ) ಇದರ ಮುದ್ರಿಕೆಯಿದು:

"ಇತಿ ಶ್ರೀಮದಾದ್ಯನಂತ ಸಕಲ ತತ್ತ್ವೋತ್ತೀರ್ಣ ಷಡಧ್ವೋಪಾದಾನ ಬಿಂದು ಕಾರಣ ಚಿದಂಬರ ಶಕ್ತಿ ಸಮನ್ವಿತ ಪರಮೇಶ್ವರ ಪ್ರಸಾದಾಸಾದಿತ ಶಿವಾದ್ವೈತ ವಿದ್ಯಾವಿಶಾರದ ಶ್ರೀಮತ್ಕೆಳದಿ ಬಸವರಾಜೇಂದ್ರ ವಿರಚಿತೇ ವೇದಾಗಮಾಂತರ್ಗತ ವಿವಿಧ ವಿದ್ಯಾತಂತ್ರಸಾರಭೂತೇ ಶ್ರೀ ಶಿವತತ್ತ್ವ ರತ್ನಾಕರೇ—"

"ಶ್ರೀಮತ್ಸದ್ಗುಣ ಸೋಮಶೇಖರ ಲಸಚ್ಚೆನ್ನಾಂಬಿಕಾಸೂನುನಾ।
ಶ್ರೀ ದೀಕ್ಷಾಗುರು ಚೆನ್ನವೀರತ(ಕ)ರ ಸಂಜಾತೇನ ಗೌರೀಪತೇ: ॥
ಹೇವಾಕೇನ ಪದಾಂಬುಜೇಚ ಬಸವಕ್ಷೋಣೀ ಭೃತಾನಿರ್ಮಿತೇ।
ಕಲ್ಲೋಲ: ಪರಿಪೂರಿತ: ಕೃತಿವರೇ ತ್ವಸ್ಮಿನ್ನಭೂತ್ ಷಷ್ಠಕ:॥" (ಶಿವತತ್ತ್ವರತ್ನಾಕರ)

ಇವು ಮೂರು ಕೃತಿಗಳೊಂದಿಗೆ "ವೀರಶೈವ ಸಂಜೀವನ"ಯು ಇವನದೆಂದು ಕೇಳುತ್ತದೆ. (ಕೆಳದಿ ನೃಪವಿಜಯ ಉ. 15) "ಸೂಕ್ತಿ ಸುಧಾಕರ"ವು ಕವಿಚರಿತಕಾರರಿಗೆ ದೊರಕಿಲ್ಲವೆಂದರು. (2–558)

ಷಡಕ್ಷರಿಯೆಂಬ ಹೆಸರಿನವರು ಮೂವರು ದೊರೆಯುವರು. ಒಂದನೆಯವನು ಷಡಕ್ಷರ ಮಂತ್ರಿ ಅಥವಾ ಮಂತ್ರಿ ಷಡಕ್ಷರಯ್ಯ. ಇವನು ಈ ಮೂರು ಗ್ರಂಥಗಳನ್ನು ರಾಜನಿಗಾಗಿ ಬರೆದುದೆಂದು ಆಶಯವಿದೆ. (ಸಂ.ಕ.ಚ.3–297). ಆದರೆ "ಶಿವತತ್ತ್ವರತ್ನಾಕರ"ದ ಮುದ್ರಿಕೆಯ ಮೇರೆಗೆ ಈ ಆಶಯಕ್ಕೆಡೆಯಿಲ್ಲ !

ಈ ಕವಿಯು ಮತವಿಚಾರವಾಗಿ ಹೇಳುವಲ್ಲಿ, "ವೀರೇಶ್ವರನ ಚರಣಕೆ ಶರಣು ಶರಣೆಂಬೆ" (1–10) "ಹರಕವಿಗಳಂಘ್ರಿಯನು ಭಾವಿಸಿ ಪರಕವಿಗಳಡಿಗೆರಗಿ ಮತ್ತಾ ವರಕವಿಗಳಿಗೆ ನಮಿಸಿ(1–14)" ಎಂದುದರಿಂದ ಇವನು ಶೈವ-ವೀರಶೈವ-ಕವಿಯಾಗಿರಬೇಕು. ಈ

ಕೃತಿಯ ಆದಿತ್ಯಸ್ತುತಿ-ಒಗಟು ನುಡಿಯಿಂದ-"ಶುಕಸಪ್ತತಿ ಕಥೆ"ಯೆಂಬ ಪದ್ಯಕಾವ್ಯವೇ ಕನ್ನಡ ಆದಿತ್ಯ ಪುರಾಣಕ್ಕಿಂತ ಮೊದಲು ರಚಿತವಿರಬೇಕೆಂದು" ಬರೆದಿದ್ದೆ. (ಪ್ರಕಾಶ 1960 ಪರ್ಯಾಯ ಸಂಚಿಕೆ) ಆದರೆ ಇದೀಗ ದೊರೆತ ವಿಚಾರದಿಂದ ಕನ್ನಡ ಆದಿತ್ಯ ಪುರಾಣವು ಮೊದಲು ರಚಿತವಿರಬೇಕು; ಶುಕಸಪ್ತತಿ ಮತ್ತೆ ಬರೆದುದಿರಬೇಕೆಂದು ಹೇಳಬೇಕಾಗುತ್ತದೆ. ಶುಕಸಪ್ತತಿಯ ಆದಿತ್ಯ ಸ್ತುತಿಯಿದು:

ಧರಣಿಯಣುಗನ ಮಗನ ಶಸ್ತ್ರ।
ಕ್ಕುರವನೊಡ್ಡಿದ ಹರಿಯ ಹಣೆಯನು।
ಭರದಲೆಚ್ಚನ ತಾಯ ಶಾಪದಿ ಶಿರವ ನೇಗಿದನ॥
ಪಿರಿಯನಣ್ಣನ ಪರಿಗೆ ಹಿಗ್ಗುತ॥
ಹರುಷದಿಂದಾಹಾರ ಪಾತ್ರೆಯ॥
ಕರುಣಿಸಿದ ಭಾಸ್ಕರನ ಪಾದಕೆ ಶರಣು ಶರಣೆಂಬೆ(1–11)

ಈ "ಶುಕಸಪ್ತತಿ" ಪದ್ಯಕಾವ್ಯ ಇದುವರೆಗೆ ಅಚ್ಚಾಗಿಲ್ಲ ! ಇದು ದಕ್ಷಿಣ ಕನ್ನಡ ಜಿಲ್ಲೆಯ ಕವಿಯೊಬ್ಬನು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಉತ್ತಮ ಕಾಣಿಕೆಯಾಗಿದೆ. ಇದರಲ್ಲಿ ಹೇಳಿದ ಶಕುಂತಲಾ. ಶ್ರೀರಾಮ ಇತ್ಯಾದಿಯರ ಕತೆಗಳು ಬೇರೆಡೆಯವುಗಳಿಗಿಂತ ಹೊಸತನದಲ್ಲಿ ಕೂಡಿವೆ. ಪತಿವ್ರತಾ ಮಹಾತ್ಮ್ಯೆಯೆಂದರೆ ಅದೇನು ವಿಶಿಷ್ಟವೆಂಬುದು ಈ ಕತೆಗಳಲ್ಲಿ ಪ್ರತಿಬಿಂಬಿತವಾಗಿದೆ. ಪತಿವ್ರತೆಯರನ್ನು ಬೆಳಗೆದ್ದು ನೆನೆಯಬೇಕೆಂದು ಆರ್ಯೋಕ್ತಿಯಿದೆ. ಲೌಕಿಕ ಹಾಗೂ ಅಲೌಕಿಕ ಸುಖಸಂಪತ್ತು ದೊರೆಯಲು ನೀತಿವಂತನಾಗಿರುವುದೇ ಮೂಲಕಾರಣವಾಗಿದೆ. ಈ ಕೃತಿಯಲ್ಲಿ, ಅವೆಲ್ಲಾ ಕತೆಗಳಲ್ಲಿ, ನೀತಿ ವಿಚಾರಗಳು ಮನಸ್ಸಿಗೆ ಹಿತ ಹಾಗೂ ವಿನೋದವಾಗುವಂತೆ ಸರಸವಾಗಿ ತಿಳಿಯಾಗಿ-ಹೇಳಿವೆ. ಇವೆಲ್ಲಾ ಕಾರಣಗಳಿಂದ "ಶುಕಸಪ್ತತಿ" ಕನ್ನಡ ಪದ್ಯಕಾವ್ಯ ಸಹೃದಯ ಸ್ವೀಕಾರ್ಯವಾಗಿದೆ. ಅಚ್ಚಾಗಲು ತಕ್ಕುದಾದ ಕೃತಿರತ್ನವಾಗಿದೆ. ಈ ಕವಿಯೇ ಇದರ ಫಲಶ್ರುತಿ ಬರೆದು ಈ ಪರಿಚಯ ಲೇಖನ ಮುಗಿಯುತ್ತದೆ.

"ವೇದಶಾಸ್ತ್ರ ಪುರಾಣದರ್ಥಗ॥
ಳಾದಿಗೊಂಡಿಹವೀ ಕೃತಿಯೊಳಿದ॥
ನಾದರಿಸಿ ಕೇಳುವರಭೀಷ್ಟವು ಸಿದ್ಧಿಯಾದಪುದು॥
ಸಾದರದಿ ಕೇಳ್ವರಿಗೆ ಪರಮ ವಿ॥
ನೋದವಾಗಿಹುದೀ ಕೃತಿಗೆ ಸಮ॥
ವಾದ ಕಥೆಯಿಲ್ಲೆಂದು ಕೊಂಡಾಡುವರು ಕೋವಿದರು॥"



# ಒನಕೆವಾಡು

ಶ್ರೀ ಟಿ. ಕೇಶವ ಭಟ್

ಮಾನವನು ಅನ್ನ ಸೇವಿಸುತ್ತಿದ್ದ ಕಾಲದಿಂದಲೇ ಬತ್ತಕುಟ್ಟುವ ಕೆಲಸವೂ ನಡೆದುಬಂದಿದೆಯೆನ್ನಬಹುದು. ಈ ಕೆಲಸಕ್ಕೆ ಸಾಧನೋಪಕರಣ ಒನಕೆ. ಬತ್ತಕುಟ್ಟುವುದು ಜೀವನಾವಶ್ಯಕವಾದರೂ ಶ್ರಾಮಕವೂ ಅವ್ಯಸ್ತವೂ (monotonous) ಆದ ಕೆಲಸ. ಇದನ್ನು ಮಾಡುವವರು ಶ್ರಮಜೀವಿಗಳಾದ ಹೆಂಗುಸರು. ಅವರು ಬತ್ತಕುಟ್ಟುವಾಗ ಆದ ದಣಿವನ್ನು ಕಳೆವುದಕ್ಕೂ ಚಿತ್ತಪ್ರಸನ್ನತೆಯನ್ನು ಕಳೆವುದಕ್ಕೂ ಮೆಚ್ಚಿನ ಹಾಡುಗಳನ್ನು ಹಾಡಿಕೊಳ್ಳುವರು. ಒನಕೆಯ ಪೆಟ್ಟಿನ ತಾಳಗಳಿಗೆ ಸರಿಗೊಳಿಸಿ ಹಾಡಿಕೊಳ್ಳುವರು. ಬತ್ತಕುಟ್ಟುವಾಗ ಮಾತ್ರವಲ್ಲದೆ ಇಂದಿಗೂ ಕಲ್ಲು ಬೀಸುವಾಗ, ತೊಟ್ಟಿಲು ತೂಗುವಾಗ, ಗಾಡಿ ಎಬ್ಬುವಾಗ, ಹಸು ಮೇಯಿಸುವಾಗ. ಬೂತಗಳ ಕೋಲ ಏರ್ಪಡುವಾಗ, ನೇಜಿ (ನಾಟಿ) ಕೆಲಸ ನಡೆವಾಗ-ಹಾಡಿನ ದನಿ ಹೊರಟೇ ಬಿಡುತ್ತದೆ. ಆ ಹಾಡಿನ ದನಿಯೊಡವರೆತು ಗ್ರಾಮೀಣ ಜನತೆಯ ಜೀವನದ ಸರಳ ಸಾಹಿತ್ಯ ರಸವೂ ಹರಿಯುತ್ತದೆ. ಬತ್ತ ಕುಟ್ಟುವ ಹಾಡು "ಒನಕೆವಾಡು". ಈ ಒನಕೆವಾಡಿನ ಹಳಮೆ, ನಡೆ, ನುಡಿ, ಧಾಟಿ, ಹುರುಳು, ಲಕ್ಷಣ-ಮುಂತಾದುವನ್ನು ತಿಳಿದವರು, ತಿಳಿದು ತಿಳಿಸಬಲ್ಲವರು ಇಂದಿಗೆ ವಿರಳ. ಯಂತ್ರಯುಗದ ಜೀವಿಗಳಾದ ಇಂದಿನ ಶ್ರಮಿಕ ವರ್ಗದ ಹೆಂಗುಸರಿಗೇ ಒನಕೆವಾಡು ಅಪರಿಚಿತವೆಂಬಂತೆ ಆಗಿದೆ. ಆದರೆ, ಎಷ್ಟೋ ನೂರು ವರ್ಷಗಳ ಹಿಂದೆ ಕರ್ಣಾಟಕದಲ್ಲಿ "ಒನಕೆವಾಡು" ಅತ್ಯಂತ ಪರಿಚಿತವೂ ಪ್ರಚಲಿತವೂ ಸರ್ವಜನಜ್ಞಾತವೂ ಆದ ಹಾಡಾಗಿತ್ತೆಂದು ತೋರುತ್ತದೆ.

ಶಿವಮೊಗ್ಗ ಜಿಲ್ಲೆಯ ಹುಂಚದ ಪಂಚಬಸ್ತಿ ಅಂಗಳದ ಶಿಲಾಶಾಸನದಲ್ಲಿ ಒನಕೆವಾಡಿನ ಉಲ್ಲೇಖವಿದೆ–

"ಶಿವಮಾರದೇವಂ ಸೈಗೊಟ್ಟನೆಂಬೆಱಡನೆಯ ಪೆಸಱಿಂತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮುಂ ಮಾಡಿ ಮತ್ತಂ-

ಕಂದ॥ ಏವೇೞ್ವುದೊ ಶಿವಮಾರ ಮ<br>
ಹೀವಳಯಾಧಿಪನ ಸುಭಗ ಕವಿತಾಗುಣಮಂ<br>
ಭೂವಳಯದೊಳ್ ಗಜಾಷ್ಟಕ<br>
ಮೋವನಿಗೆಯುಮೊನಕೆವಾಡುಮಾದುದೆ ಪೇೞ್ಗು೦1

ಶಿವಮಾರನೆಂಬೀ ಗಂಗರಾಜನು ಕ್ರಿ.ಶ.800ನೆಯ ಕಾಲದವನು. ಇವನು ಬರೆದ ಗಜಾಷ್ಟಕವು ಓವನಿಗೆಯೂ ಒನಕೆವಾಡೂ ಆಯಿತಂತೆ; ಅಷ್ಟೊಂದು ಪ್ರಚುರವಾಯಿತೆಂದು ಅದರ ಭಾವವಾಗಿ ಕಾಣುತ್ತದೆ. ಶಿವಮಾರನ ಗಜಾಷ್ಟಕವು ಇಂದು ಉಪಲಬ್ಧವಿಲ್ಲ. ಆ ಪ್ರಾಕ್ಕಾಲದ ಓವನಿಗೆ ಹಾಡಾಗಲೀ, ಒನಕೆವಾಡಾಗಲೀ ಇಂದಿಗೆ ಉಳಿದಿಲ್ಲ. ಇವು ಗ್ರಾಮೀಣರ ಸಾಹಿತ್ಯವಾಗಿ. ಕವಿಕೃತ ಕಾವ್ಯಪಂಕ್ತಿಗೆ ಸೇರಲು ಅನರ್ಹವಾಗಿ, ಗ್ರಂಥಸ್ಥವಾಗದೆ ಉಳಿದುದರಿಂದ, ಉಳಿದಿಲ್ಲವೆನ್ನಬಹುದು. ಇವುಗಳಲ್ಲಿ "ಓವನಿಗೆ" ಬೇರೊಂದು ಸಂಶೋಧ ಲೇಖನದ ವಸ್ತುವಾಗಬಲ್ಲುದು. ಆದುದರಿಂದ ಒನಕೆವಾಡನ್ನು ಮಾತ್ರ ಸದ್ಯ: ಇಲ್ಲಿ ಲಕ್ಷ್ಯವಿಟ್ಟಿದೆ.

ಕ್ರಿ.ಶ.1170ನೆಯ ಕಾಲದ ಕವಿ ನೇಮಿಚಂದ್ರನು ಒನಕೆವಾಡನ್ನು "ತಿವುಡೆ" ಎಂದು ಕರೆದು. ಅದರ ಸ್ವರೂಪವನ್ನು ಹೀಗೆ ತಿಳಿಸಿದ್ದಾನೆ.–

"ವಚನ"………ಮುಂದೆ ಚಂದನದ ಚೌಕಿಗೆಯ ಮುಂದೆ ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ವು ಕನಕದೊನಕೆಯಂ ನಳಿತೋಳ್ಗಳಿಂ ನೆಗಪಿ.

(ತಿವುಡೆ)

ಅಂಗಜನೈದು ಶರಂಗಳ ಬಂದ ಬ<br>
ನಂಗಳ ಪುೞಿಲ ತಳಿರುಯ್ಯಲಚ್ಚವೆ<br>
ಳ್ದಿಂಗಳ ಮೇಲೆ ಸಿರಿನಿಲ್ಕೆ॥<br>
ಮನಮನಂಟುವ ರೂಪು ದನಿ ನಗೆ ಮೇಲ್ಪುತಂ<br>
ಪನುಗುಣಮುಳ್ಳ ವಧುವಿರೆ ಮತ್ತೆ ಪೂ<br>
ವಿನ ಸರಲೇಕೆ ಮದನಂಗೆ॥<br>
ಪತ್ತಿದ ಗಂಡರ ಚಿತ್ತವ ಕಿಡಲೀಯ<br>
ದಿತ್ತುದೇ ಕೋಟಿ ತನಗೆಂಬ ಸೂಳೆಯ<br>
ಓತ್ತಿಲಲ್ಲಿರದೇ ಸುರಭೂಜ"2

---

1. Epigraphic Carnatica Vol VIII, Shimoga Dt. Part II, Nagar Tq. 35.
2. ನೇಮಿಚಂದ್ರ–ಲೀಲಾವತೀ ಪ್ರಬಂಧ ಆ2 ಪದ್ಯ 35.

ಇಲ್ಲಿ ಇಂತಹ ಹತ್ತು ತ್ರಿಪದಿಗಳ ಕೊನೆಗೆ ಬರುವ ವಚನದಲ್ಲಿ ಹೀಗೆ ಹೇಳಿದೆ-"ಎಂದಿರ್ವರೊಂದಾಗಿ **ಸೂಳೆಸಿದ್ಧಾಂತ ಮನೊನಕೆವಾಡಂ** ಮಾಡಿ ಪಾಡುವ ಪೆಂಡಿರ ವಿನೋದಕ್ಕೆ ವಿನೋದ ನದೀಸಮುದ್ರಂ ನಸುನಸುಗುತ್ತುಂ ಪೋಗೆವೋಗೆ"[3]

ಈ ಉದಾಹರಣದಿಂದ ಒನಕೆವಾಡು ತ್ರಿಪದಿರೂಪವುಳ್ಳುದೆಂದೂ ಅದಕ್ಕೆ ಸೂಳೆಸಿದ್ಧಾಂತವೂ ವಿಷಯವಾಗುವುದೆಂದೂ ನಿರೂಪಿತವಾಗುವುದು. ಇದನ್ನೇ ಪುಷ್ಟೀಕರಿಸುವ ಇನ್ನೊಂದು ಕಾವ್ಯೋದಾಹರಣವಿದೆ. ಕ್ರಿ.ಶ.1222ನೆಯ ಕಾಲದ ಸೋಮರಾಜನು ವರ್ಣಿಸಿರುವಂತೆ ಉದ್ಭಟಕ್ಷಿತೀಶನು ಜ್ಯೋತ್ಸ್ನಾವಿಹಾರವನ್ನು ಕೈಕೊಂಡು ಸೂಳೆಗೇರಿ ಹೊಕ್ಕು ಅಲ್ಲಿಯ ಆಲಾಪಗಳನ್ನು ಕೇಳುತ್ತ ಬರುತ್ತಿರುವಲ್ಲಿ ಹೀಗೆ ಹೇಳಿದೆ.

"ಮತ್ತೊಂದೆಡೆಯೊಳಳವೆಣ್ ತಳತಳಿಪ ಪೊನ್ನೊನಕೆಗಳಂ ಪಿಡಿದು, ರುಂದ್ರಚಂದ್ರಕಾಂತದೊರಲೊಳ್ ತಂಡುಲಮಂ ತೀವಿ ಚಳಿಸುತ್ತ ತಿವಿಳಾಸದಿಂ ಕಲಕಂಠಕಂಠ ಸಂಜನಿತ ಮಂಜುಳ ಮಧುರಸ್ವರಮಂ ಪೞಿವಿಂಚರದಿಂ ಪಾಡುತ್ತೆಸೆದಿರ್ದಳ್ ಅದೆಂತೆಂದೊಡೆ–

ನೆವವಿಟ್ಟು ವಿತ್ತಮಂ ಕವರಲಱಿಯದೆ ಸುಮ್ಮ
ನವಿಚಾರದಿಂದೆ ವಿಟನನಂಡಲೆವುದೀ
ಯವನಿಯೊಳ್ ನೀತಿ ಬೆಲೆವೆಣ್ಣೆ॥
ಚದುರಂಗೆ ನೆತ್ತಮಿಂಪೊದವಿದ ಪಾಡು ಸ
ಕ್ಕದದೋದು ಹಾಸ್ಯಮಿನಿಗಬ್ಬವೊಳ್ಪುಮಿ
ಲ್ಲದ ಸೂಳೆವನೆಯೆ ಬೞಿವನೆಯೆ॥
ನಡೆಯದದು ಕೊಡದೊಡಂ ಕೆಡುವುದದು ಪಿರಿದೀಯೆ
ಸೊಡರ್ಗುಡಿಗೆಣ್ಣೆಯೆಱಿದಂತೆ ಬೆಲೆವೆಣ್ಗೆ
ಕುಡುವುದು ಹದಕೆ ಚದುರಿಗಂ"॥3॥

ಇಲ್ಲಿ ಬಂದಿರುವ ಹನ್ನೆರಡು ಪದ್ಯಗಳು ತ್ರಿಪದಿಗಳು. ಇವನ್ನು ಬತ್ತಕುಟ್ಟುವಾಗ ಹಾಡಿದಂತೆ ತಿಳಿಸಿದೆ. ಹಿಂದಿನ ಉದಾಹರಣದಂತೆ ಇಲ್ಲಿಯೂ ಸೂಳೆಸಿದ್ಧಾಂತವೇ ಪ್ರತಿಪಾದಿತವಾಗಿದೆ.

ಕ್ರಿ.ಶ.1540ನೆಯ ಕಾಲದ ದೇವಪ್ಪಕವಿ ಒಂದೆಡೆ ಶಬರಿಯರು ಬಿದಿರಕ್ಕಿ ಕುಟ್ಟುವುದನ್ನು ವಿವರಿಸಿದ್ದಾನೆ–

ವದನ ಬೆಮರೆ ಕುರುಳುಣ್ಮಲು ಬಲುಮೊಲೆ
ಗದಗದಿಸಲು ತಂತಮ್ಮ
ಎದೆಯಾಣ್ಮರ ಪಾಡುತ ವನಚರಿಯರು
ಬಿದಿರಕ್ಕಿಯ ತಳಿಸುವರು॥
ಇಂದುಕಾಂತದವೊರಲೊಳು ಬಿದಿರಕ್ಕಿಯ
ಚಂದನದೊನಕೆಯ ಪಿಡಿದು
ನಿಂದು ತಳಿಸುತ ರಾಗದೊಳು ಪಾಡುವ ಪೆಣ್ಣ
ಗೊಂದಣವೆಸೆದುದಾಯೆಡೆಯ[4]

ಇದು ಸಾಂಗತ್ಯದ ಹಾಡುಗಬ್ಬವಾದುದರಿಂದ ಇಲ್ಲಿ ತ್ರಿಪದಿಯಿಲ್ಲ. ತ್ರಿಪದಿಯೇ "ಚೌಕಂಗೊಂಡು" ಸಾಂಗತ್ಯವೆನಿಸುವುದರಿಂದ ತ್ರಿಪದಿಯ ಗತಿ ಇಲ್ಲಿಯೂ ಇದೆ. ಇಲ್ಲಿ ಬಂದಿರುವ ಸಾಹಿತ್ಯಾಂಶವಂತೂ ಒನಕೆವಾಡಿನಂತಹವೇ ಆಗಿದೆಯೆಂದಿಟ್ಟುಕೊಳ್ಳಬಹುದು.

ಹಿಂದಿನ ಒನಕೆವಾಡು ತ್ರಿಪದಿರೂಪದಲ್ಲಿದ್ದಂತೆ ಇಂದು ಉಪಲಬ್ಧವಾಗುವ "ಬತ್ತಕುಟ್ಟುವ ಹಾಡು" ಕೂಡಾ ತ್ರಿಪದಿಯಲ್ಲೇ ಇದೆ. ಇದರಲ್ಲಿಯೂ ಹಿಂದಿನಂತೆ ರತಿಶೃಂಗಾರದ ಮಾತುಗಳೇ ಬರುತ್ತವೆ–

ಬತ್ತತೊಳಿವ ಕೈಗೆ ಬಯಿನೆ ಮುಳ್ಳೆಟ್ಟಿತು
ಮದ್ದಿಗ್ಹೋದಣ್ಣ ಬರಲಿಲ್ಲ ಬಸ್ರೂರ
ಸೂಳೆ ಕಂಡಣ್ಣ ಬೆರಗಾದ
ಕೋಟ ಕುಂದಾಪುರ ನೋಟಕ್ಕೆ ಗಂಗೊಳ್ಳಿ
ಪೇಟೆ ಪಟ್ಟಣವು ಬಸ್ರೂರು (ಬಸ್ರೂರ) ಹೆಣ್ಮಕ್ಕು
ನಾಟಕದ ನಗೆಯ ನಗುವರು"[5]

ಹಳ್ಳಿಯ ಅನಾಗರಿಕ ಅನಕ್ಷರ ಜನತೆಯ ಮುಚ್ಚುಮರೆಯಿಲ್ಲದ ಶೃಂಗಾರಹಾಸ್ಯ ಸಾಹಿತ್ಯಾಂಶವು ಇಂದಿನ ಬತ್ತಕುಟ್ಟುವ ಹಾಡುಗಳಲ್ಲಿ ಕಾಣುತ್ತಿದೆ. ಅಲ್ಲದೆ, ಇವು ತ್ರಿಪದಿರೂಪದಲ್ಲಿರುವುದೂ ಸ್ಪಷ್ಟವಿದೆ.

---

3. ಸೋಮರಾಜ–ಉದ್ಭಟಕಾವ್ಯ, ಆ 10 ಪದ್ಯ 88, 93, 95.
4. ದೇವಪ್ಪ–ರಾಮವಿಜಯ, ಸಂ.15 ಪದ್ಯ 75, 76. (5128ಪದ್ಯಗಳಿರುವ ಈ ಗ್ರಂಥವು ಲೇಖಕರಿಂದ ಸಂಪಾದಿತವಾಗಿ ಅಚ್ಚಿನಲ್ಲಿದೆ)
5. ಹಾಡಿನ ಚೂಡಾಮಣಿ–(ಇದು ಲೇಖಕರಿಂದ ಸಂಗ್ರಹೀತವಾದ ದಕ್ಷಿಣ ಕನ್ನಡದ ಜನಪದಗೀತಗಳ ಗ್ರಂಥ)

ಬತ್ತಕುಟ್ಟುವಾಗ ತ್ರಿಪದಿಯನ್ನು ಹಾಡತಕ್ಕುದು-ಎಂಬ ಶಾಸ್ತ್ರ ನಿಯಮವು 12ನೆಯ ಶತಮಾನದಲ್ಲೇ ಇದ್ದಂತೆ ತೋರು ತ್ತದೆ. ಕಲ್ಯಾಣಿಯ ಚಾಲುಕ್ಯ ರಾಜನಾದ ಮೂರನೆಯ ಸೋಮೇಶ್ವರನು (ಕ್ರಿ.ಶ.1126-1139) ತನ್ನ "ಅಭಿಲಷಿತಾರ್ಥ ಚಿಂತಾಮಣಿ" ಅಥವಾ "ಮಾನಸೋಲ್ಲಾಸ" ಎಂಬ ಗ್ರಂಥದಲ್ಲಿ ಹೇಳಿದ ವಿಚಾರ ಹೀಗಿದೆ—

ತ್ರಿಪದೀ ಕಂಡನೇ ಚೈವ ಶೃಂಗಾರೇ ವಿಪ್ರಲಂಭಕೇ
ಪ್ರಾಯ: ಶಾಸ್ತ್ರಿಭಿರೇವ್ಮೆಷಾ ಗೇಯಾ ನಾನಾರ್ಥಭೂಷಿತಾ 6

ಧಾನ್ಯವನ್ನು ಕುಟ್ಟುವಲ್ಲಿ ಶೃಂಗಾರ ವಿಪ್ರಲಂಭಗಳನ್ನು ವರ್ಣಿಸುವಲ್ಲಿ ಕೊಂಕು, ಅಣಕ, ಕಟಕಿ, ನೇರು-ಮುಂತಾದ ಹಲವಾರು ಅರ್ಥಗಳಿಂದ ಶೋಭಾಯಮಾನವಾಗುವ ತ್ರಿಪದಿಗಳನ್ನು ಹಾಡಬೇಕೆಂದು ಮೇಲಿನ ಶಾಸ್ತ್ರಾಭಿಪ್ರಾಯ. ಬತ್ತಕುಟ್ಟುವ ಹಾಡು ಇಂದಿಗೂ ಇದೇ ಲಕ್ಷಣದಿಂದ ಕೂಡಿರುತ್ತದೆ. ಇದರಿಂದ ಒನಕೆವಾಡು ತ್ರಿಪದಿಯೇ ಆಗಿದೆಯೆಂದು ಸಿದ್ಧಾಂತವಾಗುವುದು. ಇದಕ್ಕೆ ಕಾರಣವೇನೆಂಬುದ ನ್ನು ಪರಿಶೀಲಿಸಬೇಕು.

ಬತ್ತಕುಟ್ಟುವುದು ಹೇಗೆ ಅತ್ಯಂತ ಪ್ರಾಚೀನವೋ ಹಾಗೆಯೇ ಕನ್ನಡದ ದೇಶೀಯ ಪದ್ಯರೂಪಗಳಲ್ಲಿ ಅತಿ ಪ್ರಾಚೀನವಾದುದು ಮತ್ತು ಮೂಲರೂಪವಾದುದು "ತ್ರಿಪದಿ". ಇದು ಕನ್ನಡದ ಛಂದಸ್ಸಿನ ಓಂಕಾರ ಅಥವಾ ತ್ರಿಮೂರ್ತಿ. ತ್ರಿಪದಿಯನ್ನು ಶ್ರೀ ದ.ರಾ.ಬೇಂದ್ರೆ ಯವರು "ಕನ್ನಡ ವೃತ್ತಗಳ ಗಾಯತ್ರಿ"7 ಎಂತಲೂ ಡಿ.ಎಸ್.ಕರ್ಕಿಯವರು "ಛಂದೋಗಂಗೆಯ ಗಂಗೋತ್ರಿ"8 ಎಂತಲೂ ರಂ. ಶ್ರೀ ಮುಗಳಿಯವರು "ಕನ್ನಡ ಛಂದಸ್ಸಿನ ತಾಯಿಬೇರು"9 ಎಂತಲೂ ತಿಳಿಸಿರುತ್ತಾರೆ. ಮೊತ್ತಮೊದಲಾಗಿ ತ್ರಿಪದಿ ಪದ್ಯವು ಕ್ರಿ. ಸ. 700ನೆ ಯ ಕಾಲದಲ್ಲಿ ಕೆತ್ತಿರುವ ಬಾದಾಮಿಯ ಶಾಸನವೊಂದರಲ್ಲಿ ದೊರೆತಿದೆ. ಅದು ಪೂರ್ವದ ಹಳಗನ್ನಡ ಶಬ್ದರೂಪವುಳ್ಳುದು, ಕಪ್ಪೆ ಅರಭ ಟ್ಟನ ಸ್ತುತಿರೂಪದಲ್ಲಿದೆ. ಆ ತ್ರಿಪದಿಗಳಲ್ಲಿ ಮೊದಲನೆಯದಕ್ಕೆ ಪಾದಗಳು ಎರಡೇ ಇವೆ. ಉಳಿದ ಮೂರು ಪದ್ಯಗಳೂ ಮೂರು ಪಾದಗ ಳುಳ್ಳವು. ಉದಾಹರಣೆಗೆ ಎರಡನ್ನು ಕೊಡಲಾಗಿದೆ.

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್
ಕಷ್ಟಜನ ವರ್ಜಿತನ್ ಕಲಿಯುಗವಿಪರೀತನ್॥

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ10

ಇದೇ ರೀತಿ ಶಿಕಾರಿಪುರದ 129ನೆಯ (ಕ್ರಿ.ಶ.1071ನೆಯ ಕಾಲದ) ಶಾಸನದಲ್ಲಿಯೂ ಎರಡು ತ್ರಿಪದಿಗಳಿವೆ.11 ಕ್ರಿ. ಶ. 9ನೆಯ ಶತಮಾನದ ಕವಿರಾಜಮಾರ್ಗದಲ್ಲಿ "ತಿವದಿ" ಎಂಬ ಶಬ್ದ ಬಂದಿದೆ. ಕನ್ನಡದಲ್ಲಿ ಪ್ರಾಚೀನವೂ ದೇಶೀಯವೂ ಆಗಿರುವ ತ್ರಿಪದಿ ಅತಿ ಪ್ರಾಚೀನತೆಯುಳ್ಳ ಬತ್ತಕುಟ್ಟುವ ಕೆಲಸಕ್ಕೆ ಹೊಂದಿಕೆಯಾದುದು ಸಹಜವೆನಿಸುತ್ತದೆ. ಪ್ರಾಯ: ತ್ರಿಪದಿಯ ಪ್ರಚಲಿತ ಪದ್ಯವಾವುದಿ ದ್ದರೂ ಅದನ್ನು ಒನಕೆವಾಡಾಗಿ ಬಳಸುತಿದ್ದಿರಬಹುದು. ಒನಕೆಯಿಂದ ಬತ್ತಕುಟ್ಟುವಾಗ ಸ್ಫೂರ್ತಿಗೊಂಡು ಲಯಬದ್ಧವಾಗಿ ನುಡಿದ ಜೀವ ನಾನುಭವವೇ ತ್ರಿಪದಿರೂಪಗೊಂಡುದಿರಬೇಕು-ಎನಿಸುತ್ತದೆ. ತ್ರಿಪದಿ ರೂಪದಲ್ಲಿರುವ ಅವೆಷ್ಟೋ ಜೋಗುಳ ಪದಗಳು, ಶೋಭಾನೆಯ ಸೊಲ್ಲುಗಳು, ಬೀಸುವ ಹಾಡುಗಳು, ವಿನೋದದ ಬಿಡಿಹಾಡುಗಳು- ಮುಂತಾದುವೆಲ್ಲವೂ ಒನಕೆವಾಡುಗಳೇ ಆಗುತ್ತವೆ. ಅಂದರೆ, ಅವನ್ನೆಲ್ಲ ಅಂಥವನ್ನೆಲ್ಲ ಬತ್ತ ಕುಟ್ಟುವಾಗ ಹಾಡುತ್ತಾರೆ. ಇದರಿಂದ ತ್ರಿಪದಿಯೆಂಬುದು ಛಂದಸ್ಸೂಚಕವೆಂದೂ ಒನಕೆವಾಡೆಂಬುದು ಹಾಡುವ ಸಂದ ರ್ಭಸೂಚಕವೆಂದೂ ಇಟ್ಟುಕೊಳ್ಳಬಹುದು.

"ತ್ರಿಪದಿ" ಎಂದಾಗ ಅದು ಮೂರು ಪಾದಗಳಿರುವ ಪದ್ಯವೆಂದು- ಸ್ಥೂಲವಾಗಿ, ಸ್ಪಷ್ಟವಾಗಿ-ತಿಳಿದವರೆಲ್ಲರೂ ಕೊಡುವ ವಿವರಣೆ. ಈ ಮೂರು ಪಾದಗಳಲ್ಲಿ 11 ಅಂಶಗಣಗಳು, ಅವುಗಳಲ್ಲಿ 6ನೆಯದು ಮತ್ತು 11ನೆಯದು ಬ್ರಹ್ಮಗಣ, ಉಳಿದವೆಲ್ಲವೂ ವಿಷ್ಣುಗಣಗಳು. (ಬ್ರಹ್ಮ-ವಿಷ್ಣು-ರುದ್ರಗಣಗಳಿಗೆ ರತಿ-ಮದನ-ಶರಗಣಗಳೆಂಬ ಹೆಸರೂ ಇದೆ.) ನಿಯಮವು ಹೀಗಿದ್ದರೂ ಕೆಲವೆಡೆ ಗಣ ಪಲ್ಲಟವಿದೆ- ಅಂದರೆ-ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮ ಅಥವಾ ರುದ್ರಗಣ ಬರುವುದಿದೆ. ಹೀಗಿದೆ ತ್ರಿಪದಿಯ ಛಂದೋಲಕ್ಷಣ. ಆದರೆ ತ್ರಿಪದಿಗೆ ಪಾದಗಳೆಷ್ಟು? ಹೆಸರುಗಳಾವುವು? ಎಂಬಿವನ್ನೂ ವಿವೇಚಿಸುವುದು ಆವಶ್ಯಕ.

ತ್ರಿಪದಿಗೆ ತಿವದಿ, ತ್ರಿವಿಧಿ. ತಿವುಡೆ-ಎಂಬ ಹೆಸರುಗಳೂ ಕಾಣಿಸಿವೆ. "ವಚನ" ಎಂದೂ ಅದನ್ನು ಕರೆದಿದ್ದಾರೆ. ಸರ್ವಜ್ಞನ ತ್ರಿಪ ದಿಗಳಿಗೆ ಸರ್ವಜ್ಞ ಪದಗಳು, ಸರ್ವಜ್ಞಮೂರ್ತಿಯ ವಚನಗಳು-ಎಂಬ ಹೆಸರುಗಳಿವೆ. ತ್ರಿಪದಿಯು ಪದ್ಯಗಂಧಿಯಾಗಿರುವ ಗದ್ಯದಂತೆ ಕಾಣಿಸು ವುದೇ "ವಚನ" ಎನಿಸಲು ಕಾರಣವಿರಬಹುದು. ತ್ರಿಪದಿಯು ರಚಿಸಿದ ಕೃತಿಯಲ್ಲ, ಆಡಿದ ಮಾತುಗಳೇ ಇರಬೇಕು. ಕವಿರಾಜಮಾರ್ಗ, ಛಂ

6. ಪ್ರಬುದ್ಧ ಕರ್ನಾಟಕ ಸಂಪುಟ 45. ಸಂಚಿಕೆ 2 1963. (ಶ್ರೀ ಡಿ.ಎಲ್. ನರಸಿಂಹಾಚಾರ್ ಅವರ ಲೇಖನ ನೋಡಿ.)
7. ಹಲಸಂಗಿಗೆಳೆಯರು-ಗರತಿಯ ಹಾಡು,1956, ಪರಿಚಯ ಪುಟ 13.
8. ಡಿ.ಎಸ್.ಕರ್ಕಿ-ಛಂದೋವಿಕಾಸ
9. ರಂ. ಶ್ರೀ ಮುಗುಳಿ-ಸಾಹಿತ್ಯಚರಿತ್ರೆ, 1953, ಪುಟ 11,
10. Indian Antiquary, 1881, Vol X, Page 61.
11. ಶಾಸನ ಪದ್ಯಮಂಜರಿ, 1923, ಪುಟ 19.

ದೋಂಬುಥಿ ಗ್ರಂಥಗಳಲ್ಲಿ ತ್ರಿಪದಿಯನ್ನು "ತಿವದಿ" ಎಂದು ಪ್ರಯೋಗಿಸಿದೆ. ಇದು "ತ್ರಿಪದಿ "ಪದ್ಯದ ತದ್ಭವ ರೂಪವೇ ಸರಿ. "ತ್ರಿವಿಧಿ" ಎಂಬುದು ಮಹಾದೇವಿಯಕ್ಕನ "ಯೋಗಾಂಗ ತ್ರಿವಿಧಿ" ಎಂಬಲ್ಲಿ ಕಾಣುತ್ತದೆ.

ಅದಕ್ಕೆ ಉದಾಹರಣವಿದು–

ಅಷ್ಟದಳ ಕಮಲದಾ ಬಟ್ಟಬಯಲೊಳಗೊಂದು
ಮುಟ್ಟಬಾರದಾ ಘನವಿಹುದು ಮನದೊಳಗೆ
ದೃಷ್ಟಿಯಿಟ್ಟವನೆ ಕಡುಜಾಣ 12

ಇದು ತ್ರಿಪದಿಯೆ. ತ್ರಿವಿಧಿ ಎಂದುಮು ಅದರಲ್ಲಿ ಅಡಕವಾದ ಪಾದಗಳ ಮೂರು ವಿಧಾನ (ವಿಧಿ)ಗಳನ್ನು ಅಥವಾ ಹಾಡಲು ಪ್ರಸಿದ್ಧವಾದ ಯಾವುದೋ ಮೂರು ಮಟ್ಟುಗಳನ್ನು ಲಕ್ಷ್ಯವಿಟ್ಟಾಗಿರಬಹುದು. ಅಂತು ತ್ರಿವಿಧಿಯು ತ್ರಿಪದಿಗಿಂತ ಬೇರೆಯಲ್ಲವೆಂಬುದು ನಮಗಿಲ್ಲಿ ಬೇಕಾದುದು. ಲೀಲಾವತೀ ಪ್ರಬಂಧದಲ್ಲಿ "ತಿವುಡೆ" ಎಂದು ಕರೆದುದು ತ್ರಿಪದಿಗೆ ಹೊಂದುವ ತ್ರಿಪುಟ ತಾಳದ ಗತಿಯನ್ನು ಲಕ್ಷಿಸಿಯೇ ಆಗಿರಬೇಕು. ಯಕ್ಷಗಾನದಲ್ಲಿ ಇಂದಿಗೂ ಹಲವು ಪದ್ಯರೂಪಗಳಿಗೆ ತಾಳದ ಹೆಸರೇ ರೂಢವಾಗಿದೆ. ಅಂಶಗಣನಿಬದ್ಧವಾಗಿರುವ ತ್ರಿಪದಿಗೆ ನಿಶ್ಚಿತವಾದ ತಾಳವಿಲ್ಲ. ಆದುದರಿಂದ ಅದನ್ನು ತಾಳಹೀನ ಪದ್ಯವೆಂದಿದ್ದಾರೆ.

ತದಾಸ್ಯಾತ್ ತ್ರಿಪದೀ ತಾಳಹೀನಾ ಕರ್ಣಾಟಭಾಷಯಾ 13

ತ್ರಿಪದಿಯ ಅಂಶ ಗಣಗಳನ್ನು ಮಾತ್ರೆಗಳ ಲಯಕ್ಕನುಗುಣವಾಗಿ ಹಿಗ್ಗಿಸಿ, ಕುಗ್ಗಿಸಿ ಬೇರೆ ಬೇರೆ ತಾಳಗಳಿಗೆ ಹೊಂದಿಸಲು ಸಾಧ್ಯವಾಗುವುದೇ ಅದರದೊಂದು ವೈಶಿಷ್ಟ್ಯ. ಅದರ ಪ್ರತಿಯೊಂದು ಅಂಶಗಣವನ್ನೂ ಚತುರ್ಮಾತ್ರಾಗಣಕ್ಕೆ ಸರಿಪಡಿಸಿ ಹಾಡಿದಾಗ ಅದು ಏಕತಾಳಕ್ಕೆ ಸರಿಹೋಗುವುದು. ಐದುಮಾತ್ರೆಗಳ ಗಣವಾಗುವಂತೆ ಎಳೆದು ಹಾಡಿದಾಗ ಝಂಪೆತಾಳದ ಗತಿಬರುವುದು. ಎಲ್ಲ ಗಣಗಳನ್ನೂ ವಿಷ್ಣು ಗಣ ಕಲ್ಪನೆಯಿಂದ ಪ್ರತಿಯೊಂದು ಅಂಶಕ್ಕೂ ಎರಡು ಮಾತ್ರೆಯ ಮೌಲ್ಯವಿತ್ತು ಹಾಡಿದಾಗ ಆರು ಮಾತ್ರೆಗಳಿಂದ ಗತಿವಡೆವ ರೂಪಕ ತಾಳವಾಗುವುದು. ಹಾಗೆಯೇ ಮೂರು ನಾಲ್ಕು ಮಾತ್ರೆಗಳ ಖಂಡವಾಗಿ ಮಾಡಿಕೊಂಡರೆ ಅಟ್ಟತಾಳ, ತಿವುಡೆತಾಳಗಳಾಗುವುವು. ಇದರಿಂದ ತ್ರಿಪದಿಗೆ ತಾಳವಾವುದೆನ್ನಲು ಸಾಧ್ಯವಿಲ್ಲ ಎಂಬುದನ್ನು ಲಕ್ಷಿಸಿಯೇ ಅದನ್ನು ತಾಳಹೀನವೆಂದೂ ವಚನವೆಂದೂ ಪೂರ್ವಿಕರು ಕರೆದರೆಂದು ತೋರುತ್ತದೆ.

ತ್ರಿಪದಿಗೆ ಪಾದಗಳು ಮೂರೇ ಎಂದು ಹೇಳಲು ಬರುವುದಿಲ್ಲ. ಜನಪದಗೀತಗಳಲ್ಲಿ ಇಂದಿಗೂ ತ್ರಿಪದಿಯ ಗತಿಯಿಂದ ಕೂಡಿದ ಎರಡೇ ಪಾದಗಳಿರುವ ಹಲವು ಪದ್ಯಗಳಿರುತ್ತವೆ. ಹಿಂದೆ ಉದಾಹರಿಸಿದ ಶಾಸನ ಪದ್ಯದಲ್ಲಿ ಮೊದಲನೆಯದಕ್ಕೆ ಎರಡೇ ಪಾದಗಳು ಮೂರು ಸಾಲುಗಳಿರುವ ತ್ರಿಪದಿಗಳಲ್ಲಿಯೂ ಎರಡನೆಯ ಸಾಲಿನ ಮೂರನೆಯ ಗಣಕ್ಕೆ ಪದ್ಯವೊಮ್ಮೆ ಕೊನೆಗೊಂಡು ಪುನ: ಅದು ಆ ವೃತ್ತಿಹೊಂದಿದಂತೆ ಯಾರಿಗಾದರೂ ಕಾಣುತ್ತದೆ. ಉದಾಹರಣೆಗೆ ಕೆಳಗಿನ ತ್ರಿಪದಿಯನ್ನು ಪರಿಶೀಲಿಸಬಹುದು.

ಹಾಲ ಕಂದಲ ಮುಂದೆ ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚ॥

ಈ ಪದ್ಯವು ಮೂರು ಪಾದಗಳನ್ನು ತಾಳಿದಾಗ-

ಹಾಲ ಕಂದಲ ಮುಂದೆ ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಳಂತಿ ಮೊಸರ ಕಡೆವಳು 14

ಇದರಿಂದ ತ್ರಿಪದಿ ಮೂಲತ: ಎರಡೇ ಪಾದಗಳಿರುವ ಪದ್ಯವಾಗಿತ್ತೆಂದು ಭಾವಿಸಬೇಕಾಗುತ್ತದೆ. ತ್ರಿಪದಿಯು ಮೊದಲು ಎರಡು ಸಾಲಿನ ಹಾಡಾಗಿದ್ದು ಎರಡನೆಯ ಪೂರ್ವದ ಪಾದ ಮತ್ತೊಮ್ಮೆ ಮಗುಚಿ ಬಂದು, ಮೂರು ಸಾಲಾಯಿತೆಂದು ಕೈಪಿಡಿಕಾರರು ಅಭಿಪ್ರಾಯಪಟ್ಟಿದ್ದಾರೆ. ತಮಿಳಿನ ಕುಱಳ್ ಮತ್ತು ವೆಣ್ಬಾ ವೃತ್ತಗಳನ್ನು ಹೋಲುವುದೆಂದೂ ತಿಳಿಸಿದ್ದಾರೆ.15

ಮೂರು ಪಾದಗಳಾಗಿ ಕಾಣುವ ತ್ರಿಪದಿಯನ್ನೇ ದ್ವಿತೀಯಾಕ್ಷರ ಪ್ರಾಸಲಕ್ಷಿತವಾಗಿ ಗಣಿಸಿದಾಗ, ಮೊದಲ ಪಾದದಲ್ಲಿ ಎರಡು ಪಾದಗಳಾಗುತ್ತವೆ. ಆಗ ತ್ರಿಪದಿಗೆ ಪಾದಗಳು ನಾಲ್ಕು-

ಹಾಲ ಕಂದಲ ಮುಂದೆ
ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಳಂತಿ ಮೊಸರ ಕಡೆದಳು॥

ಕೆಲವರು ಛಂದಶ್ಶಾಸ್ತ್ರಜ್ಞರು ತ್ರಿಪದಿಗೆ ಪಾದಗಳು ನಾಲ್ಕೆಂದೇ ಹೇಳಿದುದನ್ನಿಲ್ಲಿ ಲಕ್ಷಿಸಬಹುದು-ಶಾರ್ಙ್ಗದೇವನ ವಿಚಾರವಿದು.

---

12. ಕರ್ಣಾಟ ಕವಿಚರಿತೆ, ಭಾಗ1, ಪುಟ 189.
13. ಶಾರ್ಙ್ಗದೇವ-ಸಂಗೀತರತ್ನಾಕರ (Adyar Ed. 1944) IV.
14. ಹಾಡಿನ ಚೂಡಾಮಣಿ-ಮೊಸರು ಕಡೆವ ಹಾಡು.
15. ಕನ್ನಡ ಕೈಪಿಡಿ, 1955, ಸಂಪುಟ 1 ಭಾಗ 2 ಪುಟ 125

ಆದ್ಯೌದ್ವಿ ದ್ವಿಗಣಾ ಪಾದೌ ತೃತೀಯಶ್ಚ ಚತುರ್ಗಣಃ ಚತುರ್ಥಸ್ತು ತ್ರಿಗಣಃ ಪಾದೇಷ್ವೇಕಾದಶಗಣಾ ಇಮೇ.16 ತ್ರಿಪದಿಯ ಮೊದಲ ಎರಡು ಪಾದಗಳಲ್ಲಿ ಎರಡೆರಡು ಗಣಗಳೂ ಮೂರನೆಯ ಪಾದದಲ್ಲಿ ನಾಲ್ಕು ಗಣಗಳೂ ನಾಲ್ಕನೆಯದರಲ್ಲಿ ಮೂರು ಗಣಗಳೂ-ಹೀಗೆ ಒಟ್ಟು ಹನ್ನೊಂದು ಗಣಗಳು-ಎಂದು ಸಂಗೀತ ರತ್ನಾಕರದಲ್ಲಿ ಹೇಳಿದೆ. "ಮಾನಸೋಲ್ಲಾಸ"ದಲ್ಲಿಯೂ ತ್ರಿಪದಿಗೆ ಇದೇ ರೀತಿ ನಾಲ್ಕು ಪಾದಗಳೆಂದು ವಿವರಿಸಿದೆ.17 ಜಯಕೀರ್ತಿಯು ತ್ರಿಪದಿರೂಪದಲ್ಲೇ ಬರೆದ ಸೂತ್ರದಲ್ಲಿ ನಾಲ್ಕು ಪಾದಗಳನ್ನೇ ವಿವರಿಸಿದ್ದಾನೆ.18 ಹೀಗೆ ಲಾಕ್ಷಣಿಕರ ಅಭಿಪ್ರಾಯವು ಕೂಡ ತ್ರಿಪದಿಗೆ ಪಾದಗಳು ನಾಲ್ಕೆಂಬುದು ಕಂಡುಬರುತ್ತದೆ. ನಮ್ಮ ದೃಷ್ಟಿಯಿಂದ ತ್ರಿಪದಿಗೆ ಪಾದಗಳು ಐದೂ ಆಗುತ್ತಿವೆ. ಉದಾಹರಣವಿದು–

ಹಾಲಕಂದಲ ಮುಂದೆ
ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚ
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಣಂತಿ ಮೊಸರ ಕಡೆದಾಳು

ಹೀಗೆ ತ್ರಿಪದಿಗೆ ಪಾದಗಳು ಎರಡರಿಂದ ಐದರವರೆಗೂ ಗಣಿಸಲಾಗುತ್ತಿದೆ. ಹೀಗೆ ಗಣಿಸುವುದು ಅನುಚಿತವೇನೂ ಅಲ್ಲ. ಹಾಗಿದ್ದರೆ ಅದಕ್ಕೆ "ತ್ರಿಪದಿ" ಎಂಬ ಹೆಸರೇಕೆ? ಎಂಬುದೀಗ ಸಮಸ್ಯೆಯಾಗಿಯೇ ಉಳಿಯಿತು. ಈ ಸಮಸ್ಯೆಯನ್ನು ಪರಿಹರಿಸಲು ಇಲ್ಲಿ ಯಥಾಸಾಧ್ಯ ಪ್ರಯತ್ನಿಸಿದೆ. ಬತ್ತಕುಟ್ಟುವ ಹಾಡಿನೊಳಗಣ ಒಂದು ತ್ರಿಪದಿಯಿದು-

ಮೂಜನ ಮೆರಿಯಲಿ ಮುದುಕಿಯು ಕೇರಲಿ
ಮತ್ತಿರುವವರು ಬಡಿಯಲಿ ಜಗಲೀಲಿ
ಕುಳಿತು ನಾವ್ ಕವಳ ಮೆಲ್ಲುವೋ19

ಬತ್ತಮೆರಿಯಲು ಮೂವರನ್ನಿಲ್ಲಿ ಅಪೇಕ್ಷಿಸಿದೆ. ಬತ್ತವನ್ನು ಒಬ್ಬಳೆ ಕುಟ್ಟುವುದೆಂದರೆ ಬೇಸರ. ಇಬ್ಬರು ಅದಕ್ಕಿಂತ ಲೇಸಾದರೂ ಕೆಲಸವು ಮಧ್ಯಮ. ಮೂವರಿದ್ದರೆ ಲೇಸು. ಕೆಲಸವು ಬೇಗನೆ ಸಾಗುವುದು. ನಾಲ್ವರು ಕೂಡಿ ಒಂದೇ ಗುಳಿಗೆ ಕುಟ್ಟುವುದೆಂದರೆ ಕೆಲಸವು ಅತಿ ಸಾವಕಾಶವಾಗುವುದು. ಇದು ಆಲಸ್ಯದ ಲಕ್ಷಣವಾಗುವುದು. ಆದುದರಿಂದಲೇ ಮೂವರು ಮೆರಿಯುವುದೇ ಮೇಲು. ಮೂವರು ಮೂರು ಒನಕೆಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಳಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು; ಅಲ್ಲದೆ ಒಂದೇ ಭಾಗಕ್ಕೆ ಒನಕೆಯ ಪೆಟ್ಟು ಬಿದ್ದುದರಿಂದ ಅಕ್ಕಿ ಕಡಿಯುವುದು (ಹೋಳಾಗುವುದು). ಆ ಒನಕೆ ಪೆಟ್ಟಿನ ತಾಳಗತಿ ಒಂದಕ್ಕೊಂದು ಸಮಾನಾವಕಾಶವುಳ್ಳುದಾಗಿ ರೂಪಕತಾಳವಾಗುವುದು. ಈ ಮೂರು ಪೆಟ್ಟುಗಳಲ್ಲಿ ಒಂದು ಮಾತ್ರ ಸ್ವಲ್ಪ ತಡೆದು ಬೀಳುತ್ತಿದ್ದರೆ ಏಕತಾಳವಾಗುವುದು. ಅದು ಇನ್ನಷ್ಟು ತಡೆದು ಬೀಳುತ್ತಿದ್ದರೆ ಆಗ ತ್ರಿಪುಟ ತಾಳವಾಗುವುದು. ಹೀಗೆ ಯಾವುದಾದರೊಂದು ತಾಳಗತಿಗೆ ಅನುಗುಣವಾಗಿ ಮೂರು ಪಾದಗಳ ಕ್ರಿಯೆಯನ್ನೂ ಹೊಂದಿಸಿ ಬತ್ತಕುಟ್ಟುತ್ತ ಹಾಡಲು ಅಳವಡುವ ಗೀತ ತ್ರಿಪದಿ. ಈಗ ವಿವರಿಸಿದಂತೆ ಬತ್ತಕುಟ್ಟುವ ಕೆಲಸವೇ ತ್ರಿಪದಿಯೆನಿಸುವುದು. ಬತ್ತಕುಟ್ಟುವಾಗ ಹಾಡುವ ಗೀತಸಾಹಿತ್ಯವು ಇದರಿಂದಲೇ ತ್ರಿಪದಿಯೆನಿಸಿರಬೇಕು. ತ್ರಿಪದಿಯನ್ನು ಒನಕೆವಾಡಾಗಿ ಹಾಡಬೇಕೆಂದು "ಮಾನಸೋಲ್ಲಾಸ" ಗ್ರಂಥದಲ್ಲಿ ತಿಳಿಸಿದುದೂ ಈ ಕಾರಣದಿಂದಲೇ ಮತ್ತಷ್ಟು ಸರಿಗಾಣುತ್ತಿದೆ. ಆದುದರಿಂದ ಅನಾದಿ ಕಾಲದಿಂದ ನಡೆದು ಬಂದ ಬತ್ತಕುಟ್ಟುವ ಕೆಲಸಕ್ಕೆ ಹೊಂದಿಕೆಯಾಗುವ ಹಾಡಾಗಿ "ಒನಕೆವಾಡು" ಮತ್ತು "ತ್ರಿಪದಿ" ಎಂಬವೆರಡೂ ಲಾಕ್ಷಣಿಕವಾಗಿ ಅಭಿನ್ನಗಳೆಂದು ನಿರ್ಧಾರ ಮಾಡಬಹುದಲ್ಲವೆ?

16. ಶಾರ್ಙ್ಗದೇವ-ಸಂಗೀತ ರತ್ನಾಕರ(1944)
17. ಪ್ರ. ಕರ್ಣಾಟಕ 45-2. 1963 ಶ್ರೀ ಡಿ.ಎಲ್.ನರಸಿಂಹಾಚಾರ್ ಅವರ ಲೇಖನ ಪುಟ 56
18. ಜಯಕೀರ್ತಿ-ಛಂದೋನುಶಾಸನ, ಸಪ್ತಮೋಧಿಕಾರ ಶ್ಲೋಕ 9.
19. ಹಾಡಿನ ಚೂಡಾಮಣಿ-ಬತ್ತಕುಟ್ಟುವ ಹಾಡು.

ಸಹಾಯ ಗ್ರಂಥಗಳು


1. Epigraphic Carnatica Vol VIII, Shimoga Part II.
2. Indian Antiquary 1881, Vol X.
3. ನೇಮಿಚಂದ್ರ–ಲೀಲಾವತೀ ಪ್ರಬಂಧ
4. ಸೋಮರಾಜ–ಉದ್ಭಟಕಾವ್ಯ
5. ದೇವಪ್ಪ–ರಾಮವಿಜಯ ಕಾವ್ಯ.
6. ಹಾಡಿನ ಚೂಡಾಮಣಿ.
7. ಹಲಸಂಗಿಯ ಗೆಳೆಯರು-ಗರತಿಯ ಹಾಡು 1956.
8. ಶಾರ್ಙ್ಗದೇವ-ಸಂಗೀತ ರತ್ನಾಕರ
9. ಜಯಕೀರ್ತಿ–ಛಂದೋನುಶಾಸನ
10. ಮಾನಸೋಲ್ಲಾಸ (ಪ್ರ.ಕ.45–2, 1963)
11. ಕನ್ನಡ ಕೈಪಿಡಿ–1955.ಸಂಪುಟ 1.
12. ಡಿ.ಎಸ್.ಕರ್ಕಿ–ಛಂದೋವಿಕಾಸ
13. ಶ್ರೀಮುಗಳಿ–ಸಾಹಿತ್ಯಚರಿತ್ರೆ.
14. ಕವಿಚರಿತೆ ಭಾಗ 1
15. ಶಾಸನ ಪದ್ಯಮಂಜರಿ, 1923.

# ಅರಸುಗಳಿಗಿದುವೀರ

ಶ್ರೀ ಜಿ. ವೆಂಕಟಸುಬ್ಬಯ್ಯ.

ವ್ಯಾಸಮಹಾಭಾರತಕ್ಕೆ 'ಜಯ' ಎಂದೇ ಹೆಸರು. ಆದುದರಿಂದ ಭಾರತದ ಮುಖ್ಯವಸ್ತು ಕುರುಕ್ಷೇತ್ರ ಯುದ್ಧವೆಂದೂ ಅದರ ಪರಿಣಾಮ ಧರ್ಮಜಯವೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕುಮಾರವ್ಯಾಸ ಭಾರತದಲ್ಲಿಯೂ ಇದೇ ಅರ್ಥ ಅನ್ವಯವಾಗುತ್ತದೆ. ಆದರೆ ಇಲ್ಲಿ ಈ ಧರ್ಮಜಯಕ್ಕೆ ಸೂತ್ರಧಾರಿಯಾದ ಕೃಷ್ಣನಿಗೆ ಪ್ರಾಧಾನ್ಯವನ್ನು ನೀಡಲು ಕವಿಯು ತನ್ನ ಕಾವ್ಯವನ್ನು ಕೃಷ್ಣಕಥೆಯೆಂದೇ ಕರೆದಿದ್ದಾನೆ. ಈ ಕಾವ್ಯದ ಮುಖ್ಯರಸ ವೀರವೇ. ಆದರೆ ಅದಕ್ಕೆ ಪೂರಕಗಳಾಗಿ ರೌದ್ರ, ಶೃಂಗಾರ, ಬೀಭತ್ಸ, ಕರುಣಗಳು ಅನೇಕ ಕಡೆ ಕಂಡುಬರುತ್ತವೆ. ಹಾಸ್ಯರಸವೂ ಲಾಸ್ಯವಾದದೇ ಇಲ್ಲ. ವೀರ, ರೌದ್ರ ರಸಗಳ ವ್ಯತ್ಯಾಸ ಬಹು ಸವಿರಾದುದು. ಉತ್ಸಾಹದಿಂದ ಉದ್ಭವವಾದುದು ವೀರವೆಂದೂ, ಕ್ರೋಧದಿಂದ ಜನಿತವಾದುದು ರೌದ್ರವೆಂದೂ ಆಲಂಕಾರಿಕರು ತಿಳಿಸುತ್ತಾರೆ. ವೀರವು ಕ್ರಮವಾಗಿ ರೌದ್ರವಾಗಿ ಬೀಭತ್ಸದಲ್ಲಿ ಪರಿಣಾಮಗೊಳ್ಳುವುದನ್ನೂ ನಾವು ಕಾಣಬಹುದು.

ಕುಮಾರ ವ್ಯಾಸನು ತನ್ನ ಕಾವ್ಯೋದ್ದೇಶವನ್ನು ತಿಳಿಸುವಾಗ ಎಲ್ಲಕ್ಕಿಂತ ಮೊದಲು ವೀರರಸಕ್ಕೆ ಸ್ಥಾನವನ್ನು ಮೀಸಲಿಟ್ಟಿದ್ದಾನೆ. "ಅರಸುಗಳಿಗಿದುವೀರ" ಇದಾದ ಮೇಲೆ "ದ್ವಿಜರಿಗೆ ಪರಮ ವೇದದ ಸಾರ, ಯೋಗೀಶ್ವರರ ತತ್ವವಿಚಾರ, ಮಂತ್ರಿಜನಕ್ಕೆ ಬುದ್ಧಿಗುಣ" ಮುಂತಾದುವು ಬರುತ್ತವೆ. ಈ ದೃಷ್ಟಿಯು ಕವಿಯ ಕಣ್ಮುಂದೆ ನೇರವಾಗಿದ್ದುದರಿಂದಲೇ ಈ ಕಾವ್ಯದಲ್ಲಿ ವೀರರಸವು ಹಾಸುಹೊಕ್ಕಾಗಿದೆ. ವೀರರಿಗೆ ಉಚಿತವಾದ ಸತ್ವಯುತವಾದ ಸಮರ್ಥ ಭಾಷೆಯೊಂದನ್ನೇ ಕುಮಾರವ್ಯಾಸನು ಸೃಷ್ಟಿ ಮಾಡಿದ್ದಾನೆಂದೂ ಹೇಳಬಹುದು.

ಹಾಗೆ ನೋಡಿದರೆ ಭಾರತದ ತುಂಬ ವೀರರತ್ನಗಳೇ! ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಪಾಂಡವರು, ಕೌರವ ಕರ್ಣ, ಭಗದತ್ತ, ದುಶ್ಶಾಸನ, ಕೀಚಕ, ಅಭಿಮನ್ಯು, ಘಟೋತ್ಕಜ-ಹೇಳುತ್ತ ಹೋದರೆ ಹೆಸರುಗಳಿಗೆ ಕೊನೆಯಿಲ್ಲ. ಪಾಂಡವ ಸತ್ವಕ್ಕೆ ಉತ್ತೇಜಕ ಶಕ್ತಿಯಾಗಿ ನಿಂತ ಅಗ್ನಿಪುತ್ರಿ ದ್ರೌಪದಿಯಂತಹ ವೀರ ರಮಣಿಯ ಪಾತ್ರ ಪ್ರಪಂಚದ ಯಾವ ಸಾಹಿತ್ಯದಲ್ಲಿಯೂ ಇಲ್ಲ. ಗಂಡಸರಲ್ಲಿ ಗಂಡಸು ಅವಳು. ಇವರೆಲ್ಲರಿಂದ "ಅರಸುಗಳಿಗಿದುವೀರ"ವಾಗಿದೆ ಕನ್ನಡ ಭಾರತ.

ವೀರ ರಸ ಪೋಷಣೆಗೆ ಆವರಣ ನಿರ್ಮಾಣ ಮಾಡುವುದರಲ್ಲಿಯೇ ಕುಮಾರ ವ್ಯಾಸನ ಜಾಣ್ಮೆ ಮುಂಬರುವ ರಸಸ್ಥಾನದ ಸೂಚನೆಯನ್ನು ಕೊಡುತ್ತದೆ. ವೀರರ ವೀರನಾದ ಭೀಷ್ಮನನ್ನು ದಂಡನಾಯಕನನ್ನಾಗಿ ಮಾಡಿ ಅಭಿಷೇಕಮಾಡಿದಾಗ ಕಂಡ ಚಿತ್ರದ ವರ್ಣನೆಯಿದು:

> ಕಮಲಜನ ಪೋಲುವೆಯ ಧಾರುಣಿ
> ಯಮರಕರದಲಿ ನಿಗಮ ಪೂತೋ
> ತ್ತಮ ಸುವಾರಿಗಳಿದವಜಸನ್ನಿಭನಮಸ್ತಕಕೆ
> ಕಮಲಜನ ಕರದಿಂದ ಗಂಗಾ
> ವಿಮಲನದಿಯಿಳಿತಂದು ಸಾರ್ದುದೋ
> ಹಿಮಗಿರಿಯನೆಂಬರೆರಿಳಿದುದು ಪಟ್ಟದಭಿಷೇಕ॥

ಭೀಷ್ಮನನ್ನು ಹಿಮಾಲಯ ಪರ್ವತಕ್ಕೂ ಪಟ್ಟದಭಿಷೇಕವನ್ನು ಗಂಗಾನದಿಗೂ ಹೋಲಿಸಿರುವ ರೀತಿ ಎಷ್ಟು ಔಚಿತ್ಯಪೂರ್ಣವಾಗಿದೆ. ಇಂತಹ ವೀರನನ್ನೂ "ಅಗಿಯಲಲುಗುವ ಕಲೆಯ ಮುಪ್ಪಿನ ಮುಗದ"ನೆಂದು ಕರ್ಣನು ಹಾಸ್ಯ ಮಾಡಿ ಅವನನ್ನು ಜಾಂಬವನಿಗೆ ಹೋಲಿಸಿ ನಕ್ಕಾಗ ಭೀಷ್ಮನು ಸಭೆಗೆ ಹೇಳುವ ವೀರಾಲಾಪವಿದು:

> "ಕಾಳಗದೊಳರಿದಶಸಹಸ್ರನೃ
> ಪಾಲಕರ ಮಣಿಖಚಿತನಿರ್ಮಲ
> ಮೌಳಿಗಳ ದಿಗುಬಲಿಯ ಕೊಡುವೆನು ದಿವಸದಿವಸದಲಿ"

ಅಷ್ಟೇಅಲ್ಲ

> "ಹರಿಯಚಕ್ರವ ತುಡುಕಿಸುವೆ ವಾ
> ನರ ಪತಾಕನ ರಥವ ಹಿಂದಕೆ
> ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ
> ಸುರನರೋರಗರೊಳಗೆ ಮೀಟಾ

ದರಿಗೆ ಕಟ್ಟಿದ ತೊಡರು ಇವನು
ಬ್ಬರಿಸಿ ನುಡಿದರೆ ನೂರಜಕೊಲುವರೆ ಕೈದುವೇಕೆಂದ."

ಈ ಪ್ರತಿಜ್ಞೆಗಳಲ್ಲಿ ಹರಿಯನು ಕೆಣಕಿದ ಪ್ರಸಂಗವೇ ರಮ್ಯವಾದುದು. ಭೀಷ್ಮನ ಬಾಣಾಘಾತದಿಂದ ಕೃಷ್ಣನಿಗಾದ ಕ್ರೋಧದ ಚಿತ್ರ ಬಲು ಸೊಗಸು:

" ಕೆಂಗರಿಯ ಮರಿದುಂಬಿ ತಾವರೆ
ಗಂಗವಿಸುವವೊಲಸುರರಿಪುವಿನ
ಮಂಗಳಾನನ ಕಮಲದಲಿ ಶರವಾಳಿ ಗರಿಗಡಿಯೆ
ತುಂಗವಿಕ್ರಮನಂಬಿಕಿತ್ತು ತ
ದಂಗರಕ್ತವಿಷೇಕ ರೌದ್ರಾ
ಲಿಂಗಿತನು ಬಲುಖತಿಯಹಿಡಿದನು ಭೀಷ್ಮನುಪಟಳಕೆ॥"

ಇನ್ನು ಸುಮ್ಮನಿರುವುದು ಕೃಷ್ಣನಿಗೆ ಸಾಧ್ಯವಾಗಲಿಲ್ಲ. ಕಣ್ಣುಗಳಲ್ಲಿ ಕೆಂಡಗಳನ್ನು ಕಾರುತ್ತಾ ಕೋಪಾತಿಶಯದಿಂದ ನಡುಗುತ್ತಾ ಹುಬ್ಬು ಗಂಟಿಕ್ಕುತ್ತಾ "ಕೆಂಡವಾಗಲಿ ಲೋಕ. ದಿವಿಜರಹೆಂಡಿರೋಲೆಯು ಕಳೆದುಹೋಗಲಿ"ಎಂದು ಅರ್ಭಟಿಸುತ್ತಾ ಅವನು ತನ್ನ ಸುದರ್ಶನ ಚಕ್ರವನ್ನು ಕೆಲ್ಲೈಸಿ ನೋಡಿದನಂತೆ. ಇದನ್ನು ಹೇಳುವ ಪದ್ಯದ ಭಾವಭಾಷೆಗಳ ಸಮ್ಮಿಳನ ಒಂದು ಪ್ರತಿಭಾಂಚಿತವಾದ ರಸಕ್ರಿಯೆ:

ಮುರಮಥನ ಕೆಲ್ಲೈಸಿ ನೋಡಿದ
ಸುರುಭಯಂಕರ ಚಕ್ರವನು ದು
ರ್ಧರುಷಧಾರಾ ಲೂಯಮಾನ ನಿಶಾಕಚಕ್ರವನು
ತರಳತರಣೀಚಕ್ರವನು ಸಂ
ಗರವಿ ನಿರ್ಜಿತ ಚಕ್ರವನು ಭಯ
ಭರವಿವರ್ಜಿತ ಚಕ್ರವನು ಕಡುಗೋಪಕುಡಿಯಿಡಲು

ಲೋಕಸ್ಥಿತಿಗೆ ಕಾರಣನಾದ ವಿಷ್ಣುವಿನ ಅವತಾರವಾದ ಕೃಷ್ಣನು ಚಕ್ರವನ್ನು ನಿಟ್ಟಿಸಿದ ರೀತಿಯಲ್ಲಿಯೇ ಭಯಗೊಂಡ ನಿಖಿಳಜಗತ್ತು "ಶಿವಶಿವ" ಎಂದು ಲಯಕಾರಕನಾದ ಶಿವನ ಮರೆಹೊಕ್ಕಿತೆಂದು ಕವಿಯು ವರ್ಣಿಸುತ್ತಾನೆ. ಆದರೆ ಭಕ್ತಶ್ರೇಷ್ಠನಾದ ಭೀಷ್ಮನು ಕೃಷ್ಣನ ಪಾದಗಳಲ್ಲಿ ಬಿದ್ದು ಲೋಕಕ್ಕೆ ಬಂದಿದ್ದ ಅಪಮೃತ್ಯುವನ್ನು ತಪ್ಪಿಸಿಬಿಡುತ್ತಾನೆ.

ಅರ್ಜುನನು ಎದುರು ಬಿದ್ದಾಗ ಭೀಷ್ಮನ ಬಾಯಿಂದ ಹೊರಡುವ ಮಾತಿನ ಧೋರಣೆಯಿದು:

"ಬರಿಯ ಮತೋಬಾಸವಿದ್ಯದೂ
ಳರಿಕವುಂಟೋ ಹೊತ್ತುಗಳೆಯದೆ
ಹೆರಿಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ"

ಎದುರಾಳಿಯ ಮಾತನ್ನು ಕೇಳಿ ಕಾರ್ಯವೆಂತಿರಬೇಕೆಂಬುದನ್ನೂ ಭೀಷ್ಮನೇ ತೋರಿಸಿಕೊಡುತ್ತಾನೆ. ಆತನ ಬಾಣಾಹತಿಯಿಂದ "ಪಾರ್ಥನ ತನುವಿನಲಿ ಹೆಬ್ಬಟ್ಟೆಯಾದುವು ಬಾಣಪಥಿಕರಿಗೆ" ಎಂಬುದು ಕವಿಯ ಮಾತು. ಇದರ ಅರ್ಥ ಬಹಳ ಸರಳ, ಭವ್ಯ.

ವೀರಕ್ಕೆ ವಿನಯವೆಂಬುದು ಭೂಷಣ. ಗೋಗ್ರಹಣದ ಸಂದರ್ಭದಲ್ಲಿ ದ್ರೋಣರು ಅರ್ಜುನನಿಗೆ ಎದುರಾದಾಗ ಅವನು

"......ನಿಮ್ಮ ಕೃಪೆಯಲಿ
ವಿದಿತವೆನಗೀ ವಿದ್ಯೆ ನೀವ್ ಕಾಮಾರಿ, ಮುರವೈರಿ
ಹೃದಯ ನಿಮ್ಮದು ಕಾಳಗಕೆ ನೀ
ವ್ಯದಿರೊಳಾಳೇ ತಾನು..." ಎಂದು ಹೇಳಿ ಗುರುವಿನ ಶಿರಿಪದಗಳಿಗೆ ಬಾಣಗಳನ್ನು ಹೊಡೆದು

ನಮಸ್ಕಾರ ಮಾಡುತ್ತಾನೆ. ವಿನಯದಿಂದ ತೃಪ್ತರಾದ ದ್ರೋಣರು ಹೇಳುತ್ತಾರೆ—

"ವಿಷಯ ಲಂಪಟತನದಲಾವ್ ನಿ
ರ್ಮಿಸಿದೆ ವಶ್ಯತ್ಥಾಮನನು ನ
ಮ್ಮೈಸೆವ ಮೋಹದ ಕಂದನೈಯಲೆ ಪಾರ್ಥನೀನೆಮಗೆ"

ಆದರೆ ದಾಳಿನಲ್ಲಿ ಸೋದರಮಾವನೇ! ಅರ್ಜುನನು ಗುರುವನ್ನೂ ಅವನ ಬಿರುದುಗಳನ್ನೂ ಅಂಕಿಸಿ ಬಾಣದ ಮಳೆ ಗರೆಯುತ್ತಾನೆ.

"ದೇವಭಾರದ್ವಾಜ,ಬಲುವಿ
ದ್ಯಾವಿಷಯ ನವರುದ್ರ ಘನಶ
ಸ್ತ್ರಾವಳೀ ನಿರ್ಮಾಣ ನೂತನ ಕಮಲಭವಯೆನುತ"

ದ್ರೋಣನ ಬಾಣಗಳನ್ನೆಲ್ಲ ತುಂಡರಿಸಿಬಿಡುತ್ತಾನೆ.

ಕೌರವನ ಪಾತ್ರದಲ್ಲಿಯೂ ವೀರ ತುಂಬಿದೆ. ಕೃಷ್ಣನ ಸಹಾಯವನ್ನು ಕೇಳಿ ದುರ್ಯೋಧನ ಮತ್ತು ಅರ್ಜುನ ಇಬ್ಬರೂ ಅವನ ಬಳಿಗೆ ಬಂದಾಗ ಕೃಷ್ಣನು ಸಂಧಿಯ ಮಾತನ್ನಾಡುತ್ತಾನೆ. ಆಗ ಕೌರವನು—

"ಅವಧರಿಸುಮುರವೈರಿ ಧರ್ಮ
ಶ್ರವಣಕೋಸುಗ ಬಾರೆವಾವ್ ಪಾ
ರ್ಥಿವರ ಪಂಥದ ಕದನವಿದ್ಯಾಕಾಮುವೆಮಗಾಯ್ತು"

ಎನ್ನುತ್ತಾನೆ. ಶ್ರೀ ಕೃಷ್ಣನು ಹಸ್ತಿನಾವತಿಗೆ ಬಂದು ಪಾಂಡವರಿಗೆ ಐದು ಊರುಗಳನ್ನಾದರೂ ಕೊಟ್ಟರೆ ಸಾಕೆಂದಾಗ ಅವನು—

"ಬೇಡಿದೊಂದೊಂದೂರು ನಮ್ಮಯ
ನಾಡಕಲೆಮಂಡೆಗಳು"–ಎಂದೂ
"ನೆಲದೊಳರ್ಧವ ನೀವುದಿಲ್ಲಾ
ಸ್ಥಳವನೈದನು ಮುನ್ನಕೊಡೆ ನಿ
ನ್ನಿಳೆಯ ಭಾಗವನೀಸಕೊಟ್ಟೊಡೆ ನಿನ್ನವೇಲಾಣೆ
ನೆಲನಕಡೆಯಲಿ ಮುಳ್ಳುಮನೆಯು
ಚ್ಚಳಿಪ ಧರಣಿಯನಿತ್ತೆನಾದೊಡೆ
ಬಳಿಕ ನೀ ನಗು ಹೋಗು, ಕದವಕೊಂಡುಬಾಯೆಂದ"

ಛಲದಿಂದ ವರ್ಣರಂಜಿತವಾದ ವೀರೋಕ್ತಿಯಿದು.

ವೀರದ ಮಾತು ಬಂದಾಗ ಭೀಮನ ಪಾತ್ರ ಮುಂದು. ಅವನಿಗೆ ಅಸಹನೆಯುಂಟಾದರೆ ಬೀದಿಯ ಮರವನ್ನು ನೋಡುತ್ತಾನೆ. ಲಾಳವಿಂಡಿಗೆಗೆ ದೃಷ್ಟಿಬೀರುತ್ತಾನೆ. "ಪರಿಘವನುಬಾಗಿ" ಈಕ್ಷಿಸುತ್ತಾನೆ. ಅವುಗಳ ರಕ್ಷಣೆಗೆ ಧರ್ಮರಾಯನ ಕಣ್ಣಿನ ನೋಟವೇ ಬರಬೇಕು. ಭಾರತದಲ್ಲಿ ಧರ್ಮರಾಯನ ಅಪ್ಪಣೆಯನ್ನೂ ಭೀಮನು ಮೀರಿದ ಸಾಹಸ ಪ್ರಸಂಗವೊಂದಿದೆ. ಕೀಚಕನಾಯಿಯಿಂದ ಕೀಟಲೆಗೊಂಡ ದ್ರೌಪದಿಯು ಅಡಿಗೆಯ ಮನೆಯಲ್ಲಿ ಮಲಗಿದ್ದ ಭೀಮನ ಬಳಿಗೆ ಬಂದು "ಮೆಲ್ಲ ಮೆಲ್ಲಗೆ ಮುಸುಕ ಸಡಿಲಿಸಿ, ಗಲ್ಲವನು ಓಡಿದಲುಗಲು" ಆತನು ಎದ್ದು "ಇರುಳೇಕೆ ಬಂದೆ ಲತಾಂಗಿ" ಎಂದು ಕೇಳುತ್ತಾನೆ. "ಎಬ್ಬಿಸಲು ಭುಗಿಲೆಂಬನೋ"ಎಂದು ಹೆದರಿದ್ದ ದ್ರೌಪದಿಗೆ ಸ್ವಲ್ಪ ಸಮಾಧಾನವಾಗುತ್ತದೆ. ಆದರೆ ಅವಳ ದುರ್ದೆಸೆಯನ್ನು ಕೇಳಿ ಆತನು

"ತರುಣಿ ಕೇಳಿಂದು ಮೊದಲಾ
ಗರಸಿ ನೀ ನಾಲ್ವರಿಗೆ ನಾವೆಡೆ
ಮುರಿದವರು ಬಿಟ್ಟವರು ನಿನ್ನಯ ಸೂಳುಪಾಳೆಯವ;

ಎನ್ನುತ್ತಾನೆ.

"ಎಲ್ಲರೊಳು ಕಲಿಭೀಮನೇ ಮಿಡುಕುಳ್ಳಗಂಡನು"

ಎಂದು ನಂಬಿ ಬಂದ ಭಾಮೆಗೆ ಭ್ರಮೆಯುಂಟಾಯಿತು. ಕಂಬನಿಯ ಸುರಿದು;

"ಭೀಮ ಕೊಟ್ಟೈತನಗೆ ಸಾವಿನ
ಸೇಮರನು ನಿಮ್ಮಣ್ಣನಾಜ್ಞೆ ವಿ
ಕಾಮುವಾಗದೆ ಬದುಕಿ ಧರ್ಮದ ಮೈಸೆರಿಯ
ಕಾಮಿನಿಯ ಕೇಳಿಯಲಿಸೆನೆವುದನರಿದು

ಎಂದು ಭೀಮನ ಕಾಲಿಗೆ ದ್ರೌಪದಿಯು ಬಿದ್ದಾಗ ಭೀಮನು ಕಂಬನಿದುಂಬಿದನಂತೆ. ಭೀಮನಳುವುದು ಎರಡೇ ಬಾರಿ, ಒಂದು ಅರಗಿನರ ಮನೆಯಿಂದ ಹೊರಬಂದಾಗ ತನ್ನವರು ಮರದ ಕೆಳಗೆ ದೇಸಿಗರಂತೆ ಬಿದ್ದಿದ್ದಾಗ, ಎರಡು ಈ ಪ್ರಸಂಗದಲ್ಲಿ ಅತ್ತು. ದ್ರೌಪದಿಯ ಕುರುಳನ್ನು ಸರಿಲಮಾಡಿ ಗಲ್ಲವನ್ನು ಸವರಿ, ನೀರಿನಲ್ಲಿ ಮುಖವನ್ನು ತೊಳೆದು

"ಅರಸಿ ಬಿಡು ಬಿಡುಬಾಕಿಯನು ವಿ
ಸ್ತರಿಸಲೇಕೆಮ್ಮಣ್ಣನಾಜ್ಞೆಯ
ಗೆರೆಯ ದಾಂಟಿದೆ ದಾಂಟಿದೆನು ಹೋಗೆಂದನಾ ಭೀಮ"

ಈ ಸಮಯದಲ್ಲಿ ಭೀಮನಾಡುವ ಮಾತುಗಳು ಭೀಮನ ಬಾಯಿಯಿಂದ ಮಾತ್ರ ಬರಬಲ್ಲವು.

"ಬಸುರಬಗಿವೆನು ಕೀಚಕನ ನಸು
ಮಿಸುಕಿದೊಡೆ ವೈರಾಟವಂಶದ
ಹೆಸರ ತೊಡುವೆನು ನಮ್ಮನರಿದೊಡೆ ಕೌರವವ್ರಜವ
ಕುಸುರಿದರಿವೆನು ಭೀಮ ಕಷ್ಟವ
ನೆಸಗಿದನು ಹಾಯೆಂದರಾದಡೆ
ಮುಸುಡನಮರಾದ್ರಿಯಲಿ ಕೇವೆನು ದೇವ ಸಂತತಿಯ"

ಈ ಉತ್ಸಾಹದ ಪರಿಣಾಮವಾಗಿ ಕ್ರೋಧ, ಅದರ ಪರಿಣಾಮವಾಗಿ ಕೀಚಕನ ವಧೆ, ಸತ್ತ ಕೀಚಕನನ್ನೂ ಭೀಮನು ಸುಮ್ಮನೆ ಬಿಡ ವುದಿಲ್ಲ. ಆ ಹೆಣವನ್ನು ಸೆಳೆದು,

ತಲೆಯನೆದೆಯೊಳಗಿಕ್ಕಿ ಕೈ
ಕಾಳ್ಗಳನು ಬಸುರೊಳು ಸೆಕ್ಕಿ ದೂರಕೆ
ತೊಲಗಿದನು ಕೋರಿದನು ರಮಣಿಗೆ ಕೀಚಕನ ಹದನ.

ಇದನ್ನು ಕಂಡು ಕಾಮಿನಿಯು ಕಳಕಳಿಸಿ ಭೀಮಸೇನನಪ್ಪಿ ಮುಂಡಾಡಿದಳಂತೆ.

ಸುಪ್ರತೀಕ ಗಜದ ಹೋರಾಟವೊಂದು ಅಪೂರ್ವ ರಸಪ್ರಸಂಗ, ಅಭಿಮನ್ಯುವಿನ ಯುದ್ಧ, ಕರ್ಣನ ದಾನವೀರ ಗುಣ ಗದಾಯುದ್ಧ ಪ್ರಸಂಗ, ಅರ್ಜುನನ ಕಿರಾತದ್ವಂದ್ವ ಹೀಗೆ ಒಂದೇ ಎರಡೇ ವೀರರ ಸತ್ಪ್ರಕರಣಗಳು ನಮ್ಮ ನಾರಣಪ್ಪನಲ್ಲಿ?

ದ್ರೌಪದಿಯನ್ನು ಸೆಳೆದು ತರಲು ಕೌರವನು ಅಪ್ಪಣೆಮಾಡಿದಾಗ ವಿದುರನಾಡಿದ ಮಾತಿನಲ್ಲಿ ದ್ರೌಪದಿಯ ವೀರರಮಣಿ ಚಿತ್ರ ಹೊರಹೊಮ್ಮುತ್ತದೆ.

"ಸಿಡಿಲಪೊಟ್ಟಣ ಗಟ್ಟಿ ಸೇಕವ
ಕೊಡುವರೇ.......................
ಹೆಡತಲೆಯ ಕುರಿಸುವರೆ ಹಾವಿನ
ಹೆಡೆಯಲಿ
"ಕಾಲಕೂಟದ ತೊರೆಗಳಲಿ
ಜಲಕೇಳಿಯೇ ಕಾಲಾಂತಕನದಂ-
ಷ್ಟ್ರಾಳಿಯಲಿ ನವಿಲುಯ್ಯಲೆಂದು ನೀರಾಡಲಾ ವಿಠಲ"

ಅವನ ಮಾತು ಸತ್ಯವಾಯಿತು. ಸಿಡಿಲಿನ ಪೊಟ್ಟಣದಿಂದ ಮೈಗೆ ಶಾಖವನ್ನು ಕೊಡಹೋಗಿ ಒಟ್ಟು ವಂಶವೇ ಹಾಳಾಯಿತು. ಇದು ಭಾರತದ ಕಥೆ; ಪಾಂಡವರ ವೀರಕ್ಕೆ ದ್ರೌಪದಿಯ ವೀರದ ಪ್ರೋತ್ಸಾಹದ ಕಥೆ; ಶ್ರೀಕೃಷ್ಣದರ್ಶನದ ಕಥೆ. ಇಲ್ಲಿಯ ವೀರಕ್ಕೆ ಮಾಸಿಲ್ಲ. ಇದು ನವನವಾಯಮಾನರಾದ ವೀರರಸ ನಿರೂಪಣೆ. ಆದುದರಿಂದಲೇ

"ಕುಮಾರ ವ್ಯಾಸ ಸೂಕ್ತದ
ಸತಿಯದಮೃತವನೊಲಿದೊಲಿದು ಸು
ಶ್ರಣದಲಿ ಕುಡಿಕುಡಿದು ಪದವಿಯ ಪಡೆವುದೀ ಲೋಕ"



# ವಿಗ್ರಹಾರಾಧನೆಯ ತತ್ವ ಜ್ಞಾನ

ಶ್ರೀ ಎಂ. ಯಾಮುನಾಚಾರ್ಯ

ಹಿಂದೂಧರ್ಮದ ಅನುಷ್ಠಾನದಲ್ಲಿ ವಿಗ್ರಹಾರಾಧನೆ ಒಂದು ಅವಿಭಾಜ್ಯ ಅಂಗವಾಗಿದೆ. ಇದು ಪ್ರತೀಕೋಪಾಸನೆಎಂದೂ ವಿಖ್ಯಾತವಾಗಿದೆ. ಒಂದು ಇಂದ್ರಿಯ ಗಮ್ಯವಾದ ಪ್ರತೀಕದ ಮೂಲಕ ಅತೀಂದ್ರಿಯವಾದ ತತ್ವವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಕ್ರಮ ಇದು. ಆರಾಧನೆಯು ಆರಾಧ್ಯದೇವತೆ ಪ್ರತೀಕದ ರೂಪವಾಗಿ ಆರಾಧಕನ ಸನ್ನಿಕರ್ಷವನ್ನೈದುತ್ತದೆ. ಪರತತ್ವದ ಸನ್ನಿಕರ್ಷ ಅಥವಾ ಸಾನ್ನಿಧ್ಯದ ಸಾಧನೆಗಾಗಿ ಏರ್ಪಟ್ಟ ವಿಧಾನ ವಿಗ್ರಹಾರಾಧನೆ. ಪರಮಾತ್ಮನ ಸಾನ್ನಿಧ್ಯದ ಅಭ್ಯಾಸವೇ ಆರಾಧನೆ ಅರ್ಚನೆಗಳ ಉದ್ದೇಶವಾಗಿದೆ.

ವಿಗ್ರಹ ಪ್ರತೀಕವೆನಿಸಬೇಕಾದರೆ ಭಾವ ಮುಖ್ಯವೆಂಬ ಅಂಶವನ್ನು ವಿಗ್ರಹಾರಾಧಕರು ಭಾರತದಲ್ಲಿ ಅಂಗೀಕಾರ ಮಾಡಿದ್ದಾರೆ. ವಿಗ್ರಹಾರಾಧನೆ ಬೊಂಬೆಯ ಪೂಜೆಯಲ್ಲ. ಬೊಂಬೆ ಪ್ರತೀಕವಾಗಬೇಕಾದರೆ ಪ್ರಾಣ ಪ್ರತಿಷ್ಠೆಯ ಕ್ರಮದಿಂದ ಅದು ಸಾಧ್ಯವೆಂದು ನಮ್ಮ ವಿಗ್ರಹಾರಾಧನೆಯ ಕ್ರಮ ತಿಳಿಸುತ್ತದೆ. ವಿಗ್ರಹಕ್ಕೆ ಪ್ರಾಣ ಕೊಡುವಂತಹದು ನಮ್ಮ ಭಾವ ಎಂಬುದನ್ನೂ ಈ ಶ್ಲೋಕ ತಿಳಿಸುತ್ತದೆ: "ನಕಾಷ್ಠೆ ವಿದ್ಯತೇ ದೇವ್ರೋನ ಪಾಷಾಣೆ ನಮೃಣ್ಮಯೇ ಭಾವ್ರೋಹಿ ವಿದ್ಯತೇ ದೇವ: ತಸ್ಮಾತ್ ಭಾವ್ರೋಹಿ ಕಾರಣಂ" "ದೇವ ಮರದ ಬೊಂಬೆಯಲ್ಲಾಗಲಿ ಅಥವಾ ಕಲ್ಲಿನ ವಿಗ್ರಹದಲ್ಲಾಗಲೀ, ಮಣ್ಣಿನ ಆಕೃತಿಯಲ್ಲಾಗಲೀ ಕಂಡುಬರುವುದಿಲ್ಲ, ಭಾವದಲ್ಲಿ ಅವನು ಮೂಡಿರುತ್ತಾನೆ, ಆದ್ದರಿಂದ ಭಾವವೇ ಕಾರಣ"

ವಿಗ್ರಹಾರಾಧನೆಗೆ ಮತ್ತೊಂದು ಮುಖವುಂಟು. ಅದು ಜಿತಂತಾ ಸ್ತೋತ್ರವೆಂದು ಸ್ತೋತ್ರದಲ್ಲಿ ಪ್ರಗತಿಗೊಂಡಿದೆ. ಅದರ ಒಂದು ಶ್ಲೋಕ ಹೀಗೆ ಹೇಳುತ್ತದೆ: "ನತೇ ರೂಪಂ ನಚಾಕಾರೋ ನಾಯುಧಾನಿ ಕಥಾಸ್ಪದಂ. ಕಥಾತಿ ಪುರುಷಾಕಾರೋ ಭಕ್ತಾನಾಂತ್ವಂ ಪ್ರಕಾಶಾಸೆ"-ಅಂದರೆ "ನಿನಗೆ ರೂಪವಿಲ್ಲ, ಆಕಾರವಿಲ್ಲ, ಆಯುಧಗಳಿಲ್ಲ, ಒಂದು ಸ್ಥಳವೆಂಬುದಿಲ್ಲ. ಆದರೂ ನಿನ್ನ ಭಕ್ತರ ಸಲುವಾಗಿ ಪುರುಷ ರೂಪವನ್ನು ತಾಳಿ ಬೆಳಗುತ್ತಿಯೆ" ಈಶ್ವರ ಪರಾತ್ಪರ ಅಣೋರಣೀಯ ಮಹತೋ ಮಹೀಯ. ಅವನ ಪರತ್ವವನ್ನು ಮಾತ್ರ ಅನುಸಂಧಾನ ಮಾಡಿದರೆ ನಮಗೂ ಅವನಿಗೂ ವಿಷ್ಟು ಅಂತರವಿದೆ ಎನ್ನುವುದು ಮಂದಟ್ಟಾಗುತ್ತದೆ. ಈಶ್ವರ ಸರ್ವಜ್ಞ, ನಾವು ಅಲ್ಪಜ್ಞರು; ಈಶ್ವರ ಸರ್ವಶಕ್ತಾ. ನಾವು ಅಲ್ಪ ಶಕ್ತಿ ಉಳ್ಳವರು: ನಾವು ಅಪರಿಪೂರ್ಣರು ಈಶ್ವರ ಪರಿಪೂರ್ಣ. ಹೀಗಿರಲೂ ಸಹಚೇರ್ತರಿಗೂ ಈಶ್ವರನಿಗೂ ಸಂಬಂಧ ಸಾಧ್ಯವೆಂಬುದನ್ನು ನಮ್ಮ ಭಗವದ್ಭಕ್ತರು ತೋರ್ಪಡಿಸಿದ್ದಾರೆ. ಈಶ್ವರನ ಪರತ್ವವನ್ನೋ ಅನುಸಂಧಾನ ಮಾಡಿದರೆ ನಮಗೆ ಅಂಜಿಕೆಯಾದೀತು. ಆದರೆ ಈ ಅಂಜಿಕೆಗೆ ಆಸ್ಪದವಿಲ್ಲವೆಂದು ನಮ್ಮ ಭಕ್ತರು ನಮಗೆ ಭರವಸೆ ನೀಡುತ್ತಾರೆ. ಈ ಪರಾತ್ಪರನನ್ನು ನಮ್ಮ ಬಳಿಗೆ ಸೆಳೆದುಕೊಳ್ಳುವ ಉಪಾಯ ಒಂದೇ ಒಂದು. ಅದು ಭಗವದ್ಭಕ್ತಿ, ಭಗವತ್ಪ್ರೇಮ. ಪ್ರೇಮದಿಂದ ಭಗವಂತ ಭಕ್ತನ ಪರಾಧೀನನಾಗುತ್ತಾನೆ. ಈ ಗುಣವನ್ನು ಸೌಲಭ್ಯ ಎಂದು ಕರೆದಿದ್ದಾರೆ. ಈಶ್ವರ ಪರನೂ ಹೌದು. ಹಾಗೂ ಸುಲಭನೂ ಹೌದು. ಸುಲಭನಾದದ್ದು ಹೇಗೆಂದರೆ ನಮ್ಮಲ್ಲಿ ಅಂತರ್ಯಾಮಿಯಾಗಿ ಉಳಿದಿದ್ದಾನೆ. ನಮ್ಮ ಕೈಕಾಲುಗಳಿಗಿಂತಲೂ ನಮ್ಮ ಉಸಿರಿಗಿಂತಲೂ ನಮಗೆ ಹತ್ತಿರವಾಗಿದ್ದಾನೆ. ಈ ಸಾಮಿಪ್ಯ ಅನುಭವ ಭಕ್ತರೆಲ್ಲರಿಗೂ ಇದ್ದಿದೆ. ಇದು ಅವರಿಗೆ ಭರವಸೆಯನ್ನೂ ನೀಡಿದ್ದಿತು. ಅವರಿಗೆ ಸಮಾಧಾನ ನೀಡಿತು. ಅವರ ಕಷ್ಟನಿಷ್ಠೂರಗಳಲ್ಲಿ ಅವರ ಅಗ್ನಿಪರೀಕ್ಷೆಯಂತಹ ಜೀವನಾನುಭವಗಳಲ್ಲಿ ಅವರನ್ನೂ ಅಚಲಿತರನ್ನಾಗಿ ಉಳಿಸಿತು.

ಪಂಚರಾತ್ರ ಆಗಮಗಳು ವಿಗ್ರಹತತ್ವ ಜ್ಞಾನಕ್ಕೆ ಹೆಚ್ಚು ಗಮನಕೊಟ್ಟವು. ವಿಗ್ರಹಾರಾಧನೆಯನ್ನು ಅರ್ಚಾವತಾರ ಎಂದು ಕರೆದವು. ಅರ್ಚಾರೂಪಿಯಾದ ಪರಮಾತ್ಮ ನಮಗೆ ಅತಿ ಸಮೀಪ, ಅತಿ ಸುಲಭ. ನಿಜವಾಗಿಯೂ ಭಕ್ತಪರಾಧೀನ. ಉಣಿಸಿದಾಗ ಉಣುತ್ತಾನೆ. ಮಲಗಿಸಿದಾಗ ಮಲಗುತ್ತಾನೆ. ಎಚ್ಚರಗೊಳಿಸಿದಾಗ ಏಳುತ್ತಾನೆ. ಅವನನ್ನು ನಮ್ಮ ಕ್ರಂವನ ಕೇಳುವ ಸಲುವಾಗಿ ಎಚ್ಚರಗೊಳಿಸುವುದೇ ಸುಪ್ರಭಾತಗಳನ್ನೂ ಹಾಡುವದರ ಉದ್ದೇಶ. ಶ್ರೀ ವೆಂಕಟೇಶನ ಸುಪ್ರಭಾತ ಎಲ್ಲರಿಗೂ ಪರಿಚಿತವಾದದ್ದಾಗಿದೆ.

ಪಂಚರಾತ್ರ ಆಗಮಗಳಲ್ಲಿ ವ್ಯೂಹ ಸಿದ್ಧಾಂತ ಬಂದಿದೆ. ಈಶ್ವರನ ಪರತ್ವ ಇದ್ದೇ ಇದೆ. ಅದು ಅವಾಂಗ್ಮನ ಸಗೋಚರವಾದದ್ದು. "ಯತೋವಾಚೋ ನಿವರ್ತಂತೆ ಅಪ್ರಾಪ್ಯಾರ್ಮಸಾಸಹವೆನ್ನುವಂಥದು. ಆದರೆ ಪರತ್ವಮತಿಯಾಗಿ ಪರಮಾತ್ಮ ಈ ವಿಚಿತ್ರ ವಿಶ್ವದಲ್ಲಿ ತನ್ನನ್ನೂ ಹರವಿಕೊಂಡಿದ್ದಾನೆ. ಈ ಹರವಿಗೆ ವ್ಯೂಹ ಎಂದು ಹೆಸರು. ಇಷ್ಟು ಮಾತ್ರ ಸಾಲದಂತೆ ಪರಮಾತ್ಮ ಸಜಾತೀಯನಾಗಿ ಪ್ರಾಣಲೋಕ ಮಾನವ ಲೋಕಗಳಲ್ಲಿ ಅಭಿವ್ಯಕ್ತಗೊಳ್ಳುತ್ತಾನೆ. ರಾಮಕೃಷ್ಣಾದಿ ಅವತಾರಗಳನ್ನೆತ್ತುತ್ತಾನೆ. ಇವಕ್ಕೆ ವಿಭವ ಎಂದು ಹೆಸರು. ಈ ಅವತಾರಗಳು ಕಾಲಾನುಕಾಲಕ್ಕೆ ನೆರವೇರುವಂಥವು. ಸಂತತವಾಗಿ ನಮ್ಮೊಡನೆ ಇರುವಂಥವಲ್ಲ. ಆದರೆ ಸಂತತವಾಗಿ ನಮ್ಮೊಡನೆ ನಮ್ಮೊಳಗೆ ಇರಲು ಅವನು ಅಂತರ್ಯಾಮಿಯಾಗಿ ನಮ್ಮ ಹೃದಯಮಂದಿರದಲ್ಲಿ ವಾಸಿಸುತ್ತಾನೆ. ನಮ್ಮೊಡನೆ, ನಮ್ಮ ಚಲನವಲನಗಳಲ್ಲಿ ಪಾಲುಗೊಳ್ಳುತ್ತಾನೆ. ಅಂತ: ದೃಷ್ಟಿಯಿಂದ ನಮ್ಮೊಳಗೆ ನಮಗೆ ಭಾಸವಾಗುತ್ತಾನೆ. ಒಳಗೆ ಇರು

ವವನನ್ನು ಚರ್ಮ ಚಕ್ಷುಸ್ಸಿನಿಂದಲೂ ಕಾಣಲು ಬಯಸುತ್ತೇವೆ. ಅಂತರಂಗದ ಪರಮಾತ್ಮ ಬಹಿರಂಗದ ವಿಗ್ರಹದಲ್ಲಿ ಮೂಡುತ್ತಾನೆ. ಚರ್ಮಚಕ್ಷುಸ್ಸಿಗೂ ದಿವ್ಯಚಕ್ಷುಸ್ಸಿಗೂ ಗೋಚರವಾದ ಪರಮಾತ್ಮ ನಿಲುಕುವಂತಾಗುತ್ತದೆ ಅರ್ಚೆಯಿಂದ. ಅರ್ಚೆಯೂ ಒಂದು ಅವತಾರವೇ, ಪರಮಾತ್ಮನ ಅವತರಣವೇ. ನಮ್ಮಲ್ಲಿ ಭಗವಂತ ನಡೆದುಬರುತ್ತಾನೆ. ನಮಗಾಗಿ ತನ್ನ ಪರತ್ವದಿಂದ ಇಳಿದು ಅತಿ ಸುಲಭನಾಗುತ್ತಾನೆ. ಅರ್ಚೆಯಲ್ಲಿ ವಿಗ್ರಹದಲ್ಲಿ ಮೂಡಿ ನಮಗೆ ದರ್ಶನವೀಯುತ್ತಾನೆ. ಈ ತಾತ್ಪರ್ಯ ಪಂಚರಾತ್ರಗಳು ತಾತ್ಪರ್ಯ.

ಅಧ್ಯಾತ್ಮ ಸಾಧನೆಯಲ್ಲಿ ಅರ್ಚಾವತಾರಕ್ಕೆ ವಿಗ್ರಹಪೂಜೆಗೆ ಇರುವ ಪ್ರಾಶಸ್ತ್ಯವನ್ನು ಕುರಿತು ನಮ್ಮ ತತ್ವ ಜ್ಞಾನಿಗಳು ವಿಚಾರ ಮಾಡಿದ್ದಾರೆ. ಆ ವಿಚಾರದ ಫಲವಾಗಿ ಈ ಮುಂದಿನ ಕೆಲ ಅಂಶಗಳು ಪ್ರಕಟವಾಗುತ್ತವೆ. ವಿಗ್ರಹಾರಾಧನೆಯ ಪ್ರಯೋಜನಗಳೇನು ಆವಶ್ಯಕತೆ ಏನು ಎಂದು ಕೇಳುವ ಜನ ಇಂದು ಇದ್ದಾರೆ. ಆ ಪ್ರಶ್ನೆಗೆ ಉತ್ತರವೋ ಎಂಬಂತೆ ಈ ರೀತಿಯ ವಿವರ ಹಳೆಯ ಗ್ರಂಥವೊಂದರಲ್ಲಿ ಗೋಚರವಾಗುತ್ತದೆ.

ಅದರ ಪ್ರಕಾರ ಅರ್ಚಾವತಾರದಲ್ಲಿ ಈ ಲಕ್ಷಣಗಳೆಲ್ಲವೂ ಪೂರ್ತಿಗೊಂಡಿವೆ. ಅವು ಯಾವುವೆಂದರೆ ರುಚಿಜನಕತ್ವ, ಶುಭಾಶ್ರಯತ್ವ, ಅಶೇಷ ಲೋಕಶರಣ್ಯತ್ವ, ಅನುಭವ್ಯತ್ವ.

ಈ ಲಕ್ಷಣಗಳ ವಿವರಣೆಯನ್ನು ಈ ರೀತಿ ಮಾಡಬಹುದು. ಮೊದಲನೆಯ ಲಕ್ಷಣ ರುಚಿಜನಕತ್ವ. ಅಂದರೆ ದೇವರ ಕಡೆಗೆ ಮನಸ್ಸನ್ನು ಒಲಿಸುವ ಅಂಶ. ಶಾಸ್ತ್ರದ ವಿಧಿ ನಿಷೇದಗಳು ತಮ್ಮನ್ನೂ ತಿದ್ದಲು ಅಸಮರ್ಥವಾದಾಗ, ವಿಷಯಾಂತರಗಳಲ್ಲಿ ಮುಳುಗಿ ಬಿಟ್ಟಾಗ, ಭಗವದ್ವಿಮುಖರಾದಾಗ. ಈ ವೈಮುಖ್ಯವನ್ನು ಹೋಗಲಾಡಿಸಿ ಭಗವಂತನಲ್ಲಿ ರುಚಿಹುಟ್ಟಿಸುತ್ತದೆ. ಈ ರುಚಿ ಹುಟ್ಟಿದ ಮೇಲೆ ತನ್ನಲ್ಲಿ ಅವರ ಹೃದಯ ನಾಟುವಂತೆ ಮಾಡಿ ಮನಸ್ಸಿಗೆ, ಮನಸ್ಸಿನ ಉನ್ನತಿಗೆ ಆವಶ್ಯಕವಾದ ಶುಭಾಶಯತ್ವವನ್ನು ಉಂಟು ಮಾಡುತ್ತದೆ. ಮನಸ್ಸಿನ ದುರಾಶ್ರಯಗಳನ್ನು ದೂರ ಮಾಡಿ ಶುಭವಾದ ಚಿಂತನೆಗಳನ್ನು ತುಂಬಲು ಸಹಾಯಕವಾಗುತ್ತದೆ.

ಮೂರನೆಯ ಲಕ್ಷಣ ಅಶೇಷ ಲೋಕಶಾರಣ್ಯತ್ವ. ಅಂದರೆ ಕಠಿಣ ತಪಸ್ಸಿಗೆ ಅಕ್ಷಮರಾಗಿ ಧ್ಯಾನಕ್ಕೆ ಅಸಮರ್ಥರಾಗಿ ಲೋಕದಲ್ಲಿ ಬಾಳುವ ಕೋಟ್ಯಂತರ ಜನರಿಗೆ ಶರಣನೂ ಸುಲಭನೂ ಆದವನು ಪರಮಾತ್ಮ ಎಂಬ ಭಾವನೆ ಬೆಳೆಯಲು ಸಹಾಯವಾಗುತ್ತದೆ, ಎಲ್ಲರಿಗೂ ದೃಷ್ಟಿಗೋಚರವಾದ ವಿಗ್ರಹ ಈ ಮಾನವನ ಹೃದಯ ಮನಸ್ಸುಗಳನ್ನು ತಣಿಸುವಂತಹ ದಿವ್ಯದರ್ಶನವನ್ನು ನೀಡುವ ಅವಕಾಶವನ್ನೂ ಹೊಂದಿದೆ.

ಈಶ್ವರನನ್ನು ನಾವು ಅರಿತರೆ ಮಾತ್ರ ಸಾಲದು. ಅವನನ್ನು ಅನುಭವಿಸುವಂತವರಾಗಬೇಕು. ಅಪ್ರಾಕೃತ ದಿವ್ಯ ಮಂಗಳಿಯಾದ ವಿಗ್ರಹ ನಮ್ಮ ಆನಂದಾನುಭವದ ವಿಷಯವಾಗಿ ನಮ್ಮ ಕಣ್ಣಿನಲ್ಲಿ ಆನಂದಾಭಿಷ್ಟವನ್ನು ತರುತ್ತದೆ. ನಮ್ಮನ್ನು ಪುಳಗಿತಗಾತ್ರರನ್ನಾಗಿ ಮಾಡಬಲ್ಲದು, ಕಂಠಾವರೋಧ ಮಾಡುವಂಥದಾಗಬಲ್ಲದು. ಈ ಆನಂದಾನುಭವ ಶುದ್ಧ ಸಾತ್ವಿಕಾನಂದಾನುಭವ. ಈ ಆನಂದವನ್ನೂ ವಿಗ್ರಹಾರಾಧಕನಾದ ಭಕ್ತ ಅನುಭವಿಸಬಲ್ಲ. ಇದಕ್ಕಾಗಿಯೇ ದೇವಸ್ಥಾನ, ದೇವಸ್ಥಾನದ ಗೋಪುರ, ರಥ. ರಥೋತ್ಸವಗಳು ಜಾತ್ರೆಜನಜಂಗುಳಿ.

ಕೊನೆಯದೊಂದು ಮಾತು. ಪರಮಾತ್ಮನ ವಿಗ್ರಹವನ್ನು ಅಷ್ಟವಿಧವಾದ ಪುಷ್ಪಗಳಿಂದ ಅರ್ಚಿಸಬೇಕೆಂದು ಒಂದು ಶಾಸ್ತ್ರವಿದೆ. ಈ ಪುಷ್ಪಗಳು ವಿವಿಧ ವರ್ಣಗಳವು. ವಿವಿಧ ಪರಿಮಳವುಳ್ಳವು. ಆದರೆ ಇದಕ್ಕೆ ನಿಜವಾದ ಪರಿಮಳ ವರ್ಣಗಳನ್ನೂ ನೀಡುವಂಥದು ಭಕ್ತನ ಹೃದಯ ಮತ್ತು ಅವನ ಸದ್ಗುಣಗಳು. ಭಗವಂತನನ್ನು ಆರಾಧಿಸುವ ಪುಷ್ಪಗಳು ಭಕ್ತನ ಸದ್ಗುಣಗಳ ಪ್ರತೀಕವೆಂಬ ಮಾತನ್ನು ಒಂದು ಭಕ್ತಿ ಶಾಸ್ತ್ರ ಈ ರೀತಿ ಹೇಳುತ್ತದೆ.

"ಅಹಿಂಸಾ ಪ್ರಥಮಂಪುಷ್ಪಂ ಪುಷ್ಪ ಮಿಂದ್ರಿಯನಿಗ್ರಹ:
ಸರ್ವ ಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ವಿಶೇಷತ:
ಜ್ಞಾನಂ ಪುಷ್ಪಂ ತಪ:ಪುಷ್ಪಂ ಧ್ಯಾನಂ ಪುಷ್ಪಂ ತಥೈವಚ
ಸತ್ಯಮಷ್ಟವಿಧಂ ಪುಷ್ಪಂ ವಿಷ್ಣೋ: ಪ್ರೀತಿಕರಂ ಭವೇತ್॥

ಈ ಶ್ಲೋಕದ ಅರ್ಥ ಸುಸ್ಪಷ್ಟವಾಗಿದೆ. ಇದು ಅರ್ಚಾವತಾರದ ಆರಾಧನಾ ಕಲೆಯ ಸತ್ಯಸೌಂದರ್ಯಗಳು.





ಮ. ಗೋವಿಂದ ಪೈಯವರು ಶ್ರೀ ಆರ್. ಕೆ. ಪ್ರಭುಗಳವರೊಡನೆ
ಮಾಟುಂಗಾ, 31—12—1950.



ಕನ್ನಡ ಕುಲ ಪುರೋಹಿತ ರಾಷ್ಟ್ರಕವಿಗಳೊಂದಿಗೆ
ಬೊಂಬಾಯಿ. 1950.



ರಾಷ್ಟ್ರಕವಿ ಉಪಾಧಿ ಸಿಕ್ಕಿದ ಸಂದರ್ಭದಲ್ಲಿ ಮದ್ರಾಸಿನ ಗೌಡಸಾರಸ್ವತ ಸಭೆಯು ಏರ್ಪಡಿಸಿದ ಸತ್ಕಾರ ಕೂಟದಲ್ಲಿ
ಮ. ಗೋವಿಂದ ಪೈಯವರು. ಪೈಯವರ ಎಡ-ಬಲದಲ್ಲಿ ರೆವಿನ್ಯೂ ಬೋರ್ಡಿನ ಮೊದಲನೇ ಮೆಂಬರರಾದ
ವಿ. ಎನ್. ಕುಡ್ವಾ ಮತ್ತು ಸರ್. ಕೆ. ಪಿ. ಲಕ್ಷ್ಮಣ ರಾಯರನ್ನು ಕಾಣಬಹುದು.
ಮದ್ರಾಸು, 15—8—1949.



ಬೊಂಬಾಯಿಯ ವೈಟೆರಿನರಿ ಕಾಲೇಜಿನ ಕರ್ನಾಟಕ ಸಂಘವು ಏರ್ಪಡಿಸಿದ ಸತ್ಕಾರ ಕೂಟದಲ್ಲಿ
ಮ. ಗೋವಿಂದ ಪೈಯವರು. ಬೊಂಬಾಯಿ, 30—12—1950.

# ಓಲೆಗಳು ಹೇಳುವ ಕತೆ

[ಮಂ. ಗೋವಿಂದ ಪೈ ಅವರ ಪತ್ರಗಳ ಸಂಕಲನ]

## ವಿಭಾಗ ೫

ಸಂಗ್ರಾಹಕ:

ಕು. ಶಿ. ಹರಿದಾಸ ಭಟ್ಟ

# ಎರಡು ಮಾತು

ಪತ್ರಲೇಖನವು ಒಂದು ಸಾಹಿತ್ಯ ಪ್ರಕಾರವೆಂಬುದಾಗಿ ಕನ್ನಡದಲ್ಲಿ ಇನ್ನೂ ಬಳಕೆಯಾಗಿಲ್ಲ. ತಾವು ಬರೆದ ಪತ್ರಗಳನ್ನೇ ಸಂಗ್ರಹಿಸಿದರೂ ಒಂದು ಸಾಹಿತ್ಯ ಗ್ರಂಥವು ಸೃಷ್ಟಿಯಾಗಬಲ್ಲುದೆಂದು ತಿಳಿದ ಸಾಹಿತಿಗಳು ವಿರಳ. ಬರೆದ ಪತ್ರಗಳ ಪ್ರತಿಯನ್ನು ಮಾಡಿಸಿಕೊಳ್ಳುವುದೂ ಟೈಪುರೈಟರು ರೂಢಿಯಲ್ಲಿಲ್ಲದ ಕಾರಣ ಕಷ್ಟವೇ ಆಗಿದೆ. ಹೀಗಾಗಿ ನಮ್ಮ ಸಾಹಿತಿಗಳು ತಮ್ಮ ಜೀವಮಾನ ಕಾಲದಲ್ಲಿ ನಡೆಸಿದ ಪತ್ರವ್ಯವಹಾರದ ಹೆಚ್ಚಿನ ಲಾಭವು ಸಾಮಾನ್ಯ ವಾಚಕ-ವರ್ಗಕ್ಕೆ ಲಭಿಸದಾಗಿದೆ. ಅಲ್ಲದೆ ಪತ್ರಗಳಿಗೆ ಮಾರೋಲೆ ಬರೆಯುವುದನ್ನು ನಿಯಮದಂತೆ ಪಾಲಿಸುವವರೂ ಕಡಿಮೆ ಎಂಬುದನ್ನೂ ನಾವು ಒಪ್ಪಿಕೊಳ್ಳಬೇಕು.

ಆದರೆ ದಿವಂ. ಮಂಜೇಶ್ವರ ಗೋವಿಂದ ಪೈ ಅವರು ಈ ವಿಷಯದಲ್ಲಿ ಅತ್ಯಂತ ಕಠೋರವಾದ ವ್ರತವನ್ನೇ ಹಿಡಿದಂತೆ ತೋರಬಹುದು. ಕನ್ನಡನಾಡಿನ ಯಾವುದೇ ಭಾಗದ ಕೊಂಪೆಯಲ್ಲಿರುವ ಪ್ರಾಥಮಿಕ ಶಾಲೆಯ ವರ್ಧಂತಿ ದಿನವೇ ಆಗಲಿ, ಉತ್ಸವಗಳಿಗಾಗಿ ತನಗೆ ಬಂದ ಆದರಪೂರ್ವಕ ಆಮಂತ್ರಣವೇ ಆಗಲಿ, ಕಿರಿಸಾಹಿತಿಗಳಿಂದ ಆಶೀರ್ವಾದದ ಕರುಣೆಗೆಂದು ತಲಪಿದ ಕೃತಿಗಳ ಬಗ್ಗಾಗಲಿ, ಅಥವಾ ನಾಡಿನ ಇತರ ಜಜ್ಞಾಸು-ಸಂಶೋಧಕರ ಸಂಶಯ ನಿವಾರಣೆಗೋಸ್ಕರವೇ ಇರಲಿ, ಗೋವಿಂದ ಪೈ ಅವರು ಮರು ಟಪ್ಪಾಲಿಗೇನೆ ಉತ್ತರವನ್ನು ಕಳಿಸುವ ದೀಕ್ಷೆ ಹೊತ್ತಿದ್ದರು. ನಾಡಿನ ತುಂಬ ದಿವಂ. ಪೈ ಅವರು ನೇರಳೆ ಮಸಿಯಲ್ಲಿ ಬರೆದ ಓಲೆಗಳು ವ್ಯಾಪಿಸಿರಬೇಕೆಂದೂ ಅವನ್ನು ಸಂಗ್ರಹಿಸಿದರೆ ಗೋವಿಂದ ಪೈ ಅವರ ನಿಸ್ಪೃಹ, ಉನ್ನತ ಮತ್ತು ಸ್ನಿಗ್ಧ ಜೀವನದ ಇನ್ನಷ್ಟು ಸ್ಪಷ್ಟ ಕಲ್ಪನೆಯಾಗಬಹುದೆಂದೂ ನನಗೆ ತೋಚಿತು.

ಇಂಥ ಪತ್ರಗಳನ್ನು ಸಂಗ್ರಹಿಸುವುದು ಪ್ರಯೋಜನಕರವಾದ ಪ್ರಯತ್ನವಾದೀತೆಂದು ಭಾವಿಸಿ ಕಳೆದ ವರ್ಷ ನಾಡಿನ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾಯಿತು. ನನ್ನ ಹಲವು ಸ್ನೇಹಿತರು ಈ ಯೋಜನೆಯನ್ನು ಸ್ವಾಗತಿಸಿದ್ದಲ್ಲದೆ ದಿವಂ. ಪೈ ಅವರ ಪತ್ರಗಳನ್ನು ಜೋಪಾನವಾಗಿರಿಸಿಕೊಂಡಿದ್ದ ಮಿತ್ರರು ಅವನ್ನು ಅಷ್ಟೇ ಜೋಪಾನವಾಗಿ ಕಳಿಸಿಕೊಟ್ಟರು. ಏಳೆಂಟು ತಿಂಗಳ ಅವಧಿಯಲ್ಲಿ ಸುಮಾರು ಮೂವತ್ತು ಮಂದಿ ಮಿತ್ರರಿಂದ ಒಂದುನೂರರ ವರೆಗೆ ಪತ್ರಗಳೇನೊ ಬಂದವು. ಈ ಪತ್ರಗಳನ್ನು ತವನಿಧಿಯಂತೆ ರಕ್ಷಿಸಿಕೊಂಡಿದ್ದ ಮಿತ್ರರು ಹಿಂತಿರುಗಿಸುವ ಬಗ್ಗೆ ನನಗೆ ಎಚ್ಚರಿಕೆಯ ಮಾತನ್ನು ಹೇಳಿ ಕಳಿಸಿಕೊಟ್ಟರು. ಪ್ರತಿ ಮಾಡಿದ ಮೇಲೆ ಅವನ್ನು ಅಷ್ಟೇ ಜತನದಿಂದ ಮರಳಿಸುವುದು ನನ್ನ ಕರ್ತವ್ಯವಾಯಿತು. ಗೋವಿಂದ ಪೈ ಅವರ ಮೇಲಣ ಗೌರವದ ದೆಸೆಯಿಂದ ನನ್ನ ಮೇಲೆ ಇಷ್ಟೊಂದು ವಿಶ್ವಾಸವಿರಿಸಿ ಕಳಿಸಿದ ಈ ಮಿತ್ರರಿಗೆಲ್ಲ ನಾನು ಋಣಿಯಾಗಿದ್ದೇನೆ. ಈ ಸಂಗ್ರಹದ ಕೀರ್ತಿ ಎಲ್ಲ ಅವರದಾಗಿದೆ.

ನನಗೆ ದೊರೆತ ಪತ್ರಗಳನ್ನೆಲ್ಲ ಪರಿಶೀಲಿಸಿದ ಬಳಿಕ ಯೋಜನೆಯನ್ನು ಎರಡು ಭಾಗವಾಗಿ ವಿಂಗಡಿಸಬೇಕಾಗಿ ಬಂದಿದೆ. ನನ್ನ ಪತ್ರಿಕಾ ಪ್ರಕಟಣೆಗೆ ಓಗೊಟ್ಟು ಪತ್ರಗಳನ್ನು ದಯಪಾಲಿಸಿದ ಮಹನೀಯರಲ್ಲಿ ನೂರಕ್ಕೆ ತೊಂಭತ್ತರಷ್ಟು ಜನ ಗೋವಿಂದ ಪೈ ಅವರಿಗಿಂತ ವಯಸ್ಸಿನಲ್ಲಿ ಬಹಳ ಕಿರಿಯರಾಗಿ ಅವರಿಗೆ ಗೋವಿಂದ ಪೈ ಆಶೀರ್ವಚನ ರೂಪವಾಗಿಯೂ, ಸಲಹೆಗಳ ರೂಪದಲ್ಲಿಯೂ ಬರೆದ ಮಾತುಗಳೇ ಬಹಳ. ದಿವಂ. ಪೈ ಅವರಿಗೆ ದೀರ್ಘಕಾಲದಿಂದ ಪರಿಚಿತರಾದ ಶ್ರೀ ಉಗ್ರಾಣ ಮಂಗೇಶರಾಯರು, ಶಿವರಾಮ ಕಾರಂತರು ಮತ್ತು ಸೇಡಿಯಾಪು ಕೃಷ್ಣಭಟ್ಟರು ಇವರನ್ನು ಬಿಟ್ಟರೆ ಉಳಿದವರೆಲ್ಲ ಅವರ ಬದುಕಿನ ಕೊನೆಯ ಹತ್ತಿಪ್ಪತ್ತು ವರ್ಷಗಳಲ್ಲಿ ಅವರಿಗೆ ಪರಿಚಿತರಾದವರು. ನಾಡಿನ ಹಿರಿಯ ಸಾಹಿತಿಗಳನೇಕರು ಗೋವಿಂದ ಪೈ ಅವರ ಪರಿಚಯವನ್ನು ಪಡೆದು ಆದರಾತಿಥ್ಯವನ್ನೆ ಉಂಡವರೇ. ಅವರಲ್ಲಿ ಹೆಚ್ಚಿನವರು ಅವರ ಪತ್ರಗಳನ್ನು ಕಂಡಿತವಾಗಿಯೂ ಸವಿದಿರಬೇಕು. ಆದರೆ ಅವನ್ನು ಜತನದಿಂದ ಕಾಪಾಡಿದವರಿಲ್ಲ. ಪತ್ರ ಸಂಗ್ರಹದ ಯೋಜನೆಯ ಪ್ರಸ್ತಾಪ ಮಾಡಿದಾಗ ಹಿರಿಯರು ಕೆಲವರು ತಮ್ಮಲ್ಲಿನ ಸಂಗ್ರಹವನ್ನು ಅದರ ಕೆಲಸ ಮುಗಿಯಿತೆಂದು ಎಂದೋ ಬಿಸುಟಿನೆಂದು ವ್ಯಥೆಪಟ್ಟರು. ಆದರೂ ಈ ಹಿರಿಯರ ಕೈಯಿಂದ

ಹಳೆಯ ದಸ್ತಾವೇಜಿನ ಸಂಪಾದನೆ ಮಾಡಲು "ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ"ವೆಂಬುದು ಅನುಭವವೇದ್ಯವಾದುದರಿಂದ ಭೆಟ್ಟಿಗೆ ಬೇಕಾದ ಅವಕಾಶವನ್ನು ನೀಡಬೇಕೆಂದು ನಾನು ಭಗವಂತನನ್ನು ಪ್ರಾರ್ಥಿಸಿ ಈ ಸ್ಮಾರಕ ಗ್ರಂಥದಲ್ಲಿ ಜೋಡಿಸಿರುವ ಪತ್ರಗಳನ್ನು ನನ್ನ ಯೋಜನೆಯ ಪ್ರಥಮ ಭಾಗವೆಂದು ಸ್ವೀಕರಿಸಬೇಕಾಗಿ ಓದುಗರನ್ನು ವಿನಂತಿಸಿಕೊಳ್ಳಬೇಕಾಗಿದೆ.

"ಇಷ್ಟೇ ಮಾಡಿದರೆ ಸಾಕೆ?" ಎಂದು ನನ್ನ ಆಪ್ತರಾದ ಶ್ರೀನಿವಾಸ ಹಾವನೂರ ಅವರು ಕೇಳಿಯೂ ಇದ್ದಾರೆ. ಅವರ ಮತ್ತು ಸಾಲದೆಂದು ತೋರುವ ಅವರಂಥ ಇತರರ ಕೈಯಲ್ಲಿ ನಾನು ಕ್ಷಮೆಯನ್ನು ಯಾಚಿಸಿ ಇನ್ನುಳಿದ ವಿಪುಲ ಪತ್ರ ಸಂಗ್ರಹದ ಹುಡುಕಾಟಕ್ಕೆ ಕಾಲಾವಕಾಶವನ್ನು ಬೇಡುತ್ತೇನೆ.

ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನ ಧುರೀಣರು ಕೈಗೊಂಡ ಸ್ಮಾರಕ ಗ್ರಂಥದ ಸಾಹಸಕ್ಕೆ ನನ್ನ ಈ ಸಂಗ್ರಹವನ್ನು ಕಾಣಿಕೆಯಾಗಿ ಅರ್ಪಿಸುತ್ತ ಇದಕ್ಕೆ ಸ್ಥಳಾವಕಾಶವನ್ನು ಒದಗಿಸಿದ ಸಂಪಾದಕ ಮಂಡಳಿಗೆ ಕೃತಜ್ಞತೆಯನ್ನು ಸೂಚಿಸಿ ಕನ್ನಡಿಗರ ಮುಂದೆ ಈ ಸಂಗ್ರಹವನ್ನು ಇರಿಸಿದ್ದೇನೆ.

ಇತಿ

20—8—1964. **ಕು. ಶಿ. ಹರಿದಾಸ ಭಟ್ಟ**



*It seems to me that there is a very great significance in letter-writing and that it differs from daily intercourse as the dramatic differs from the epic or narrative. It is the life of man, and above all the chief part of his life, his inner life, not gradually unfolded without break or sudden transition, those changes which take place insensibly being also manifested insensibly; but exhibited in a series of detached scenes, taken at considerable intervals from one another showing the completed change of position or feeling, without the process by which it was effected; affording a glimpse or partial view of the mighty river of life at some few points, and leaving the imagination to trace to itself such figure or scheme as it can of the course of the stream in that far larger portion of space where it winds its way through thickets or impenetrable forests and is invisible: this alone being known to us, that whatever may have been its course through the wilderness, it has had some course, and that a continuous one, and which might by human opportunity have been watched and discovered, though to us, too probably, destined to be for ever unknown.*

**—J. S. Mill to John Sterling**

May 24, 1832

ಪತ್ರ ಲೇಖನವು ಅರ್ಥಪೂರ್ಣವಾದ ಒಂದು ಕೃತಿವಿಶೇಷವೆಂದು ನಾನು ನಂಬಿದ್ದೇನೆ. ಮನುಷ್ಯನ ಅಂತರಂಗ ಜೀವನದ ಬಹುಮುಖ್ಯವಾದ ಅಂಶಗಳು ಅದರಲ್ಲಿ ನೆಲೆಗೊಂಡಿವೆ. ಬದುಕಿನ ಅನಂತ ಪ್ರವಾಹದ ಕೆಲವು ಘಟ್ಟಗಳನ್ನೂ, ರಸನಿಮಿಷಗಳನ್ನೂ ಆಗೊಮ್ಮೆ ಈಗೊಮ್ಮೆ ಈಷನ್ಮಾತ್ರ ಗೋಚರವಾಗಿಸಿ ಉಳಿದುದನ್ನು ನಮ್ಮ ಕಲ್ಪನೆಗೆ ಒಪ್ಪಿಸುವ ಪತ್ರ ಲೇಖನ ಸಾಹಿತ್ಯದ ರೀತಿ ಮಹಾಕಾವ್ಯಕ್ಕಿಂತ ಭಿನ್ನವಾದರೂ ನಾಟಕದ ದೃಶ್ಯಗಳಂತೆ ರಮ್ಯವಾಗಿದೆ. [ಸಾರಾಂಶ]

**ಜಾನ್ ಸ್ಟುವರ್ಟ್ ಮಿಲ್**

ಮೇ, 24, 1832

[ದಿವಂಗತ ಗೋವಿಂದ ಪೈ ಅವರು ತಮ್ಮ ಬಾಳುವೆಯ ಅಪರಾರ್ಧದಲ್ಲಿ ನಾಡಿನ ಆಚಾರ್ಯಪುರುಷರೆನಿಸಿ ಆ ಔನ್ನತ್ಯದಿಂದ ಎಲ್ಲೆಡೆಯಲ್ಲಿಯೂ ನಡೆಯುವ ಸಭೆ ಸಮಾರಂಭಗಳಿಗೂ, ಉತ್ಸವಗಳಿಗೂ ನೇರಳೆ ಮಸಿಯಲ್ಲಿ ಬರೆದ ತಮ್ಮ ಶುಭಸಂದೇಶವನ್ನು ಕಳುಹಿಸಿಕೊಡುತ್ತಿದ್ದರು. ತಮ್ಮ ಓರಗೆಯ ಸ್ನೇಹಿತರಾಗಲಿ ಅಥವಾ ಕಿರಿಯರಾಗಲಿ ಮನ್ನಣೆ ಪಡೆಯುವುದನ್ನು ಮುಕ್ತಕಂಠದಿಂದ ಹೇಗೆ ಪ್ರಶಂಸಿಸುತ್ತಿದ್ದರೋ ಹಾಗೆಯೇ ತನ್ನ ಬಗ್ಗೆ ಯಾರಾದರೂ ಒಳ್ಳೆಯ ಮಾತನ್ನೆಂದರೆ ಅದನ್ನು ಸಂಕೋಚದಿಂದಲೂ, ಅತೀವ ದಾಕ್ಷಿಣ್ಯಪರತೆಯಿಂದಲೂ ನಿರಾಕರಿಸುತ್ತಿದ್ದರು.]

ಮಂಜೇಶ್ವರ,
20—2—58.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ನಿನ್ನೆಯ ತಾರೀಕಿನ ಕಾರ್ಡು ಇವತ್ತು ಈಗ ಸಂಜೆ ಕೈ ಸೇರಿ ಆ ಬಗ್ಗೆ ಧನ್ಯವಾದಗಳು. ಅಹುದು, ನಾನು 1883ನೆಯ ಇಸವಿಯ ಮಾರ್ಚ್ ತಿಂಗಳ 23ನೆಯ ತಾರೀಕಿಗೆ ಹೋಳೀ ಹುಣ್ಣಿಮೆಯ ದಿನ ಹುಟ್ಟಿದ್ದೆ-ತಾರೀಕಿನ ಲೆಕ್ಕದಲ್ಲಿ ಬರುವ ಮಾರ್ಚ ತಿಂಗಳ 23ನೆಯ ತಾರೀಕಿಗೆ 75 ವರ್ಷಗಳು ಮುಗಿಯುತ್ತವೆ. ಸಾಯಲಿಕ್ಕೆ ಹತ್ತಿರ ಹತ್ತಿರವಾಯಿತು. ನನಗೇನೂ ಅಭಿನಂದನೆಗಳನ್ನೇ ವಗೈರೆ ಮಾಡಬೇಕೆಂದಿಲ್ಲ, ಮಾಡಬಾರದು. ಆ ತಕ್ಕ ಪ್ರೀತಿ ನಮ್ಮ ನಮ್ಮ ಮನಸ್ಸಿನಲ್ಲಿ ಇದ್ದರೆ ಅದೇ ಹೆಚ್ಚು-ಏಕೆಂದರೆ ಸರ್ವಾಂತರ್ಯಾಮಿಯಾದ ಶ್ರೀ ದೇವರು ನಮ್ಮ ಮನಸ್ಸನ್ನು ನೋಡುವನೇ ವಿನಾ ಹೊರಗೆ ಸೂಸುವ ಮಾತುಗಳನ್ನಲ್ಲ. ಶ್ರೀ ದೇವರು ನಿಮಗೂ ನಿಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವನ್ನಿತ್ತು, ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡುತ್ತಿರಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಮುನಿಪಾಲರಾಜು.
ಮಂಗಳೂರು.

[1]

ಮಂಜೇಶ್ವರ,
23—2—61,

ಗೋವಿಂದಪೈ ಮಾಡುವ ನಮಸ್ಕಾರ. ನಿಮ್ಮ ಆಮಂತ್ರಣ ಪತ್ರಿಕೆ ಇವತ್ತು ಇಲ್ಲಿಗೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನಾಡದು 25ನೆಯ ತಾರೀಕಿನಂದು ನಿಮ್ಮ ಶಾಲೆಯ ವಿದ್ಯಾರ್ಥಿ ಸಂಘದವರು ಜರಗಿಸಲಿಕ್ಕೆ ಕಯ್ಕೊಂಡಿರುವ ಶ್ರೀ ಮಹಾಕವಿ ಕುವೆಂಪುರವರ ಭಾವಚಿತ್ರದ ಅನಾವರಣ ಮಹೋತ್ಸವವು ಬಹಳ ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಪ. ನಾಗರಾಜಯ್ಯ,
ಕನ್ನಡ ಪಂಡಿತ,
ಹಾಸನ.

[2]

ಮಂಜೇಶ್ವರ,
12—12—61.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಕರ್ಣಾಟಕ ಸಂಘದ ಪರವಾಗಿ ನೀವು ಸ್ನೇಹಪೂರ್ವಕವಾಗಿ ಕಳುಹಿಸಿರುವ ಆಮಂತ್ರಣಪತ್ರಿಕೆ ಮುಟ್ಟಿ ಅನೇಕ ಧನ್ಯವಾದಗಳು. ನನ್ನ ಮಿತ್ರವರ್ಯರಾದ ಶ್ರೀ ವಿ. ಸೀತಾರಾಮಯ್ಯನವರಿಗೆ ನಾಡದು 16ನೆಯ ತಾರೀಕಿನಂದು ನಿಮ್ಮ ಸಂಘವು ಒಂದು ಸನ್ಮಾನ ಪತ್ರವನ್ನು ಅರ್ಪಿಸಿ ಗೌರವಿಸಬೇಕೆಂದು ನಿರ್ಧರಿಸಿದೆ ಎಂದು ತಿಳಿದು ಬಹಳ ಸಂತೋಷಪಡುತ್ತೇನೆ.

ಶ್ರೀ ವಿ. ಸೀಯವರು ಆಧುನಿಕ ಕನ್ನಡ ಸಾಹಿತ್ಯದ ಮಧ್ಯಮ ಯುಗದವರು. ಉಚ್ಚ ಪದವಿಯ ಶ್ರೇಷ್ಠ ಸಾಹಿತಿಗಳು ಇಂತಹ ಗೌರವಕ್ಕೆ ನಿಶ್ಚಯವಾಗಿಯೂ ಶತಧಾ ಸತ್ಪಾತ್ರರು. ನೀವು ಅವರನ್ನು ಗೌರವಿಸಲಿಕ್ಕಿರುವ ಈ ಸಮಾರಂಭಕ್ಕೆ ಯಶಸ್ಸನ್ನು ಕೋರುತ್ತೇನೆ. ನಿಮ್ಮ ಅತಿಥಿ ಮಹಾಶಯರಾದ ಶ್ರೀ ವೀ ಸೀಯವರು ಇನ್ನು ಮುಂದೆಯೂ ಕನ್ನಡ ಸಾಹಿತ್ಯಕ್ಕೆ ಉತ್ತಮವಾದ ಸೇವೆಯನ್ನು ಸಲಿಸುತ್ತ ಚಿರಕಾಲ ಬಾಳುತ್ತಿರುವಂತೆ ಅವರಿಗೂ ಅವರವರೆಲ್ಲರಿಗೂ ದೀರ್ಘಾಯುರಾರೋಗ್ಯಾದಿ ಭಾಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ನನ್ನ ಪರವಾಗಿ ಅರ್ಪಿಸಬೇಕಾಗಿ ನಿಮ್ಮನ್ನು ವಿಜ್ಞಾಪಿಸುತ್ತೇನೆ. ಬಹಳ ಉಪಕಾರ. ಇತಿ ನಿಮಗೂ ನಿಮ್ಮ ಸಂಘದವರೆಲ್ಲರಿಗೂ ನನ್ನ ಸೌಹಾರ್ದದ ವಂದನೆಗಳು.

M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲೆಕೆರೆ,
ಬ್ರಹ್ಮಾವರ.

[3]

ಮಂಜೇಶ್ವರ,
18—12—61.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಅಜಪುರದ ಕರ್ಣಾಟಕ ಸಂಘದ ಆಶ್ರಯದಲ್ಲಿ ಇವತ್ತೇ ದಶಂಬರ 18ನೆಯ ತಾರೀಕಿನಂದು ಜರಗಲಿಕ್ಕಿರುವ ನನ್ನ ಮಿತ್ರವರ್ಯರೂ, ಸಣ್ಣ ಕತೆಗಾರರೇ ಅಲ್ಲ, ಉತ್ತಮ ಕನ್ನಡ ಕವಿಗಳೂ ಆಗಿರುವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ ಸನ್ಮಾನಪತ್ರವನ್ನು ಅರ್ಪಿಸಿ ಗೌರವಿಸುವ ಸಮಾರಂಭದ ಆಮಂತ್ರಣ ಪತ್ರಿಕೆ ದೈವವಶಾತ್ ಇವತ್ತೇ 18ನೆಯ ತಾರೀಕಿನಂದು ಇಲ್ಲಿ ನನ್ನ ಕೈಸೇರಿದೆ. ಆ ಬಗ್ಗೆ ಅನೇಕಾನೇಕ ಧನ್ಯವಾದಗಳು. ಆ ಸಮಾರಂಭವು ಇವತ್ತು ಬಹಳ ಯಶಸ್ವಿಯಾಗಿ ನೆರವೇರಿರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಇತಿ ಶ್ರೀ ಅಯ್ಯಂಗಾರರಿಗೂ ನಿಮಗೂ ನನ್ನ ನಮಸ್ಕಾರಗಳು.

M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲೆಕೆರೆ,
ಬ್ರಹ್ಮಾವರ.

[4]

ಮಂಜೇಶ್ವರ
7—8—62

ನಮ್ಮ ಗುರುಹಿರಿಯರನ್ನು ಗೌರವಿಸುವ ಬಗ್ಗೆ ನಾವು ಆಚರಿಸತಕ್ಕ ಯಾವೊಂದು ಕಾರ್ಯವಿದೆಯೋ ಅದು ಪುಣ್ಯ ಕಾರ್ಯ. ಅದೊಂದು ಆರಾಧನೆ ತಾನೆ? ಎಂದು ನಮ್ಮ ಸನಾತನ ಧರ್ಮ ಸಾರುತ್ತಲಿದೆ. ಆ ಬಗೆಗೆ ನಾವು ಕೈಕೊಳ್ಳಬೇಕಾದ ವಿಷಯಗಳು ಯಾವವೇ ಇರಲಿ, ನಮ್ಮ ಉದ್ದೇಶವಾದರೆ ಒಂದೇ ಆಗಿರಬೇಕು, ಅದು ಸದುದ್ದೇಶ......

ಶ್ರೀ ಶ್ರೀ ನಾರಾಯಣ ಗುರುವರ್ಯರ ಪ್ರತಿವಾರ್ಷಿಕ ಪುಣ್ಯತಿಥಿಗಳಲ್ಲಿ ಅವರ ಮೂರ್ತಿಯ ಆರಾಧನೆಗೆ ಅಭಿಷೇಕ, ಅರ್ಚನೆ, ಆರತಿಯೇ ಮೊದಲಾಗಿ ಸನಾತನ ಧರ್ಮೋಕ್ತವಾದ ಪೂರ್ವೋಕ್ತ ಕ್ರಮಪ್ರಕಾರ ನಡೆದು ಬರುತ್ತಿರುವ ವಿವಿಧ ಅಂಗಗಳು ಹೇಗೆ ಇವೆಯೋ ಹಾಗೆಯೇ ಅವುಗಳ ಜತೆಯಲ್ಲಿ ಈಗಣ ನವಯುಗದ ಕ್ರಮದ ಅಂಗವಾಗಿ ಅವರ ಯಶೋಗಾನ ಉಳ್ಳ ಅದೊಂದು ಸಾಹಿತ್ಯದ ಪ್ರಕಟೀಕರಣವೂ ಆಗಬೇಕಾದ ಆವಶ್ಯಕತೆ ಇದೆ. ಇದನ್ನು ಅಲ್ಲಗಳೆಯಲಾಗುವುದಿಲ್ಲ.

ಆದಕಾರಣ ಪೂಜ್ಯ ನಾರಾಯಣ ಗುರುವರ್ಯರ ಜೀವನ ಚರಿತ್ರವನ್ನೂ, ಕೀರ್ತಿಯನ್ನೂ, ಅವರ ಮಹತ್ವವನ್ನೂ ಇತ್ಯಾದಿ ವರ್ಣಿಸಿರುವ ಲೇಖಗಳುಳ್ಳ ಅದೊಂದು ಸಂಪುಟವನ್ನು ನಿಮ್ಮ ಗುರುಭಕ್ತಿಯ ಚಿಹ್ನೆಯಾಗಿ ಪ್ರಕಟಿಸೋಣವೂ ಅದನ್ನು ಅವರ ಅಮ್ಲಾನವಾದ ನೆನಪಿಗೆ ಸಮರ್ಪಿಸೋಣವೂ ನಿಮ್ಮ ಕರ್ತವ್ಯವಾಗಿದೆ. ಆ ಕರ್ತವ್ಯವನ್ನು ನೀವು ಈಗ ಅಷ್ಟು ಭಕ್ತಿಯಿಂದ ನೆರವೇರಿಸುತ್ತಿರುವಲ್ಲಿ ನಾನು ನಿಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಇತಿ ಪ್ರೀತಿ ಪೂರ್ವಕ ಸಮಸ್ಕಾರಗಳು.

ಶುಭಂ ಭೂಯಾತ್ !

M. Govind Pai

ಶ್ರೀ ಮಂಗಳೂರು ಜಾರಪ್ಪ,
ಮಂಗಳೂರು.

[5]

ಎಂ. ಗೋವಿಂದ ಪೈ ಅವರ ಮನಸ್ಸು ಹೂವಿನಂತೆ ಕೋಮಲವಾದುದು, ಉಲ್ಲಾಸಪೂರ್ಣವಾದುದು. ಸ್ವಲ್ಪವಾದರೂ ಆಘಾತವಾದರೆ ತುಯ್ಯುವ ಅವರ ಮನೋಭೂಮಿಕೆಯನ್ನು ಬಲ್ಲವರೆ ಬಲ್ಲರು. "ಅವರೊಂದು ದೊಡ್ಡ ಮಗು" ಎಂದು ಅವರನ್ನು ಕುರಿತು ಕಾರಂತರು ಆಡಿದ್ದುಂಟು. ಸತ್ಯವಂತಿಕೆ, ಸ್ಪಷ್ಟವಾದಿತ್ವ, ನಿರ್ಭೀತಿ-ಗೋವಿಂದ ಪೈ ಅವರ ಹುಟ್ಟುಗುಣ. ಇವರ ಹಿರಿಯರು ಗಂಜಿಗೆ ತಕ್ಕಂತೆ ಮಾಡಿ ಇಟ್ಟಿರುವುದರಿಂದ ಇವರು ಯಾವ ವೃತ್ತಿಯನ್ನೂ ಕೈಗೊಳ್ಳಲಿಲ್ಲ ಎನ್ನುವುದನ್ನು ನೇರವಾಗಿಯೂ, ಸರಳವಾಗಿಯೂ, ಉಲ್ಲಸಿತಚಿತ್ತರಾಗಿಯೂ ಘೋಷಿಸುವುದು ಗೋವಿಂದ ಪೈ ಒಬ್ಬರಿಗೇ ಮೀಸಲು. ಯಾವ ವೃತ್ತಿಯನ್ನೂ ಕೈಗೊಳ್ಳದ ಪೈ ಅವರು ಜೀವನ ಪರ್ಯಂತ ನಿವೃತ್ತರಾದುದೇ ಇಲ್ಲ. ಲೇಖನ ವ್ಯವಸಾಯದಲ್ಲಿ ಪ್ರಸಿದ್ಧಿಯನ್ನು ಮಾತ್ರವಲ್ಲದೆ ರಾಷ್ಟ್ರಕವಿ ಎಂಬ ಸಿದ್ಧಿಯನ್ನೂ ಗಳಿಸಿದ ಗೋವಿಂದ ಪೈ ಅವರು ತಮ್ಮ ಸಾಹಿತ್ಯಮಿತ್ರರ, ಭಕ್ತರ ಪ್ರೀತಿವಿಶ್ವಾಸವನ್ನು ಗಳಿಸಿದರು.

ಗೋವಿಂದ ಪೈ ಅವರಿಗೆ ಅಕ್ಷರ ಮತ್ತು ಪದ ಸ್ಖಾಲಿತ್ಯವನ್ನು ಬರೆಹದಲ್ಲೂ, ಅಚ್ಚಿನಲ್ಲೂ ಕಂಡರಾಗದು. ಕಿರಿಯ ಸಾಹಿತಿಗಳು ಗೌರವ ಪೂರ್ವಕ ಕಳಿಸಿಕೊಟ್ಟ ಕೃತಿಗಳನ್ನು ಓದಿ ತಿದ್ದುವ ಭಾರವನ್ನು ಅವರು ಸಂತೋಷದಿಂದ ನಿರ್ವಹಿಸುತ್ತಿದ್ದರು. ತಮ್ಮ ಸ್ವಂತ ಲೇಖನದ ಪ್ರೂಫನ್ನಾದರೂ ತಾನು ನೋಡದೆ ಅವರಿಗೆ ಸಮಾಧಾನವಾಗುತ್ತಿರಲಿಲ್ಲ.

ಆಧುನಿಕ ಜನಾಂಗದ ತರುಣರು ಹಳೆಯ ಕಟ್ಟಳೆಗಳ ಬಗ್ಗೆ ತೋರುವ ಅಸಹನೆಗೆ ಗೋವಿಂದ ಪೈ ಅವರ ಔದಾರ್ಯಪೂರ್ಣ ತಾಳ್ಮೆಯು ಒಂದು ಪಾಠವೇ ಸರಿ. ನಿಯೋಗದ ಬಗ್ಗೆ ಒಬ್ಬ ಲೇಖಕರಿಗೆ ಬರೆಯುತ್ತ "ಅಂಥಾ ಕಟ್ಟಳೆಗಳನ್ನು ಓದಿ ತಿಳಕೊಂಡು ಸಮಾಜದ ಬೆಳವಣಿಗೆಯನ್ನು ಕುರಿತು ಅನುಭವ ಪಡೆಯಬೇಕಲ್ಲದೆ ಅವುಗಳನ್ನು ತೀರಾ ಕುತ್ಸಿತವೆಂದು ನಿಂದಿಸಬಾರದು. ಆ ಬಗ್ಗೆ ನಮ್ಮ ಹಿರಿಯರನ್ನು ಅಲ್ಲಗಳೆಯಬಾರದು" ಎಂಬ ಶಾಂತಿಸಾರವನ್ನು ಅವರು ನುಡಿದಿದ್ದಾರೆ. ಅದರಂತೆ ಅರ್ವಾಚೀನ ಯುಗದ ಅಸಡ್ಡೆ, ವೃಥಾವ್ಯಯದ ದುರಭ್ಯಾಸವನ್ನೂ ಅವರಿಗೆ ಕಂಡರಾಗದು. ಮೂರಾಣೆಯ ಕೆಲಸಕ್ಕೆ ಹನ್ನೊಂದಾಣೆಯ ಅಂಚೆಚೀಟನ್ನು ಅಂಟಿಸಿದ ಲೇಖಕರಿಗೆ ಅವರು ಎಚ್ಚರಿಕೆಯ ಮಾತನ್ನು ಹೇಳಿದ್ದಾರೆ.

ಗೋವಿಂದ ಪೈ ಅವರು ತಮ್ಮ ಜೀವನದ ಕೊನೆಯ ದಶಕದಲ್ಲಿ ಕರೆದಲ್ಲಿಗೆ ಹೋಗಿ ಸಾಹಿತ್ಯ ಪ್ರಚಾರ ಮಾಡುವ ರೂಢಿಯನ್ನು ನಿಲ್ಲಿಸಲು ಬಹಳ ಶ್ರಮಪಟ್ಟರು. ಎಷ್ಟೋ ಜನರಿಗೆ ತನ್ನ ಅನಾರೋಗ್ಯದ ಕಾರಣವನ್ನು ಮುಂದೊಡ್ಡಿ ಕ್ಷಮೆಯನ್ನು ಯಾಚಿಸುತ್ತಿದ್ದರು. ನಾನು ಬಂದರೆ ಹತ್ತು ವರ್ಷ ಹಿಂದಿನ ಲೇಖವನ್ನಷ್ಟು ಓದಿಯೇನೆಂದು ಕೆಲವರನ್ನು ಅಂಜಿಸಿದರೆ ಈ ವಿಷಯದಲ್ಲಿ ನನಗಿಂತ ಬಲ್ಲವರನ್ನು ಕರೆಯಬಾರದೆ ಎಂದು ಇನ್ನು ಕೆಲವರನ್ನು ಅಂಗಲಾಚುವರು. ಇಷ್ಟಕ್ಕೂ ಸಗ್ಗದ ಸಾಹಿತ್ಯ ಭಕ್ತರಿಗೆ "ನನ್ನ ಭಾಷಣ ಮಾತ್ರವೇ ಇರಲಿ, ಆ ಮೇಲೆ ಯಕ್ಷಗಾನ ತಾಳಮದ್ದಲೆ ಅದು, ಇದು ಏನೂ ಇರಬಾರದು," ಎಂದು ಕಟ್ಟಪ್ಪಣೆ ವಿಧಿಸಿ ಔದಾರ್ಯದ ಉರುಳಲ್ಲಿ ಸಿಲುಕಿಸಿಕೊಂಡು ದೇಹವನ್ನು ದಣಿಸಿ ಆ ಊರಿಗೆ ಪಯಣಿಸಿ ತಮ್ಮ ಸರಳ ವ್ಯಕ್ತಿತ್ವವನ್ನು ಮೆರೆಯುತ್ತಿದ್ದರು.



ಉದಾರಚರಿತರಾದ ಗೋವಿಂದ ಪೈ ಅವರಿಗೆ ನಾಡೆಲ್ಲ ನಂಟರು; ಅವರ ಕಣ್ಣಿಗೆ ಯಾವ ಬರೆಹಗಾರನೂ ಕಿರಿಯನೊಂಬುದರಿಂದ ತುಚ್ಛನಲ್ಲ. ಅವನೇನು ಬರೆದರೂ ಅದನ್ನು ಅವರು ಖಂಡಿಸಲಾರರು. ಅಕ್ಷರಪದದೋಷಗಳನ್ನು ತಿದ್ದಿಕೊಳ್ಳಿ, ಬೊಗಳಿ ಬೊಗಳಿ ರಾಗವಲ್ಲವೆ? ಎಂದು ಹಿತವಾಗಿ ಹೇಳಿ ಮುಂದಕ್ಕೆ ಇನ್ನು ಮೇಲಾದ ಕೃತಿ ಬರಲಿ ಎಂದು ಹರಸುವರು. ಬೆಳೆಯುವ ಸಸಿಗೆ ತನ್ನ ವಿಮರ್ಶೆಯ ಬಿಸಿನೀರಿನಿಂದ ಏನು ಪ್ರಯೋಜನ ಎಂದು ಅವರೊಮ್ಮೆ ಕೇಳಿದ್ದಾರೆ.

ಸಾಹಿತ್ಯಸಮ್ಮೇಳನದ ಅಧ್ಯಕ್ಷಪದವೋ, ಗ್ರಂಥಾರ್ಪಣವೋ, ಮಾನಪತ್ರದ ಅರ್ಪಣವೊ,—ತನಗೆ ಸಂಬಂಧಿಸಿದ ಗೌರವವನ್ನು ಒಲ್ಲೆನೆಂದು ಪಟ್ಟು ಹಿಡಿಯುವುದರಲ್ಲಿ ಗೋವಿಂದ ಪೈ ಅವರು ನಿಸ್ಸೀಮರು. ಮಾನಪತ್ರಗಳನ್ನು ತೂಗಾಡಿಸಲು ಈಗ ನನ್ನ ಗೋಡೆಯಲ್ಲಿ ಎಡೆಯಿಲ್ಲವೆಂದು ಇಂಥ ಸೂಚನೆಗಳನ್ನು ತೇಲಿಸಿ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದರು.

ಭಾರತದ ರಾಜಕೀಯ ಚಳವಳಿಯ ಕೊನೆಯ ಘಟ್ಟದ ಬಗ್ಗೆ ಗೋವಿಂದ ಪೈ ಅವರು ತುಂಬ ಕಸಿವಿಸಿಗೊಂಡಿದ್ದರು. ಮನಸ್ಸನ್ನು ಕಹಿಗೊಳಿಸಿಕೊಂಡಿದ್ದರು. ಭಾರತದ ವಿಭಜನೆಯನ್ನಾಗಲಿ, ಕಾಸರಗೋಡಿನ ಪೃಥಕ್ಕರಣವನ್ನಾಗಲಿ ಅವರು ಆತ್ಮ ಸಾಕ್ಷಿಯಾಗಿ ಒಪ್ಪಲಾರದಾದರು. ಅನಿವಾರ್ಯವಾಗಿಯಾದರೂ ಮಾಡಿದ ತಪ್ಪು ಒಪ್ಪಾಗದೆಂಬ ಋಜುಸ್ವಭಾವದ ಈ ಹಿರಿಯ ಜೀವಕ್ಕೆ, ಕನ್ನಡ ನಾಡಿನ ಭಾವೈಕ್ಯವನ್ನು ಹೃದ್ಗತಮಾಡಿಕೊಂಡ ಈ ಮಹಾಪುರುಷನಿಗೆ ಕರ್ನಾಟಕ ರಾಜ್ಯದ ನಿರ್ಮಾಣದಿನವು (1—11—1956) ಒಂದು ದುರ್ದಿನವೆಂದು ಕಾಣಿಸಿತು. ತಾನು ಬಾಳಿ ಬದುಕಿದ ಮಂಜೇಶ್ವರವು ಕೇರಳಕ್ಕೆ ತುತ್ತಾದನ್ನು ಕೊನೆಯುಸಿರತನಕವೂ ಅವರು ಮಾನಸಿಕವಾಗಿ ವಿರೋಧಿಸಿದರು. ಮಂಜೇಶ್ವರ S. Kanara, Mysore State ಎಂದು ಬರೆದಾದರೂ ತಮ್ಮ ಛಲವನ್ನು ಸಾಧಿಸಿದರು.

ಮಂಜೇಶ್ವರ,
ಜೂನ್ 9, 52

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಮರಳಿ ಕಳುಹಿಸಿಕೊಟ್ಟ ನನ್ನ ಭಾಷಣದ ಹಸ್ತಪ್ರತಿ ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ತಾವು ಅದಕ್ಕೆ ಹನ್ನೊಂದಾಣೆಯ ಟಪ್ಪಾಲು ಚೀಟುಗಳನ್ನು ಅಂಟಿಸಿ ವೃಥಾ ಹಣವನ್ನು ವೆಚ್ಚಮಾಡಿದಿರಿ. ಅದನ್ನು ಅಷ್ಟು ಭದ್ರವಾಗಿ ಕಳುಹಿಸಬೇಕಾದರೆ, ಬರೇ ಮೂರು ಆಣೆಗಳ ಚೀಟು ಸಾಕಿತ್ತು – ಒಂದಾಣೆಯ ಚೀಟು Book Post ಗೆ ಮತ್ತು ಎರಡಾಣೆಯ ಚೀಟು Express Delivery ಗೆ-ಇನ್ನಾದರೂ ನೆನಪಿರಲಿ. ನಾನದನ್ನು ಇವತ್ತು ಧಾರವಾಡಕ್ಕೆ "ಜಯಕರ್ನಾಟಕ"ದ ಆಫೀಸಿಗೆ ಕಳುಹಿಸಿಕೊಟ್ಟಿರುತ್ತೇನೆ. ಹಾಗೂ ಆ ಭಾಷಣದ 10–15 ಹೆಚ್ಚಿಗೆ ಪ್ರತಿಗಳನ್ನೂ ಆ ಸಂಚಿಕೆಯ ಒಂದು ಹೆಚ್ಚಿನ ಪ್ರತಿಯನ್ನೂ ಕಳುಹಿಸಬೇಕೆಂದು ಬರೆದಿರುತ್ತೇನೆ. ಆ ಹೆಚ್ಚಿನ ಸಂಚಿಕೆಗಳ ಪ್ರತಿ ತಮ್ಮ ಬಗ್ಗೆ.



ಇತಿ ನಮಸ್ಕಾರ.
M. Govind Pai

ಮುನಿಪಾಲರಾಜು,
ತಿಂಗಳಾಯರ ಕಾಂಪೌಂಡು, ಮಂಗಳೂರು–2.

[6]

ಮಂಜೇಶ್ವರ,
ಜನವರಿ 21, 53

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಕಾರ್ಡು ನಿನ್ನೆ ಮುಟ್ಟಿತು. ನಾನು ಈಗ ಎಲ್ಲಿಗೂ ಹೋಗುವುದಿಲ್ಲ ಯಾವ ಬಗೆಯ ಹೊಣೆಗಾರಿಕೆಯ ಕೆಲಸವನ್ನೂ ಒಪ್ಪಿಕೊಳ್ಳುವುದಿಲ್ಲ. ಆ ಕಾರಣ ನನ್ನನ್ನು ದಯಮಾಡಿ ಕ್ಷಮಿಸಬೇಕೆಂದು ಅಪೇಕ್ಷಿಸುತ್ತೇನೆ. ಅಥವಾ ನಾನು ಮುದ್ದಣನನ್ನು ಅಂದರೆ ನಂದಳಿಕೆಯ ಲಕ್ಷ್ಮೀನಾರಣಪ್ಪರನ್ನು ಸ್ವತ: ಕಂಡವನಲ್ಲವಾದುದರಿಂದ ಒಂದು ವೇಳೆ ಬಂದರೂ ನಾನು ಓದುವುದೆಂದರೆ ನೂತನ ಪ್ರೌಢ ಮಾಲಿಕೆಯ (**Basel Mission Book Depot, Mangalore; edited by Sri Damodar Baliga**) IV ಪೋರ್ಮಿನವರ ಪಠ್ಯಪುಸ್ತಕದಲ್ಲಿ (ಪು. 57-67)ಪ್ರಕಟವಾದ ಮಹಾಕವಿ ನಂದಳಿಕೆ ಲಕ್ಷ್ಮೀನಾರಣಪ್ಪ ಎಂಬ ಈ ಲೇಖನವನ್ನೇ. ಅದಕ್ಕಿಂತ ಅವರನ್ನು ಕುರಿತು ನಾನರಿಯೆ. ಆದ ಕಾರಣ ಅವರನ್ನು ಕಂಡು ಮಾತನಾಡಬಲ್ಲ ಹುರುಳಿ ಭೀಮರಾಯರನ್ನು ಅಧ್ಯಕ್ಷರಾಗಿಸಿದರೆ ಎಷ್ಟೋ ಲೇಸು. ದಯಮಾಡಿ ನನ್ನನ್ನು ಕ್ಷಮಿಸಿರಿ. ರತ್ನಾವತೀ ಕಲ್ಯಾಣ, ಮತ್ತು ಕುಮಾರ ವಿಜಯವನ್ನು ರಚಿಸಿದುದು 1889 ಮತ್ತು 1892ರ ನಡುವೆ ಎಂದು ನನ್ನ ನೆನಪು. ಅವುಗಳು ಮರಳಿ ಅಚ್ಚಾಗಿ ಪ್ರತಿಗಳು ಪೇಟೆಯಲ್ಲಿ ಕ್ರಯಕ್ಕೆ ಸಿಗುತ್ತವೆ. ಅದರಲ್ಲಿ ನೋಡಿ, ಮೊದಲನೆಯ ಆ ಪ್ರತಿ ಯಾವ ಯಾವ ಇಸವಿಗಳಲ್ಲಿ ಅಚ್ಚಾಯಿತೆಂದು.

ಇತಿ ನಮಸ್ಕಾರ
M. Govind Pai

ಮುನಿಪಾಲ ರಾಜು,
ತಿಂಗಳಾಯರ ಕಂಪೌಂಡು, ಮಂಗಳೂರು–2.

[7]

ಮಂಜೇಶ್ವರ,
ನವಂಬರ 6, 53

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಮೂರನೆಯ ತಾರೀಕಿನ ಪತ್ರ ಮುಟ್ಟಿತು. ತಾವು ಪ್ರೀತಿಪೂರ್ವಕವಾಗಿ ಇತ್ತಿರುವ ಆಮಂತ್ರಣದ ಬಗ್ಗೆ ತುಂಬಾ ಕೃತಜ್ಞನಾಗಿರುತ್ತೇನೆ.

ಆದರೆ ಮಾಡಲೇನು? ನನ್ನ ವಯಸ್ಸಿನ ಹಾಗೂ ಅದರ ಆನುಷಂಗಿಕವಾದ ಆಯಾ ತ್ರಾಸಗಳ ಕಾರಣದಿಂದ ಇನ್ನು ಎಲ್ಲಿಗೂ ಹೋಗುವುದೂ ಬೇಡ, ಯಾವ ಕರೆತವನ್ನೂ ಒಪ್ಪಿಕೊಳ್ಳುವುದೂ ಬೇಡ ಎಂದು ನಿಶ್ಚಯಿಸಿರುತ್ತೇನೆ. ಅವರಲ್ಲೂ ಬಹುಜನೀನ (**Public**)ವಾದ ಸಭೆಗಳಲ್ಲಿ ಭಾಗಿಯಾದರೆ ಕೆಲಕೆಲ ತಾಸುಗಳವರೆಗೆ ಉದ್ದಕ್ಕೆ ಕೂತಲ್ಲೇ ಕೂರಬೇಕಾಗುವ ದಂಡನೆಯನ್ನು ಅನುಭವಿಸಲಿಕ್ಕೆ ಇರುವುದರಿಂದ, ಅವುಗಳ ಸಂಬಂಧವನ್ನೇ ದೂರಮಾಡಬೇಕಾಗಿದೆ. ತೀರ ಹೀಗಾಗಬೇಕಾಗಿದೆ. ಆದ

ಕಾರಣ ತಾವೂ ತಮ್ಮ ವಿದ್ಯಾರ್ಥಿ ಬಂಧುಗಳೂ ನನ್ನನ್ನು ದಯಮಾಡಿ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ಮತ್ತು ಇದೊಂದು ಮಾತನ್ನು ಹೇಳುತ್ತೇನೆ. ಕಳೆದ 1945ರಲ್ಲಿ ಉಡುಪಿಯಲ್ಲಿ ಶ್ರೀ ಶ್ರೀ ಮುದವೀಡು ಕೃಷ್ಣರಾಯರಿಂದ ಮುದ್ದಣನ ಚಿತ್ರವನ್ನು (Water Colour) ಅನಾವರಣ ಮಾಡಿಸುವ ಸಂದರ್ಭದಲ್ಲಿ ಮುದ್ದಣನನ್ನು ಕುರಿತು ಮಾತನಾಡಬೇಕೆಂದು ನನಗೆ ಆಮಂತ್ರಣ ಬಂದಿದ್ದಾಗ, ಆಗ್ಗೆ ನಾನು ಕೆಲದಿನಗಳ ಅಸೌಖ್ಯದಿಂದ ಮಲಗಿದ್ದು ಅಲ್ಲಿಗೆ ಹೋಗಲಾರದೆ ನನ್ನ ಭಾಷಣವನ್ನು ಬರೆದು ಕಳುಹಿಸಿದ್ದೆ. ಅದನ್ನು ನನ್ನ ಮಿತ್ರವರ್ಯರಾದ ಶ್ರೀ ಶ್ರೀ ರಾಜಗೋಪಾಲಕೃಷ್ಣರಾಯರು ನನ್ನ ಪರವಾಗಿ ಓದಿದರಂತೆ. ಆ ಕೂಡಲೇ ಬೆಂಗಳೂರಿನ "ಕನ್ನಡ ನುಡಿ"ಯಲ್ಲಿ ಪ್ರಕಟವಾದ ಆ ಭಾಷಣವೂ ಆ ಮೇಲೆ 1949ರಲ್ಲಿ ಮಂಗಳೂರಿನ Basel Mission Book Depotನವರ ನೂತನ ಪ್ರೌಢ ಮಾಲಿಕೆಯಲ್ಲಿ (IV ಫೋರ್ಮಿನವರಿಗೆ ಪುಟ 57–67) ಪ್ರಕಟವಾಗಿದೆ. ಅದಕ್ಕಿನ್ನು ಒಂದಕ್ಷರವನ್ನಾದರೂ ಕೂಡಿಸಲಿಕ್ಕೆ ನಾನರಿಯೆ. ಹೀಗಾಗಿ ಒಂದು ವೇಳೆ ನನಗೆ ತಮ್ಮಲ್ಲಿಗೆ ಈಗ ಹೋಗಲಿಕ್ಕೆ ಆಗುತ್ತಿದ್ದರೂ ನಾನು ಆ ಪುಸ್ತಕ ಹಿಡಿದು ಅದನ್ನೇ ಓದಬೇಕಾಗಿತ್ತು. ಅತಏವ ನೀವು ನನ್ನನ್ನು ತಮ್ಮಲ್ಲಿಗೆ ಬರಮಾಡಿಸಿಕೊಳ್ಳುವುದರಿಂದ ತಮಗೇನೂ ವಿಶೇಷ ಲಾಭವಾಗುವಂತಿಲ್ಲ. ತಾವು ಆಚರಿಸಲಿಕ್ಕೆ ಕೈಗೊಂಡಿರುವ ಮುದ್ದಣ ಜಯಂತಿಯು ಹಾಗೂ ಸಾಹಿತ್ಯೋತ್ಸವದ ಸಮಾರಂಭಗಳು ಶ್ರೀ ದೇವರ ದಯೆಯಿಂದ ತುಂಬಾ ಯಶಸ್ವಿಯಾಗಿ ಜರುಗಲೆಂದು ಹಾರೈಸುತ್ತೇನೆ.

ಕು. ಶಿ. ಹರಿದಾಸ ಭಟ್ಟ,
ಕುಂಜಿಬೆಟ್ಟು, ಉಡುಪಿ.

ಇತಿ ನಮಸ್ಕಾರ.
M. Govind Pai

[8]

ಮಂಜೇಶ್ವರ,
21–5–54.

ನೀವು ಪ್ರೀತಿಪೂರ್ವಕ ಕಳುಹಿಸಿರುವ ಭಗವಾನ್ ಬುದ್ಧ ಎಂಬ ಪುಸ್ತಕದ ಎರಡು ಪ್ರತಿಗಳು ನನಗೆ ಮುಟ್ಟಿವೆ. ಆ ಬಗ್ಗೆ ತುಂಬಾ ಧನ್ಯವಾದಗಳು. ಅಚ್ಚಿನ ಕೊರತೆಗಳು ಅಲ್ಲಲ್ಲಿವೆ. ಉದಾ: ನಾನು ಭಾಷಣ ಮಾಡಿದ್ದು 1954ರಲ್ಲಿ (ಮೊನ್ನೆ) ಅಲ್ಲ, ಕಳೆದ ವರ್ಷ 1953ರಲ್ಲಿ. (ನಮ್ಮ ಮಾತು) "ನಮೋ ಸತ್ಯ" ಅಲ್ಲ, "ಆರಹತೋ" ಅಲ್ಲ. "ಸಂಬದ್ಧಸ್ಯ" ಅಲ್ಲ-"ನಮೋ ತಸ್ಯ; "ಅರಹತೋ" ಮತ್ತು "ಸಂಬುದ್ಧಸ್ಸ"(ಪು 21) ಇತ್ಯಾದಿ. ಒಂದೇ ಒಂದು ದಿನದ ಅವಕಾಶ ಮಾಡಿ ಕೊನೆಯ ಪ್ರೂಫನ್ನು ನನ್ನ ತಿದ್ದುಗೆಯ ಬಗ್ಗೆ ಇಲ್ಲಿ ಕಳುಹಿಸುತ್ತಿದ್ದರೆ, ಪುಸ್ತಕ ಹೀಗೆ ಅರೂಪವಾಗುತ್ತಿರಲಿಲ್ಲ. ಆದರೆ ಆಗಿ ಹೋದುದಕ್ಕೆ ಬೇಸರಿಸಿ ಫಲವಿಲ್ಲ,

ಮುನಿಪಾಲರಾಜು,
ತಿಂಗಳಾಯರ ಕಾಂಪೌಂಡು,
ಮಂಗಳೂರು-2.

ಇತಿ ನಮಸ್ಕಾರ.
M. Govind Pai

[9]

ಮಂಜೇಶ್ವರ.
23–5–55.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 17ನೆಯ ತಾರೀಕಿನ ಕಾರ್ಡು ಮೊನ್ನೆ ಮುಟ್ಟಿ ತಾವು ಅಪೇಕ್ಷಿಸಿರುವ ಮೇರೆಗೆ ಒಂದು ಕವನವನ್ನು ಇದರ ಒಳಗಡೆಯಲ್ಲಿ ಬರೆದು ಕಳುಹಿಸಿರುತ್ತೇನೆ. ನಾವು ಕೈಕೊಂಡ ಶ್ರೀ ತಿರುಪತಿಯ ಪ್ರಯಾಣ ಸುಖಕರವಾಗಿಯೇ ಇತ್ತು. ಆದರೆ ಇಲ್ಲಿಂದ ಹೊರಟಂದಿನಿಂದ ಮರು ಇಲ್ಲಿಗೆ ಬರುವವರೆಗೂ ಬಿಸಿಲಿನ ಬೇಗೆ ಮಾತ್ರ ಶಾನೆ ಇತ್ತು. ನನಗೆ ಆ ಕಾರಣ ಕೊಂಚ ದಣುವಾಗಿತ್ತು. ಅಲ್ಲಿಗೆ ಮುಟ್ಟಿದ 4–5 ದಿನಗಳಲ್ಲಿ ಆರಿ ಈಗ ನೆಮ್ಮದಿಯಾಗಿದ್ದೇನೆ. ಶ್ರೀ ದೇವರ ದಯೆಯಿಂದ ತಮ್ಮಲ್ಲಿ ಆಗತಕ್ಕ ಈ ಸಾರಿಯ ಸಮ್ಮೇಲನದ ಅಧಿವೇಶನದ ಹೊತ್ತು ನಮ್ಮಲ್ಲಿ ಮಳೆ ಹುಯ್ಯಲು ತೊಡಗುವ ಹೊತ್ತು ಸೂಜಿಮುತ್ತಾಗಿ ಒಂದೇ ಆಗುತ್ತದೆ. ಜೂನಿನಲ್ಲಿ ಇಡಿಯ ತಿಂಗಳೆಂಬಂತೆ ನಮಗೆ ಮಳೆಯ ಸುರಿತ. ಹೊರ ಹೊಮ್ಮಲಿಕ್ಕೆ ಈ ಪ್ರಾಯದಲ್ಲಿ ಮನಸ್ಸು ಅಳುಕುತ್ತದೆ. ಆದಕಾರಣ ಪ್ರಾಯಶ: ಮೈಸೂರಿಗೆ ಹೋಗಲಾದೀತೆಂದು ಎಣಿಸುವುದಿಲ್ಲ. ಮತ್ತು ಈಶ್ವರೇಚ್ಛೆ. ಹೇಗೂ ಶ್ರೀ ದೇವರು ಎಣಿಸಿದಂತೆ ಆಗುತ್ತದೆ. ಶ್ರೀ ದೇವರು ತಮ್ಮನ್ನು ಸದಾ ಚೆನ್ನಾಗಿರಿಸಲಿ.

ಕೆ. ರಾಮಕೃಷ್ಣ ಸೋಮಯಾಜಿ
ಕೃಷ್ಣರಾಜನಗರ.

ಇತಿ ನಮಸ್ಕಾರ,
M. Govind Pai

[10]

ಮಂಜೇಶ್ವರ,
4-9-55.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಅಕ್ಕರೆಯ ಬಂಧುವರ್ಯರೂ, ನನ್ನ ಮಾನ್ಯ ಮಿತ್ರವರ್ಯರೂ ಆದ ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯವರು ಮೊನ್ನೆ 31ನೆಯ ತಾರೀಕಿನಂದು ಬುಧವಾರ ರಾತ್ರಿ ಪ ರಂಧಾಮವೈದಿದರೆಂದು ನಿನ್ನೆ ಸಂಜೆ ಇಲ್ಲಿ ಕೈಸೇರಿದ ಮಂಗಳೂರಿನ "ಸಂಧ್ಯಾದೀಪ" ಎಂಬ ಪತ್ರಿಕೆಯಲ್ಲಿ ಕಂಡು ವಿಷಣ್ಣನಾದೆ.........ನನಗೆ ಅವರಲ್ಲಿ, ಅವರ ಸೌಜನ್ಯದಲ್ಲಿ, ಅವರ ಔದಾರ್ಯದಲ್ಲಿ ಅಷ್ಟು ಗೌರವಾದರಗಳಿದ್ದುವು......... ॥ ಓಂ ಶಾಂತಿ: ಶಾಂತಿ: ಶಾಂತಿ: ॥

ಕೆನರಾ ಹ್ಯಾಸ್ಕೂಲನ್ನು ಅಸ್ತಿತ್ವಕ್ಕೆ ತಂದ ಆದರ್ಶ ಪುರುಷರಾದ ಶ್ರೀ ಶ್ರೀ ಅಮ್ಮೆಂಬಳ ಸುಬ್ರಾಯ ಪೈಯವರು 1909ರಲ್ಲಿ ವೈಕುಂಠವಾಸಿಯರಾದ ಬಳಿಕ ತಮ್ಮ ಅಣ್ಣ ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯುವರನ್ನು ಬಿಟ್ಟು ನಮ್ಮ ನಾಡಿನಲ್ಲಿ ಬೇರೊಬ್ಬ ಆದರ್ಶ ಪುರುಷರನ್ನು ನಾನು ಕಂಡಿಲ್ಲ......ಅವರ ಸೌಶೀಲ್ಯವನ್ನು ಹೊಗಳಲಿಕ್ಕೆ ಒಂದು ಬಾಯಿ ಸಾಲದು. ಅವರ ಸತ್ಕಾರ್ಯಗಳನ್ನು ಎಣಿಸಲಿಕ್ಕೆ ಎರಡು ಕೈಗಳು ಸಾಲವು. ಅವರನ್ನು ಕೊಂಡಾಡಿದಷ್ಟು ಮಾತುಗಳೇ ಸೋಲುತ್ತವಲ್ಲದೆ ಅವರ ಸದ್ಗುಣಗಳು ಬಡವಾಗುವಂತಿಲ್ಲ.

ಅವರು ಅಲ್ಲಿಂದ ಇಲ್ಲಿವರೆಗೂ ಏಕಾಗ್ರಚಿತ್ತದಿಂದ ಆರಾಧಿಸಿದ ಆ ಜಿನನಾಥನೂ ಆ ಮಂಜುನಾಥನೂ ಅವರು ಇಬ್ಬರಲ್ಲ, ನಿಜವಾಗಿ ಅನನ್ಯರಾದರೂ ಲೋಕವಾಡಿಕೆಯಲ್ಲಿ ಹೇಗೂ ಅನ್ಯಾನ್ಯರೆಂದು ಭಾವಿಸಲ್ಪಡುತ್ತಾರಷ್ಟೆ? ಹೆಗ್ಗಡೆಯುವರ ಆತ್ಮಕ್ಕೆ ಉತ್ತರೋತ್ತರ ಸದ್ಗತಿಯನ್ನಿತ್ತು ಕೈವಲ್ಯವನ್ನು ಕೈಗೊಳಿಸಲಿ ಎಂದು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

॥ ಓಂ ಶಾಂತಿ: ಶಾಂತಿ: ಶಾಂತಿ: ॥

ಇತಿ ನಮಸ್ಕಾರ.
ತಮ್ಮ ಸಂತಾಪದಲ್ಲಿ ಭಾಗಿ.
M. Govind Pai

ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್.,
ಅಡ್ವೋಕೇಟ್,
"ವೀರಭವನ"
ಮಂಗಳೂರು-2.

[11]

ಮಂಜೇಶ್ವರ,
1-11-56.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 16ನೆಯ ತಾರೀಕಿನ ಕಾರ್ಡು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನೊಡೋಣ, ಆಗ್ಗೆ ಆರೋಗ್ಯ ಚೆನ್ನಾಗಿದ್ದರೆ ಮದ್ವಣ ಜಯಂತಿಗೆ ಸರಿಯಾಗಿ ನಿಮ್ಮಲ್ಲಿಗೆ ಬಂದು ಹೋಗುವೆ. ಇಂದು ನಮ್ಮ ಹಬ್ಬದ ದಿನ. ಆದರೆ ಇವತ್ತು ನಮ್ಮ ತಾಯಿ ಜಿಲ್ಲೆಯ ಜೀವಮಾನದಲ್ಲಿ ಅದೊಂದು ಘೋರವಾದ ಮಹಾ ದುರ್ದಿನ!!! ಒಂದು ಕಡೆ ನಮ್ಮ ಜಿಲ್ಲೆಯಲ್ಲಿ ಎಷ್ಟೋ ನೂರು ವರ್ಷಗಳಿಂದ ಒಳಪಟ್ಟಿದ್ದ ನಮ್ಮ ಕಾಸರಗೋಡು ತಾಲೂಕು ಕೇರಳಕ್ಕೆ ಆಹುತಿಯಾಯಿತು. ಮತ್ತೊಂದು ಕಡೆ ನಮ್ಮ ಜಿಲ್ಲೆಯ ಮಿಕ್ಕಪಾಲು ಏಕಮಾತ್ರವಾಗಿ ಸುಸಂಗತವೂ, ಮಂಗಲವೂ ಆಗಿರುವ "ಕರ್ಣಾಟಕ ಎಂಬ ಹೆಸರಿನ ಪ್ರಾಂತದಲ್ಲಿಲ್ಲ. ಮಹಾ ಮೈಸೂರೋ, ವಿಸ್ತೃತ ಮೈಸೂರೋ, ವಿಶಾಲ ಮೈಸೂರೋ, ಅಥವಾ ಮತ್ತೇನೋ ವಿಲಕ್ಷಣವಾದ ಹೆಸರುಳ್ಳ ಪ್ರಾಂತದಲ್ಲಿ ನುಗ್ಗಿಸಲ್ಪಟ್ಟಿತು!......ದೇವರು ಇನ್ನೂ ಏನೇನೆಲ್ಲ ದುರವಸ್ಥೆಗಳನ್ನು ತಂದೊಡ್ಡುವನೋ......

ಇತಿ ನಮಸ್ಕಾರ,
M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲೆಕೆರೆ ಬ್ರಹ್ಮಾವರ.

[12]

ಮಂಜೇಶ್ವರ,
8-1-57.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 7ನೆಯ ತಾರೀಕಿನ ಕಾರ್ಡು ಮುಟ್ಟಿದೆ. ನಾನು ಕೆಲಕಾಲದಿಂದೀಚೆಗೆ ಅನಾರೋಗ್ಯದಲ್ಲಿದ್ದು, ಅದರಿಂದೀಗ ಮೇಲಕ್ಕೆ ಬರುತ್ತಿರುವೆನಷ್ಟೆ. ಆದರೆ ಈಗ ತಮ್ಮಲ್ಲಿಗೆ ಹೋಗಿ ಬರಬಹುದೆಂದು ನನಗೆ ತೋರು

ವುದಾದರೂ ನನ್ನ ತಮ್ಮಂದಿರ ಮಕ್ಕಳು ನನಗೆ ಸವ್ಯಕ್ಕಾದರೂ ಎಲ್ಲಿಗೂ ಪ್ರಯಾಣ ಮಾಡಬಾರದೆಂದು ನಿರ್ಬಂಧಿಸುತ್ತಾರೆ. ಅವರನ್ನು ಸಮಜಾಯಿಸಿ ಬರಲಿಕ್ಕೆ ಪ್ರಯತ್ನಿಸುತ್ತೇನೆ. ಎಷ್ಟು ಮಾತ್ರಕ್ಕೂ ಬರಲಿಕ್ಕಾಗದಿದ್ದರೆ ನನ್ನ ಲೇಖನವನ್ನಾದರೂ ತಮಗೆ ಬರೆದು ಕಳುಹಿಸುತ್ತೇನೆ; ತಾವದನ್ನು ಬೇಕಾದರೆ ಅಲ್ಲಿ ಓದಿಸಬಹುದು. ಈ ಮಧ್ಯೆ ನನಗೆ ಈ ಕೊಂಚ ಮಾಹಿತಿಯನ್ನು ತಿಳಕೊಳ್ಳ ಬೇಕಾಗಿದೆ. (1) ಮಂಗಳೂರಿಂದ ಹೊಳೆ ದಾಟದೆ ಬ್ರಹ್ಮಾವರಕ್ಕೆ ಹೋಗಿಬರಲಿಕ್ಕೆ ಸಾಧ್ಯವಿದೆಯೋ?, ಹಾಗಾದರೆ ಯಾವ ದಾರಿಯಾಗಿ ಹೋಗಬೇಕು? ಬೆಳಿಗ್ಗೆ 5 ಯಾ 6 ಗಂಟೆಗೆ ಹಾಗೆ ದಾರಿಯಾಗಿ ಮಂಗಳೂರಿಂದ ಹೊರಟುಹೋಗುವ ಬಸ್ಸು ಇದೆಯೋ? ಟಿಕೇಟಿನ ದರ ಎಷ್ಟು? (ನನಗೆ ಎಲ್ಲಾ ವಿವರ ತಿಳಿಯ ಬೇಕಾದುದರಿಂದ ಟಿಕೇಟಿನ ದರವನ್ನೂ ಕೂಡಾ ವಿಚಾರಿಸಿರುವೆನಷ್ಟೇ) (2) ಮಂಗಳೂರಿನಿಂದ ಬೆಳಿಗ್ಗೆ 5 ಯಾ 6 ಗಂಟೆಗೆ ಹೊರಟರೆ ತಮ್ಮಲ್ಲಿಯ ಭಾಷಣದ ಕೆಲಸ ತೀರಿಸಿ ಅದೇ ರಾತ್ರಿ 8–9 ಗಂಟೆಯೊಳಗೆ ಮಂಗಳೂರಿಗೆ ಬಂದು ಮುಟ್ಟಬಹುದೋ? (3) ಬ್ರಹ್ಮಾವರದಲ್ಲಿ ತತ್ಕಾಲಕ್ಕಾದರೂ ತಂಗಿಕೊಳ್ಳುವುದಾದರೆ ಯಾರಲ್ಲಿ? ಡಾ॥ ಶ್ರೀ ರಾಘವೇಂದ್ರ ಪೈಯವರು ಅಲ್ಲಿ ಈಗಲೂ ಇದ್ದಾರೋ? ನನ್ನ ಭಾಷಣದ ದಿನ ಬೇರೆ ಯಾವ ಕೆಲಸವನ್ನೂ ಇಟ್ಟುಕೊಳ್ಳಬಾರದು-ಯಕ್ಷಗಾನ ತಾಳಮದ್ದಳೆ. ಅದು ಇದು, ಏನೂ ಇರಬಾರದು. ನನ್ನ ಭಾಷಣವನ್ನು ಹೊತ್ತಿಂತೇ ಮುಗಿಸಿ ನನ್ನನ್ನು ತಮ್ಮಲ್ಲಿಂದ ಹೊರಡಿಸಬೇಕು. ತಾರೀಕಿನ ಮೇರೆಗೆ 24ನೆಯ ಜನವರಿ ಮುದ್ದಣನ ಜನ್ಮದಿನವಾದರೂ ನನ್ನ ಭಾಷಣವನ್ನು ನಾಡಮ ಜನವರಿ 28ನೆಯ ತಾರೀಕು ಆದಿತ್ಯವಾರಕ್ಕೆ ಹಾಕಬಹುದೋ? ಎಂದು ವಿಚಾರಿಸಿ ತಿಳಿಸಿರಿ. ಮತ್ತೊಂದು ಮಾತು-ನನ್ನ ತಮ್ಮನೊಬ್ಬನ ಹಿರೇಮಗ ಮಂಗಳೂರಲ್ಲಿ ಎಡ್ವೋಕೇಟ್. ಅವನಿಗೆ (Car) ಕಾರು ಉಂಟು. ಅದೀಗ ರಿಪೇರಿಗೆ (ದುರಸ್ತಿಗೆ) ಹೋಗಿದೆ. ನಾನು ಹೊರಡುವಷ್ಟರಲ್ಲಿ ಅದು ದುರಸ್ತಾಗಿ ಬಂದರೆ ನಾನು ಅದರಲ್ಲಿ ತಮ್ಮಲ್ಲಿಗೆ ಬಂದು ಹೋಗುವೆನು. ಇಲ್ಲವೇ ಬಸ್ಸಿನಲ್ಲಿ ಬರುವೆನು. ಮಂಗಳೂರಿನಿಂದ ಬ್ರಹ್ಮಾವರಕ್ಕೆ ಉಡುಪಿಯ ಶ್ರೀ U. S. Nayakರ (ಉಪೇಂದ್ರ ನಾಯಕರ) Hanuman Bus Company ಸರ್ವಿಸ್ ಉಂಟೋ ಎಂದು ತಿಳಿಸಿರಿ. ತೊಂದರೆ ಕೊಡಬೇಕಾದ ಬಗ್ಗೆ ಕ್ಷಮಿಸುವುದು. ಉಪಕಾರ.

ಇತಿ ನಮಸ್ಕಾರ.

M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲಿಕೆರೆ ಬ್ರಹ್ಮಾವರ.

[13]

ಮಂಜೇಶ್ವರ,
24–9–58.

ಗೋವಿಂದ ಪೈ ಮಾಡುವ ನಮಸ್ಕಾರ. ಕ್ಷೇಮ. ತಮ್ಮ 22ನೆಯ ತಾರೀಕಿನ ಪತ್ರ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನನಗೀಗ ಕೆಲಕಾಲ ನಡೆಯಲಿಕ್ಕೆ ಕಾಲೆತ್ತುವುದೇ ಉಬ್ಬಸ ಬಂದಂತಾಗಿ ಏದಬೇಕಾಗುತ್ತದೆ. ಅದಾಗಿ ನಾನು ಆಗಾಗ ಮಂಗಳೂರಿಗೆ ಹೋಗಿ ಬರುತ್ತಿದ್ದ ಪ್ರಯಾಣಗಳನ್ನೆಲ್ಲ ತೀರ ನಿಲ್ಲಿಸಿರುವೆನಷ್ಟೇ ಅಲ್ಲ, ಇಲ್ಲಿಯೆ ಊರಲ್ಲಿ ಕೂಡ ಈಗೀಗ ಮನೆಬಿಟ್ಟು ಹೊರಗೆ ಹೋಗುತ್ತಿಲ್ಲ. ಮನೆಯಲ್ಲೇ ಇದ್ದು ವಿಶ್ರಾಂತಿ ತಗೊಳ್ಳುತ್ತಿದ್ದರೆ ಶ್ರೀ ದೇವರ ದಯೆಯಿಂದ ಈ ಅನಾರೋಗ್ಯವೂ ಕ್ರಮಶ: ವಾಸಿಯಾದೀತೆಂದಿರುವ ಡಾಕ್ತರರ ಹೇಳಿಕೆಯ ಪ್ರಕಾರ ಮನೆಯಿಂದ ಹೊರಗೆ ಹೋಗದೆ ಇದ್ದೇನೆ.

ಈ ಕಾರಣ ತಾವು ಅತ್ಯಂತ ಪ್ರೀತಿಪುರಸ್ಸರವಾಗಿ ನೀಡಿರುವ ಆಮಂತ್ರಣವನ್ನು ತಲೆಬಾಗಿ ಕೂಡಲೇ ಕೈಕೊಳ್ಳಲಾರದ ಬಗ್ಗೆ ನನ್ನನ್ನು ದಯಮಾಡಿ ಕ್ಷಮಿಸಬೇಕಾಗಿ ಪ್ರಾರ್ಥಿಸುತ್ತೇನೆ. ಬಹಳೇ ಉಪಕಾರ.

ತಮ್ಮ ಪತ್ರದಲ್ಲಿ ತಾವು ಕೊಂಚ ಮುಂದೆ ಬರೆದಿರುವ ಈ ಮಾತುಗಳಾದರೆ ಆಶಾದಾಯಕವಾಗಿವೆ - "ನಾಡ ಹಬ್ಬಕ್ಕೆ ತಾವು ಬಂದರೆ ನಮಗೆ ತುಂಬಾ ಆನಂದವಾಗುವುದು. ಇಲ್ಲವಾದರೆ ತಮಗೆ ಅನುಕೂಲವಾದ ಒಂದು ದಿನ ಎಂದಾದರೂ ಅಡ್ಡಿಯಿಲ್ಲ, ತಾವು ತಿಳಿಸಬೇಕು......ಅಂತೂ ತಾವು ಬ್ರಹ್ಮಾವರಕ್ಕೆ ಒಮ್ಮೆ ಬರಲೇ ಬೇಕು." ಈ ತಮ್ಮ ಪ್ರೀತಿಪೂರ್ವಕವಾದ ಮಾತುಗಳಿಗೆ ಪ್ರತ್ಯುತ್ತರವಾಗಿ ಶ್ರೀ ದೇವರಲ್ಲಿ ಸರ್ವಭಾರವಿಕ್ಕಿ ಹೇಳುವುದೇನಂದರೆ. ಆತನು ನನ್ನನ್ನು ಈ ಅಸೌಖ್ಯದಿಂದ ಮೇಲೆತ್ತಿ ಉಳಗೊಡಿಸಿದರೆ, ಕೊಂಚ ಕ್ಷೇಮದೋರುತ್ತಲೆ ನಾನು ಬಂದೇ ಬರುವೆ. ಒಂದು ದಿನಕ್ಕಾದರೂ ಬಂದುಹೋಗುವೆ ಎಂದು. ಶ್ರೀ ದೇವರು ಹಾಗೆ ನಡೆಸಲಿ! ಈ ಒಮ್ಮೆ ಹೇಗೂ ನನ್ನನ್ನು ದಯಮಾಡಿ ಕ್ಷಮಿಸಿರಿ.

ಮತ್ತೊಂದು ಮಾತು-ಕಳೆದ 1950ನೆಯ ಇಸವಿಯಲ್ಲಿ ನನ್ನನ್ನು ಮೈಸೂರು ಬೆಂಗಳೂರು ಹಾಗೂ ಕೆಲಕೆಲವು ಊರುಗಳಿಗೆ ಕರೆಸಿಕೊಂಡಾಗ ಅಲ್ಲಿ ಹೋದ ಹೋದಲ್ಲೆಲ್ಲ ಕೊಟ್ಟ ಮಾನ ಪತ್ರಗಳೂ ಇಲ್ಲಿಯೇ ಮಂಗಳೂರು ಮುಂತಾದ ಊರುಗಳಲ್ಲಿ ಕೊಟ್ಟ ಮಿಕ್ಕವೂ ನಮ್ಮ ಮನೆಯಲ್ಲೆಲ್ಲ ಗೋಡೆ ಗೋಡೆಗಳಲ್ಲೆಲ್ಲ ತೂಗುತ್ತವೆ. ಇನ್ನು ತೂಗಿಸುವೆನೆಂದರೆ ಎಡೆ ಇಲ್ಲ! ಆದ ಕಾರಣವೇ ಅಲ್ಲ, ಮಾನಪತ್ರ ಎಂಬ ಹಳೆಯ ಉಪಚಾರವನ್ನು ತೀರ ವಿಸರ್ಜಿಸಿ, ಆ ಬಗ್ಗೆ ನನಗೆ ತಾವು ದೃಢವಾದ ನಂಬುಗೆಯನ್ನು ಮುಂ

ವಾಗಿ ಇತ್ತಲ್ಲದೆ ತಮ್ಮ ಕಡೆಗೆ ತೊರಡುವರೆ ನನ್ನ ಮನಸ್ಸು ಸರ್ವಥಾ ಒಪ್ಪದು. ದಯಮಾಡಿ ನನ್ನ ಇದೊಂದು ವಿನಂತಿಯನ್ನು ಮರೆಯಲಾಗದು. ನಡೆಸಲೇ ಬೇಕು ಎಂದು ಪದೇ ಪದೇ ವಿನಂತಿಸುತ್ತೇನೆ. ಬಹಳ ಉಪಕಾರ.

ಮುಂದಣ ತಿಂಗಳಲ್ಲಿ ತಮ್ಮಲ್ಲಿ ಜರಗಲಿಕ್ಕಿರುವ ಈವಂದಿನ ನಾಡಹಬ್ಬವು ತುಂಬ ಯಶಸ್ವಿಯಾಗಿ ನೆರವೇರುವಂತೆ ಯೂ ತಮ್ಮಲ್ಲಿಯ ಕರ್ನಾಟಕ ಸಂಘವು ಚಿರಕಾಲ ಬಾಳುತ್ತಿರುವಂತೆಯೂ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ·

M. Govind Pai

ಬೈಕಾಡಿವೆಂಕಟಕೃಷ್ಣರಾಯ,
ಬ್ರಹ್ಮಾವರ.

[14]

ಮಂಜೇಶ್ವರ,
24-3-59.

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಕೆಲವು ದಿನಗಳ ಹಿಂದೆ ಬರೆದ ಕಾರ್ಡು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ತಮ್ಮ ಪತ್ರ ಮುಟ್ಟುವ ಮುಂಚಿನ ದಿನವೇನೋ ಇಲ್ಲಿಯ ಹಾಯ್‌ಸ್ಕೂಲಿನ ಕನ್ನಡ ಅಧ್ಯಾಪಕಿಯರೂ ಅಧ್ಯಾಪಕರೂ (Srimad Anantheshwar High School, Manjeshwar) ನನ್ನ ಬಳಿಗೆ ಬಂದು ಇತ್ತೀಚೆ ಮೈಸೂರು ಸರ್ಕಾರದವರು ಪ್ರಕಟಿಸಿರುವ ಹಾಗೂ ಮೊನ್ನೆ ಮಂಗಳೂರಲ್ಲಿ ಜರುಗಿದ ಪ್ರದರ್ಶನದಲ್ಲಿ ಮಾರಾಟ ವಾದ ಶ್ರೀ ಶ್ರೀ ಕುಮಾರ ವ್ಯಾಸನ ಕನ್ನಡ (ಗದುಗಿನ) ಭಾರತದ ಪ್ರತಿಯನ್ನು ನನಗೆ ತಂದುಕೊಟ್ಟು ಅದರ ಪೀಠಿಕಾ ಸಂಧಿಯಲ್ಲಿ ಕೊನೆ ಯದಾದ ಭಾಮಿನೀ ಷಟ್ಪದಿಯ ಅರ್ಥವನ್ನು ಕುರಿತು ವಿಚಾರಿಸಿದರು. ನನಗೆ ಆಗ್ಗೆ ಉಂಟಾದ ದೇಹಾಲಸ್ಯದ ಸಲುವಾಗಿ ನಾನಾಗ್ಗೆ ನಿತ್ರಾಣದಲ್ಲಿದ್ದೆನಾದರೂ ಆ ಪದ್ಯವನ್ನು ಕಂಡು ನನಗೆ ಕಿವಿಯಲ್ಲಿ ಗಾಳಿ ಊದಿತು. ನಾನು ಅದರ ಅರ್ಥವನ್ನು ವಿಚಾರಿಸ ತೊಡಗಿ ನಿನ್ನೆ ಅವರಿಗೆ ಬರೆದುಕೊಟ್ಟೆ. ಅವರಿಗೂ ಬೇರೆ ಅಲ್ಲಲ್ಲಿಗೆ ಕಳುಹಿಸಿಕೊಡತಕ್ಕಂತೆಯೂ ಪ್ರತಿಗಳು ಹೆಚ್ಚಿಗೆ ಒಂದೆರಡು ಬೇಕಾಗಿದ್ದು ಅವನ್ನು ಸಂಪ್ರತಿಸುತ್ತಿದ್ದಾಗ ನನಗೂ ಒಂದು ಪಕ್ಕಾ ಪ್ರತಿಯನ್ನು ಬರೆಯಿಸಿ ತರಿಸಿಕೊಂಡೆ. ಅದನ್ನೀಗ ಇದರೊಂದಿಗೆ ಮಡಗಿ ತಮಗೆ ಕಳುಹಿಸಿಕೊಟ್ಟಿರುತ್ತೇನೆ. ಹೀಗೆಲ್ಲ ಕೆಲವು ದಿನಗಳ ವಿಳಂಬವಾಗಬೇಕಾದ ಬಗ್ಗೆ ದಯಮಾಡಿ ಕ್ಷಮಿಸುವುದು.

ನನ್ನ ಆರೋಗ್ಯವೀಗ "ಗಾಳಿಗೊಡ್ಡಿದ ಸೊಡರಿನಂತೆ" ಅತ್ತಿತ್ತ ಅಲುಗಾಡುತ್ತಿದೆ. ಇವತ್ತು ನಾನು ಹುಟ್ಟಿದ ದಿನ. ಇಂದು 77ನೆಯ ವರ್ಷವಾರಂಭಿಸುತ್ತದೆ. ಇನ್ನೆಷ್ಟು ಕಾಲ ಬದುಕಬೇಕು, ಸ್ವಾಮಿ? ಶ್ರೀ ದೇವರು ತಮಗೂ ತಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ.

M. Govind Pai

**Enclo:** ಕನ್ನಡ (ಗದುಗಿನ) ಭಾರತದಲ್ಲಿಯ ಜಟಿಲವಾದೊಂದು ಸಮಸ್ಯೆ.

**P. S.** ನಾನು ತಮ್ಮ ಕಾರ್ಡು ಇಲ್ಲಿ ಬರುವಾಗಲೂ ಆ ಮೇಲು ಕೆಲದಿನಗಳಿಗೂ ಸಾಕಷ್ಟು ಅಶಕ್ತನಾಗಿದ್ದುದರಿಂದ ಅದಕ್ಕೆ ಕೂಡಲೇ ಪ್ರತ್ಯುತ್ತರಿಸಲಾಗಲಿಲ್ಲ. ದಯಮಾಡಿ ಕ್ಷಮಿಸುವುದು.

ಬೈಕಾಡಿ ವೆಂಕಟಕೃಷ್ಣರಾಯ,
ಸಾಲಿಕೆರೆ, ಬ್ರಹ್ಮಾವರ.

[15]

ಮಂಜೇಶ್ವರ,
7-4-59.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮತ್ತಣ ಕರ್ನಾಟಕ ಸಂಘದ ಪರವಾಗಿ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ ಆಮಂತ್ರಣ ಪತ್ರಿಕೆ ಇಲ್ಲಿಗೆ ಇವತ್ತು ಮುಟ್ಟಿ ತಮ್ಮ ಸಂಘಕೂ ತಮಗೂ ಅನೇಕ ಧನ್ಯವಾದಗಳು. ನಾಡದು 9ನೆಯ

ತಾರೀಕಿನ ನಮ್ಮ ಯುಗಾದಿಯ ದಿನ ತಮ್ಮ ಸುಘವವರು ಆಚರಿಸಲಿಕ್ಕಿರುವ 'ಉಗಾದಿಯ' ಸಾಹಿತ್ಯೋತ್ಸವವು ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮನು ಹರಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್.

ನಮ್ಮತ್ತಣ "ಯುಗಾದಿ" ಎಂಬ ಪದಕ್ಕೆ ಮೈಸೂರತ್ತ ಕಡೆಯಲ್ಲಿರುವ "ಉಗಾದಿ" ಎಂಬ ರೂಪವನ್ನು ಇಲ್ಲಿಯೂ ಬಳಕೆಯಲ್ಲಿ ತಂದಿರಾ?

ಇತಿ ನಮಸ್ಕಾರ,
M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲಿಕೆರೆ ಬ್ರಹ್ಮಾವರ.

[16]

ಮಂಜೇಶ್ವರ,
1–4–60.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ 31/3ರ ಕಾರ್ಡು ನಿನ್ನೆ ಸಂಜೆ ಇಲ್ಲಿ ಕೈಸೇರಿ ಧನ್ಯವಾದಗಳು. ನವ್ಯ ಕವಿತೆ ಎಂದು ಬರೆಯಬೇಕಾಗಿದ್ದಲ್ಲಿ ಕೈತಪ್ಪಾಗಿ ನಾನು ಕನ್ಯಾಕವಿತೆ ಎಂದು ಬರೆದಿರುವೆನೆಲ್ಲಿ? ಅಲ್ಲಿ ಆ ಕನ್ಯಾಕವಿತೆ ಎಂಬ ಸಮಾನಪದವನ್ನು ಹೊಸತಾಗಿ ಸೃಷ್ಟಿಸಿ ತಾನೆ ಹಾಗೆ ಬರೆದಿರುತ್ತೇನೆ. ಕನ್ಯಾ ಕವಿತೆ ಎಂಬ ಸಮಾಸಕ್ಕೆ ನನ್ನ ಅರ್ಥ ಹೀಗಿದೆ.- ಈ ಮುಂಚೆ ಬೇರೆ ಎಲ್ಲಿಯಾದರೂ ಒಮ್ಮೆಯಾದರೂ ಪ್ರಕಟವಾಗಿ ಪ್ರಕಾಶಕ್ಕೆ ಬಂದಿಲ್ಲದ ಬರೆಹಗಾರರ ಹಸ್ತಪ್ರತಿಯಲ್ಲೇ ಉಳ್ಳ ಕವಿತೆ ಎಂದು, ಅಷ್ಟೆ. ಏಕೆಂದರೆ ಬೇರೆ ಕವಿತೆ ಸದ್ಯಸಾಲಕ್ಕೆ ನನ್ನೊಂದಿಗೆ ಇಲ್ಲ. ಆದರೆ ನಿಮ್ಮ ಪ್ರತ್ಯುತ್ತರದಲ್ಲಿ ನನ್ನ ಪ್ರಕಟವಾಗಿರುವ ಯಾವುದಾದರೊಂದು ತಕ್ಕಷ್ಟು ಉದ್ದವಾಗಿರುವ ಕವಿತೆಯನ್ನು ಕಳುಹಿಸಿಕೊಡಬೇಕೆಂದು ಸೂಚಿಸಿರುವುದರಿಂದ ಇದರೊಂದಿಗೆ ಮಡಗಿ ನನ್ನ "ಹುಲ್ಲುಕಟಿಗ" ಎಂಬೊಂದು ಬೌದ್ಧ ಧರ್ಮಗ್ರಂಥಗಳಿಂದ ಆಯ್ದುಕೊಂಡ ಆಖ್ಯಾಯಿಕೆಯೊಂದನ್ನು ಆಧರಿಸಿ ನಾನು ರಚಿಸಿದ ಕವಿತೆಯೊಂದನ್ನು ಕಳುಹಿಸಿಕೊಟ್ಟಿರುತ್ತೇನೆ. ಹಾಗೂ ಈ ಕವಿತೆ ನಿಮಗೆ ಮುಟ್ಟಿದೆಯೋ? ಇದು ನಿಮಗೆ ಒಪ್ಪಿಗೆಯಾಗುತ್ತದೋ? ಎಂದು ನನಗೆ ಬರೆದು ತಿಳಿಸುವರೆ ನನ್ನ ವಿಳಾಸ ಬರೆದಿರುವ ಒಂದು ಕಾರ್ಡನ್ನು ಇಟ್ಟಿರುತ್ತೇನೆ. ಇದು ನಿಮ್ಮ ಕೈಸೇರುತ್ತಲೇ ಒಂದು ಪಂಗ್ತಿಯನ್ನು ಬರೆದು ದಯಮಾಡಿ ನನಗೆ ತಿಳುಹಿಸಬೇಕಾಗಿ ಅಪೇಕ್ಷಿಸುತ್ತೇವೆ.

Enclosures:

ಇತಿ ನಮಸ್ಕಾರ,
M. Govind Pai

(1) "ಹುಲ್ಲುಕಟಿಗ" ಎಂಬ ಒಂದು ಕವಿತೆ ಮತ್ತು
(2) ನಿಮ್ಮ ಜವಾಬಿನ ಬಗ್ಗೆ ನನ್ನ ಮೇಲು ವಿಳಾಸ ಬರೆದ ಒಂದು ಟಪ್ಪಾಲು ಕಾರ್ಡು.

P.S:—ಈಗ ನನಗೆ ಕೆಲದಿನಗಳ ಹಿಂದೆ ಆಗಿದ್ದ ಅಸೌಖ್ಯದಿಂದಾಗಿರುವ ಅಶಕ್ತಿಯ ಪ್ರಯುಕ್ತ ಈಗ ತಾನೆ ಹೊಸತೊಂದು ಪ್ರತಿಯನ್ನು ತೆಗೆಯಲಾರದೆ, ಕೆಲತಿಂಗಳ ಹಿಂದೊಮ್ಮೆ ತೆಗೆದೊಂದು ಪ್ರತಿಯನ್ನು ಕಳುಹಿಸಬೇಕಾಗಿದೆ. ದಯಮಾಡಿ ಕ್ಷಮಿಸುವುದು.

ಕೆ. ವೆಂಕಟ್ರಾಯಾಚಾರ್ಯ,
ಸುರತ್ಕಲ್.

[17]

ಮಂಜೇಶ್ವರ,
14–7–61.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಜುಲಾಯಿ 4ನೆಯ ತಾರೀಕಿನ ಪತ್ರ ಇಲ್ಲಿಗೆ 5ನೆಯ ತಾರೀಕಿನಂದು ಮುಟ್ಟುವಾಗ, ಅದಕ್ಕೆ ಕೆಲ ಹಪ್ತೆಗಳ ಮುಂಚಿನಿಂದಲೇ ನನ್ನ ಬಲತೋಳಿನಲ್ಲಿ ಉಂಟಾಗಿದ್ದ ದಾರುಣವಾದ ವೇದನೆಯಿಂದ ನಾನು ಇನ್ನೂ ಈಚೆಯ ತಡಿ ಸೇರಿಲ್ಲದೆ, ನನ್ನ ಬಲಕೈಯಿಂದ ಬರೆಯಲಿಕ್ಕೆ ಆಗುತ್ತಿರಲಿಲ್ಲ. ಬಹಳ ಕಷ್ಟವಾಗುತ್ತಿತ್ತು. ಆದರೆ ನಡುನಡುವೆ ನಾನು ಪ್ರಯತ್ನಪೂರ್ವಕವಾಗಿ ಆ ಕೈಯನ್ನು ಬರೆಯಲಿಕ್ಕೆ ಆಗಾಗ ಉಪಯೋಗಿಸಿಕೊಳ್ಳುತ್ತಿದ್ದು, ಇತ್ತೀಗ ಸ್ವಲ್ಪ ಸ್ವಲ್ಪ ಬರೆಯಲಿಕ್ಕೆ ಆಗುತ್ತದೆ. ಅದಾಗಿ ನಿಮ್ಮ ಪತ್ರಕ್ಕೆ ಪ್ರತ್ಯುತ್ತರಿಸಲಿಕ್ಕೆ ಇಷ್ಟು ತಡವಾಗಬೇಕಾಯಿತು. ದಯಮಾಡಿ ಕ್ಷಮಿಸುವುದು.

ಆ ಪತ್ರವಲ್ಲಿ ನಿಮ್ಮ ತ್ತಣ ಬ್ರಹ್ಮಾವರದ ಕರ್ಣಾಟಕ ಸಂಘವ ಈವಮದಿನ ನಾಡಹಬ್ಬದ ಪ್ರಯುಕ್ತ ನಮ್ಮ "ಅಜಪುರ" ಎಂಬುದೊಂದು ಹೊತ್ತಿಗೆಯನ್ನು ನೀವು ಹೊರವಡಿಸಲಿಕ್ಕೆ ಕೈಯ್ಕೊಂಡಿರುತ್ತೀರಿ, ಮಾತ್ರವಲ್ಲ, ಅದನ್ನು ನನಗೆ ಅರ್ಪಿಸಬೇಕೆಂದು ನಿರ್ಧರಿಸಿಯೂ ಇರುತ್ತೀರಿ ಎಂದು ಬರೆದುದನ್ನು ಓದಿ ನೋಡಿ ನನಗೊಮ್ಮೆ ಗಾಬರಿಯಾಯಿತು, ಅಲ್ಲವಾದರೆ ಸೋಜಿಗವಾದರೂ ಆಯಿತು. ನನಗೆ ಅರ್ಪಣೆ? ಯಾವ ಬಗ್ಗೆಯಂತೆ? ನಿಮಗೇ ಬರೆದು ನೋಡೋಣ ಎನ್ನುವಷ್ಟರಲ್ಲಿ ನನ್ನ ಕೈಯು ನೋವಿನಿಂದಾಗಿ ಆ ಕೆಲಸವನ್ನು ಈವರೆಗೆ ಮುಂದಕ್ಕೆ ತಳ್ಳಬೇಕಾಯಿತು.........ನನ್ನನ್ನು ಹಾಗೆ ಸತ್ಕರಿಸಬೇಕೆಂಬ ನಿಮ್ಮ ಯೋಜನೆ ಅಲ್ಲೇ ನಿಲ್ಲಲಿಲ್ಲ. ನನ್ನೊಂದಿಗೆ ಮುಂಚಿತವಾಗಿ ಒಂದೇ ಒಂದು ಮಾತನ್ನಾದರೂ ಕೇಳದೆ ಆ ವಿಷಯವಾಗಿ ಅಚ್ಚಾಗಿಸಿದ ಕಾರ್ಡುಗಳನ್ನು ಹೊರವಡಿಸಿದಿರಿ. ಅಮೂ ಸಾಲದೆ ಇದೇ ಮೊನ್ನೆ ಜುಲಾಯಿ 11ನೆಯ ತಾರೀಕಿನ ಮಂಗಳೂರಿನ ದೈನಿಕ "ನವಭಾರತ"ದಲ್ಲಿ ನೀವು ಹೊರಡಿಸಲಿಕ್ಕಿರುವ ಆ ಗ್ರಂಥವನ್ನು ನನಗೆ ಅರ್ಪಿಸುವ ನಿರ್ಧಾರವನ್ನು ಕೂಡಾ ಕೈಯ್ಕೊಂಡಿರುವಿರಿ ಎಂದು ಮತ್ತೊಂದು ಬಂದೂಕನ್ನು ಹಾರಿಸಿರುತ್ತೀರಿ.................

ಆದರೆ ಸ್ವಾಮಿ, ಒಂದು ಕಡೆ ಯಾವ ಗೌರವವೂ ನನಗೆ ಬೇಡವೆಂದು ನನ್ನಷ್ಟಕ್ಕೆ ಸುಮ್ಮನಿರುವ ನನ್ನ ಅನಪೇಕ್ಷೆ ಮತ್ತೊಂದು ಕಡೆ ಈ ಯೋಜನೆಯಲ್ಲಿ ಇಷ್ಟರೊಳಗೆ ನೀವು ಎಷ್ಟು ಮುಂದಕ್ಕೆ ಸಾಗಿರಬೇಕು?, ಈಗ ನಿಮ್ಮನ್ನು ನಾನು ಹಿಮ್ಮೆಟ್ಟಿಸುವೆನಾದರೆ ನೀವು ಎಷ್ಟು ತ್ರಾಸ ಹೊಂದಬೇಕು.? ಎಂದು ನನ್ನನ್ನು ಮನಗುಂದಿಸುವ ಚಿಂತೆ, ಇವೆರಡರ ಬಿಕ್ಕಟ್ಟಿನಿಂದ ಹೊರ ಹೊಮ್ಮುವರೆ ಬಳಿತೋರದೆ ನಿರುಪಾಯನಾಗಿ, ಗತ್ಯಂತರವಿಲ್ಲದೆ ಹೀಗೆನ್ನುತ್ತೇನೆ–ನೀವು ನನಗೆ ಮಾಡಲೆಳಸುವ ಗ್ರಂಥಾರ್ಪಣವನ್ನು ನಾನು ಒಪ್ಪಿಕೊಳ್ಳುತ್ತೇನೆ.

ನೀವು ನನ್ನದೊಂದು ಕವಿತೆಯನ್ನು ಕಳುಹಿಸಬೇಕೆಂದಿರುತ್ತೀರಿ. ಆ ಮೇರೆಗೆ ಇದರೊಂದಿಗೆ ಇರಿಸಿ 14 ಪಂಗ್ತಿಯ "ಏಕನಾಥನೂ, ಕತ್ತೆಯೂ" ಎಂಬ ನನ್ನದೊಂದು ಚಿಕ್ಕ ಕವಿತೆಯನ್ನು ಕಳುಹಿಸಿರುತ್ತೇನೆ. ಆದರೆ ನೋಡಿ, ನನಗೆ ಅರ್ಪಿಸಬೇಕೆಂದಿರುವ ಗ್ರಂಥದಲ್ಲಿ ನನ್ನದೇ ಒಂದು ಕವಿತೆ ಇದ್ದರೆ ಅದು ಸರಿ ಎನಿಸೀತೇ? ಎಂದು ವಿಚಾರಿಸಿ ನೋಡಿ. ಸರಿ ಎಂದು ಒಪ್ಪಿದರೆ ಮಾತ್ರ ಇದನ್ನು ಉಪಯೋಗಿಸಿಕೊಳ್ಳಿ. ಇನ್ನೊಂದು ಮಾತೆಂದರೆ, ನನ್ನ ಈಗಣ ಇಳಿಪ್ರಾಯದ ಅಶಕ್ತತೆಯಲ್ಲಿ ಹೊಸ ಕವಿತೆಯನ್ನು ಬರೆಯುವುದೆಂದರೆ ಸುಲಭವಲ್ಲ. ಅದಾಗಿ ಒಮ್ಮೆ ಪ್ರಕಟವಾಗಿದ್ದ ಕವಿತೆಯನ್ನೇ ಕಳುಹಿಸಬೇಕಾಗಿ ಹಾಗೆ ಮಾಡಿರುತ್ತೇನೆ. ಬೇಡವೆಂದಾದರೆ ಅದನ್ನು ದಯಮಾಡಿ ನನಗೆ ಮರಳಿ ಕಳುಹಿಸುವ ಉಪಕಾರ ಮಾಡಿರಿ. ಇತರತ್ರ ಕಳುಹಿಸಲಿಕ್ಕೆ ನನಗೆ ನೆರವಾದೀತು. ಏನೂ ಅಡ್ಡಿ ಇಲ್ಲ- ಬೇಡವಾದರೆ ಮರಳಿ ಕಳುಹಿಸಿ ಕೊಡಿರಿ.

ಇತಿ ನಮಸ್ಕಾರ,
M. Govind Pai

ಬೈಕಾಡಿ ವೆಂಕಟಕೃಷ್ಣರಾಯ,
ಸಾಲಿಕೆರೆ,
ಬ್ರಹ್ಮಾವರ.

[18]

ಮಂಜೇಶ್ವರ,
13–11–61.

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಪ್ರೀತಿಪೂರ್ವಕವಾಗಿ ಕಳುಹಿಸಿರುವ "ನಿಯೋಗ" ಎಂಬ ಹಿಂದೀ ಪುಸ್ತಿಕೆಯ ನೀವು ಮಾಡಿರುವ ಕನ್ನಡ ಅನುವಾದವು ಇಲ್ಲಿಗೆ ಮೊನ್ನೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ಓದಿ ನೋಡಿದೆ. ಬಹಳೇ ಹಿಂದಿನ ಕಾಲದಲ್ಲಿ ಸ್ತ್ರೀಯರನ್ನು ಕುರಿತು ನಮ್ಮ ಆ ಪೂರ್ವ ಕಾಲದ ಹಿರಿಯರು ಹೇಗೆ ವರ್ತಿಸುತ್ತಿದ್ದರು ಎಂಬುದನ್ನು ಆ ಪುಸ್ತಕದಲ್ಲಿ ಹೇಳಿದೆ. ಅದನ್ನು ಓದುವಾಗ ನಮ್ಮ ಮನಸ್ಸು ಹೇವರಿಸುತ್ತದೆ. ಆ ಹಿರಿಯರ ವರ್ತನೆಗಳನ್ನು ನಾವು ಸಹಜವಾಗಿ ಹೀಗಳೆಯುತ್ತೇವೆ. ಆದರೆ ಆ ಅತ್ಯಂತ ಪ್ರಾಚೀನ ಕಾಲದಲ್ಲಿ ನಮ್ಮ ಭರತಖಂಡದ ಹೊರಗಣ ಚೀನಾ (China) ಬಾಬಿಲೋನ್ (Babylon) ಅಸ್ಸಿರಿಯಾ (Assyria) ಐಗುಪ್ತ (Egypt) ಆಗ ಅದಕ್ಕೆ ಮಿಸ್ರ = Misra ದೇಶವೆಂದೂ ಹೆಸರಿತ್ತು. ಮೊದಲಾದ ಆಸ್ಯಾ (Asia) ಖಂಡದ ಆಯಾಯ ದೇಶಗಳಲ್ಲಿ ಮಾತ್ರವಲ್ಲ ನಮ್ಮ ಖಂಡಕ್ಕೆ ಹೊರಗಣ ಯುರೋಪು (Europe) ಆಫ್ರಿಕಾ (Africa) ಅಮೇರಿಕಾ (America) ಮತ್ತು ಔಸ್ಟ್ರೇಲಿಯಾ (Australia) ಖಂಡಗಳಲ್ಲಿಯೂ ಕೂಡಾ ಆ ಅತ್ಯಂತ ಪ್ರಾಚೀನ ಕಾಲದ ಜನರ ಕಟ್ಟಳೆಗಳೆಲ್ಲ ಇದೇ ವಿಧವಾಗಿದ್ದುವು. ಅವೆಲ್ಲಾ ಸಮಾಜಗಳಲ್ಲಿಯ ಪದ್ಧತಿ ಇದೇ ರೀತಿಯಾಗಿತ್ತು. ಉದಾಹರಣೆಯಾಗಿ ಹೇಳುವುದಾದರೆ ಯೆಹೂದ್ಯರ (Jews) ಚರಿತ್ರವನ್ನು ಗಮನಿಸೋಣ. ಬಾಯ್ಬಲಿನ (Bible) ಹಳೆ ಒಡಂಬಡಿಕೆ ಎಂಬ ಗ್ರಂಥದಲ್ಲಿ ಶ್ರೀ ದೇವರು ಪ್ರಥಮತಃ ಮನುಷ್ಯ ಸೃಷ್ಟಿಯನ್ನು ಹೇಗೆ ಉಂಟುಮಾಡಿದನು ಎಂಬುದನ್ನು ಹೇಳುವಲ್ಲಿ ಹೀಗಂದದೆ - ದೇವರು ಮೊತ್ತಮೊದಲಲ್ಲಿ ಆದಮ್ (Adam) ಎಂಬ ಗಂಡು ವ್ಯಕ್ತಿಯನ್ನು ಸೃಷ್ಟಿಸಿ ಆ ಬಳಿಕ ಅವನ ಎಡ ಪಕ್ಕದ್ದೇನೋ (ಎಂದು ನನ್ನ ನೆನಪು) ಒಂದು ಎಲುಬನ್ನು ಹೊರ ತೆಗೆದು ಅದರಿಂದ ಹೆಂಗಸನ್ನು ಸೃಷ್ಟಿಸಿದನು. ಅವಳ ಹೆಸರು

ಹವ್ವಾ (Eve) ಎಂಬ ಅವರಿಬ್ಬರು ತಂತಮಗೆ ಅಣ್ಣ ಮತ್ತು ತಂಗಿಯಾದರೋ? ಇಲ್ಲವೋ? ಅವರಿಗೆ ಕಾಯಿನ್ (Cain), ಹೆಬೇಲ್ (Abel) ಎಂಬ ಇಬ್ಬರು ಗಂಡು ಮಕ್ಕಳೂ, ಒಬ್ಬರಿಬ್ಬರೇನೋ (ಎಂದೂ ನನ್ನ ನೆನಪು) ಹೆಣ್ಣು ಮಕ್ಕಳೂ ಹುಟ್ಟಿದರು. ಅವರು ತಂತಮ್ಮೊಳಗೆ ಒಟ್ಟು ಗೂಡಿ ಅವರಿಗೆ ಮಕ್ಕಳಾದುವು. ಹಾಗೆಯೇ ಅವರ ಮುಂದು ಮುಂದಿನ ಸಂತತಿ ಬೆಳೆಯ ತೊಡಗಿತು. ಬೈಬಲಿನ ಆದಿ ಕ್ರಿಸ್ತ ಪೂರ್ವ 5000 ವರ್ಷವೆಂದೂ, ನಮ್ಮ ಆರ್ಯ ಜನಾಂಗದ ಪ್ರಪ್ರಥಮ ಧರ್ಮಗ್ರಂಥವಾದ ಋಗ್ವೇದದ ಕಾಲ ಕ್ರಿಸ್ತ ಪೂರ್ವ 8000ಕ್ಕೂ ಹಿಂದೆ ಎಂದೂ ನಿಶ್ಚಯಿಸಲಾಗಿದೆ. ಹಾಗಾದರೆ ಆಗ್ಗೆ ನಮ್ಮ ಹಿರಿಯರು ಅವರವರ ಸತ್ತ ಮಗಂದಿರ ಹೆಂಡಂದಿರೊಡನೆ ನಿಯೋಗ ಮಾಡುತ್ತಿದ್ದರು ಎಂಬಲ್ಲಾಗಲೀ, ನಿಮ್ಮ ಪುಸ್ತಕದಲ್ಲಿಯ ಇತರ ಉದಾಹರಣೆಗಳಲ್ಲಾಗಲೀ, ಈಗಣಕಾಲದ ನಮಗೆ ತೀರಾ ಹೇಯವೆನಿಸಿ ನಾವು ಚೀ ಚೀ ಕರಿಸುವ ಆಚಾರಗಳಿದ್ದುದನ್ನು ತಿಳಿದು ನಾವು ಆ ಬಗ್ಗೆ ನಾಚಿಕೆ ಪಡಬೇಕು, ಅವರನ್ನು ಹಳಿಯಬೇಕು ಎಂದಿಲ್ಲ. ಈಗ ನಮಗೆ ಹೀನವೆನಿಸುವ ಆ ವಿಚಾರಗಳು ಆಗಣ ಅತೀವ ಪ್ರಾಚೀನ ಕಾಲದಲ್ಲಿ ಸಮಗ್ರ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಏಕಪ್ರಕಾರವಾಗಿ ಹರಡಿದ್ದುವು. ಉದಾಹರಣೆಯಾಗಿ ನಾನೊಂದು ಮಾತು ಹೇಳಿ ಮುಗಿಸುತ್ತೇನೆ. ನಮ್ಮಲ್ಲೀಗ ಹಿರಿಯರೂ, ಹಿರಿಯಳೂ, ಸರ್ವರೂ ಕೂದಲು Crop ಮಾಡಿಸಿ ಕತ್ತರಿಸಿಕೊಳ್ಳುತ್ತಾರಷ್ಟೆ! ಹೆಚ್ಚು ಕಡಿಮೆ 50 ವರ್ಷಗಳ ಹಿಂದೆ ಕ್ರೋಪ್ ಮಾಡಿದವರು ದೇವಸ್ಥಾನಗಳನ್ನು ಒಳಹೋಗಬಾರದೆಂದು ಕಟ್ಟು ಇತ್ತು. ಮಾತ್ರವಲ್ಲದೆ ಕೆಲವು ಮಡಿತನದ ಮನೆಗಳಲ್ಲಿ ಹಾಗೆ ಮಾಡಿದ ಶಾಲೆಯ ಹುಡುಗರನ್ನು ಅವರವರ ಮನೆಯಿಂದ ಹೊರದಬ್ಬಿದ ಉದಾಹರಣೆಗಳನ್ನೂ ನಾನು ಬಲ್ಲೆ. ಅದಾಗ ಆಗ್ಗೆ ಸಲ್ಲದು ಎಂಬುದನ್ನು ಈಗಣ ದಿನಗಳಲ್ಲಿ ಸಲ್ಲುತ್ತಿರುತ್ತದೆ ಹೇಗೋ ಹಾಗೆಯೇ ನಿಯೋಗ ಮೊದಲಾದುವು ಕೂಡಾ! ಅಂಥಾ ಕಟ್ಟಳೆಗಳನ್ನು ಕುರಿತು ಓದಿ ತಿಳಕೊಂಡು ಸಮಾಜದ ಬೆಳವಣಿಗೆಯನ್ನು ಕುರಿತು ಅನುಭವ ಪಡೆಯಬೇಕಲ್ಲದೆ ಅವುಗಳನ್ನು ತೀರಾ ಕುತ್ಸಿತವೆಂದು ನಿಂದಿಸಬಾರದು. ಆ ಬಗ್ಗೆ ನಮ್ಮ ಹಿರಿಯರನ್ನು ಅಲ್ಲಗಳೆಯಬಾರದು. ಇಷ್ಟೆ!

ಇತಿ ನಮಸ್ಕಾರ,
M. Govind Pai

ಎಸ್. ಎಂ. ಶೆಟ್ಟಿ,
ಶಿಮುಂಜೆ-ಪರಾರಿ
654-1 ಕೌಟಿ ಬಿಲ್ಡಿಂಗ್
ಬೊಂಬಾಯಿ–1.

[19]

ಮಂಜೇಶ್ವರ,
29–3–62.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ನಿನ್ನೆಯ ತಾರೀಕಿನ ಆಂಗ್ಲ (English) ಪತ್ರ ಇಲ್ಲಿಗೆ ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನಿಮ್ಮ ಪತ್ರವೆಂದರೆ ಹತ್ತುಮಂದಿಗೆ ತಿಳಕೊಳ್ಳಬೇಕೆಂಬ ಕುತೂಹಲದ ವಿಷಯವನ್ನು ಕುರಿತಿದೆ ಎಂಬುವದರಿಂದ ನಾನದಕ್ಕೆ ಕನ್ನಡದಲ್ಲಿ ಪ್ರತ್ಯುತ್ತರಿಸುವುದೇ ಲೇಸೆಂದು ನಿಶ್ಚಯಿಸಿ ಹಾಗೆ ಮಾಡಿರುತ್ತೇನೆ. ನಿರುಪಾಯವಾಗಿ ಹಾಗೆ ಮಾಡಬೇಕಾಗಿರುವ ಬಗ್ಗೆ ದಯಮಾಡಿ ಕ್ಷಮಿಸುವುದು.

ಸಂಗೀತವೆಂದರೆ ಗಾಯನ ವಿದ್ಯೆಯ ಪ್ರತ್ಯಕ್ಷ ರೂಪ. ಸಂಗೀತದಲ್ಲಿ ಆಸಕ್ತಿ ಇಲ್ಲದ ವ್ಯಕ್ತಿಗಳು ಇರುವರಾದರೆ ಅವರು ನೂರರಲ್ಲಿ .000001ಕ್ಕಿಂತಲೂ ಎಷ್ಟೋ ಕಡಿಮೆ ಸಂಖ್ಯೆಯವರು. ಅಷ್ಟಾದರೂ ಇದ್ದಾರೆಂದು ನಾನು ಬಲ್ಲೆ. ಅವರನ್ನು ನಮ್ಮ ಎಣಿಕೆಯಿಂದ ಬಿಟ್ಟುಬಿಟ್ಟರೆ ಸಂಗೀತವೆಂದರೆ ಎಲ್ಲರೂ ಬೇಕು ಬೇಕೆಂದು ಹಂಬಲಿಸುವ ವಿಷಯ.

ಸನಾತನ ಧರ್ಮೀಯರಾದ ನಮಗೆ ನಾಲ್ಕು ವೇದಗಳು ಹೇಗೋ ಹಾಗೆಯೇ ನಾಲ್ಕು ಉಪವೇದಗಳೂ ಇವೆ. ಆ ಉಪವೇದಗಳಲ್ಲಿ ಗಾಂಧರ್ವವೇದವೂ ಒಂದು. ಗಾಂಧರ್ವ ವೇದವೆಂದರೆ ಸಂಗೀತ ವಿದ್ಯೆ. ಗಾಯನ ಶಾಸ್ತ್ರ. ಕ್ಷಣ ಮಾತ್ರಕ್ಕೆ ಯೋಚಿಸಿ ನೋಡಿದರೆ ಆ ವಿದ್ಯೆ ನಮ್ಮ ಹಿಂದುಸ್ಥಾನಕ್ಕೆ ಸಹಸ್ರಾರು ವರ್ಷಗಳಿಂದಲೂ ಮಾನ್ಯವೆನಿಸುತ್ತಿರುವ ವಿದ್ಯೆಯಾಗಿತ್ತೆಂದು ನಿಷನ್ನವಾಗುತ್ತದೆ. ನಮ್ಮ ಸಮಗ್ರ ಹಿಂದೂಸ್ಥಾನದ ಸಂಗೀತದಲ್ಲಿ ಹಿಂದೂಸ್ಥಾನೀ ಸಂಗೀತವೆಂದೂ ಕರ್ಣಾಟಕದ ಸಂಗೀತವೆಂದೂ ಎರಡು ಭೇದಗಳಿವೆ. ಅವಲ್ಲಿ ಹಿಂದೂಸ್ಥಾನೀ ಸಂಗೀತವೆಂದರೆ ಉತ್ತರ ಹಿಂದೂಸ್ಥಾನದಲ್ಲಿ ವ್ಯಾವಹಾರಿಕವಾಗಿರುವ ರೀತಿ ಒಂದು, ಹಾಗೂ ಕರ್ಣಾಟಕ ಸಂಗೀತವೆಂದರೆ ಸಮಗ್ರ ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಚಾರವಾಗಿರುವ ರೀತಿ ಮತ್ತೊಂದು. ಇವುಗಳಲ್ಲಿ ಚೋದ್ಯದ ಸಂಗತಿ ಎಂದರೆ ಅವೆರಡೂ ವಿಧಾನಗಳಿಂದ ಒಂದೇ ರಾಗದಲ್ಲಿ ಕೇಳಿಸುವಂತೆ ಒಂದು ಗೀತವನ್ನು ಹಾಡಿದರೆ, ಆ ರಾಗದ ಹೆಸರಾದರೋ ಹಿಂದುಸ್ಥಾನೀ ಸಂಗೀತದ ರೀತಿಯಲ್ಲಿ ಒಂದು, ಅದೇ ರಾಗದ ಹೆಸರು ದಾಕ್ಷಿಣಾತ್ಯ ಸಂಗೀತದ ರೀತಿಯಲ್ಲಿ ತೀರ ಬೇರೊಂದು! ಇದಕ್ಕೆ ಒಂದು ಉದಾಹರಣೆಯಾಗಿ ಹೇಳುವುದಾದರೆ, ಹಿಂದುಸ್ಥಾನೀ ಸಂಗೀತದಲ್ಲಿ ಭೈರವಿ ಎಂದು ಹೇಳಲ್ಪಡುವ

ರಾಗವು ಕರ್ಣಾಟಕ ಸಂಗೀತದಲ್ಲಿ "ತೋಡಿರಾಗ"ವೆಂದು ಕರೆಯಲ್ಪಡುತ್ತದೆ. ಅಂದರೆ ರಾಗ ಒಂದೇ, ಅದರ ಹೆಸರುಗಳು ಮಾತ್ರ ಬೇರೆ, ಬೇರೆ ಇತ್ಯಾದಿ.

ನನ್ನ ಈಗಣ ಅಶಕ್ತತೆಯಿಂದಾಗಿ, ಇಲ್ಲಿಂದ ಹೊರಗೆ ಹೋಗಲಿಕ್ಕೆ ನನಗೆ ಶಕ್ಯವಿಲ್ಲ. ದಯಮಾಡಿ ಕ್ಷಮಿಸುವುದು.

ನಾಡದು ಎಪ್ರಿಲ್ 8ನೆಯ ತಾರೀಕಿನಂದು ಶ್ರೀ ದೇವರ ದಯೆಯಿಂದ ನಿಮ್ಮ ಸಂಗೀತ ಸಭೆಯ ಆಶ್ರಯದಲ್ಲಿ ಜರಗ ಲಿಕ್ಕಿರುವ ಸಂಗೀತೋತ್ಸವದಲ್ಲಿ ನೆರೆದಿರುವ ಶ್ರೋತೃಮಹಾಶಯರೆಲ್ಲರೂ ಸುಖಾನುಭವವನ್ನು ಪಡೆಯುವಂತೆ ಶ್ರೀ ದೇವರು ಅನು ಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈಗ ಯಾರೊಂದಿಗಾದರೂ ಕೂತುಕೊಂಡು ಮಾತಾಡುವಷ್ಟು ಕೂಡಾ ತಾಳ್ಮೆ ನನಗಿಲ್ಲ. ಏನೋ ಶ್ರೀದೇವರ ದಯೆಯಿಂದ ಇದುವರೆಗೂ ಓದುತ್ತೇನೆ, ಚಿಲ್ಲರೆ ಚಿಲ್ಲರೆಯಾಗಿ ಬರೆಯುತ್ತೇನೆ ಕೂಡಾ. ಅಂದರೆ ಹೆಚ್ಚಾಗಿ ನನಗೆ ದಿನೇ ದಿನೇ ಬರುತ್ತಿರುವ ಕಾಗದ ಪತ್ರಗಳಲ್ಲಿ ಅವರು ನನಗೆ ಹಾಕಿದ ಆಯಾ ಪ್ರಶ್ನೆಗಳಿಗೆ ಪ್ರತ್ಯುತ್ತರವಾಗಿ ಅಷ್ಟೆ.

ವಿಜಯನಾಥ ಶೆಣಾಯಿ,
ಸಂಗೀತಸಭೆ,
ಉಡುಪಿ.

ಇತಿ ನಮಸ್ಕಾರ,
M. Govind Pai

[20]

ಮಂಜೇಶ್ವರ,
19–8–62.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಒಂದನೆಯ ತಾರೀಕಿನ ಕಾರ್ಡು ಇಲ್ಲಿಗೆ ಮುಟ್ಟುವಾಗ ಇಲ್ಲಿ ಹಲ ದಿನಗಳಿಂದ ಸುರಿಯುತ್ತಿರುವ ಬಿರುಮಳೆಯಿಂದಾಗಿ ಕೊಂಚ ಅನಾರೋಗ್ಯದಿಂದಿದ್ದು ಅದಕ್ಕೆ ಪ್ರತ್ಯುತ್ತರವನ್ನು ಈ ಮುಂಚೆ ಬರೆಯ ಲಿಕ್ಕಾಗದ ಬಗ್ಗೆ ದಯಮಾಡಿ ಕ್ಷಮಿಸುವುದು. ಆ ಬಗ್ಗೆ ಅನೇಕ ಧನ್ಯವಾದಗಳು. ಶ್ರೀ ಮುಗಳಿಯವರ "ಕನ್ನಡ ಸಾಹಿತ್ಯ ಚರಿತ್ರೆ" ಯ ಪ್ರತಿ ಮೈಸೂರಿನ ಉಷಾ ಪ್ರೆಸ್ಸಿನ ಶ್ರೀ ಹಬ್ಬುರವರ ಕಡೆಯಿಂದ ನನಗೆ ನಿನ್ನೆ ಬಂದಿದೆ. ಆದರೆ ಆಗ್ಗೆ ನಿಮ್ಮ ಕಾರ್ಡನ್ನು ಹುಡುಕಾಡಿ ದೊರೆಯದೆ, ಆ ಪ್ರತಿಯನ್ನು ಕಳುಹಿಸಿಕೊಡಿಸಿದವರಾರು? ಶ್ರೀ ಮುಗಳಿಯವರೋ? ನೀವೋ? ಎಂದು ನಿಶ್ಚಯಿಸಲಾ ರದೆ ಆ ಕುರಿತು ಸರಿಯಾಗಿ ತಿಳಕೊಳ್ಳುವ ಬಗ್ಗೆ ನಿನ್ನೆ ಶ್ರೀ ಹಬ್ಬುರವರಿಗೆ ಬರೆದೆ. ಅದನ್ನು ಕಳುಹಿಸಿದವರು ಅಥವಾ ಕೊಡಿಸಿ ದವರು ಯಾರೆಂದು ತಿಳುಹಿಸಬೇಕೆಂದು.

ಇವತ್ತಾದರೆ ನಿಮ್ಮ ಕಾರ್ಡು ತನ್ನಷ್ಟಕ್ಕೆ ದೊರಕಿ, ಶ್ರೀ ಮುಗಳಿಯವರಿಗೂ ಆ ಕುರಿತು ಧನ್ಯವಾದಗಳನ್ನು ಬರೆದಿಟ್ಟೆ. ಈಗ ನಿಮಗೂ ಧನ್ಯವಾದಗಳನ್ನು ಈ ನನ್ನ ಪತ್ರದ ಮೂಲಕ ಸಲ್ಲಿಸುತ್ತೇನೆ. ಬಹಳ ಕೃತಜ್ಞನಾಗಿರುತ್ತೇನೆ. ನಿಮ್ಮಿಬ್ಬರದೂ ಬಹಳ ಉಪಕಾರದ ಬಗ್ಗೆ. ಈ ಪುಸ್ತಕವು ಮುಗಳಿಯವರ ಕೃತಿಯ ಎರಡನೆಯ ಹೆಚ್ಚಿಸಿದ (Enlarged) ಆವೃತ್ತಿ. ಇದರ ಬೆಲೆ ಎಂಟು ರೂಪಾಯಿ, ಅಂದರೆ ಈಗಣ ದಿನಗಳಲ್ಲಿ ಅದೊಂದು ಗಂಟು ತಾನೇ ಅಲ್ಲವೆ? ಅದನ್ನು ಅವರಿಗೆ ಒಪ್ಪಿಸಬೇಕೆಂದು ನನ್ನ ಮನಸ್ಸು ತೀರಾ ಆತುರಿಸುತ್ತಿದೆ. ಹೇಗೆ ನಡೆಯಬೇಕೆಂದು ದಯಮಾಡಿ ನನಗೆ ತಿಳಿಸಬೇಕೆಂದು ವಿನಂತಿಸುತ್ತೇನೆ.

ಕೆ. ಶ್ರೀನಿವಾಸ ಹಾವನೂರ
ಎಸಿಸ್ಟೆಂಟ್ ಲೈಬ್ರೆರಿಯನ್,
ತಾತಾ ಇನ್‌ಸ್ಟಿಟ್ಯೂಟ್,
ಕೊಲಾಬಾ, ಮುಂಬಯಿ-5.

ಇತಿ ನಮಸ್ಕಾರ,
M. Govind Pai

[21]

[ಕನ್ನಡದ ನೂತನ ಬರಿಹಗಾರರಿಗೆ ತಮ್ಮ ಕೃತಿಗಳ ಒಂದು ಪ್ರತಿಯನ್ನು ಗೋವಿಂದ ಪೈ ಅವರಿಗೆ ಕಳಿಸಿ ಅವರಿಂದ ಆಶೀರ್ವಾದವನ್ನು ಪಡೆಯದೆ ತೃಪ್ತಿಯೇ ಇರಲಿಲ್ಲ. ಈ ಗ್ರಂಥಗಳು ಯಾರಿಂದಲೇ ಬರಲಿ, ಎಲ್ಲಿಂದಲೇ ಬಂದಿರಲಿ ಯಥಾವಕಾಶವಾಗಿ ಓದಿ ಎಳೆಯರನ್ನು ಹುರಿದುಂಬಿಸುವ ನಾಲ್ಕು ಮಾತುಗಳನ್ನು ಬರೆಯುವುದು ಗೋವಿಂದ ಪೈ ಅವರು ಅನುಸರಿಸಿದ ಸಂಪ್ರದಾಯಗಳಲ್ಲಿ ಒಂದು. ಇದರಿಂದ ನಾಡಿನ ಕಿರಿಯ ಬರಿಹಗಾರರಿಗೆ ಅವರ ಮೇಲೆ ಪೂಜ್ಯಭಾವವೂ, ಆತ್ಮೀಯತೆಯೂ ಮೊಳೆಯಲು ಕಾರಣವಾಯಿತು.]

ಮಂಜೇಶ್ವರ,
ಫೆಬ್ರವರಿ 28, 1936.

ಗೋವಿಂದ ಪೈ ಮಾಡುವ ನಮಸ್ಕಾರ. ಅದಾಗಿ ತಾವು ಸ್ನೇಹಪೂರ್ವಕವಾಗಿ ಕಳುಹಿಸಿಕೊಟ್ಟಿರುವ ತಮ್ಮ "ಶ್ವಮೇಧ" ಎಂಬ ಕವಿತೆಯ ಪ್ರತಿ ಮೊನ್ನೆ ಕೈಸ್ಸೇರಿ ಅದನ್ನು ಓದಿ ನೋಡಿದೆ. ಕವಿತೆ ಬಹಳ ಸೊಗಸಾಗಿದೆ. ಹಳ್ಳಿಯ ಮನೆವಾರ್ತೆಯ ಈ ಕತೆಗೆ ತಕ್ಕ ಮನೆವಾರ್ತೆಯ ಮಾತುಗಳು, ಮನೆವಾರ್ತೆಯವೇ ಅಲಂಕಾರಗಳು ಇವಕ್ಕೆ ಸಾಹಜಿಕವಾಗಿ ಹೊಂದಿಕೆಯಾಗಿವೆ. ಅಷ್ಟು ನೇರಾಗಿ ಅಚ್ಚುಕಟ್ಟಾಗಿವೆ. ಮೊಗಕಾಣುವಷ್ಟು ತಿಳಿಯ ಹರಿತದಿಂದ ಸಾಗುತ್ತಿರುವ ಶೈಲಿಯನ್ನು ಕುರಿತು ಹೀಗೆ ಹಾಗೆಂದು ತಿದ್ದತಕ್ಕ ಮಾತುಗಳು ಇದ್ದಾವೆಂದು ನನಗೆ ತೋರುವುದಿಲ್ಲ. ಇದು ಓದತಕ್ಕ ಕವಿತೆ, ಓದಿ ಮೆಚ್ಚತಕ್ಕ ಕವಿತೆ, ಮೆಚ್ಚಿ ಓದತಕ್ಕ ಕವಿತೆ. ಇದನ್ನು ತಾವು ಕನ್ನಡಿಗರಿಗೆ ನೀಡಿರುವ, ದೇವರು ತಮ್ಮಿಂದ ನೀಡಿಸಿರುವ ಬಗ್ಗೆ, ತಮ್ಮನ್ನು ಅಭಿನಂದಿಸುತ್ತೇನೆ; ಆತನಿಗೆ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ತಾವೆಂದಿರುವ ಮೇರೆಗೆ ಇದು ಕ್ಷುದ್ರ ಕಾವ್ಯವಲ್ಲ - ಚಿಕ್ಕದೆಂಬ ಕಾರಣದಿಂದ ಹಾಗೆಂದಿರುವಿರಾದರೆ. "ಕ್ಷುದ್ರ" ಎಂಬ ಪೂರ್ವಪದವು ಆ ಅರ್ಥದಲ್ಲಿ ಇದಕ್ಕೆ ತೀರ ಅನುಚಿತವೇ ಸರಿ; ಈ ಕವಿತೆಯ ಯೋಗ್ಯತೆಯ ದೃಷ್ಟಿಯಿಂದ ಆ ಗುಣವಾಚಿ ಇದಕ್ಕೆ ಅಸಮಂಜಸವೇ ಸರಿ. ಹಳ್ಳಿಯ ಬಾಳನ್ನು ಬಣ್ಣಿಸುವ ಈ ಕವಿತೆಗೆ "ಶ್ವಮೇಧ" ಎಂಬ ಅಷ್ಟೊಂದು ದೊಡ್ಡ ಹೆಸರಾದರೂ ಕಿವಿಗಿಂತ ಓಲೆ ಗಾತ್ರವೆಂಬಂತೆ ತೋರುತ್ತದೆ. ಹೀಗೆಂಬುದರಿಂದ ಆ ಹೆಸರನ್ನು ತೊರೆದು ಬಿಡಬೇಕೆಂದು ಹೇಳುವವನಲ್ಲ. ನನಗೆ ತೋರಿದುದನ್ನು ಹೇಳಿರುವೆನಷ್ಟೆ. ದಯಮಾಡಿ ಬೇಸರಿಸಲಾಗದು. ಶ್ರೀ ದೇವರು ತಮ್ಮಿಂದ ಇತೋಪ್ಯಧಿಕವಾಗಿ ಸೊಗಸಾಗಿರುವ ಕವಿತೆಗಳನ್ನು ಬರೆಯಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಸೇಡಿಯಾಪು ಕೃಷ್ಣಭಟ್ಟ
ಮಂಗಳೂರು-2.

[22]

ಮಂಜೇಶ್ವರ,
ಜನವರಿ 21, 1949.

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಅತ್ಯಂತ ಪ್ರೀತಿಪೂರ್ವಕವಾಗಿ ಕಳಿಸಿರುವ ತಮ್ಮ "ಕೆಲವು ಸಣ್ಣ ಕಾವ್ಯಗಳು" ಎಂಬ ಪುಸ್ತಕ ನನಗೆ ಇವತ್ತು ಮುಟ್ಟಿತು. ಆ ಬಗ್ಗೆ ತಮಗೆ ತುಂಬಾ ಅಭಾರಿಯಾಗಿದ್ದೇನೆ. ಪುಸ್ತಕ ಕೈಸೇರುತ್ತಲೆ ನಾನು ಈ ವರೆಗೆ ಕಂಡಿಲ್ಲದ "ಪುಣ್ಯಲಹರಿ"ಯನ್ನು ಓದಿದೆ. ಕವಿತೆ ಬಹು ಸೊಗಸಾಗಿದೆ. ತುಂಬಾ ಮೇಲಾಗಿದೆ. ಮಿಕ್ಕ ಕವಿತೆಗಳನ್ನೂ ಈ ಮುಂಚೆ ಪ್ರಕಟವಾದಂತೆ ಆಗಾಗ್ಗೆ ಓದಿ ಬಹಳ ಸಂತೋಷಿಸಿರುತ್ತೇನೆ, ಹಾಗೂ ಯಥಾವಕಾಶವಾಗಿ ಅವನ್ನು ಮತ್ತೊಮ್ಮೆ ಓದಲಿದ್ದೇನೆ. ಈ ಕವಿತೆಗಳನ್ನೆಲ್ಲ ಒಟ್ಟವಿಸಿ, ಪುಸ್ತಕರೂಪವಾಗಿ ಪ್ರಕಟಿಸಿ, ಕನ್ನಡ ಕಾವ್ಯ ಸಾಹಿತ್ಯಾಭಿವೃದ್ಧಿಗೆ ತಾವು ಮಾಡಿರುವ ಉಪಕಾರದ ಬಗ್ಗೆ ತಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ. ಇತೋಪ್ಯಾತಿಶಯವಾದ ಕಾವ್ಯರಚನೆಯನ್ನು ತಾವು ಮಾಡುತ್ತಿರುವಂತೆ ಶ್ರೀ ದೇವರು ತಮ್ಮನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಸೇಡಿಯಾಪು ಕೃಷ್ಣಭಟ್ಟ,
ಮಂಗಳೂರು-2.

[23]

ಮಂಜೇಶ್ವರ,
ಜನವರಿ 12, 52.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಹತ್ತನೆಯ ತಾರೀಕಿನ ಕಾರ್ಡು ಇವತ್ತು ಮುಟ್ಟಿತು. ತಾವು ಅಪೇಕ್ಷಿಸಿರುವ ಮೇರೆಗೆ ಕೈ. ವಾ. ಮುಳಿಯ ಶಂಕರ ಭಟ್ಟರ ಶ್ರೀ ರಾಮಾಶ್ವಮೇಧದ ಹೊಸಕನ್ನಡ ಪರಿವರ್ತನೆಯನ್ನು ಇವತ್ತು ರಿಜಿಸ್ಟರ್ಡ್ ಬುಕ್‌ಪೋಸ್ಟ್ ದ್ವಾರಾ ತಮಗೆ ಕಳುಹಿಸಿರುತ್ತೇನೆ. ತಮ್ಮ ಕೆಲಸ ಮುಗಿಯುತ್ತಲೇ ಅದನ್ನು ಇತ್ತ ಕಡೆಗೆ ಮರಳಿ ಕಳಿಸಿ ಕೊಡಿರಿ. ತುಂಬ ಉಪಕಾರ. ಅದರ ಬೇರೆ ಪ್ರತಿ ಇಲ್ಲಿ ನಾನು ಬಲ್ಲಷ್ಟರ ಮಟ್ಟಿಗೆ ಎಲ್ಲಿಯೂ ಇಲ್ಲ. ಶ್ರೀ ಶ್ರೀ ಭಟ್ಟರು ಮೂ

ಲನಲ್ಲಿ ಅವರಿಗೆ ಅರ್ಥವಾಗದ ಶಬ್ದಗಳಿಗೆ ಪರಿವರ್ತನದಲ್ಲಿ ಅವೇ ಶಬ್ದಗಳನ್ನು ಉಪಯೋಗಿಸಿರುತ್ತಾರೆ. ಅನಿವಾರ್ಯವಾದ ಎಡೆಗಳಲ್ಲಿ ಹೀಗೆ ಮಾಡದೆ ಗತ್ಯಂತರವಿಲ್ಲವಾದರೂ ಎಲ್ಲಾ ಎಡೆಗಳಲ್ಲಿ ಹಾಗೆ ಮಾಡಿದರೆ ಸಾಧುವೆನಿಸದು. ಅವಲ್ಲದೆ ಪರಿವರ್ತನ ವೆಂದರೆ ಶಬ್ದಕ್ಕೆ ಶಬ್ದದಂತೆ ಇರಿಸಬೇಕಲ್ಲದೆ ಒಂದು ಶಬ್ದಕ್ಕೆ ಹಲವು ಶಬ್ದಗಳನ್ನು ಕೊಡಬಾರದು. ಅದು ಪರಿವರ್ತನವಲ್ಲ. "ದಂಡಾನ್ವಯ" (Paraphrase) ಆಯಿತು. ತಮ್ಮದರಲ್ಲಿ ನಾನು ಕಂಡಿರುವಲ್ಲಿ ಒಂದೆರಡು ಸಾರಿ ಹಾಗಾಗಿದೆ. ಇನ್ನು ಹಾಗಾಗದಂತೆ ಜಾಗ್ರತೆಯಾಗಿ ನೋಡಿಕೊಂಡರೆ ಲೇಸು. ತಾವು ಕೈಗೊಂಡಿರುವ ಉದ್ಯೋಗದಲ್ಲಿ ಶ್ರೀ ದೇವರು ತಮ್ಮನ್ನು ಬೆಂಬಲಿಸಿ ಅದನ್ನು ಯಶಸ್ವಿಯಾಗಿ ಕೊನೆಗಾಣಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ.

M. Govind Pai

ಸಮೇತನಹಳ್ಳಿ ರಾಮರಾಯ,
ಆರೋಗ್ಯತರಬೇತಿ ಕೇಂದ್ರ,
ರಾಮನಗರ(ಬೆಂಗಳೂರು ಜಿಲ್ಲೆ)

**[24]**

ಮಂಜೇಶ್ವರ,
4-2-55.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಕಳೆದ ಜನವರಿ 16ನೆಯ ತಾರೀಕಿನ ಪತ್ರವೂ ಅದರೊಂದಿಗೆ ಮಡಗಿ ಕಳುಹಿಸಿದ "ಕಲ್ಪನೆ"ಯೂ ಇಲ್ಲಿಗೆ ಮುಟ್ಟಿ 15 ದಿನಗಳಿಗೆ ಮಿಕ್ಕಿದರೂ, ಈ ವರೆಗೆ ಪ್ರತ್ಯುತ್ತರ ಬರೆಯಲಾಗಲಿಲ್ಲ. ನನಗೆ 2-3 ತಿಂಗಳ ಹಿಂದೆ ಕಠಿಣವಾದ ಕಾಯಿಲೆಯಾಗಿ ಅದರಿಂದ ಕಳಕೊಂಡ ತ್ರಾಣವು ಇನ್ನೂ ತೀರಿಲ್ಲದೆ ಯಾವ ಕೆಲಸಕ್ಕೂ ಮನಸ್ಸು ಬಾರ ದ ಅವಸ್ಥೆ ಒಂದು ಕಡೆ, ನಾನು ಕೈಕೊಂಡು ಈ ವರೆಗೆ ಮಾಡಿ ಮುಗಿಸಿಲ್ಲದ ಕೆಲಸಗಳ ಕಡೆಗೆ ತಾನೇ ಹೊರತು ಬೇರೆ ಯಾವ ಕಡೆಗೂ ಈಗ ಮನಸ್ಸು ಹೋಗಲೊಲ್ಲದ ಅವಸ್ಥೆ ಮತ್ತೊಂದು ಕಡೆ. ಹೀಗೆ ಮನಸ್ಸು ಕವಲೊಡೆದಿರುವ ಕಾರಣ ಆ ಅವಧಿಗಳಲ್ಲಿ ಈ ಬಗೆಯ ವಿಳಂಬ ಉಂಟಾಗಬೇಕಾಯಿತು. ದಯಮಾಡಿ ಕ್ಷಮಿಸುವುದು. ನಾನು ಮಾಡಿರುವ, ಇನ್ನೂ ಅಲ್ಲಿಷ್ಟು ಇಲ್ಲಿಷ್ಟು ಮಾಡುತ್ತಿರುವ ಇತಿಹಾಸ ಸಂಶೋಧನದಲ್ಲಿ ಹೆಚ್ಚಾಗಿ ಕಾಲನಿರ್ಣಯದ ಸಮಸ್ಯೆಗಳನ್ನು ಎತ್ತಿಕೊಂಡು, ಅವನ್ನು ಬಗೆಹರಿಸಲಿಕ್ಕೆ ತಾನೆ ಯತ್ನಿಸಿರುವೆನಲ್ಲದೆ, ಐತಿಹಾಸಿಕ ಕಥಾಭಾಗದ ಕಡೆಗೆ ಮನಸ್ಸನ್ನು ಹಾಯಿಸಲಿಲ್ಲ. ಅದಾಗಿ ತಾವು ನನ್ನಿಂದ ನಿರೀಕ್ಷಿಸುವ ಸೇವೆಯನ್ನು ಸಲ್ಲಿಸುವರೆ ನಾನು ಸರ್ವಥಾ ಯೋಗ್ಯನಲ್ಲ. ಇದು ಮನಃಪೂರ್ವಕವಾಗಿ ಹೇಳುವ ಮಾತು. ತಾವಿದನ್ನು ಕಂಡಿತ ವಾಗಿ ನಂಬಬಹುದು. ಆದರೂ ತಮ್ಮ 'ಕಲ್ಪನೆ'ಯನ್ನು ಓದಿನೋಡಿದೆ. ನನಗಾದರೊ ಅದರಲ್ಲಿ ಯಾವ ಬಗೆಯ ಕಾಲಾತಿಪತ್ತಿಯ ದೋಷವಾದರೂ ಇರುವಂತೆ (anachronism) ತೋರುವುದಿಲ್ಲ. ಇದು ಸತ್ಯ. ತಮ್ಮನ್ನು ಅಭಿನಂದಿಸುತ್ತೇನೆ. ತಮಗಿನ್ನೂ ಆತ್ಮವಿಶ್ವಾಸ ಸಾಲದಾದರೆ, ಮೈಸೂರಿನಲ್ಲಿ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳಿದ್ದಾರೆ.( M. A. D. Litt) ಅವರನ್ನು ವಿಚಾರಿಸಿ ಅವರು ತೋರಿಸುವ ದಾರಿಯಲ್ಲಿ ಮುನ್ನಡೆಯಿರಿ. ಅಂದರೆ ಆ ಮೇಲೆ ಕಾಲಾತಿಪತ್ತಿಯ ಯಾವ ಭೀತಿಯೂ ಇದ್ದಿರಲಾರದು.

ಜತೆಗೆ ಈ ಕೆಲವು ಪುಸ್ತಕಗಳನ್ನೂ ಓದಿರಿ.

(1) Epigraphia Carnatica.
Vol: II. ಶ್ರವಣಬೆಳ್ಗೊಳದ ಶಾಸನಗಳು.

(2) Epigraphia Carnatica.
Vol V: ಹಾಸನ ಜಿಲ್ಲೆಯ ಶಾಸನಗಳು.

(3) Fleet's Kanarese Dynasties
(Hoysala Dynasty)

(4) Sri R. S. Panchamukhi.
ಕನ್ನಡದ ರಾಜಮನೆತನಗಳು.

ಇವು ಅಲ್ಲಿಯ ಹೊಯ್ಸಳರ ಮುಖ್ಯವಾಗಿ ವಿಷ್ಣುವರ್ಧನನ ಶಾಸನಗಳು.

ಇನ್ನು ಐತಿಹಾಸಿಕ ಕಥೆಗಳನ್ನು ಎತ್ತಿಕೊಂಡು ಕಾದಂಬರಿಗಳನ್ನು ರಚಿಸಿದ ಯುರೋಪಿನ ಮಹಾ ಕಾದಂಬರಿಕಾರರು ಕೂಡಾ ಅಲ್ಲಲ್ಲಿ ಎಡಹದೆ ಇಲ್ಲ. ಆದ ಕಾರಣ ಆ ದೋಷಕ್ಕೆ ಈಡಾದೆನೆಂದು ಅಂಜಿ ಕೈಕಟ್ಟಿಕೊಂಡು ಸುಮ್ಮನಿರಬೇಡಿ. ಶ್ರೀ ದೇವರಲ್ಲಿ ಸಂಪೂರ್ಣ ಭಾರವಿಕ್ಕಿ ಬರೆಯಲಿಕ್ಕೆ ತೊಡಗಿರಿ. ತಮ್ಮ ಕಾದಂಬರಿಯನ್ನು ಸುಸೂತ್ರವಾಗಿ ಕೊನೆಗಾಣಿಸುವುದೂ, ಅದ

ನ್ನು ಯಶಸ್ವಿಯಾಗಿಸುವುದೂ ತಮ್ಮದಲ್ಲ, ಆತನ ಹೊಣೆಯೆಂದೇ ಬಗೆಯಿರಿ. ಆತನು ಹಾಗೆಯೇ ತಮ್ಮ ಅಭೀಷ್ಟವನ್ನು ನೆರವೇರಿಸುವನು. ಇದೇ ಆತನ ಹೆಸರಿನಲ್ಲಿ ತಮ್ಮ ಬೆನ್ನಿನ ಮೇಲೆ ನನ್ನ ತಟ್ಟು. ಸಾಕು. ಇತಿ ಶಮ್.

ಇತಿ ನಮಸ್ಕಾರ,
M. Govind Pai

**P. S.** ತಮ್ಮ ಕಲ್ಪನೆಯನ್ನು (Book Post) ದ್ವಾರಾ (Express Delivery) ತಮಗೆ ಇಂದಿನ ಟಪ್ಪಾಲಿನಲ್ಲೇ ಮರಳಿ ಕಳುಹಿಸಿರುತ್ತೇನೆ.

ಸಮೇತನಹಳ್ಳಿ ರಾಮರಾಯ,
ಆರೋಗ್ಯ ತರಬೇತಿ ಕೇಂದ್ರ,
ರಾಮನಗರ (ಬೆಂಗಳೂರು ಜಿಲ್ಲೆ)

[25]

ಮಂಜೇಶ್ವರ,
5–4–56.

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ "ಕೆನೆಮೊಸರು"ಎಂಬ ಮಕ್ಕಳ ಚಿಕ್ಕ ಕಥೆಗಳ ಪುಸ್ತಕ ಇವತ್ತು ಇಲ್ಲಿಗೆ ಮುಟ್ಟಿದೆ. ಆ ಬಗ್ಗೆ ತುಂಬ ಧನ್ಯವಾದಗಳು. ಓದಿದೆ. ಕಥೆಗಳೆಲ್ಲ ಮಕ್ಕಳಿಗೆ ತಕ್ಕಂತಿವೆ, ಇನಿದಾಗಿವೆ, ಚಲೋದಾಗಿವೆ. ತಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಹಾಗೂ ಈ ಚಿಕ್ಕ ಪುಸ್ತಕವು ಕೂಡಾ ನಾಡಿನಲ್ಲೆಲ್ಲ ಮಕ್ಕಳ ಅಕ್ಕರೆಗೂ ಅಯ್ಯಗಳರ ಮೆಚ್ಚುಗೆಗೂ ಪಾತ್ರವಾಗುವಂತೆಯೂ, ತಾವು ಈ ಮುಂದೆ ಇದಕ್ಕೂ ಮೇಲು ಮೊದಲಾದ ಕೃತಿಗಳನ್ನು ರಚಿಸಿ ಶಾನೆ ಯಶಸ್ವಿಯಾಗುವಂತೆಯೂ ಶ್ರೀ ದೇವರು ತಮ್ಮಲ್ಲಿ ಅನುಗ್ರಹಿಸಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಶ್ರೀ ಅನಂತರಾವ್ ಕೆ. ಬೋಸಗೆ
ಶಾಂತಿ ಸೇವಾ ಸದನ
ಶೇಡಬಾಳ.

[26]

ಮಂಜೇಶ್ವರ,
18–10–57.

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ "ಮಧುರಯಾನ" ಎಂಬ ತಮ್ಮ ಕವಿತೆಗಳ ಪುಸ್ತಕ ಇಲ್ಲಿಗೆ ಮುಟ್ಟಿ ಧನ್ಯವಾದಗಳು. ಓದಿ ನೋಡಿದೆ. ಕವಿತೆಗಳೆಲ್ಲ ಬಹಳ ಚೆನ್ನಾಗಿವೆ. ಅವಲ್ಲಿ ಈ ಕೆಲವು ನನ್ನ ಮನೋದೃಷ್ಟಿಗಂತೂ ಮಿಕ್ಕವಕ್ಕಿಂತ ಚಲೋದೆನಿಸುತ್ತವೆ. (1) ದೊಡ್ಡವರ ದಾರಿ (2) ಮರುಕಳಿಸಿದ ನೆನಪು (3) ಒಂದು ಸಂಜೆ, (4) ನೆರಳ ಸಂತೆ, (5) ಚಿತ್ರ ಚಿಲುಮೆಗೆ, (6) ಇಹುದು ದೂರ-ಇನ್ನು ಪೂರ !, (7) ಸುಪ್ತ ಶಕ್ತಿ, (8) ನಿಜದ ನಡೆಗಾಗಿ, (9) ಅನಂತರ, (10) ಸೋತ ಮನ, (11) ದೀಪಾವಳಿ, (12) ಅವಳ ಕುಣಿತ, (13) ಹರಸುವೆನು, ಓಗೆಳೆಯ ! ಇ ಇ-

ಇವೆಲ್ಲವಲ್ಲಿ ಇರುವ ಈ ಮೊದಲಾದ ಕೆಲವು ಮಾತುಗಳನ್ನು ಒಮ್ಮೆ ಓದಿದೆವೆಂದರೆ, ಮತ್ತೆ ಅವು ನೆನವಿನಿಂದ ಜಗುಳಿ ಹೋಗುವಂತಿಲ್ಲ-(1) "ಮೌನಮಂಟಪದಲ್ಲಿ ಮನವು ಮಲಗಿರುವಾಗ" (ಪುಟ 4) (2) "ಬೆಳಕಿನ ಜನ್ಮಕ್ಕೆ ಕತ್ತಲೆ ಮೂಲವೊ" (6); (3) "ಹಲವು ನಾಮದ ದೇವರೊಬ್ಬನಂತೆ" (9); (4) "ಮಾತುಗಳಿಗೇನಂತೆ? ಸುಂಕವಂತೂ ಇಲ್ಲ" (13); (5) "ಎಣ್ಣೆಯೆ ಇಲ್ಲದ ಕಡುಬಡವನ ಮನೆಯಲಿ ಕಗ್ಗತ್ತಲೆ ದೀಪ" (45); (ಬಹಳ ಚಲೋದಿದೆ ಈ ರೂಪಕೋಕ್ತಿ !) (6); "ಅಣುಬಾಂಬು ಹರಿಯ ಹನ್ನೊಂದನೆಯ ಅವತಾರ" (ಪುಟ 46); (7) "ಹೆದರಿಕೆಗೆ ಸೆರೆಯಾಗಬೇಡ" (49); (8) "ದುಷ್ಟಶಕ್ತಿಗಿಂದು ವಿಜಯ !" (80) ಇ ಇ-

ಆದರೆ ಈ ಕವನ ಸಂಗ್ರಹದ ಅಕ್ಷರಿಕೆಯಲ್ಲಿ ಬೇಕಾದಷ್ಟು ಎಡಹುಗಳಿವೆ. ಉದಾ: "ತತ್ತ್ವ"ಎಂದು ಕೊನೆಯ ಎರಡನೆಯ ತ್ರ್ಯಕ್ಷರದಲ್ಲಿ 2 ತ-ಕಾರಗಳು ಇರಬೇಕಾದ ಶಬ್ದದಲ್ಲಿ ತುದಿಯಿಂದ ತುದಿವರೆಗೆ ಒಂದೇ ತ-ಕಾರವಿದೆ. "ಆಪ-ಯಕ್ಷನ" (ಪುಟ8) ಎಂದಿರಬೇಕಾದಲ್ಲಿ "ಆಪಯಕ್ಷನ" ಎಂದಿದೆ; (ಪುಟ 16); "ಇಹದ ಕಷ್ಟಗಳನ್ನು ಮರೆಸಿ" ಇಲ್ಲಿ-"ನು" ಎಂದಿರಬೇಕಾದಲ್ಲಿ "ನ್ನು"

ಎಂದು ಒತ್ತಕ್ಷರ; (ಪು.27) "ಇದಮಿತ್ಥಂ" ಎಂದಿರಬೇಕಾದಲ್ಲಿ "ಇದಮಿಥ್ಥಂ" ಇ ಇ-ಇಂಥ ದೋಷಗಳು ಇರಲಾಗದು; (ಪುಟ 50) ಹಸುಗಳಿ ನಸಿನ"-"ಹಸುಳೆಗನಸಿನ" ಎಂದಿರಬೇಕಾದಲ್ಲಿ. ಇದು ಅಚ್ಚಿನ ದೋಷವೆಂದು ಸ್ಪಷ್ಟವಿದೆ. ಇಷ್ಟು ಚಲೋ ಕವಿತೆಗಳನ್ನು ರಚಿಸಿರುವ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. ಇವಕ್ಕಿಂತ ಮೇಲುಮೇಲಾದ ಕವಿತೆಗಳನ್ನು ತಾವು ಮುಂದೆ ರಚಿಸುತ್ತ, ಕನ್ನಡ ಕವಿತಾ ಸಾಹಿತ್ಯದಲ್ಲಿ ತಾವು ಹೆಸರುವಾಸಿಯಾಗುವಂತೆ ಶ್ರೀ ಪರಮಾತ್ಮನು ತಮ್ಮಲ್ಲಿ ದಯೆದೋರಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ಶಮ್ ನಮಸ್ಕಾರ.

**P. S.** ತಮ್ಮ 14ನೆಯ ತಾರೀಕಿನ ಕಾರ್ಡು ಕೂಡಾ ಪುಸ್ತಕದೊಂದಿಗೇನೇ ಕೈ ಸೇರಿ ಆ ಬಗ್ಗೂ ಧನ್ಯವಾದಗಳು.

**P. S.** ಒಂದು ಮಾತನ್ನು ಮೇಲಣ ಪ್ರತ್ಯುತ್ತರದಲ್ಲಿ ಸೇರಿಸಬೇಕೆಂದಿದ್ದೆ. ಮರೆತುಹೋಯಿತು.

ಅದು ಹೀಗಿದೆ-ತಮ್ಮ ಪುಸ್ತಕದ 35ನೆಯ ಪುಟದಲ್ಲಿ "ನೀರಿನಲಿ ನೆನೆದಿರುವ ಬೆಂಕಿಪೊಟ್ಟಣದಂತೆ!" ಎಂದೂ" ನೆನೆದಿರುವ ಪೊಟ್ಟಣವು ಬಿಸಿಲಿನಲಿ ಒಣಗಿದರೆ-ಸುಡುವ ಶಕ್ತಿಯನೆಲ್ಲಿ ಗಳಿಸುವುದು?" ಎಂದೂ ಇದೆ. ಇದು ಅಪ್ಪಟ ಇತ್ತೀಚಿನ ರೂಪಕೋಕ್ತಿ. ನಮ್ಮ ಹಳೆಯ ಕವಿಗಳು ಸರ್ವಥಾ ಮನವರಿಸಿಲ್ಲದ ರೂಪಕಾಲಂಕಾರವಿದು ಎಂದು ಸ್ವಯಂ ವ್ಯಕ್ತವಿದೆ. ನಮ್ಮಂದಿನವರೂ ನಾನು ಬಲ್ಲಷ್ಟರವರೆಗಾದರೂ, ಯಾರೂ ಈ ವರೆಗೆ ಬಳಸಿಲ್ಲದ ರೂಪಕೋಕ್ತಿ. ಬಹಳ ಚಲೋದಾದ, ಅಗ್ಗಳಿಯದೆನಿಸುವ ರೂಪಕೋಕ್ತಿ. ತಮ್ಮನ್ನು ಈ ಬಗ್ಗೆ ತುಂಬಾ ಅಭಿನಂದಿಸುತ್ತೇನೆ. ಶ್ರೀ ದೇವರು ತಮಗೆ ದೀರ್ಘಾಯುರಾರೋಗ್ಯವಿತ್ತು ತಮ್ಮಿಂದ ಕನ್ನಡ ಕಾವ್ಯ ಸಾಹಿತ್ಯದಲ್ಲಿ ಅತ್ಯುತ್ತಮವಾದ ಕೆಲಸವನ್ನು ಮಾಡಿಸಿಕೊಳ್ಳಲಿ ಎಂದು ಆತನಲ್ಲಿ ಮನವಾರೆ ಪ್ರಾರ್ಥಿಸುತ್ತೇನೆ.

ಇತಿ ಶಮ್ ನಮಸ್ಕಾರ.
M. Govind Pai

ಕ.ಮ.ಶಿ. ಚಂದ್ರಶೇಖರಯ್ಯ,
ಬೈಲಹೊಂಗಲ,
(ಬೆಳಗಾವಿ ಜಿಲ್ಲೆ)

**[27]**

ಮಂಜೇಶ್ವರ,
27–2–58.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 11ನೆಯ ತಾರೀಕಿನ ಕಾರ್ಡು ಅದರೊಂದಿಗೆ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ "ಬೆನ್ನು(ಬೆನ್ನ?) ಹಿಂದಿನ ಕಣ್ಣು" ಎಂಬ ಕಥಾ ಸಂಗ್ರಹದ ಪುಸ್ತಕವೂ ಇಲ್ಲಿಗೆ ಮುಟ್ಟಿ ಧನ್ಯವಾದಗಳು. ಓದಿ ನೋಡಿದೆ. ಕಥೆಗಳೆಲ್ಲ ಬಲು ಸೊಗಸಾಗಿವೆ. ತಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಇದಕ್ಕಿಂತ ಹೆಚ್ಚಾಗಿ, ಅಂದರೆ ಆಯಾ ಕಥೆಯನ್ನೇ ಕುರಿತು ಬೇರೆ ಬೇರೆಯಾಗಿ ಎಸಳೆಸಳಾಗಿ ಬರೆವೆನೆಂದರೆ ಇತ್ತೀಚೆಯ ಅನಾರೋಗ್ಯ ಹಾಗೂ ಅದರಿಂದ ಉಂಟಾಗಿರುವ ಅಶಕ್ತಿಯ ಕಾರಣ ಮನಸ್ಸಿಗೆ ಹಾಗೆ ಬರೆಯತಕ್ಕಷ್ಟರ ತಾಳ್ಮೆಯೂ ಇಲ್ಲ. ಬರೆಯಬೇಕೆಂದುಳ್ಳ ಇಷ್ಟದೊಡನೆ ಮನಸ್ಸು ಜತೆಗೂಡಲೂ ಒಲ್ಲ. ಹಾಗಾಗಿ ಆ ಲಸ ತೀರ ಅಸಾಧ್ಯವಾಗಿದೆ. ದಯಮಾಡಿ ಕ್ಷಮಿಸುವುದು. ತಾವು ಇನ್ನು ಮುಂದೆ ಮುಂದೆ ಇವಕ್ಕಿಂತ ಮೇಲು ಮೇಲಾದ ಕಥೆಗಳನ್ನು ಕಾದಂಬರಿಗಳನ್ನು ಬರೆಯುತ್ತಾ ಕನ್ನಡ ಸಾಹಿತ್ಯದಲ್ಲಿ ನುರಿತ ಸಾಹಿತಿಗಳಾಗಿ ಹೆಸರು ಪಡೆದು ದೀರ್ಘಾಯುರಾರೋಗ್ಯಶಾಲಿಗಳಾಗಿ ಬಾಳುತ್ತಿರುವಂತೆ ಶ್ರೀ ದೇವರು ತಮ್ಮನ್ನು ಕಾಪಾಡಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇತಿ ಶಮ್,
M. Govind Pai

ದು.ನಿಂ.ಬೆಳಗಲಿ,
ಬನಹಟ್ಟಿ,
(ಬಿಜಾಪುರ ಜಿಲ್ಲೆ)

**[28]**

ಮಂಜೇಶ್ವರ,
13–8–58.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 11ನೆಯ ತಾರೀಕಿನ ಪತ್ರವೂ ಅದರೊಂದಿಗೆ ಇರಿಸಿ ಕಳುಹಿಸಿದ ಮೂರು (3) ಅಂಚೆಯ ಚೀಟಿಗಳೂ (10+2+2) ಈವತ್ತು ಮುಟ್ಟಿದುವು.

ತಾವು ರಚಿಸಿದ ಹಾಡುಗಳನ್ನು ನೋಡಿದೆ. ತಕ್ಕಷ್ಟು ಚೆನ್ನಾಗಿವೆ. ಪ್ರಥಮ ಪ್ರಯತ್ನವಾದರೆ ಒಳ್ಳೆಯವೇ ಸರಿ. ವತ್ಮುನ್ನು ಅಭಿನಂದಿಸುತ್ತೇನೆ. ಬೊಗಳಿ ಬೊಗಳಿ ರಾಗ(ಗಾಯನಕಲೆ) ಎಂದು ಹೇಗೋ ಹಾಗೆಯೇ ಬರೆದು ಬರೆದು (ಹಾಗೂ ಹರಿದೂ ಹರಿದೂ) ಕವನ ಎಂದು ಕೂಡಾ. ಹೀಗೇ ಬರೆಯುತ್ತಾ ಹೋಗಿ ಮನಸ್ಸಿಗೆ ಒಪ್ಪದನ್ನು ಅಲ್ಲಿಗೇ ಹರಿದು ಹಾಕಿ ಮುಂದುವರಿಸುತ್ತಿದ್ದರೆ ಮುಂದೆ ಒಳ್ಳೆಯ ಕವಿಗಳಾಗುವಿರಿ. ಶ್ರೀ ದೇವರು ತಮ್ಮಲ್ಲಿ ಹಾಗೇ ಅನುಗ್ರಹಿಸಲಿ.

ಇತಿ ನಮಸ್ಕಾರ.

Enclosures :—

(1) ತಮ್ಮ ಪತ್ರ — ಅದರಲ್ಲಿರುವ ಆ ನಾಲ್ಕು ಹಾಡುಗಳನ್ನು ನಾನು ಬಲ್ಲಷ್ಟರ ಮಟ್ಟಿಗೆ ತಿದ್ದಿರುತ್ತೇನೆ.

(2) ತಾವು ಕಳುಹಿಸಿರುವ 3 ಅಂಚೆಯ ಚೀಟಿಗಳು.

M. Govind Pai

ಬಿ. ಟಿ. ರಂಗಸ್ವಾಮಿ,
ಬಿ-16 ಎನ್‌ಸಿಲೇನ್,
ಆರ್. ಟಿ ಸ್ಟ್ರೀಟ್ ಕ್ರಾಸ್,
6 ಬೆಂಗಳೂರು ಸಿಟಿ.

[29]

ಮಂಜೇಶ್ವರ,
26–10–58.

ಗೋವಿಂದ ಪೈ ಮಾಡುವ ನಮಸ್ಕಾರ. ಶ್ರೀ ರವೀಂದ್ರರ "ಗೀತಾಂಜಲಿ"ಯ ಇಂಗ್ಲೀಷ್ ಭಾಷಾಂತರಕ್ಕೆ ತಾವು ಮಾಡಿರುವ ಕನ್ನಡ ಭಾಷಾಂತರದ ತಮ್ಮ ಹಸ್ತಪ್ರತಿಯೂ, ಅದರೊಂದಿಗೆ ಕಳುಹಿಸಿದ ತಮ್ಮ ಈ ತಿಂಗಳ 11ನೆಯ ತಾರೀಕಿನ ಪತ್ರವೂ ಇಲ್ಲಿಗೆ ಮುಟ್ಟಿ ಆ ಬಗ್ಗೆ ತಮಗೆ ಧನ್ಯವಾದಗಳು.

ಆದರೆ ನನ್ನ ದುರದೃಷ್ಟದಿಂದ ಒಂದು ಕಡೆ ನನಗೀಗ ಇಳಿವಯಸ್ಸು, ಮತ್ತೊಂದು ಕಡೆ ಅದರಿಂದಾಗತಕ್ಕ ಅಶಕ್ತಿ ಹಾಗೂ ಇತ್ತೀಚೆಗೆ ಆಗಿದ್ದ ಅಸೌಖ್ಯದಿಂದ ಉಂಟಾಗಿರುವ ಅಶಕ್ತಿ. ಇವುಗಳಿಂದಾಗಿ ನನ್ನಿಂದ ಈಗ ಯಾವ ಕೆಲಸವನ್ನೂ ಮಾಡಕೊಡುವುದಿಲ್ಲ. ಹೆಚ್ಚೇಕೆ? ತಮ್ಮ ಭಾಷಾಂತರವನ್ನು ಒಮ್ಮೆ ಆದ್ಯಂತವಾಗಿ. ಓದಿ ನೋಡುವಷ್ಟರ ತಾಳ್ಮೆ ಕೂಡಾ ಇಲ್ಲ ! ಅಂದ ಮೇಲೆ ನಾನು ಇದಕ್ಕೆ ಮುನ್ನುಡಿಯನ್ನು ಬರೆವುದೆಂದರೆ ಇನ್ನು ಈ ಜನ್ಮದಲ್ಲಿ ಸಲ್ಲ. ನನಗೆ ಅದು ಇನ್ನು ಸರ್ವಥಾ ಸಾಧ್ಯವಲ್ಲ. ಆದಕಾರಣ ನಾನು ತಮ್ಮ ಬಯಕೆಯನ್ನು ಸಲ್ಲಿಸಲಾರೆ ! ! ಹೀಗೆ ತಮ್ಮ ಅಪೇಕ್ಷೆಯನ್ನು ನನ್ನ ಪ್ರಾಯದ ಹಾಗೂ ನನ್ನ ಅನಾರೋಗ್ಯದ ದೆಸೆಯಿಂದ ನೆರವೇರಿಸಲಾರದ ಬಗ್ಗೆ ನನ್ನಲ್ಲಿ ಸರ್ವಥಾ ಯಾವೊಂದೂ ಬಗೆಯ ವಿಕಲ್ಪವೆಣಿಸದೆ ದಯಮಾಡಿ ನನ್ನನ್ನು ಕ್ಷಮಿಸಬೇಕಾಗಿ ವಿನಂತಿಸುತ್ತೇನೆ. ಆ ಬಗ್ಗೆ ನನ್ನ ಅನೇಕಾನೇಕ ಧನ್ಯವಾದಗಳು–

ತಮ್ಮ ಭಾಷಾಂತರದಲ್ಲಿಯ ಕೆಲಕೆಲ ಗೀತಗಳಲ್ಲಿ ನನ್ನ ಪ್ರಥಮ ದೃಷ್ಟಿಗೆ ತೋರಿದುದೆಂದರೆ, ಅದರಲ್ಲಿ ತಾವು ಉಪಯೋಗಿಸಿದ ವಿಶಿಷ್ಟ ಮಾದರಿಯ ಕನ್ನಡ ಭಾಷೆ ಹಾಗೂ ಶೈಲಿ. ಉದಾ: "ಅತ್ಯಂತ ಸಂತೋಷದಿಂದ" ಎಂಬಿತ್ಯಾದಿಯಾದ ಪ್ರಥಮ ಪದ್ಯವನ್ನು ನಾನಾದರೆ ಹೀಗೆ ಬರೆಯುತ್ತಿದ್ದೆ—"ನಿನ್ನ ಅತ್ಯಂತ ಸಂತೋಷದಿಂದ ನೀನು ನನ್ನನ್ನು ಅಂತ್ಯರಹಿತನನ್ನಾಗಿಸಿರುವಿ. ಈ ಒಡಕ ಪಾತ್ರವನ್ನು (ಈ ಪಾತ್ರೆಯನ್ನು) ಆಗಾಗ ನೀನು ಬರಿದಾಗಿಸುತ್ತಿರುವಿ. ನಿರಂತರವೂ ನೀನು ಇದರಲ್ಲಿ ನವಜೀವನವನ್ನು ತುಂಬಿಸುತ್ತಿರುವಿ." "ಬೆಟ್ಟವನ್ನು ಏರುತ್ತಿರುವಾಗ ಬೆಟ್ಟದಿಂದ ಇಳಿಯುತ್ತಿರುವಾಗ ಈ ಕೊಳಲನ್ನು ಹಿಡಿದು (or ಹಿಡಕೊಂಡು) ಅಮರ ರಾಗಗಳನ್ನು ನೀನು ನುಡಿಸುತ್ತಿರುವಿ (ಇತ್ಯಾದಿ) . . . . ತಾವು ಉಪಯೋಗಿಸಿದ ಬಗೆಯ ತಿರುಮುರುವಿನ ಭಾಷೆಯನ್ನು (ಉದಾ: ಅಂತ್ಯರಹಿತನಾಗಿಸಿದೆ ನೀನೆನ್ನನ್ನು ಇ) ಗದ್ಯದಲ್ಲಿ ನಾನೊಪ್ಪುವುದಿಲ್ಲ. (ಆದರೆ ತಾವೂ ಒಪ್ಪದಿರಬೇಕೆಂದೇನಿಲ್ಲ). ನಾನು ಒಪ್ಪುವ ಗದ್ಯ ಶೈಲಿ ಎಂದರೆ ಬಾಣದ ಗತಿಯಂತೆ ತೀರಾ ನೆಟ್ಟಗಾಗಿರಬೇಕು. ಇದೇ ನನ್ನ ಗದ್ಯ ಶೈಲಿಯ ಮೂಲ ಸೂತ್ರ. ನಾನು ಹೀಗೆ ಎನ್ನುವೆನೆಂದು ತಾವೂ ಹಾಗೆ ಎನ್ನಬೇಕೆಂದಿಲ್ಲ. ಅತಏವ ನನ್ನ ಈ ಮಾತನ್ನು ಬರೇ ಒಂದು ಸೂಚನೆ (Suggestion) ಎಂದು ತಿಳಿಯಬೇಕೇ ವಿನಾ ಆದೇಶ (Direetion) ಎಂದು ಸರ್ವಥಾ ಬಗೆಯಬಾರದು. ನೆನಪಿರಲಿ. ಇನ್ನೊಂದು ಮಾತು. 1924ನೆಯ ಇಸವಿಯಿಂದ 1927ನೆಯ ಇಸವಿಯೊಳಗೇನೋ ನಾನೂ ಇಂಗ್ಲೀಷು "ಗೀತಾಂಜಲಿ"ಯನ್ನು ಗದ್ಯದಲ್ಲೇ ಕನ್ನಡಿಸುತ್ತಿದ್ದೆ. ಆವರೆ ಸುಮಾರು 50ರಿಂದ 60ರೊಳಗೇನೋ ಪದ್ಯಗಳನ್ನು ಕನ್ನಡಿಸಿದ್ದೆ. ಅವುಗಳಲ್ಲಿ ಸುಮಾರು 36ಪದ್ಯಗಳ ಗದ್ಯ ಭಾಷಾಂತರ "ಕನ್ನಡ ಸಹಕಾರಿ" ಎಂಬ ಪಕ್ಷ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿ 2–3ರಂತೆ ಪ್ರಕಟವಾಗಿ ಬಂದಿದ್ದುವು. (ಅವುಗಳನ್ನು ಈಗ ನಿನ್ನೆ ಮೊನ್ನೆಯಿಂದ ಎಷ್ಟೋ ಹುಡುಕಾಡಿದೆ. ಅದು ಸಿಕ್ಕಲಿಲ್ಲ) ನಾನು ಬಂಗಾಳಿಯನ್ನು ಬಲ್ಲೆನಾದ್ದರಿಂದ ನನ್ನ ಕನ್ನಡ ಭಾಷಾಂತರದಲ್ಲಿ ಬಂಗಾಳಿಯನ್ನೂ ನೋಡುತ್ತಿದ್ದೆ. (ಆದರೆ ರವೀಂದ್ರರ ಇಂಗ್ಲೀಷು ಗೀತಾಂಜಲಿ ಬಂಗಾಳಿ ಗೀತಾಂಜಲಿಗಿಂತ ಎಷ್ಟೋ ಲೇಸಾಗಿದೆ.) ನನ್ನನ್ನು ಕನ್ನಡ ಭಾಷಾಂತರ ಮಾಡಲಿಕ್ಕೆ ಪ್ರೇರಿಸಿದ ಆ "ಕನ್ನಡ ಸಹಕಾರಿ"ಯ ಸಂಪಾದಕರಿಗೆ (Mr. late Sri Ullal Mangesh

Rao, Sub Asst. Inspeector of Scools, Retired) ಹೇಳಿದೆ, "ನಿಮ್ಮವರು ಎಷ್ಟೋಮಂದಿ ಸಾರಸ್ವತರು ಮುಂಬಯಿಯಲ್ಲಿ ಉಚ್ಚ ಪದವಿಗಳಲ್ಲಿ ಇದ್ದಾರೆ. ಅವರಿಗೆ ಬರೆದು ಅವರಲ್ಲಿ ಒಬ್ಬೊಬ್ಬರ ಮುಖಾಂತರವಾದರೂ ಲಂಡನಿನ (London) ಮ್ಯಾಕ್ಮಿಲನ್ Companyಯವರಿಂದ ಕನ್ನಡ ಭಾಷಾಂತರದ ಬಗ್ಗೆ ಅನುಮತಿಯನ್ನು ತರಿಸಿಕೊಳ್ಳಿ" ಎಂದು. ಅದಕ್ಕವರು ಬಿಡಿ ಪದ್ಯವನ್ನು ಮಾಸಪತ್ರಿಕೆಯಲ್ಲಿ ಪ್ರಕಟಮಾಡಲಿಕ್ಕೆ ಅನುಮತಿ ಬೇಕೆಂದಿಲ್ಲ. ಅದನ್ನು ಭಾಷಾಂತರಿಸಿ ಮುಗಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಆದ ಮೇಲೆ ತಾನು ಮ್ಯಾಕ್ಮಿಲನ್‌ರ ಅನುಮತಿಯನ್ನುತರಿಸುತ್ತೇನೆ, ಎಂದರು. ಅಷ್ಟರಲ್ಲಿ ಮುಂಬಯಿಯ.................. ರಿಂದ ನನಗೆ ಹೀಗೆ ಪತ್ರ ಬಂತು-"ತಾವು ದಯಮಾಡಿ ತಮ್ಮ ಭಾಷಾಂತರವನ್ನು ಮುಂದರಿಸಬಾರದು. ಭಾಷಾಂತರ ಮಾಡಿದ ಪದ್ಯಗಳ ಕೂಡ ಪ್ರತಿಗಳನ್ನು ಅವರಿಗೆ ಕಳಿಸಿಕೊಡಬೇಕು" ಎಂದು. ಹಾಗೆ ಮಾಡಿ ಕೈತೊಳಕೊಂಡೆ. ಆ ಪ್ರಕರಣ ಅಲ್ಲಿಗೆ ಮುಗಿಯಿತು. ತಮ್ಮ ಭಾಷಾಂತರವನ್ನು ಅವರ ಒಪ್ಪಿಗೆ ಪಡಕೊಳ್ಳದೆ ಪ್ರಕಟಿಸುವಿರಾದರೆ ತಮಗೂ ಅದೇ ಬಗೆಯು ವಿಡ್ಘೂರ ಬಂದೀತೆಂದು ತಮಗೆ ಮುಂಜಾಗ್ರತೆಯ ಬಗ್ಗೆ ತಾನೆ ಎಚ್ಚರಿಸಲಿಕ್ಕೆ ಬರೆದೆ. ಅನುಭವದ ಕಥೆಯನ್ನು ಇಲ್ಲಿ ಬರೆದು ತಮ್ಮ ಸಮಯವನ್ನು ಹಾಳು ಮಾಡಿರುತ್ತೇನೆ. ದಯಮಾಡಿ ಕ್ಷಮಿಸುವುದು.

ಇತಿ ನಮಸ್ಕಾರ,
M. Govind Pai

ವಿ. ಎ. ಶೆಣಾಯಿ,
ಪ್ರಕಾಶಕರು,
ಬಿ10, ಕರ್ನಾಟಕ ಬಿಲ್ಡಿಂಗ್,
ಮೊಗಲ್ ಲೇನ್,
ಮುಂಬಯಿ-16.

[30]

ಮಂಜೇಶ್ವರ.
29-9-59.

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಅಗೋಸ್ತು 1ನೆಯ ತಾರೀಕಿನ ಪತ್ರವೂ ಅದರ ಬೆನ್ನಲ್ಲಿಯೇ ಬಂದ ತಮ್ಮ "ನವಪ್ರಭಾತ"ವೆಂಬ ಮರಾಟೀ ಮೂಲದಿಂದ ಕನ್ನಡಿಸಿದ ಭಾಷಾಂತರವೂ ಇಲ್ಲಿಗೆ ಕೈಸೇರಿ, ಅನೇಕ ಧನ್ಯವಾದಗಳು.

ಈ ನಡುವೆ ನನಗಾಗಿದ್ದ ಕೊಂಚ ಅಸೌಖ್ಯದ ದೆಸೆಯಿಂದ ನಾನು ಬಳಲಿದ್ದ ಕಾರಣ ಆ ಪುಸ್ತಕವನ್ನು ಓದಿನೋಡಿ ತಮಗೆ ಈ ವರೆಗೆ ಬರೆದು ತಿಳಿಸುವರೆ ಇಷ್ಟು ವಿಳಂಬವಾಗಬೇಕಾದ ಬಗ್ಗೆ ದಯಮಾಡಿ ಕ್ಷಮಿಸುವುದು.

ನಿನ್ನೆ ಮೊನ್ನೆ ಓದಿನೋಡಿದೆ. ನಾನು ಮರಾಟೀ ಮೂಲ ನಾಟಕವನ್ನು ಓದಿಲ್ಲವಾದರೂ ತಮ್ಮ ಭಾಷಾಂತರ ಚೊಕ್ಕವಾಗಿದೆ. ಅದೊಂದು ಭಾಷಾಂತರವಲ್ಲ, ಸ್ವತಂತ್ರವಾದೊಂದು ಕೃತಿ ಎನಿಸುವಂತಿದೆ. ತಮ್ಮನ್ನು ಆ ಬಗ್ಗೆ ಮನವಾರೆ ಅಭಿನಂದಿಸುತ್ತೇನೆ.

ಪ್ರಸಂಗವಶವಾಗಿ ಒಂದೆರಡು ಮಾತುಗಳನ್ನು ಹೇಳಬಹುದಾದರೆ, ತಮ್ಮ ಈ ಪುಸ್ತಕದ ಅಕ್ಷರಿಕೆಯಲ್ಲಿ (Spelling) ಅನೇಕ ದೋಷಗಳಿವೆ. (1) ಉದಾ: ಪುಟ XIII "ಸಾಮ್ರಾಟನಿಗೆ" ಅಲ್ಲ, "ಸಮ್ರಾಟನಿಗೆ" ಎಂದಾಗಬೇಕು. ಸಮ್ರಾಟ್-ಸಾಮ್ರಾಟ ಅಲ್ಲ-ಎಂಬ ರೂಪ ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಮಾತ್ರ ಉಪಯೋಗಿಸಲ್ಪಡುತ್ತದಲ್ಲದೆ, ಕನ್ನಡದಲ್ಲಿ ಉಪಯೋಗಿಸಲ್ಪಡಲಾರದು. ಅದಲ್ಲದೆ "ಸಮ್ರಾಟ" = Emperor. ಸಾಮ್ರಾಜ್ಯ = Empire. ಮರಾಟೀ ಮೂಲದಲ್ಲಿ "ಸಮ್ರಾಟ" ಎಂಬ ಶಬ್ದವು ಪ್ರಯೋಗಿಸಲ್ಪಟ್ಟುದಾದರೆ ಅದು ಶುದ್ಧ ತಪ್ಪು ! (2) "ಸಂಘ ಮಿತ್ರಳು" "ರೇಖಾಳು" ಅಲ್ಲ, ಸಂಘಮಿತ್ರಳು, ರೇಖಳು ಇ ಇ (3) ಪುಟ 11. "ನಂತರ" ಅಲ್ಲ, ಅನಂತರ. (4) ಪು.5. "ನೆಗಾಡು" ಅಲ್ಲ, "ನಗಾಡು" (Laugh) ನೆಗೆಯಾಡು = to jump ಇತ್ಯಾದಿ. ಆದ ಕಾರಣ ಇನ್ನು ಬರೆವಲ್ಲಿ ತಾವು ವ್ಯಾಕರಣವನ್ನು ಚೆನ್ನಾಗಿ ಗಮನಿಸಬೇಕು. ಹಾಗೂ ಅಕ್ಷರಿಕೆಯನ್ನು (Spelling) ತಿದ್ದಿಕೊಳ್ಳಬೇಕು. ಏವಂಚ ಹಾಗೆ ಮಾಡುವುದು ಉತ್ತಮ. ಇನ್ನು ಮುಂದೆ ತಾವು ಇದಕ್ಕೂ ಚಲೋದಾದ ಅನುವಾದಗಳನ್ನು ಮಾತ್ರವಲ್ಲ ಸ್ವತಂತ್ರ ಕೃತಿಗಳನ್ನು ಕೂಡಾ ರಚಿಸಿ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾಗಿ ಚಿರಕಾಲ ಬಾಳುತ್ತಿರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇಷ್ಟು ಚಿಕ್ಕ ಪ್ರಾಯದಲ್ಲಿ ಇಂಥಾ ಮೇಲಾದ ಭಾಷಾಂತರವನ್ನು ಮಾಡಿರುವಲ್ಲಿ ಈ ಕೆಲವು ತಪ್ಪುಗಳಾದರೆ ಏನೂ ಗಣ್ಯವಲ್ಲ. ದೇವರು ಇನ್ನು ಮುಂದೆ ಬಹಳ ಮೇಲಾದ ಕೃತಿಗಳನ್ನು ತಮ್ಮಿಂದ ಮಾಡಿಸಿಕೊಳ್ಳುವನು.

ತಥಾಸ್ತು !
M. Govind Pai

ಶ್ರೀನಿವಾಸ ಕೆ. ಹಾವನೂರ,
ಎಸಿಸ್ಟೆಂಟ್ ಲೈಬ್ರೇರಿಯನ್,
ತಾತಾ ಇನ್‌ಸ್ಟಿಟ್ಯೂಟ್,
ಕೊಲಾಬಾ, ಮುಂಬಯಿ-5.

[31]

ಮಂಜೇಶ್ವರ,
29–12–59.

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಕಳುಹಿಸಿ ಕೊಟ್ಟಿರುವ ನಿಮ್ಮ ದಿವಂಗತರಾದ ಅಣ್ಣ ಶ್ರೀ ಶ್ರೀ ರಾಧಾ ಕೃಷ್ಣರಾಯರ "ಚೆಲುವು" ಎಂಬ ಕವಿತೆಗಳ ಸಂಗ್ರಹ ಕೈಸೇರಿ, ಆ ಬಗ್ಗೆ ಧನ್ಯವಾದಗಳು - ಓದಿ ನೋಡಿದೆ. ಕವನಗಳೆಲ್ಲವೂ ಚೆನ್ನಾಗಿವೆ ಅವಲ್ಲಿ ಕೆಲವು ಮತ್ತೂ ಚೆನ್ನಾಗಿವೆ ಉದಾ: "ಚೆಲುವು" (ಪು.1) "ಚಿರಬಾಳು" (ಪು.5) "ಹುಟ್ಟು" (ಪು.7) "ವಿಶಿಷ್ಟರನ್ನು ನೆನೆದು" (ಪು.23) ಇತ್ಯಾದಿ...............ಇದರ ರಚಕ ಮಹಾಶಯರು ಅವರ ಪ್ರಾಯದ 20ರಷ್ಟರ ತೀರ ಎಳವೆಯೊಳಗೇ ಇಷ್ಟು ಚಲೋ ಕವನಗಳನ್ನು ಬರೆದರೆಂದರೆ, ಅವರು ದೀರ್ಘಾಯುವಾಗಿ ಬಾಳಿದ್ದಾರೆ ಇನ್ನೆಷ್ಟು ಮೇಲಾದ ಕವಿತೆಗಳನ್ನೂ, ಕಾವ್ಯಗಳನ್ನೂ ರಚಿಸುತ್ತಿರಲಿಲ್ಲ? ಎಂಬ ಪ್ರಶ್ನೆಗೆ ಯಾವ ಓದುಗರದಾದರೂ ಮನಸ್ಸು ಇಂಬಾಗದಿರದು. ಆದರೆ ಮಾಡಲೇನು? ದೈವಚಿತ್ತ. ಅದರ ಮುಂದೆ ಯಾರದೇನೂ ನಡೆಯುವುದಿಲ್ಲ ವಷ್ಟೇ? ಅದಕ್ಕೆ ಎಲ್ಲರೂ ತಲೆಬಾಗಬೇಕು.....................ಅಷ್ಟೇ ಕವನಗಳನ್ನು ನೀವು ಪ್ರಕಟಿಸಿ ನಿಮ್ಮ ಭ್ರಾತೃಭಕ್ತಿಯ ಕರ್ತವ್ಯವನ್ನು ಮೇಲಾಗಿ ನೆರವೇರಿಸಿರುವಿರಿ. ಆ ಬಗ್ಗೆ ನಿಮಗೆ ನನ್ನ ಹಾರ್ದಿಕ ಧನ್ಯವಾದಗಳು.

M. Govind Pai

ಕೆ. ಗೋಪಾಲ ರಾವ್,
ಉಪಾಧ್ಯಾಯ,
ಕಡಬ (ದ.ಕ.)

[32]

ಬಂಟ್ವಾಳ,
15—1—60.

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ "ಶ್ರೀ ರಾಮಾಶ್ವಮೇಧದ ರಸತರಂಗಗಳು" ಎಂಬ ಪುಸ್ತಕ ಇಲ್ಲಿಗೆ ಕೈಸೇರಿ, ಆ ಬಗ್ಗೆ ಅನೇಕ ಧನ್ಯವಾದಗಳು. ಓದಿ ನೋಡಿ ಬಹಳ ಸಂತೋಷವಾಯಿತು. ಇಂಥಹದೊಂದು ಗ್ರಂಥವನ್ನು ಕನ್ನಡಕ್ಕೆ ಇತ್ತಿರುವ ಬಗ್ಗೆ ನಿಮ್ಮನ್ನು ಅಭಿನಂದಿಸುತ್ತೇನೆ. ನೀವು ಆ ಗ್ರಂಥದಲ್ಲಿ ನಮ್ಮ ಮುದ್ದಣನ ಕೀರ್ತಿಯ ಅಸಾಮಾನ್ಯವಾದ ಸುವರ್ಣದ ಚೌಕಟ್ಟಿಗೆ ಒಪ್ಪುವಂಥಾ ಕೆಲಕೆಲ ಸುವರ್ಣದ ಹೂವುಗಳನ್ನು ಅಲ್ಲಲ್ಲಿ ಕೀಲಿಸಿರುತ್ತೀರಿ ಎಂದು ನನಗೆನಿಸಿತು. ಈ ಮಾತನ್ನು ಒಪ್ಪುವವರು ಒಪ್ಪಿಕೊಳ್ಳಲಿ, ಒಲ್ಲದವರು ಒಲ್ಲದಿರಲಿ, ಅದು ನನ್ನ ಗೊಡವೆಯಲ್ಲ.........ನನಗಾದರೋ ನಮ್ಮ ಮುದ್ದಣನು ಆದಿ ಪಂಪನ ಪೀಳಿಗೆಯಲ್ಲಿ ಕನ್ನಡ ಸಾಹಿತ್ಯದ ಗದ್ಯ ಮಹಾ ಕವಿ ಎನಿಸುತ್ತದೆ. ಅಷ್ಟು ಸಾಕು.

ನಿಮ್ಮನ್ನು ಮತ್ತೊಮ್ಮೆ ಮನಸಾರೆ ಅಭಿನಂದಿಸುತ್ತೇನೆ.

ಇತಿ ನಮಸ್ಕಾರ,
M. Govind Pai

ಏರ್ಯ ಲಕ್ಷ್ಮೀನಾರಾಯಣ ಆಳ್ವ,
ಬಂಟವಾಳ (ದ.ಕ.)

[33]

ಮಂಜೇಶ್ವರ,
9–9–60.

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಪ್ರೀತಿಪೂರ್ವಕವಾಗಿ ಕಳುಹಿಸಿಕೊಟ್ಟಿರುವ ನಿಮ್ಮ "ಕಲಾರಾಧನೆ" ಎಂಬ 5 ನಾಟಕಗಳ ಗೊಂಚಲಿನ ಪುಸ್ತಕವು ಇದೇ ಕಳೆದ ಮೇ ತಿಂಗಳ ಒಂದನೆಯ ವಾರದಲ್ಲಿ ಇಲ್ಲಿ ಕೈಸೇರಿ ಆ ಬಗ್ಗೆ ಅನೇಕ ಧನ್ಯವಾದಗಳು. ಆದರೂ ಈ ವರೆಗೆ ಅದನ್ನು ಕುರಿತು ನಿಮಗೆ ಬರೆಯದಿರಲು ಕಾರಣವೆಂದರೆ, ನನಗಾಗಿದ್ದ ಒಂದು ವಾರದ ಅಸೌಖ್ಯ, ಮತ್ತು ಅದರಿಂದ ವಯಸ್ಸಿಗೆ ಅನುಗುಣವಾಗಿ ಉಂಟಾದ ಅಶಕ್ತಿ ದಯಮಾಡಿ ಕ್ಷಮಿಸುವುದು. ಈಗ ಕೊಂಚ ತೆಪ್ಪಗಿ ರುವೆನೆಂದು ನಿಮಗೀ ಪತ್ರವನ್ನು ಬರೆಯುತ್ತೇನೆ.

ನಿಮ್ಮ ಪುಸ್ತಕವನ್ನು ಓದಿ ನೋಡಿದೆ. ನಾಟಕಗಳೆಲ್ಲ, ಒಂದಕ್ಕಿಂತ ಒಂದು ಚಲೋವಾಗಿವೆ. ಓದಲಿಕ್ಕೆ ಹೇಗೂ ಬಹಳ ಚೆನ್ನಾಗಿವೆಯಷ್ಟೇ. ಆಯಾ ಸಮಾರಂಭಗಳಲ್ಲಿ ಆಡಿಸಲಿಕ್ಕೂ ರೇಡಿಯೋದಲ್ಲಿ ನುಡಿಸಲಿಕ್ಕೂ ಬಹಳ ಲೇಸಾಗಿವೆ. ನಿಮ್ಮನ್ನು

ಮನವಾರೆ ಅಭಿನಂದಿಸುತ್ತೇನೆ. ನಿಮ್ಮ ಪುಸ್ತಕದ ಅಕ್ಷರಿಕೆ (Spelling)ಯಲ್ಲಿ ಪ್ರಾಯಶ: ಕಣ್ಮರವೆ (Over sight) ಯಿಂದೇನೋ ಆಗಿರಬೇಕಾದ ಇವೊಂದೆರಡು ಹುಳುಕುಗಳನ್ನು ನಿಮ್ಮ ಗಮನಕ್ಕೆ ತರುತ್ತೇನೆ. (1) ಪುಟ.20. "ಬುದ್ಧಂ ಸರಣಂ ಗಚ್ಛಾಮಿ" ಎಂದು ಮೊದಲಾಗುವ ಆ ಮೂರು (3) ಪಂಕ್ತಿಗಳು ಸಂಸ್ಕೃತ ಭಾಷೆಯವಲ್ಲ; ಪಾಲಿಭಾಷೆಯಲ್ಲಿವೆ ಎಂಬುದು ಶರಣಂ ಎಂಬ ಸಂಸ್ಕೃತ ಪದವನ್ನು ಉಪಯೋಗಿಸದೆ (ಬೌದ್ಧ ಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿರುವ) ಪಾಲಿ ಭಾಷೆಯ "ಸರಣಂ" ಎಂದಿ ರುವುದರಿಂದ ಕಂಡಿತವಾಗುತ್ತದೆ. ಅತಏವ ಆ ಮೂರರ ನಡುವಣ ಪಂಕ್ತಿಯಲ್ಲಿ "ಧರ್ಮಂ" ಎಂಬ ಸಂಸ್ಕೃತ ಶಬ್ದವನ್ನು ಉಪಯೋಗಿಸಿದುದು ಸರಿಯಲ್ಲ, ತೀರಾ ಅನುಚಿತ ಅಂದರೆ, ಆ ಪಂಕ್ತಿ ನೇರಾಗಿ "ಧಮ್ಮಂ ಸರಣಂ ಗಚ್ಛಾಮಿ" ಎಂದಿರಬೇಕು ಅಷ್ಟೆ. ಪುಟ. 66-"ಮಧ್ಯಾನ್ಹ" ಎಂದಿದೆ, "ಮಧ್ಯಾಹ್ನ" ಎಂದಾಗಬೇಕು.

ಇತಿ ನಮಸ್ಕಾರ,

M. Govind Pai

ಸಮೇತನಹಳ್ಳಿ ರಾಮರಾಯ,
ಪುರಸಭಾ ಕಚೇರಿ,
ಮಧುಗಿರಿ, (ತುಮಕೂರು ಜಿಲ್ಲೆ)

[34]

ಮಂಜೇಶ್ವರ
27–9–60

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಪತ್ರ ಮುಟ್ಟಿದೆ. ಅದನ್ನು ಎಲ್ಲಿ ಇಟ್ಟುಬಿಟ್ಟೆನೋ ಕಾಣೆ. ಹೇಗೂ ಅದರಲ್ಲಿಯ ವಿಷಯ ತಕ್ಕಷ್ಟಾದರೂ ನೆನಪಿನಲ್ಲಿದೆ-ನಿಮ್ಮ ಪರೀಕ್ಷೆಯ ಬಗ್ಗೆ ಇನ್ನು ಯಾವೆಲ್ಲ ಪುಸ್ತಕಗಳನ್ನು ಓದಬೇಕೆಂದು ಕೇ ಳಿರುವಂತೆ ತೋರುತ್ತದೆ. ಅದು ಸರಿಯೆಂದಾದರೆ, ಕೆಲವು ಹಪ್ತೆಗಳ ಹಿಂದೆ ನೀವು ಇಲ್ಲಿಗೆ ಬಂದಿದ್ದಾಗ ನಾನು ಯಾವೆಲ್ಲ ವಿಷ ಯಗಳನ್ನು ಸಂಗ್ರಹಿಸಬೇಕೆಂದೂ, ಯಾವೆಲ್ಲ ಪುಸ್ತಕಗಳನ್ನು ಓದಬೇಕೆಂದೂ ಮುಖಾಮುಖಿಯಾಗಿ ಹೇಳಿದ್ದೆನೋ. ನೀವು ಅದನ್ನೆ ಲ್ಲ ಬರಕೊಂಡು ಹೋಗಿದ್ದಿರೋ. ಅವಷ್ಟೇ ವಿನಾ ಅವಕ್ಕೆ ಹೊರಗಣ ಯಾವೊಂದು ವಿಷಯುವಾಗಲಿ, ಯಾವೊಂದು ಪುಸ್ತಕದ ಹೆಸರಾಗಲಿ ಈಗ ಮನಸ್ಸಿಗೆ ಗೋಚರಿಸದು. ಗೋಚರಿಸದು-ಅದನ್ನು ಮಿಕ್ಕು ಒಂದು ಎಳ್ಳನ್ನು ಕೂಡಿಸಿಡಲಿಕ್ಕೆ ನನಗೆ ಬಾರದು. ಅಷ್ಟೇ.

ನೀವು ಕಯ್ಕೊಂಡಿರುವ ಈ ಸತ್ಕಾರ್ಯದಲ್ಲಿ ಜಯಶೀಲರಾಗುವಂತೆ ನೀವೀಗ ಪಡುತ್ತಿರುವ ಪರಿಶ್ರಮದಲ್ಲಿ ಶ್ರೀ ಪರಮಾತ್ಮನು ನಿಮಗೆ ಅಹರ್ನಿಶಿ ನೆರವಾಗಿ ನಿತ್ತು, ನಿಮ್ಮ ಎಣಿಕೆಗೆ ಮಿಕ್ಕು ನೀವು ತುಂಬ ಯಶಸ್ವಿಯಾಗಿ ತೋರಿ ಬರುವಂತೆ ಯೂ, ನಿಮ್ಮ ಮನೋರಥವು ಸಾಕಲ್ಯವಾಗಿ ಕೆಯ್ಗೂಡುವಂತೆಯೂ ದಯೆದೋರಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್.

ಮರು ಬರೆಹ – ಇದನ್ನು ಬರೆದು ಮುಗಿಸಿದ 1–2 ತಾಸುಗಳಲ್ಲಿ, ಹೇಗೂ ಇದನ್ನು ಮಡಚಿ ಟಪ್ಪಾಲಿಗೆ ಕಳುಹಿಸಿಕೊಡುವಷ್ಟರಲಿ ನಿಮ್ಮ ಸಪ್ಟಂಬರ 9ನೆಯ ತಾರೀಕಿನ ಕಾರ್ಡು ದೊರಕಿತು. ಆ ಕಾರ್ಡಿನ ತಾನೆ ಪ್ರತ್ಯುತ್ತರ ಈ ಪತ್ರ. ನಿಮ್ಮ ಕಾರ್ಡು ಗೈರುವಿಲೆ ಯಾದ ಕಾರಣವೇ ಅದನ್ನು ಹುಡುಕಾಡಿ ದೊರಕಿಸಿಕೊಂಡ ಮೇಲೆ ಪ್ರತ್ಯುತ್ತರ ಬರೆಯೋಣವೆಂದು ಬಾಕಿ ಇಟ್ಟೆ. ಕಡೆಗೆ ಇಷ್ಟು ದಿನಗಳಿಗೂ ಪ್ರತ್ಯುತ್ತರಿಸಲಿಲ್ಲವೆಂದು ನಾಚಿಕೆಯಾಗಿ ಈ ಪತ್ರವನ್ನು ಬರೆದೆ ಇದನ್ನು ಮುಗಿಸುವ ಕೊಂಚ ಹೊತ್ತಿನಲ್ಲೇ ನಿಮ್ಮ ಕಾರ್ಡು ದೊರೆಯಿತು.

M. Govind Pai

ಪಾದೂರು ಗುರುರಾಜ ಭಟ್ಟ,
ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು,
ಉಡುಪಿ.

[35]

ಮಂಜೇಶ್ವರ,
31–12–61.

ಗೋವಿಂದ ಪೈ ಮಾಡುವ ನಮಸ್ಕಾರ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲದ ರಾಣಿ ಅಭಯಾ ದೇವಿ ಅಥ ವಾ ಅಬ್ಬಕ್ಕದೇವಿ ಎಂಬವಳನ್ನು ಕುರಿತು ನಮ್ಮ ಇತಿಹಾಸದ ಹಾಳುಬೀಳುಗಳಿಂದ ಅಗೆದುತೆಗೆದ ವಿಷಯುವನ್ನು ಎತ್ತಿಕೊಂಡು ನೀವು

ಕಾದಂಬರಿಯ ರೂಪದಲ್ಲಿ ರಚಿಸಿದ ಚಾರಿತ್ರಿಕ ಕಥೆಯ ಪ್ರತಿ ಇಲ್ಲಿಗೆ ಮುಟ್ಟಿ (17–8–61) ನಾಲ್ಕು ತಿಂಗಳು ಕಳೆದುಹೋದುವು ನನ್ನ ಈಗಣ ಅಶಕ್ತತೆಯ ದೆಸೆಯಿಂದ ಆಗಿರುವ ಈ ತಪ್ಪಿನ ಬಗ್ಗೆ ದಯವಾಡಿ ಕ್ಷಮಿಸುವುದು. ಬಹಳ ಉಪಕಾರ. ಕಥೆ ಬಹಳ ಚೆನ್ನಾಗಿದೆ. ಓದೋದಬೇಕು ಎನಿಸುತ್ತಿದೆ. ತೋಳುಗಳಲ್ಲಿ ಶೌರ್ಯ ಮಸೆಯುತ್ತಿದೆ. ಆ ಪ್ರತ್ಯಕ್ಷ ರಾಕ್ಷಸರಿಂದ ಪೋರ್ತುಗೀಸರನ್ನು ಒಮ್ಮೆ ನಿರ್ನಾಮಗೊಳಿಸಲೇ ಎನಿಸುತ್ತಿದೆ. ನಮ್ಮ ಮಾತೃದೇವಿಯ ಚರಣತಲದಲ್ಲಿ ನೀವು ಈ ಕೃತಿಯನ್ನು ಕಾಣಿಕೆಯಾಗಿ ಒಪ್ಪಿಸಿರುತ್ತೀರಿ. ಈ ಕೃತಿ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾಗಿ ಚಿರಕಾಲ ಬಾಳುವಂತೆ ಶ್ರೀ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ.

ರಾಮ ಮೊಳೆಯಾರ, M. Govind Pai
ವಿವೇಕ ಸಾಹಿತ್ಯ ಮಾಲೆ
ಮಂಗಳೂರು-3.

[36]

ಮಂಜೇಶ್ವರ.
27–3–62.

ಗೋವಿಂದ ಪೈ ಮಾಡುವ ನಮಸ್ಕಾರ. ನಾನು ನಿಮಗೆ ಈ ಮುಂಚೆ ಬರೆದಿದ್ದ ನನ್ನ ಅವೆರಡೂ ಪತ್ರಗಳನ್ನು ನನಗೆ ಮರಳಿ ಕಳುಹಿಸಿಕೊಟ್ಟು ನನ್ನ ಅಪೇಕ್ಷೆಯನ್ನು ಸಲ್ಲಿಸಿರುವ ಬಗ್ಗೆ ನಿಮಗೆ ಅನೇಕ ಧನ್ಯವಾದಗಳು. ಆ ಕುರಿತು ಮೊನ್ನೆ 24ನೆಯ ತಾರೀಕಿನಿಂದು ನಿಮಗೆ ಬರೆದ ಕಾರ್ಡಿನಲ್ಲಿ ಹೇಳಿರುತ್ತೇನೆ. ಇಷ್ಟರಲ್ಲಿ ಕಾರ್ಡು ನಿಮಗೆ ಮುಟ್ಟಿರಬಹುದಷ್ಟೇ.

ನೀವು ಪ್ರಕಟಿಸಲಿಕ್ಕಿರುವ "ಉತ್ತರ ರಾಮ ಕಥೆ"ಯ ಉತ್ತರಾರ್ಧ ಹೊರಬರುವ ಮುಂಚೆ ನನ್ನ "ನಾಲ್ಕು ಮಾತುಗಳು" ನಿಮ್ಮ ಕೈಸೇರಬೇಕೆಂಬ ನಿಮ್ಮ ಅಪೇಕ್ಷೆಯ ಮೇರೆಗೆ ಅವನ್ನು ಬರೆದು ಇದರೊಂದಿಗೆ ಮಡಗಿ ಕಳುಹಿಸಿರುತ್ತೇನೆ. ಆ ನಾಲು ಮಾತುಗಳಿಗೆ ಒಂದೇ ಒಂದು ಶಬ್ದವನ್ನು ಇನ್ನು ಕೂಡಿಸಲಿಕ್ಕಾಗಲಿ, ಅವುಗಳಲ್ಲಿಯ ಒಂದೇ ಒಂದು ಶಬ್ದವನ್ನು ಬದಲಾಯಿಸಲಿಕ್ಕಾಗಲಿ, ಅವುಗಳಿಂದ ಒಂದೇ ಒಂದು ಶಬ್ದವನ್ನು ತೆಗೆದುಬಿಡಲಿಕ್ಕಾಗಲಿ ನಾನು ಸಿದ್ಧನಾಗಿಲ್ಲ. ಇದನ್ನು ಚೆನ್ನಾಗಿ ನೆನವರಿಕೆಯಲ್ಲಿ ಇರಿಸಿಕೊಳ್ಳಬೇಕೆಂದು ವಿನಂತಿಸುತ್ತೇನೆ. ಅದಕ್ಕೆ ಒಪ್ಪುವಿರಾದರೆ ಮಾತ್ರ ಈ ನಾಲ್ಕು ಮಾತುಗಳನ್ನು ಸ್ವೀಕರಿಸಿರಿ, ಇಲ್ಲವಾದರೆ ಅವನ್ನು ಆದ್ಯಂತವಾಗಿ ಬಿಟ್ಟುಬಿಡಿ. ಈ ಮಾತುಗಳನ್ನು ಮರೆಯಬೇಡಿ. ನಾನು ಹೀಗೆ ವಿನಂತಿಸಿಕೊಂಡಿರುವ ಮೇರೆಗೆ ನೀವು ನಡಕೊಳ್ಳುವಿರೆಂದು ನನಗೆ ಭರವಸೆಯನ್ನು ಕೊಡತಕ್ಕಂತೆ ಒಂದೆರಡು ಪಂಕ್ತಿಗಳನ್ನು, ಈ ಪತ್ರವನ್ನು ಕಂಡಕೂಡಲೇ ಇದರೊಂದಿಗೆ ಇಟ್ಟು ಕಳುಹಿಸಿರುವ ನನ್ನ ಮೇಲು ವಿಳಾಸ ಬರೆದ ಕಾರ್ಡಿನಲ್ಲಿ ಬರೆದು ದಯವಾಡಿ ತಿಳುಹಿಸಬೇಕಾಗಿ ವಿನಂತಿಸುತ್ತೇನೆ. ದಯಮಾಡಿ ನಿರಾಶಿಸಬಾರದೆಂದೂ ವಿನಂತಿಸುತ್ತೇನೆ. ಈ ಉಪಕಾರದ ಬಗ್ಗೆ ಅನೇಕಾನೇಕ ಧನ್ಯವಾದಗಳು.

ಕೆ. ವೆಂಕಟ್ರಾಯಾಚಾರ್ಯ, ಇತಿ ನಮಸ್ಕಾರ.
ಸುರತ್ಕಲ್ (ದ.ಕ.) M. Govind Pai

[37]

[ಕನ್ನಡ ರಾಜ್ಯದ ಮತ್ತು ಸಾಹಿತ್ಯದ ಇತಿಹಾಸದಲ್ಲಿ ಅಪ್ರತಿಮವಾದ ಆಸಕ್ತಿಯೂ ಪರಿಶ್ರಮವೂ ಉಳ್ಳ ದಿವಂ. ಗೋವಿಂದ ಪೈ ಅವರನ್ನು ಕೇವಲ ನಾಡಿನ ಒಬ್ಬ ವರಕವಿ ಎನ್ನದೆ ಕೆಲವೇ ಮಂದಿ ಇತಿಹಾಸಜ್ಞರಲ್ಲಿಯೂ ಪರಿಣತರೆಂದು ಗಣಿಸಬಹುದಾಗಿದೆ. ಕಾಲ ಮತ್ತು ಸ್ಥಳ ನಿರ್ಣಯದ ಕುರಿತು ಅವರು ಕನ್ನಡದ ನಿಯತಕಾಲಿಕಗಳಿಲ್ಲಿ ಬರೆದುದಷ್ಟು ಅಲ್ಲದೆ ಆಸಕ್ತ ಪಂಡಿತರೊಡನೆ ಹಲಬಗೆಯಾಗಿ ವಿಚಾರ ವಿನಿಮಯ ಮತ್ತು ವಾದ ಪ್ರತಿವಾದಗಳನ್ನು ಮಾಡಿದ್ದುಂಟು. ಎಂಥ ಸನ್ನಿವೇಶದಲ್ಲಿಯೂ ಪಂಡಿತ ಸಹಜವಾದ ಅಹಂಕಾರ ಮತ್ತು ಹಠವನ್ನು ತೋರದೆ ಅತಿ ವಿನಯದಿಂದ ಭಿನ್ನಾಭಿಪ್ರಾಯವನ್ನು ಸೂಚಿಸುವ ಔದಾರ್ಯ ದಿವ. ಪೈ ಅವರೊಬ್ಬರಿಗೇ ಸಾಧ್ಯವೇನೋ ಅನಿಸುವುದು. ಸತ್ಯಾನ್ವೇಷಕನಿಗೆ ಸತ್ಯ ಶೋಧನೆಗೆ ಪೋಷಕವಾಗುವ ಎಲ್ಲ ಪುರಾವೆಗಳ ಮೇಲೂ ಅಪಾರ ವಿಶ್ವಾಸವಿದ್ದಿತು. ತಾನು ಕಂಡಿಲ್ಲದ ಲೇಖವನ್ನು ನೇರವಾಗಿ ಕಂಡಿಲ್ಲವೆನ್ನುವ ವಿನಯವನ್ನು ತೋರಬಲ್ಲ ಎದೆಗಾರಿಕೆಯುಳ್ಳ ವಿದ್ವಾಂಸರು ವಿರಳತಾನೆ ?]

ಮಂಜೇಶ್ವರ,
30–4–62

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ 20ನೆಯ ತಾರೀಕಿನ ಪತ್ರ ಮುಟ್ಟಿ ಧನ್ಯವಾದಗಳು. ಓದಿನೋಡಿದೆ.

ನನಗೀಗ 80ನೆಯ ವರ್ಷ ನಡೆಯುತ್ತಿದೆ. ಬಹಳ ಅಶಕ್ತತೆಯಿದೆ, ನೆನಪು ಬಲಕುಂದಿದೆ. ಬಲತೋಳು ಬರೆದು ಬರೆದು ಬಹಳ ನೋಯುತ್ತವೆ. ಹೀಗಾಗಿ ನಿಮ್ಮ ಪತ್ರದಲ್ಲಿ ಕೇಳಿರುವ ಬಗೆಯ ಬಹಳ ಗುರುತರವೂ ಗಭೀರವೂ ಆದ ಪ್ರಶ್ನೆಗಳಿಗೆ ಯಥೋಚಿತವಾಗಿ ಪ್ರತ್ಯುತ್ತರ ಬರೆಯಲಾಗುವುದಿಲ್ಲ. ದಯವಿಟ್ಟು ಕ್ಷಮಿಸುವುದು. ನೀವು ಈ ಬಗ್ಗೆ ಇತರತ್ರ ವಿಚಾರಿಸಿ ನಿಮ್ಮ ತೊಡಕುಗಳನ್ನು ನಿವಾರಿಸಿಕೊಳ್ಳುವುದು ಲೇಸೆಂದು ಸೂಚಿಸುತ್ತೇನೆ. ಈ ಕುರಿತು ಮತ್ತೊಮ್ಮೆ ನನಗೆ ದಯಮಾಡಿ ಬರೆಯ ಬಾರದೆಂದೂ ವಿನಂತಿಸುತ್ತೇನೆ.

ಹಾಗೂ ಶ್ರೀ ದೇವರು ನಿಮ್ಮಲ್ಲಿ ದಯೆದೋರಿ ನಿಮ್ಮ ಈಗಣ ಅನ್ವೇಷಣದ ಪಥದಲ್ಲಿ ನಿಮಗೆ ಬೆಳಕು ಬೀರುವ ಅನುಗ್ರಹ ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್
ಇತಿ ನಮಸ್ಕಾರ,
M. Govind Pai

P. S. (6) "ಮಂಜುಶ್ರೀ" "ಮಂಜುಘೋಷಗ"ಳೆಂಬವು ಜೈನ ಹೆಸರುಗಳಲ್ಲ. ಮಹಾಯಾನ (ಅಂದರೆ ತಿಬೇಟಿನಲ್ಲಿ ಪ್ರಚಾರದಲ್ಲಿರುವ) ಬೌದ್ಧ ಧರ್ಮದ ದೇವತೆಗಳ ಹೆಸರುಗಳು. ಈ ಕುರಿತು ನನ್ನ ಲೇಖವು ಮೈಸೂರಿನ ಕಾವ್ಯಾಲಯದವರೊಂದಿಗಿದೆ.

(7) "ಉಡುಪಿ" ಎಂಬ ಹೆಸರು ಹೇಗೆ ಬಂತೆಂದು ಹೇಳಲಾರೆ. Kittelರ ಕೋಶದಲ್ಲಿ "ಉಡುಪ" ಎಂಬ ಶಬ್ದಕ್ಕೆ ನಂ.5ಯ ಅರ್ಥವಾಗಿ ಹೇಳಿರುವ ಆ ಶಬ್ದವು ಸಂಸ್ಕೃತ "ಉಡುಪ". ನನ್ನ ಅಭಿಪ್ರಾಯವಾದರೆ "ಉಡುಪ"ನೆಂದರೆ ಚಂದ್ರನೆಂದೇ ಏಕೆಂದರೆ ಸುಮಾರು 1200-1300ಕ್ಕಿಂತ ಹೆಚ್ಚಿಗೆ ಹಿಂದಿನ ನಮ್ಮ ತುಳುನಾಡಿನಲ್ಲಿಯ ಊರುಗಳನ್ನು ಹೆಸರಿಸಿರುವ ಮಂಜು(ಲ) ಕ್ಷೇತ್ರ ಮಹಾತ್ಮ್ಯವೆಂಬ ಮಂಜೇಶ್ವರದ ಮಹಾತ್ಮ್ಯದಲ್ಲಿ ಉಡುಪಿಯನ್ನು "ವಿಧೋः ಕ್ಷೇತ್ರ" ಎಂದರೆ ಚಂದ್ರನ ಊರು ಎಂದದೆ. ಪ್ರಾಯಶಃ ಉಡುಪಿ ಎಂಬ ಊರು ತುಳುವೂ ಕನ್ನಡವೂ "ಒಡ್ಪು" ಇತ್ಯಾದಿ ರೂಪದ ಶಬ್ದದ ರೂಪಾಂತರವಾಗಿರಬೇಕೆಂದು ನನ್ನ ಊಹೆ. ನಿಮ್ಮ ಉಡುಪಿಯ ಮುನಿಸಿಪಾಲಿಟಿಯ ರಜತ (ಸುವರ್ಣ?) ಉತ್ಸವ ಸಂದರ್ಭದಲ್ಲೇನೋ ಪ್ರಕಟವಾದ ವಿಶೇಷ ಸಂಚಿಕೆಯಲ್ಲಿ ನಾನು ಉಡುಪಿಯನ್ನು ಕುರಿತು ಒಂದು ಲೇಖವನ್ನು ಬರೆದಿದ್ದೆ. ಅದರ ಪ್ರತಿ ಈಗ ನನ್ನೊಂದಿಗೆ ಇಲ್ಲ-ಏಕೆಂದರೆ ನನ್ನ ಲೇಖಗಳನ್ನು ಮುದ್ರಿಸಿ ಪ್ರಕಟಿಸುವ ಅಧಿಕಾರವನ್ನು ಮೈಸೂರಿನ ಕಾವ್ಯಾಲಯದವರಿಗೆ ಕೊಟ್ಟಿರುವುದರಿಂದ ನನ್ನ ಲೇಖನಗಳನ್ನೆಲ್ಲ ಅವರು ಕೊಂಡುಹೋಗಿ ಈಗ ನನ್ನೊಂದಿಗೆ ಇಲ್ಲಿ ಒಂದೂ ಇಲ್ಲ. ನಿಮ್ಮ ಮಿಕ್ಕ ಪ್ರಶ್ನೆಗಳು ನನ್ನ ವಿಚಾರ ಸರಣಿಯಲ್ಲಿ ಈ ಮುಂಚೆ ಒದಗಿರಲಿಲ್ಲವೆಂದು ಊಹಿಸುತ್ತೇನೆ. ಅಥವಾ ಅವು ಒದಗಿದ್ದು ಆ ಕುರಿತು ಬರೆದಿರುವೆನಾದರೆ ನನ್ನ ಲೇಖನಗಳನ್ನು ಕಾವ್ಯಾಲಯದವರು ಕೊಂಡುಹೋಗಿರಬೇಕು.

P. S. ನನ್ನ Geographical Dictionaryಯನ್ನು ಪ್ರಾಯಶಃ Canara High School Library ಗೇನೋ ಕೊಟ್ಟಿರುವಂತೆ ನೆನಪು. ಈಗ ಇಲ್ಲಿ ನನ್ನೊಂದಿಗಿಲ್ಲ.

ಪಾದೂರು ಗುರುರಾಜ ಭಟ್ಟ,
ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು,
ಉಡುಪಿ.

[38]

[ಕ್ರಿ.ಶ.1939ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (ಸಂ.24. ಸಂ.2) ರನ್ನನ "ಗದಾಯುದ್ಧದ ಕಾಲ ನಿರ್ಣಯ" ಎಂಬ ಲೇಖವು ಮತ್ತು ಅದೇ ವರುಷ ಮೈಸೂರಿನ ಪ್ರಬುದ್ಧ ಕರ್ಣಾಟಕದಲ್ಲಿ "ಶಿಲಾಹಾರ ಅಪರಾಜಿತನು ನೂರ್ಮಡಿ ತೈಲಪನ ಮಾಂಡಲಿಕನಿದ್ದಿರಬಹುದೇ?" ಎಂಬ ಮತ್ತೊಂದು ಲೇಖವು ಪ್ರಕಟಿಸಲ್ಪಟ್ಟವು. ಈ ಎರಡೂ ಲೇಖಗಳ ಸಾರಾಂಶವಿಷ್ಟು. ರನ್ನನು ತನ್ನ ಅಜಿತಪುರಾಣವನ್ನು ಚಾಳುಕ್ಯ ತೈಲಪನ ಆಳಿಕೆಯಲ್ಲಿ (ಕಿ.ಶ.973-997) ಬರೆದರೆ ಆತನು ತನ್ನ ಗದಾಯುದ್ಧವನ್ನು ತೈಲಪನ ಮಗನಾದ ಸತ್ಯಾಶ್ರಯನ ಆಳಿಕೆಯಲ್ಲಿ (ಕ್ರಿ.ಶ.997–1008) ಬರೆದಿದ್ದಾನೆ. "ಗದಾಯುದ್ಧ"ದಲ್ಲಿ ವರ್ಣಿತವಾದ ಭೀಮ ದುರ್ಯೋಧನರ ಅಂದರೆ ಚಾಳುಕ್ಯ ಸತ್ಯಾಶ್ರಯ ಹಾಗೂ ಶಿಲಾಹಾರ ಅಪರಾದಿತ್ಯನ ಯುದ್ಧ ಕ್ರಿ.ಶ. 1005ರಲ್ಲಿ ಮುಗಿಯಿತೆಂದು ಡಾ॥ ಎಸ್. ಅಳ್ತೇಕರವರು ಹೇಳುತ್ತಾರೆ. (Indian Culture Vol. II No. 3. PP. 4·5–406), ಅದ್ದರಿಂದ ಈ ಯುದ್ಧವೇ ತಳಹದಿಯಾಗಿ ರಚಿಸಲ್ಪಟ್ಟಂಥ ಗದಾಯುದ್ಧವು ಕ್ರಿ.ಶ.1005ರಿಂದ 1008ರೊಳಗಾಗಿ ಸುಮಾರು ಕ್ರಿ.ಶ. 1006 ಇಲ್ಲವೆ ಕ್ರಿ.ಶ. 1007ರಲ್ಲಿ ರನ್ನನಿಂದ ರಚಿಸಲ್ಪಟ್ಟಿರಬೇಕು.

ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾದ ಲೇಖದ ಒಂದು ಪ್ರತಿಯನ್ನು ದಿ. ಗೋವಿಂದ ಪೈಗಳವರ ಕಡೆಗೆ ಕಳಿಸಿದ್ದೆ ಅದಕ್ಕೆ ಉತ್ತರವೆಂದು 21–10–1939ರಂದು ನನಗೆ ಕಾಗದ ಬರೆದು ಕೆಲವು ಸಂಗತಿ ಕೇಳಿದ್ದರು. ತಾ. 10–11–1939ರಂದು ನಾನು ಅವರಿಗೆ ಕಾಗದ ಬರೆದಿದ್ದೆ. ನನ್ನ ಎರಡನೆಯ ಕಾಗದಕ್ಕೆ ಅವರು ಬರೆದ ಉತ್ತರ ಕೆಳಗೆ ಕೊಡಲಾಗಿದೆ. ಈ ಕಾಗದವು ತಾ. 15–12–1939ರಂದು ಬರೆಯಲ್ಪಟ್ಟಿದೆ. ಇದು ಅವರು ನನಗೆ ಬರೆದ ಎರಡನೆಯ ಕಾಗದ. ಅವರು ಬರೆದ ಮೊದಲನೆಯ ಕಾಗದ ಕಳೆದು ಹೋಗಿದೆ.—ವೆಂ. ಬಿ. ಲೋಕಾಪುರ.]

From,
M.Govind Pai
Manjeshwar
South Kanara

Manjeshwar
15-12-39

Dear Sir,

I believe you are in due receipt of the last letter of the 21st October. Please excuse me for so long a delay in replying to your letter of the 10th Nov. All along, I have not been doing well,

(i) The poet Ranna (ರನ್ನ) speaks in his Ajitapuraan (ಅಜಿತ ಪುರಾಣ) [XII 42] composed in SS. 915 = 993 A.C. of having composed his two works before that date viz Parashurama Puraan (ಪುರುಷರಾಮ ಪುರಾಣ) and Chakreshwara Charite (ಚಕ್ರೇಶ್ವರ ಚರಿತೆ) And so I have said in the last letter. I have already made it clear inough that the Chakreswara Charite (ಚಕ್ರೇಶ್ವರ ಚರಿತೆ) is never the same as Gadayyuddha (ಗದಾಯುದ್ಧ), in as much as it is a Jain religious poem dealing with the story of the mythical Jaina Chakreshwara Bharat (ಭರತ), son of the first Theerthankar Rushabhanath (ಋಷಭನಾಥ). That article of these appeared in the Desharanjana (ದೇಶರಂಜನ) of Mangalore in its 2 issues of February and April 1932. The Jonrnal became exinct within some 6 months of its publication and I very much regret I have not got a single copy to spare. Gadayuddha (ಗಾಧಾಯುದ್ಧ) which has thus been not mentioned in the Ajita Purana ( ಅಜಿತ ಪುರಾಣ) cannot have been composed before 993 A.C.

(2) In the sogal plates (E.I. XVI. 1-9)of the 8th June 178 A.C., the Western Chalukya King Tailapa has been spoken of as a Conqueror of Chola (ಚೋಳ) and Lala (ಲಾಳ) [33-34 on P.4] wherefore Konkan Cannot have been Conquered in them whether by himself or by his son Satyashraya (ಸತ್ಯಾಶ್ರಯ).

Fleet says (Kanarese Dynastics P.430 -431) Tailapa cannot have acquired any of the Gujarat provinces; but since in the sogal pates his conquest of Lala, (ಲಾಳ)

